॥ ಶ್ರೀ ॥

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯಾ ೩೩







ಶ್ರೀವೇದವ್ಯಾಸಬಾದರಾಯಣಮುನಿಪ್ರಣೀತಂ

# ಶ್ರೀಮತ್ಸ್ಯಮಹಾಪುರಾಣಂ

ಕನ್ನಡ ಅನುವಾದಸಹಿತ

[illegible]

[illegible] ೧೧೩

ಅನುವಾದಕ:

**ವಾಜಪೇಯಂ ಶ್ರೀರಂಗಾಚಾರ್**

ಸಾಹಿತ್ಯವಿದ್ವಾನ್, ಕನ್ನಡ ಪಂಡಿತ

ಮೈಸೂರು

ಶ್ರೀನಿವಾಸ್ ಎಲೆಕ್ಟ್ರಿಕ್ ಪ್ರೆಸ್

೧೯೪೭

|| ಶ್ರೀ ||

## ಪೀಠಿಕೆ

ಮತ್ಸ್ಯಪುರಾಣದ ಬಳ್ಳಿಯಲ್ಲಿ ಎರಡನೆಯ ಹೂ ಅರಳಿತು. ಕನ್ನಡದೇವಿಯ ಸಿರಿಮುಡಿಯನ್ನು ಅಲಂಕರಿಸುವ ಭಾಗ್ಯವು ಅದಕ್ಕೆ ದೊರೆಯಿತು.

ಈ ಸಂಪುಟದಲ್ಲಿ ಮುಖ್ಯವಾಗಿ ಕರ್ಮಯೋಗವು ಪ್ರತಿಪಾದಿತವಾಗಿದೆ. ಕರ್ಮಾನುಷ್ಠಾನಕ್ಕೆ ಅತ್ಯವಶ್ಯಕವಾದ ಅಗ್ನಿಯ ಸ್ವರೂಪ, ಪ್ರಭೇದ, ವಂಶವಿಸ್ತಾರ ಇವು ಮೊತ್ತಮೊದಲು ವರ್ಣಿಸಲ್ಪಟ್ಟಿವೆ. "ಎಲೈ ಸೂತಮಹರ್ಷೀ, ಕರ್ಮಯೋಗದ ಲಕ್ಷಣವನ್ನು ಕೇಳಬೇಕೆಂದು ಬಯಸುತ್ತೇವೆ" ಎಂದು ಋಷಿಗಳು ಪ್ರಾರ್ಥಿಸುತ್ತಾರೆ. "ವಿಷ್ಣುವು ಮನುಚಕ್ರವರ್ತಿಗೆ ತಿಳಿಸಿದ ಕ್ರಮದಲ್ಲಿಯೇ ನಿಮಗೆ ಕರ್ಮಯೋಗವನ್ನು ವಿವರಿಸುತ್ತೇನೆ'' ಎಂದು ಹೇಳಿ ಸೂತಪೌರಾಣಿಕನು ಪ್ರಾರಂಭಿಸುತ್ತಾನೆ.

ಮುಮುಕ್ಷುವಿಗೆ—ಅವನು ಜ್ಞಾನಯೋಗವನ್ನು ಅನುಸರಿಸಲಿ, ಭಕ್ತಿಯೋಗವನ್ನು ಅವಲಂಬಿಸಲಿ—ಕರ್ಮಯೋಗವು ಸಾಧನೆಯ ರಂಗ. ಇಲ್ಲಿ ಪಳಗದಿದ್ದರೆ ಅವನು ತನ್ನ ಗುರಿಯನ್ನು ಮುಟ್ಟಲಾರನು ; ವ್ಯಕ್ತಿತ್ವವನ್ನು ಉಳಿಸಿಕೊಳ್ಳಲಾರನು. ಜ್ಞಾನಿಯಾಗಲಿ, ಭಕ್ತನಾಗಲಿ ಏನು ಸಿಕ್ಕಿದರೆ ಅದರಲ್ಲಿ, ಎಷ್ಟು ದೊರೆತರೆ ಅಷ್ಟರಲ್ಲಿ ತೃಪ್ತನಾಗುವನು. ಶೀತೋಷ್ಣಗಳು, ಸುಖದುಃಖಗಳು, ಮಾನಾವಮಾನಗಳು, ಲಾಭನಷ್ಟಗಳು ಮುಂತಾದ ದ್ವಂದ್ವಭಾವಗಳ ಕೋಟಲೆಗೆ ಸಿಕ್ಕಿಕೊಂಡು ಮನಸ್ಸಿನ ಹಿಗ್ಗುಕುಗ್ಗುಗಳಿಗೆ ಗುರಿಯಾಗನು. ಕಾಮಕ್ರೋಧಾದಿ ವಿಕಾರಗಳಿಗೆ ಎಡೆಯೀಯನು. ಅಹಂಕಾರಮಮಕಾರಗಳಿಗೆ ತುತ್ತಾಗನು. ತನ್ನ ಧ್ಯೇಯ ವಸ್ತುವಿನಲ್ಲಿ ಮನಸ್ಸನ್ನು ಸ್ಥಿರವಾಗಿ ನಿಲ್ಲಿಸಿ ನಿರ್ಭೀತನಾಗಿ, ನಿಷ್ಕಾಮನಾಗಿ ಜೀವನ ಯಾತ್ರೆಯನ್ನು ನಡೆಸುವನು.

ಈ ತೆರನಾದ ಮನಃಪರಿಪಾಕವೂ, ಇಂದ್ರಿಯಜಯವೂ ಸುಮ್ಮಸುಮ್ಮನೆ ಬರುವುದಿಲ್ಲ. ಅದಕ್ಕೆ ಎಡೆಬಿಡದ ಅಭ್ಯಾಸವು ಬೇಕು. ಈ ನಿರಂತರಾಭ್ಯಾಸಕ್ಕೆ ಅತ್ಯುತ್ತಮವಾದ ಕ್ಷೇತ್ರವೆಂದರೆ ಕರ್ಮಯೋಗ. ಸಾಧಕನ ಸತ್ವಪರೀಕ್ಷೆಯಾಗುವುದು ಇಲ್ಲಿ ; ಅವನ ಅಂತಸ್ಸಾರವನ್ನು ಒರೆಹಚ್ಚಿ ನೋಡುವುದು ಇಲ್ಲಿ ; ಅವನ ಮನಸ್ಸಿನ ಬಂಗಾರದ ಗಟ್ಟಿಯು ಅಪರಂಜಿಯಾಗಿ ಬಗೆಬಗೆಯ ಒಡವೆಯ ರೂಪವನ್ನು

ತಾಳುವುದು ಇಲ್ಲಿ. ಈ ಮಲ್ಲರಂಗದಲ್ಲಿ ಹೆಣಗಾಡಿ ಎದ್ದು ಬಂದ ಧೀರನಿಗೆ ಜಗತ್ತು ಒಂದು ಹುಲ್ಲುಕಡ್ಡಿಗೆ ಸಮ. ಕಾಮಧೇನು ಕಲ್ಪವೃಕ್ಷಗಳು ಅವನ ಕೈ ಗೊಂಬೆಗಳು.

ಇಷ್ಟೊಂದು ಮಹಿಮೆಯಿರುವುದರಿಂದಲೇ ಕರ್ಮಯೋಗವನ್ನು ಪುರಾಣಗಳು ಕೊಂಡಾಡುವುವು. "ದಯೆ, ಕ್ಷಾಂತಿ, ಅನಸೂಯೆ ಮೊದಲಾದ ಎಂಟುಬಗೆಯ ಆತ್ಮ ಗುಣಗಳನ್ನು ಬೆಳಸುವ ಈ ಕರ್ಮಯೋಗವೇ ಜ್ಞಾನಯೋಗಕ್ಕೆ ಸಾಧಕ.'' ''ಸಾವಿರ ಜ್ಞಾನಯೋಗಗಳಿಗಿಂತ ಒಂದು ಕರ್ಮಯೋಗವು ಮೇಲು." "ಕರ್ಮಯೋಗ ವಿಲ್ಲದೆ ಜ್ಞಾನಯೋಗವು ಯಾರಿಗೂ ಫಲಿಸದು." "ಕರ್ಮಯೋಗದಲ್ಲಿ ಮನಸ್ಸನ್ನು ನೆಲೆಗೊಳಿಸಿದವನು ಬ್ರಹ್ಮಸಾಕ್ಷಾತ್ಕಾರವನ್ನು ಪಡೆಯುತ್ತಾನೆ.'' ''ಕರ್ಮಯೋಗ ದಲ್ಲಿ ನಿರತನಾಗಿ, ಅಧ್ಯಾತ್ಮಶಾಸ್ತ್ರವನ್ನು ಅಭ್ಯಾಸಮಾಡುತ್ತ, ನಿಷಿದ್ಧಕರ್ಮಗಳ ಗೋಜಿಗೆ ಎಂದಿಗೂ ಹೋಗದೆ ಸಾತ್ವಿಕಜೀವನವನ್ನು ನಡೆಸಿಕೊಂಡು ಹೋಗುವ ಮನುಷ್ಯನಿಗೆ ಇಹದಲ್ಲಾಗಲಿ ಪರದಲ್ಲಾಗಲಿ ಕೊರತೆಯೇನೂ ಇಲ್ಲ.'' ಹೀಗೆ ಅನೇಕ ವಿಧವಾಗಿ ಕರ್ಮಯೋಗವು ಶ್ಲಾಘಿಸಲ್ಪಟ್ಟಿದೆ.

ಈ ಕರ್ಮಯೋಗವು ನಿತ್ಯನೈಮಿತ್ತಿಕ ಕರ್ಮಗಳ ಆಚರಣೆ, ವ್ರತ, ಪರೋಪ ಕಾರ, ಉಪವಾಸ, ದಾನ, ತಪಶ್ಚರ್ಯೆ, ತೀರ್ಥಯಾತ್ರೆ ಮೊದಲಾದ ನಾನಾರೂಪ ವಾಗಿರುವುದು. ಅದಕ್ಕೆ ತಕ್ಕಹಾಗೆ ಈ ಪುರಾಣವು ದೇವಯಜ್ಞ, ಪಿತೃಯಜ್ಞ ಮೊದಲಾದ ಪಂಚಮಹಾಯಜ್ಞಗಳ ಆವಶ್ಯಕತೆಯನ್ನು ಹೇಳಿದೆ. ನಕ್ಷತ್ರಪುರುಷ ವ್ರತ, ಆದಿತ್ಯಶಯನವ್ರತ, ಕೃಷ್ಣಾಷ್ಟಮೀವ್ರತ ಮೊದಲಾದ ಎಷ್ಟೋ ವ್ರತಗಳ ವಿಧಾನವನ್ನೂ ಮಹಿಮೆಯನ್ನೂ ವರ್ಣಿಸಿದೆ. ಕೆರೆಕಟ್ಟೆಗಳನ್ನು ತೋಡಿಸುವಾಗ, ತೋಪುಗಳನ್ನು ನೆಡಿಸುವಾಗ ಅನುಸರಿಸಬೇಕಾದ ವಿಧಿಯನ್ನು ತಿಳಿಸಿದೆ. ಗೋದಾನ, ತಿಲದಾನ ಮೊದಲಾದ ನಾನಾ ವಿಧವಾದ ದಾನಗಳ ರೀತಿಯನ್ನೂ ಫಲವನ್ನೂ ವಿವರಿಸಿದೆ. ಗ್ರಹಣಸ್ನಾನವಿಧಿ, ನವಗ್ರಹ ಹೋಮವಿಧಿ ಮೊದಲಾದ ಶಾಂತಿ ಕರ್ಮಗಳ ಕ್ರಮವನ್ನು ಉಪದೇಶಿಸಿದೆ. ಅಷ್ಟೇ ಅಲ್ಲ; ದ್ವೇಷಸಾಧನೆ, ಶತ್ರುನಾಶ ಇವುಗಳಿಗಾಗಿ ನಡೆಸಬೇಕಾದ ಅಭಿಚಾರ ಕರ್ಮಗಳ ಬಗೆಯನ್ನು ಕೂಡ ನಿರೂಪಿಸಿದೆ. ಆದರೆ ''ಇಂತಹ ಕೃತ್ಯಗಳಿಂದ ಶ್ರೇಯಸ್ಸು ಉಂಟಾಗದು; ಅವುಗಳನ್ನು ಮಾಡ ದಿರುವುದೇ ಒಳ್ಳೆಯದು'' ಎಂದು ಎಚ್ಚರಿಸಿದೆ. ಕೊನೆಯಲ್ಲಿ ಪ್ರಯಾಗಕ್ಷೇತ್ರದ ಮಹಿಮೆ, ಅದರ ಯಾತ್ರೆಯ ಕ್ರಮ, ಅದರಿಂದ ಬರುವ ಫಲ ಇವುಗಳನ್ನು ವಿಸ್ತಾರ ವಾಗಿ ಹೊಗಳಿದೆ.

# ಪೀಠಿಕೆ

ಗಗನಚುಂಬಿತವಾದ ಸಂಸ್ಕೃತಸಾಹಿತ್ಯವೃಕ್ಷದ ತುದಿಗೊಂಬೆಯಲ್ಲಿ ಮಾಗಿ ಕಂಗೊಳಿಸುವ ಈ ಮಹಾಪುರಾಣ ಫಲದ ಮಾಧುರ್ಯವು ಕನ್ನಡಿಗರ ಅನುಭವಕ್ಕೆ ಬರುವಂತೆ ಆದುದು ಆಳುವ ಮಹಾ ಪ್ರಭುಗಳಾದ ಶ್ರೀಮಜ್ಜಯಚಾಮರಾಜೇಂದ್ರವೊಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ. ರವರ ಔದಾರ್ಯದಿಂದ. ಕನ್ನಡ ಸಾಹಿತ್ಯದಲ್ಲಿ ಅವರಿಗಿರುವ ಅಭಿಮಾನದಿಂದ. ಕನ್ನಡಿಗರ ಮೇಲೆ ಅವರಿಗಿರುವ ವಾತ್ಸಲ್ಯದಿಂದ. ಜ್ಞಾನಪ್ರಸಾರದ ಈ ಮಹಾಯಜ್ಞದಲ್ಲಿ ಅವರು ದೀಕ್ಷೆಯನ್ನು ತೊಟ್ಟಿರುವುದು ಕನ್ನಡನಾಡಿನ ಭಾಗ್ಯ. ಭಗವಂತನ ಅನುಗ್ರಹದಿಂದ ಅವರ ಸುಖಸಂಪದಗಳು ಹೆಚ್ಚಲಿ. ಸಂತತಿಯ ಕುಡಿ ನಿಮಿರಲಿ. ಕೀರ್ತಿ ಬೆಳಗಲಿ. ನಾಡು ಹೊನ್ನಾಗಲಿ.

ವ್ಯಯಸಂವತ್ಸರ
ಪುಷ್ಯ ಶುದ್ಧ ನವಮಿ, ಬುಧವಾರ.
1-1-1947.

**ವಾಜಪೇಯಂ ಶ್ರೀರಂಗಾಚಾರ್,**
ಅನುವಾದಕ.

# ವಿಷಯ ಸೂಚಿಕೆ

## ವಿಷಯ ಸೂಚಿಕೆ

## ವಿಷಯ ಸೂಚಿಕೆ

# ವಿಷಯ ಸೂಚಿಕೆ

|| ಶ್ರೀಃ ||

ಓಂ ತತ್ಸದ್ಬ್ರಹ್ಮಣೇ ನಮಃ

# ಶ್ರೀಮದ್ದ್ವೈಪಾಯನಮುನಿಪ್ರಣೀತಂ

# ಶ್ರೀಮತ್ಸ್ಯಮಹಾಪುರಾಣಂ

## ಅಥೈಕಪಂಚಾಶೋಽಧ್ಯಾಯಃ

|| ಋಷಯ ಊಚುಃ ||

ಯೇ ಪೂಜ್ಯಾಃ ಸ್ಯುರ್ದ್ವಿಜಾತೀನಾಮಗ್ನಯಃ ಸೂತ ಸರ್ವದಾ ।
ತಾನಿದಾನೀಂ ಸಮಾಚಕ್ಷ್ವ ತದ್ವಂಶಂ ಚಾನುಪೂರ್ವಶಃ ॥ ॥ ೧ ॥

|| ಸೂತ ಉವಾಚ ||

ಯೋಽಸಾವಗ್ನಿರಭೀಮಾನೀ ಸ್ಮೃತಃ ಸ್ವಾಯಂಭುವೇಽಂತರೇ ।
ಬ್ರಹ್ಮಣೋ ಮಾನಸಃ ಪುತ್ರಸ್ತಸ್ಮಾತ್ಸ್ವಾಹಾ ವ್ಯಜೀಜನತ್ ॥ ೨ ॥
ಪಾವಕಂ ಪವಮಾನಂ ಚ ಶುಚಿರಗ್ನಿಶ್ಚ ಯಃ ಸ್ಮೃತಃ ।
ನಿರ್ಮಥ್ಯಃ ಪವಮಾನೋಽಗ್ನಿರ್ವೈದ್ಯುತಃ ಪಾವಕಾತ್ಮಜಃ ॥ ೩ ॥

---

೧. ಋಷಿಗಳು ಹೇಳಿದರು.—ಓ ಸೂತಾ, ಬ್ರಾಹ್ಮಣರಿಗೆ ಯಾವಾಗಲೂ ಪೂಜ್ಯರೆನಿಸಿರುವ ಅಗ್ನಿಗಳನ್ನೂ ಅವರ ಸಂತತಿಯನ್ನೂ ಕ್ರಮವಾಗಿ ಈಗ ತಿಳಿಸು.

೨-೩. ಸೂತಮುನಿ ಹೇಳಿದನು.—ಎಲ್ಲೆಡೆಗಳಲ್ಲಿಯೂ ಪೂಜ್ಯನೆನಿಸಿರುವ ಈ ಅಗ್ನಿಯು ಸ್ವಾಯಂಭುವ ಮನ್ವಂತರದಲ್ಲಿ ಬ್ರಹ್ಮನ ಮಾನಸಪುತ್ರನಾಗಿ ಜನಿಸಿದನು. ಅವನಿಂದ ಸ್ವಾಹಾದೇವಿಯು ಪಾವಕ, ಪವಮಾನ ಮತ್ತು ಶುಚಿ ಎಂಬ ಮೂವರು ಅಗ್ನಿಪುತ್ರರನ್ನು ಪಡೆದಳು. ಅರಣಿಯಿಂದ ಕಡೆದಾಗ ಉತ್ಪನ್ನನಾಗುವ ಅಗ್ನಿಗೆ ಪವಮಾನನೆಂದು ಹೆಸರು. ಮಿಂಚಿನಲ್ಲಿರುವ ಅಗ್ನಿಯು ಪಾವಕನ ಪುತ್ರನೆನಿಸುವನು.

**ಶುಚಿರಗ್ನಿಃ ಸ್ಮೃತಃ ಸೌರಃ ಸ್ಥಾವರಾಶ್ಚೈವ ತೇ ಸ್ಮೃತಾಃ ।**
**ಪವಮಾನಾತ್ಮಜೋ ಹ್ಯಗ್ನಿರ್ಹವ್ಯವಾಹಃ ಸ ಉಚ್ಯತೇ ॥ ೪ ॥**

**ಪಾವಕಿಃ ಸಹರಕ್ಷಸ್ತು ಕವ್ಯವಾಹಃ ಸುತಃ ಶುಚೇಃ ।**
**ದೇವಾನಾಂ ಹವ್ಯವಾಹೋಽಗ್ನಿಃ ಪ್ರಥಮೋ ಬ್ರಹ್ಮಣಃ ಸುತಃ ॥ ೫ ॥**

**ಸಹರಕ್ಷೋಽಸುರಾಣಾಂ ತು ತ್ರಯಾಣಾಂ ತೇ ತ್ರಯೋಽಗ್ನಯಃ ।**
**ಏತೇಷಾಂ ಪುತ್ರಪೌತ್ರಾಶ್ಚ ಚತ್ವಾರಿಂಶತ್ತಥೈವ ಚ ॥ ೬ ॥**

**ಪ್ರವಕ್ಷ್ಯೇ ನಾಮತಸ್ತಾನ್ವೈ ಪ್ರವಿಭಾಗೇನ ತಾನ್ ಪೃಥಕ್ ।**
**ಪಾವನೋ ಲೌಕಿಕೋ ಹ್ಯಗ್ನಿಃ ಪ್ರಥಮೋ ಬ್ರಹ್ಮಣಶ್ಚ ಯಃ ॥ ೭ ॥**

**ಬ್ರಹ್ಮೌದನಾಗ್ನಿಸ್ತತ್ಪುತ್ರೋ ಭರತೋ ನಾಮ ವಿಶ್ರುತಃ ।**
**ವೈಶ್ವಾನರೋ ಹವ್ಯವಾಹೋ ವಹನ್ ಹವ್ಯಂ ಮಮಾರ ಸಃ ॥ ೮ ॥**

---

೪. ಸೂರ್ಯನಲ್ಲಿರುವ ಅಗ್ನಿಯನ್ನು ಶುಚಿಯೆನ್ನುವರು. ಇವರೆಲ್ಲರೂ ಸ್ಥಾವರಾಗ್ನಿಗಳು. ಪವಮಾನನ ಪುತ್ರನಾದ ಅಗ್ನಿಯನ್ನು ಹವ್ಯವಾಹ ಎಂದರೆ ದೇವತೆಗಳಿಗೆ ಹವಿಸ್ಸನ್ನು ಒಯ್ಯುವವನು ಎಂದು ಹೇಳುತ್ತಾರೆ.

೫. ಪಾವಕನ ಪುತ್ರನಿಗೆ ಸಹರಕ್ಷನೆಂದು ಹೆಸರು. ಶುಚಿಯ ಮಗನನ್ನು ಕವ್ಯವಾಹ ಎಂದರೆ ಪಿತೃಗಳಿಗೆ ಹವಿಸ್ಸನ್ನು ಒಯ್ಯುವವನು ಎಂದು ಕರೆಯುತ್ತಾರೆ. ಬ್ರಹ್ಮನ ಮೊದಲನೆಯ ಮಗನಾದ ಹವ್ಯವಾಹನು ದೇವತೆಗಳ ಅಗ್ನಿಯೆನಿಸಿರುವನು.

೬. ಸಹರಕ್ಷನು ಅಸುರರ ಅಗ್ನಿಯಾಗಿರುವನು. ಈ ಮೂವರೂ ದೇವತೆಗಳ, ಪಿತೃಗಳ ಮತ್ತು ಅಸುರರ ಅಗ್ನಿಗಳೆಂದು ಪ್ರಸಿದ್ಧರಾಗಿರುವರು. ಇವರ ಮಕ್ಕಳೂ, ಮೊಮ್ಮಕ್ಕಳೂ ಸೇರಿ ಒಟ್ಟು ನಾಲ್ವತ್ತು ಮಂದಿಗಳಾಗುವರು.

೭. ಅವರನ್ನು ವಿಂಗಡಿಸಿ ಅವರವರ ಹೆಸರಿನೊಡನೆ ತಿಳಿಸುವೆನು. ಬ್ರಹ್ಮನ ಪ್ರಥಮಪುತ್ರನಾದ ಲೌಕಿಕಾಗ್ನಿಯು ಎಲ್ಲರನ್ನೂ ಪರಿಶುದ್ಧಿಗೊಳಿಸುವನೆಂದು ಪ್ರಸಿದ್ಧನಾಗಿದ್ದಾನೆ. ಅವನಿಗೆ ಪಾವನನೆಂದು ಹೆಸರು.

೮. ಬ್ರಹ್ಮೌದನಾಗ್ನಿಯು ಲೌಕಿಕಾಗ್ನಿಯ ಪುತ್ರನು. ಇವನಿಗೆ ಭರತನೆಂದೂ ಪ್ರಸಿದ್ಧಿಯುಂಟು. ಹವ್ಯವಾಹಾಗ್ನಿಯು ಹೋಮಮಾಡಿದ ಹವಿಸ್ಸನ್ನು ಹೊತ್ತುಕೊಂಡು ಹೋಗುತ್ತಿರುವಾಗ ಮೃತನಾದನು.

ಸ ಮೃತೋಽಥರ್ವಣಃ ಪುತ್ರೋ ಮಥಿತಃ ಪುಷ್ಕರೋದಧಿಃ ।
ಯೋಽಥರ್ವಾ ಲೌಕಿಕೋ ಹ್ಯಗ್ನಿರ್ದಕ್ಷಿಣಾಗ್ನಿಃ ಸ ಉಚ್ಯತೇ । ॥ ೯ ॥

ಭೃಗೋಃ ಪ್ರಜಾಯತಾಥರ್ವಾ ಹ್ಯಂಗಿರಾಥರ್ವಣಃ ಸ್ಮೃತಃ ।
ತಸ್ಯ ಹ್ಯಲೌಕಿಕೋ ಹ್ಯಗ್ನಿರ್ದಕ್ಷಿಣಾಗ್ನಿಃ ಸ ವೈ ಸ್ಮೃತಃ ॥೧೦॥

ಅಥ ಯಃ ಪವಮಾನಸ್ತು ನಿರ್ಮಥ್ಯೋಽಗ್ನಿಃ ಸ ಉಚ್ಯತೇ ।
ಸ ಚ ವೈ ಗಾರ್ಹಪತ್ಯೋಽಗ್ನಿಃ ಪ್ರಥಮೋ ಬ್ರಹ್ಮಣಃ ಸ್ಮೃತಃ ॥೧೧॥

ತತಃ ಸಭ್ಯಾವಸಥ್ಯೌ ಚ ಸಂಶತ್ಯಾಸ್ತೌ ಸುತಾವುಭೌ ।
ತತಃ ಷೋಡಶನದ್ಯಸ್ತು ಚಕಮೇ ಹವ್ಯವಾಹನಃ ।
ಯಃ ಖಲ್ವಾಹವನೀಯೋಽಗ್ನಿರಭಿಮಾನೀ ದ್ವಿಜೈಃ ಸ್ಮೃತಃ ॥೧೨॥

ಕಾವೇರೀಂ ಕೃಷ್ಣವೇಣೀಂ ಚ ನರ್ಮದಾಂ ಯಮುನಾಂ ತಥಾ ।
ಗೋದಾವರೀಂ ವಿತಸ್ತಾಂ ಚ ಚಂದ್ರಭಾಗಾಮಿರಾವತೀಂ ॥೧೩॥

---

೯. ಮೃತನಾದ ಆ ಹವ್ಯವಾಹಾಗ್ನಿಯು, ಪುಷ್ಕರಸಮುದ್ರವನ್ನು ಕಡೆದಾಗ ಅಥರ್ವನ ಪುತ್ರನಾಗಿ ಜನಿಸಿದನು. ಅಥರ್ವನೆಂಬ ಲೌಕಿಕಾಗ್ನಿಗೆ ದಕ್ಷಿಣಾಗ್ನಿಯೆಂದೂ ಹೆಸರುಂಟು.

೧೦. ಅಥರ್ವಾಗ್ನಿಯು ಭೃಗುಮಹರ್ಷಿಯಿಂದ ಜನಿಸಿದನು. ಆದುದರಿಂದ ಅವನಿಗೆ ಅಂಗಿರಾಥರ್ವಣನೆಂದು ಹೆಸರು ಬಂದಿದೆ. ಅವನ ಪುತ್ರನಾದ ಅಲೌಕಿಕಾಗ್ನಿಗೂ ದಕ್ಷಿಣಾಗ್ನಿಯೆಂಬ ಪ್ರಸಿದ್ಧಿಯಿದೆ.

೧೧. ಅರಣಿಯಲ್ಲಿ ಕಡೆದಾಗ ಉತ್ಪನ್ನನಾದ ಕಾರಣ ಪವಮಾನಾಗ್ನಿಗೆ ನಿರ್ಮಥ್ಯನೆಂಬ ಮತ್ತೊಂದು ಹೆಸರುಂಟಷ್ಟೆ. ಅವನನ್ನೇ ಗಾರ್ಹಪತ್ಯಾಗ್ನಿಯೆಂದೂ ಹೇಳುತ್ತಾರೆ. ಬ್ರಾಹ್ಮಣನಿಗೆ ಇವನು ಮುಖ್ಯನಾದವನು.

೧೨. ಪವಮಾನಾಗ್ನಿಗೆ ಸಂಶತಿಯೆಂಬ ಪತ್ನಿಯಲ್ಲಿ ಸಭ್ಯ, ಆವಸಥ್ಯ ಎಂಬ ಇಬ್ಬರು ಪುತ್ರರು ಜನಿಸಿದರು. ಬ್ರಾಹ್ಮಣರು ಆಹವನೀಯವೆಂದು ಗೌರವಿಸುವ ಹವ್ಯವಾಹಾಗ್ನಿಯು ಹದಿನಾರು ನದಿಗಳಲ್ಲಿ ಮೋಹಗೊಂಡನು.

೧೩-೧೪. ಕಾವೇರಿ, ಕೃಷ್ಣವೇಣಿ, ನರ್ಮದೆ, ಯಮುನೆ, ಗೋದಾವರಿ, ವಿತಸ್ತೆ, ಚಂದ್ರಭಾಗೆ, ಇರಾವತಿ, ವಿಪಾಶೆ, ಕೌಶಿಕಿ, ಶತದ್ರು, ಸರಯು,

**ವಿಪಾಶಾಂ ಕೌಶಿಕೀಂ ಚೈವ ಶತದ್ರುಂ ಸರಯೂಂ ತಥಾ ।**
**ಸೀತಾಂ ಮನಸ್ವಿನೀಂ ಚೈವ ಹ್ರಾದಿನೀಂ ಪಾವನಾಂ ತಥಾ ॥೧೪॥**

**ತಾಸು ಷೋಡಶಧಾತ್ಮಾನಂ ಪ್ರವಿಭಜ್ಯ ಪೃಥಕ್ಪೃಥಕ್ ।**
**ತದಾ ತು ವಿಹರಂಸ್ತಾಸು ಧಿಷ್ಣ್ಯೇಚ್ಛುಃ ಸ ಬಭೂವ ಹ ॥೧೫॥**

**ಸ್ವಾಭಿಧಾನಸ್ಥಿತಾ ಧಿಷ್ಣ್ಯಸ್ತಾಸೂತ್ಪನ್ನಾಶ್ಚ ಧಿಷ್ಣವಃ ।**
**ಧಿಷ್ಣ್ಯೇಷು ಜಜ್ಞಿರೇ ಯಸ್ಮಾತ್ತತಸ್ತೇ ಧಿಷ್ಣವಃ ಸ್ಮೃತಾಃ ॥೧೬॥**

**ಇತ್ಯೇತೇ ವೈ ನದೀಪುತ್ರಾ ಧಿಷ್ಣ್ಯೇಷು ಪ್ರತಿಪೇದಿರೇ ।**
**ತೇಷಾಂ ವಿಹರಣೀಯಾ ಯೇ ಉಪಸ್ಥೇಯಾಶ್ಚ ತಾಞ್ಛೃಣು ।**
**ವಿಭುಃ ಪ್ರವಾಹಣೋಽಗ್ನೀಧ್ರಸ್ತತ್ರಸ್ಥಾ ಧಿಷ್ಣವೋಽಪರೇ ॥೧೭॥**

---

ಸೀತೆ, ಮನಸ್ವಿನಿ, ಹ್ರಾದಿನಿ, ಪಾವನೆ ಎಂಬ ಇವರೇ ಅವನು ಕಾಮಿಸಿದ ನದಿಗಳು.

೧೫. ಅಗ್ನಿದೇವನು ತನ್ನ ಅಂಶವನ್ನು ಹದಿನಾರು ಭಾಗವಾಗಿ ವಿಭಾಗಿಸಿ ಕೊಂಡು ಆ ನದಿಗಳಲ್ಲಿ ವಿಹರಿಸುತ್ತ ವಿಶ್ರಾಮಕ್ಕಾಗಿ ಸ್ಥಲವನ್ನು ಅಪೇಕ್ಷಿಸಿದನು.

೧೬. ಆಯಾ ನದಿಗಳ ಹೆಸರಿನಿಂದಲೇ ಅಲ್ಲಲ್ಲಿ ಆಶ್ರಯಸ್ಥಲಗಳು ಉತ್ಪನ್ನ ವಾದುವು. ಅವುಗಳಲ್ಲಿ ಧಿಷ್ಣುಗಳೆಂಬ ಪುತ್ರರು ಹುಟ್ಟಿದರು. ಧಿಷ್ಣ್ಯಗಳಲ್ಲಿ ಎಂದರೆ ಆಶ್ರಯಸ್ಥಲಗಳಲ್ಲಿ ಉತ್ಪನ್ನರಾದ ಕಾರಣ ಅವರಿಗೆ ಧಿಷ್ಣುಗಳೆಂದು ಹೆಸರು ಬಂದಿತು.

೧೭. ಮೇಲೆ ತಿಳಿಸಿದವರೇ ಧಿಷ್ಣ್ಯಗಳಲ್ಲಿ ಜನಿಸಿದ ನದೀಪುತ್ರರು. ಇವರಲ್ಲಿ ಕೆಲವರು ವಿಹರಣೀಯರು; ಎಂದರೆ ಪ್ರಣಯನ ಸಂಸ್ಕಾರದ ಮೂಲಕ ಒಂದೆ ಡೆಯಿಂದ ಇನ್ನೊಂದೆಡೆಗೆ ಒಯ್ಯಲ್ಪಡತಕ್ಕವರು. ಇನ್ನು ಕೆಲವರು ಉಪಸ್ಥಾನಕ್ಕೆ ಮಾತ್ರ (ಸ್ತೋತ್ರಕ್ಕೆ ಮಾತ್ರ) ಸ್ಥಾಪಿಸಲ್ಪಡುವುದರಿಂದ ಉಪಸ್ಥೇಯರೆನಿಸಿಕೊಳ್ಳು ವರು. ಅವರು ಯಾರು ಯಾರೆಂಬುದನ್ನು ಹೇಳುವೆನು ಕೇಳು. ಆಗ್ನೀಧ್ರಸ್ಥಾನ ದಲ್ಲಿರುವ ಪ್ರವಾಹಣ, ಆಗ್ನೀಧ್ರಾಗ್ನಿ, ಮತ್ತು ಅವರ ಸನ್ನಿಧಿಯಲ್ಲಿರುವ ಇತರ ಧಿಷ್ಣ್ಯಾಗ್ನಿಗಳನ್ನು ಯಾಗಾದಿಸತ್ಕರ್ಮಗಳನ್ನು ಪ್ರಾರಂಭಿಸುವಾಗ ಆಯಾಯಾ ಸ್ಥಾನಗಳಲ್ಲಿ ಸ್ಥಾಪಿಸುತ್ತಾರೆ.

ವಿಹರಂತಿ ಯಥಾಸ್ಥಾನಂ ಪುಣ್ಯಾಹೇ ಸಮುಪಕ್ರಮೇ ।
ಅನಿರ್ದೇಶ್ಯಾನಿವಾರ್ಯಾಣಾಮಗ್ನೀನಾಂ ಶೃಣುತ ಕ್ರಮಂ ॥೧೮॥

ವಾಸವೋಽಗ್ನಿಃ ಕೃಶಾನುರ್ಯೋ ದ್ವಿತೀಯೋತ್ತರವೇದಿಕಃ ।
ಸಮ್ರಾಡಗ್ನಿಸುತಾ ಹ್ಯಷ್ಟಾವುಪತಿಷ್ಠಂತಿ ತಾನ್ ದ್ವಿಜಾಃ ॥೧೯॥

ಪರ್ಜನ್ಯಃ ಪವಮಾನಸ್ತು ದ್ವಿತೀಯಃ ಸೋಽನುದೃಶ್ಯತೇ ।
ಪಾವಕೋಷ್ಣಃ ಸಮೂಹ್ಯಸ್ತು ವೋತ್ತರೇ ಸೋಗ್ನಿರುಚ್ಯತೇ ॥೨೦॥

ಹವ್ಯಸೂದೋ ಹ್ಯಸಂಸ್ಪೃಜ್ಯಃ ಶಾಮಿತ್ರಃ ಸ ವಿಭಾವ್ಯತೇ ।
ಶತಧಾಮಾ ಸುಧಾಜ್ಯೋತೀ ರೌದ್ರೈಶ್ವರ್ಯಃ ಸ ಉಚ್ಯತೇ ॥೨೧॥

ಬ್ರಹ್ಮಜ್ಯೋತಿರ್ವಸುಧಾಮಾ ಬ್ರಹ್ಮಸ್ಥಾನೀಯ ಉಚ್ಯತೇ ।
ಅಜೈಕಪಾದುಪಸ್ಥೇಯಃ ಸ ವೈ ಶಾಲಾಮುಖೋ ಯತಃ ॥೨೨॥

---

೧೮-೧೯. ಆವಾಹನೋದ್ದೇಶವಿಲ್ಲದೆ ಸ್ತೋತ್ರಕ್ಕಾಗಿ ಸ್ಥಾಪಿಸಲ್ಪಡುವ ಅಗ್ನಿಗಳ ಕ್ರಮವನ್ನು ಕೇಳಿರಿ. ವಾಸವನೆಂಬವನು ಮೊದಲನೆಯವನು. ಎರಡನೆಯವನಿಗೆ ಉತ್ತರವೇದಿಕಾಗ್ನಿ ಎಂದು ಹೆಸರು. ಸಮ್ರಾಡೆಂಬ ಅಗ್ನಿಯ ಪುತ್ರರು ಎಂಟು ಜನ. ಅವರನ್ನು ದ್ವಿಜರು ಸ್ತುತಿಸುತ್ತಾರೆ.

೨೦. ಸಮ್ರಾಡಗ್ನಿಯ ಎಂಟುಜನ ಪುತ್ರರನ್ನು ಕ್ರಮವಾಗಿ ಹೇಳುವೆನು. ಮೊದಲನೆಯವನೇ ಪರ್ಜನ್ಯಾಗ್ನಿ. ಅವನನ್ನು ಅನುಸರಿಸಿರತಕ್ಕವನು ಎರಡನೆಯವನಾದ ಪವಮಾನಾಗ್ನಿಯೆಂಬವನು. ಪಾವಕೋಷ್ಣ ಅಥವಾ ಸಮೂಹ್ಯನು ಉತ್ತರವೇದಿಕೆಯಲ್ಲಿರುವ ಅಗ್ನಿ.

೨೧. ಹವ್ಯಸೂದನು ನಾಲ್ಕನೆಯವನು. ಅವನಿಗೆ ಅಸಂಸ್ಪೃಜ್ಯನೆಂದೂ ಶಾಮಿತ್ರನೆಂದೂ ಹೆಸರುಂಟು. ಐದನೆಯವನಾದ ಶತಧಾಮಾಗ್ನಿಯನ್ನು ಸುಧಾಜ್ಯೋತಿಯೆಂದೂ ರೌದ್ರೈಶ್ವರ್ಯನೆಂದೂ ಹೇಳುತ್ತಾರೆ.

೨೨. ಬ್ರಹ್ಮಜ್ಯೋತಿಯು ಆರನೆಯವನು. ಅವನು ವಸುಧಾಮನೆಂದೂ ಬ್ರಹ್ಮಸ್ಥಾನೀಯನೆಂದೂ ಹೆಸರ್ಗೊಂಡಿರುವನು ಅಜೈಕಪಾತ್ತೆಂಬ ಏಳನೆಯ ಉಪಸ್ಥೇಯಾಗ್ನಿಯನ್ನು ಎಲ್ಲರೂ ಸ್ತುತಿಸುತ್ತಾರೆ. ಏಕೆಂದರೆ ಅವನು ಯಜ್ಞಶಾಲೆಯ ಮುಂಭಾಗದಲ್ಲಿರತಕ್ಕವನು.

**ಅನಿರ್ದೇಶ್ಯೋ ಹ್ಯಹಿರ್ಬುಧ್ನ್ಯೋ ಬಹಿರಂತೇ ತು ದಕ್ಷಿಣೇ ।**
**ಪುತ್ರಾ ಹ್ಯೇತೇ ತು ಸರ್ವಸ್ಯ ಉಪಸ್ಥೇಯಾ ದ್ವಿಜೈಃ ಸ್ಮೃತಾಃ ॥೨೩॥**
**ತತೋ ವಿಹರಣೀಯಾಂಸ್ತು ವಕ್ಷ್ಯಾಮ್ಯಷ್ಟೌ ತು ತಾನ್ ಸುತಾನ್ ।**
**ಹೌತ್ರಿಯಸ್ಯ ಸುತೋ ಹ್ಯಗ್ನಿರ್ಬರ್ಹಿಷೋ ಹವ್ಯವಾಹನಃ ॥೨೪॥**
**ಪ್ರಶಂಸ್ಯೋಽಗ್ನಿಃ ಪ್ರಚೇತಾಸ್ತು ದ್ವಿತೀಯಃ ಸಂಸಹಾಯಕಃ ।**
**ತತೋಗ್ನಿರ್ವೈಶ್ವದೇವಸ್ತು ಬ್ರಾಹ್ಮಣಾಚ್ಛಂಸಿರುಚ್ಯತೇ ॥೨೫॥**
**ಅಪಾಂ ಯೋನಿಃ ಸ್ಮೃತಃ ಸ್ವಾಂಭಃ ಸೇತುರ್ನಾಮ ವಿಭಾವ್ಯತೇ ।**
**ಧಿಷ್ಣ್ಯ ಆಹರಣಾ ಹ್ಯೇತೇ ಸೋಮೋನೇಜ್ಯಂತ ವೈ ದ್ವಿಜೈಃ ॥೨೬॥**
**ತತೋ ಯಃ ಪಾವಕೋ ನಾಮ್ನಾ ಯಃ ಸದ್ಭಿರ್ಯೋಗ ಉಚ್ಯತೇ ।**
**ಅಗ್ನಿಃ ಸೋಽವಭೃಥೇ ಜ್ಞೇಯೋ ವರುಣೇನ ಸಹೇಜ್ಯತೇ ॥೨೭॥**

---

೨೩. ಅಹಿರ್ಬುಧ್ನ್ಯನೆಂಬುವನನ್ನು ಎಂಟನೆಯ ಉಪಸ್ಥೇಯಾಗ್ನಿಯೆಂದು ಹೇಳುತ್ತಾರೆ. ಇವನು ದಕ್ಷಿಣದಲ್ಲಿ ಬಹಿರಾವರಣದ ಅಂಚಿನಲ್ಲಿ ಇರತಕ್ಕವನು. ಮೇಲೆ ಹೇಳಿದ ಎಂಟುಬಗೆಯ ಅಗ್ನಿಗಳೂ ಸಮ್ರಾಡಗ್ನಿಯ ಪುತ್ರರು. ದ್ವಿಜರಿಂದ ಪೂಜೆಯನ್ನು ಸ್ವೀಕರಿಸಲು ಅರ್ಹರಾದವರು.

೨೪. ಇನ್ನು ಮುಂದೆ ಎಂಟು ವಿಧವಾದ ವಿಹರಣೀಯಾಗ್ನಿಗಳನ್ನೂ, ಅವರ ಪುತ್ರರನ್ನೂ ವಿವರಿಸುವೆನು. ಹೌತ್ರಿಯನ ಪುತ್ರನಿಗೆ ಬರ್ಹಿಷಾಗ್ನಿಯೆಂದು ಹೆಸರು.

೨೫. ಎರಡನೆಯವನು ಪ್ರಶಂಸ್ಯಾಗ್ನಿ; ಇವನಿಗೆ ಪ್ರಚೇತಸ್ಸೆಂದೂ ಸಂಸಹಾಯಕನೆಂದೂ ಹೆಸರುಂಟು. ವೈಶ್ವದೇವನೆಂದೂ ಬ್ರಾಹ್ಮಣಾಚ್ಛಂಸಿಯೆಂದೂ ಪ್ರಸಿದ್ಧನಾದವನು ಮೂರನೆಯ ಅಗ್ನಿ.

೨೬. ಜಲಕ್ಕೆ ಕಾರಣಭೂತನಾದ ಅಗ್ನಿಗೆ ಸ್ವಾಂಭನೆಂದು ಹೆಸರು. ಅವನನ್ನು ಸೇತುವೆಂದೂ ಹೇಳುತ್ತಾರೆ. ಈ ಮೇಲೆ ಹೇಳಿದ ಅಗ್ನಿಗಳನ್ನು ಧಿಷ್ಣ್ಯ ಸ್ಥಾನದಲ್ಲಿ ಸ್ಥಾಪಿಸಿ, ದ್ವಿಜರು ಸೋಮರಸದಿಂದ ಯಾಗವನ್ನು ಆಚರಿಸುತ್ತಾರೆ.

೨೭. ಪಾವಕನೆಂಬ ಅಗ್ನಿಯು ಮುಂದಿನವನು. ಅವನನ್ನು ಸತ್ಪುರುಷರು ಯೋಗನೆಂದೂ ಹೇಳುತ್ತಾರೆ. ಯಜ್ಞದ ಪರಿಸಮಾಪ್ತಿಕಾಲದಲ್ಲಿ ಅವನನ್ನು ವರುಣನೊಡನೆ ಪೂಜಿಸುವರು.

ಹೃದಯಸ್ಯ ಸುತೋ ಹ್ಯಗ್ನೇರ್ಜಠರೇಽಸೌ ನೃಣಾಂ ಪಚ‌ |
ಮನ್ಯುಮಾಞ್ಜಠರಸ್ಯಾಗ್ನಿರ್ವಿದ್ಧಾಗ್ನಿಃ ಸತತಂ ಸ್ಮೃತಃ ||೨೮||
ಪರಸ್ಪರೋತ್ಥಿತೋ ಹ್ಯಗ್ನಿರ್ಭೂತಾನೀಹ ವಿಭುರ್ದಹ‌ |
ಅಗ್ನೇರ್ಮನ್ಯುಮತಃ ಪುತ್ರೋ ಘೋರಃ ಸಂವರ್ತಕಃ ಸ್ಮೃತಃ ||೨೯||
ಪಿಬನ್ನಪಃ ಸ ವಸತಿ ಸಮುದ್ರೇ ವಡವಾಮುಖೇ |
ಸಮುದ್ರವಾಸಿನಃ ಪುತ್ರಃ ಸಹರಕ್ಷೋ ವಿಭಾವ್ಯತೇ ||೩೦||
ಸಹರಕ್ಷಸುತಃ ಕಾಮೋ ಗೃಹೇ ಸ ವಸತೇ ನೃಣಾಂ |
ಕ್ರವ್ಯಾದಗ್ನಿಃ ಸುತಸ್ತಸ್ಯ ಪುರುಷಾನ್ಯೋಽತ್ತಿ ವೈ ಮೃತಾ‌ ||೩೧||
ಇತ್ಯೇತೇ ಪಾವಕಸ್ಯಾಗ್ನೇರ್ದ್ವಿಜೈಃ ಪುತ್ರಾಃ ಪ್ರಕೀರ್ತಿತಾಃ |
ತತಃ ಸುತಾಸ್ತು ವೈ ಸೌರಾದ್ಗಂಧರ್ವೈರಸುರೈರ್ಹೃತಾಃ ||೩೨||

---

೨೮. ಹೃದಯಾಗ್ನಿಯ ಸುತನು ಮನುಷ್ಯರ ಜಠರದಲ್ಲಿದ್ದುಕೊಂಡು ಆಹಾರವನ್ನು ಪಚನಮಾಡುತ್ತಿರುವನು. ಇವನಿಗೆ ಮನ್ಯುಮಾ‌ ಎಂದು ಹೆಸರು. ಈ ಜಠರಾಗ್ನಿಯನ್ನು ವಿದ್ಧಾಗ್ನಿಯೆಂದೂ ಹೇಳುತ್ತಾರೆ.

೨೯. ವಸ್ತುಗಳ ಪರಸ್ಪರ ಸಂಘರ್ಷಣದಿಂದ ಹುಟ್ಟಿದ ಅಗ್ನಿಯು ಬೇಗನೆ ಎಲ್ಲೆಲ್ಲಿಯೂ ವ್ಯಾಪಿಸಿ ಪ್ರಾಣಿಗಳನ್ನು ಸುಡುವನು. ಘೋರವಾದ ಆ ಅಗ್ನಿಗೆ ಸಂವರ್ತಕನೆಂದು ಹೆಸರು. ಅವನು ಮನ್ಯುಮಂತನೆಂಬ ಹೆಸರುಳ್ಳ ಜಠರಾಗ್ನಿಯ ಪುತ್ರನು.

೩೦. ಆ ಸಂವರ್ತಕಾಗ್ನಿಯು ಸಮುದ್ರದಲ್ಲಿನ ನೀರನ್ನು ಕುಡಿಯುತ್ತ ಹೆಣ್ಣುಕುದುರೆಯ ಬಾಯಿಯಲ್ಲಿ (ಬಡಬಾಮುಖದಲ್ಲಿ) ವಾಸಿಸುತ್ತಿರುವನು. ಸಮುದ್ರವಾಸಿಯಾದ ಆತನ ಪುತ್ರನನ್ನು ಸಹರಕ್ಷನೆಂದು ಕರೆಯುತ್ತಾರೆ.

೩೧. ಸಹರಕ್ಷಸುತನಾದ ಕಾಮನೆಂಬ ಅಗ್ನಿಯು ಮನುಷ್ಯರ ಮನೆಯಲ್ಲಿ ವಾಸಿಸುತ್ತಾನೆ. ಅವನ ಮಗನಿಗೆ ಕ್ರವ್ಯಾದನೆಂದು ಹೆಸರು. ಅವನು ಮೃತರಾದ ಮನುಷ್ಯರನ್ನು ಭಕ್ಷಿಸುತ್ತಾನೆ.

೩೨. ಇವರೆಲ್ಲರೂ ಪಾವಕಾಗ್ನಿಯ ಪುತ್ರರೆಂದು ದ್ವಿಜರು ಹೇಳಿರುವರು. ಬಳಿಕ ಸೂರ್ಯನಲ್ಲಿರುವ ಶುಚಿ ಎಂಬ ಅಗ್ನಿಯಿಂದ ಜನಿಸಿದ ಸುತರನ್ನು ಗಂಧರ್ವರೂ, ಅಸುರರೂ ತಮ್ಮ ಯಾಗಕಾರ್ಯಗಳಿಗಾಗಿ ಒಯ್ದರು.

**ಮಥಿತೋ ಯಸ್ತ್ವರಣ್ಯಾಂ ತು ಸೋಽಗ್ನಿರಾಪ ಸಮಿಂಧನಂ ।**
**ಆಯುರ್ನಾಮ್ನಾ ತು ಭಗವಾನ್ ಪಶೌ ಯಸ್ತು ಪ್ರಣೀಯತೇ ॥೩೩॥**

**ಆಯುಷೋ ಮಹಿಮಾನ್ ಪುತ್ರೋ ದಹನಸ್ತು ತತಸ್ಸುತಃ ।**
**ಪಾಕಯಜ್ಞೇಷ್ವಭೀಮಾನೀ ಹುತಂ ಹವ್ಯಂ ಭುನಕ್ತಿ ಯಃ ॥೩೪॥**

**ಸರ್ವಸ್ಮಾದ್ದೇವಲೋಕಾಚ್ಚ ಹವ್ಯಂ ಕವ್ಯಂ ಭುನಕ್ತಿ ಯಃ ।**
**ಪುತ್ರೋಽಸ್ಯ ಸಹಿತೋ ಹ್ಯಗ್ನಿರದ್ಭುತಃ ಸ ಮಹಾಯಶಾಃ ॥೩೫॥**

**ಪ್ರಾಯಶ್ಚಿತ್ತೇಷ್ವಭೀಮಾನೀ ಹುತಂ ಹವ್ಯಂ ಭುನಕ್ತಿ ಯಃ ।**
**ಅದ್ಭುತಸ್ಯ ಸುತೋ ವೀರೋ ದೇವಾಂಶಸ್ತು ಮಹಾನ್ ಸ್ಮೃತಃ ॥೩೬॥**

**ವಿವಿಧಾಗ್ನಿಸ್ತತಸ್ತಸ್ಯ ತಸ್ಯ ಪುತ್ರೋ ಮಹಾಕವಿಃ ।**
**ವಿವಿಧಾಗ್ನಿಸುತಾದರ್ಕಾದಗ್ನಯೋಽಷ್ಟೌ ಸುತಾಃ ಸ್ಮೃತಾಃ ॥೩೭॥**

---

೩೩. ಅರಣಿಯಲ್ಲಿ ಕಡೆದಾಗ ಉತ್ಪನ್ನನಾಗಿ ಪ್ರಜ್ವಲಿಸುವ ಅಗ್ನಿಗೆ ಆಯುಸ್ಸೆಂಬ ಹೆಸರು ಬಂದಿದೆ. ಪೂಜ್ಯನಾದ ಆ ಅಗ್ನಿಯನ್ನು ಪಶುಬಂಧನೆಂಬ ಕರ್ಮದಲ್ಲಿ ಪ್ರಣಯನಮಾಡುತ್ತಾರೆ.

೩೪. ಆಯುಸ್ಸಿನ ಮಗನಿಗೆ ಮಹಿಮಾನ್ ಎಂದು ಹೆಸರು. ಅವನ ಪುತ್ರನನ್ನು ದಹನನೆಂದು ಹೇಳುತ್ತಾರೆ. ಪಾಕಯಜ್ಞಗಳಲ್ಲಿ ಅಭಿಮಾನಿಯೆನಿಸಿ, ಹೋಮ ಮಾಡಿದ ಹವ್ಯವನ್ನು ಭುಜಿಸುವವನು ಇವನೇ.

೩೫. ಈ ದಹನಾಗ್ನಿಯೇ ಎಲ್ಲ ದೇವಲೋಕಗಳಿಂದಲೂ ಬಂದ ಹವ್ಯವನ್ನೂ ಕವ್ಯವನ್ನೂ ಭುಂಜಿಸುವನು. ಅಪರಿಮಿತ ಯಶಸ್ವಿಯಾದ ಸಹಿತನೆಂಬ ಅಗ್ನಿಯು ಇವನ ತನಯನು. ಇವನಿಗೆ ಅದ್ಭುತನೆಂದೂ ಹೆಸರುಂಟು.

೩೬. ಪ್ರಾಯಶ್ಚಿತ್ತ ಕರ್ಮಗಳಲ್ಲಿ ಅಧಿದೇವನಾಗಿ, ಹೋಮಮಾಡಿದ ಹವ್ಯವನ್ನು ಸ್ವೀಕರಿಸುವ ಅಗ್ನಿಯು ಅದ್ಭುತನ ಪುತ್ರನಾದ ವೀರನೆಂಬವನು. ಇವನು ದೇವಾಂಶಸಂಭೂತನು. ಇವನಿಗೆ ಮಹಾನ್ ಎಂದೂ ಹೆಸರು.

೩೭. ವೀರಾಗ್ನಿಯಿಂದ ವಿವಿಧಾಗ್ನಿಯೂ, ಅವನಿಂದ ಮಹಾಕವಿಯೆಂಬ ಅಗ್ನಿಯೂ ಜನಿಸಿದರು. ವಿವಿಧಾಗ್ನಿಯ ಪುತ್ರನಾದ ಅರ್ಕನಿಂದ ಎಂಟು ಜನ ಅಗ್ನಿಪುತ್ರರು ಹುಟ್ಟಿದರು.

ಕಾವ್ಯಾಸ್ವಿಷ್ಟಿಷ್ವಭೀಮಾನೀ ರಕ್ಷೋಹಾಯತಿಕೃಚ್ಚ ಯಃ ।
ಸುರಭಿರ್ವಸುಮಾನ್ನಾದೋ ಹರ್ಯಶ್ವಶ್ಚೈವ ರುಕ್ಮವಾರ್ ॥೩೮॥

ಪ್ರವರ್ಗ್ಯಃ ಕ್ಷೇಮವಾಂಶ್ಚೈವ ಇತ್ಯಷ್ಟೌ ಚ ಪ್ರಕೀರ್ತಿತಾಃ ।
ಶುಚ್ಯಗ್ನೇಸ್ತು ಪ್ರಜಾ ಹ್ಯೇಷಾ ಅಗ್ನಯಶ್ಚ ಚತುರ್ದಶ ॥೩೯॥

ಇತ್ಯೇತೇ ಹ್ಯಗ್ನಯಃ ಪ್ರೋಕ್ತಾಃ ಪ್ರಣೀತಾ ಯೇ ಹಿ ಚಾಧ್ವರೇ ।
ಸಮತೀತೇ ತು ಸರ್ಗೇ ಯೇ ಯಾಮೈಃ ಸಹ ಸುರೋತ್ತಮೈಃ ॥೪೦॥

ಸ್ವಾಯಂಭುವೇಽಂತರೇ ಪೂರ್ವಮಗ್ನಯಸ್ತೇಽಭಿಮಾನಿನಃ ।
ಏತೇ ವಿಹರಣೀಯೇಷು ಚೇತನಾಚೇತನೇಷ್ವಿಹ ॥೪೧॥

ಸ್ಥಾನಾಭಿಮಾನಿನೋಽಗ್ನೀಧ್ರಾಃ ಪ್ರಾಗಾಸನ್ ಹವ್ಯವಾಹನಾಃ ।
ಕಾಮ್ಯನೈಮಿತ್ತಿಕಾದ್ಯಾಸ್ತೇ ಯೇ ತೇ ಕರ್ಮಸ್ವವಸ್ಥಿತಾಃ ॥೪೨॥

---

೩೮. ಇಷ್ಟಾರ್ಥಲಾಭಕ್ಕಾಗಿ ಮಾಡುವ ಇಷ್ಟಿಗಳಲ್ಲಿ ಅಭಿಮಾನಿಯಾಗಿ ಭವಿಷ್ಯಚ್ಛುಭವನ್ನು ಕೊಡತಕ್ಕ ರಕ್ಷೋಹ, ಸುರಭಿ, ವಸುಮಂತ, ನಾದ, ಹರ್ಯಶ್ವ, ರುಕ್ಮವಂತ, ಪ್ರವರ್ಗ್ಯ, ಕ್ಷೇಮವಂತ ಇವರೇ ಆ ಎಂಟು ಜನ ಮಕ್ಕಳು.

೩೯. ಈ ಹದಿನಾಲ್ಕು ಅಗ್ನಿಗಳು ಸೂರ್ಯನಲ್ಲಿರುವ ಶುಚಿಯೆಂಬ ಅಗ್ನಿಯ ಪ್ರಜೆಗಳು.

೪೦. ಈ ಅಗ್ನಿಗಳು ಯಾಗದಲ್ಲಿ ಪ್ರಣಯನದಿಂದ ಸಂಸ್ಕಾರ್ಯಗಳಾಗಿರುವರು. ಇವರೆಲ್ಲರೂ ಅಗ್ನ್ಯಭಿಮಾನಿದೇವತೆಗಳಾಗಿದ್ದು ಹಿಂದಿನ ಸ್ವಾಯಂಭುವಮನ್ವಂತರ ದಲ್ಲಿ ತಮ್ಮ ಅಧಿಕಾರವನ್ನು ನಡೆಸಿ, ಯಾಮರೆಂದು ಪ್ರಸಿದ್ಧರಾದ ದೇವಗಣ ಗಳೊಡನೆ ಕಳೆದುಹೋಗಿದ್ದಾರೆ.

೪೧-೪೨. ಈ ಅಗ್ನಿಗಳು ವಿಹರಣಸ್ಥಾನಗಳಲ್ಲಿಯೂ, ಚೇತನಾಚೇತನ ವರ್ಗದಲ್ಲಿಯೂ ಸ್ಥಾನಾಭಿಮಾನಿಗಳಾಗಿ, ಕಾಮ್ಯ, ನೈಮಿತ್ತಿಕ ಮೊದಲಾದ ಕರ್ಮ ಗಳಲ್ಲಿ ಉಪಯುಕ್ತರಾಗಿ, ದೇವತೆಗಳಿಗೆ ಹವಿರ್ಭಾಗವನ್ನು ಹೊತ್ತುಕೊಂಡು ಹೋಗುವ ಅಧಿಕಾರದಲ್ಲಿ ಇದ್ದರು.

**ಪೂರ್ವೇ ಮನ್ವಂತರೇಽತೀತೇ ಶುಕ್ರೈರ್ಯಾಮೈಶ್ಚ ತೈಃ ಸಹ ।**
**ಏತೇ ದೇವಗಣೈಃ ಸಾರ್ಧಂ ಪ್ರಥಮಸ್ಯಾಂತರೇ ಮನೋಃ ॥೪೩॥**

**ಇತ್ಯೇತಾ ಯೋನಯೋ ಹ್ಯುಕ್ತಾಃ ಸ್ಥಾನಾಖ್ಯಾ ಜಾತವೇದಸಾಂ ।**
**ಸ್ವಾರೋಚಿಷಾದಿಷು ಜ್ಞೇಯಾಃ ಸವರ್ಣಾಂತೇಷು ಸಪ್ತಸು ॥೪೪॥**

**ತೈರೇವಂ ತು ಪ್ರಸಂಖ್ಯಾತಂ ಸಾಂಪ್ರತಾನಾಗತೇಷ್ವಿಹ ।**
**ಮನ್ವಂತರೇಷು ಸರ್ವೇಷು ಲಕ್ಷಣಂ ಜಾತವೇದಸಾಂ ॥೪೫॥**

**ಮನ್ವಂತರೇಷು ಸರ್ವೇಷು ನಾನಾರೂಪಪ್ರಯೋಜನೈಃ ।**
**ವರ್ತಂತೇ ವರ್ತಮಾನೈಶ್ಚ ಯಾಮೈರ್ದೇವೈಸ್ಸಹಾಗ್ನಯಃ ॥೪೬॥**

**ಅನಾಗತೈಃ ಸುರೈಸ್ಸಾರ್ಧಂ ವತ್ಸ್ಯಂತೋಽನಾಗತಾಸ್ತಥಾ ।**
**ಇತ್ಯೇಷ ಪ್ರಚಯೋಽಗ್ನಿನಾಂ ಮಯಾ ಪ್ರೋಕ್ತೋ ಯಥಾಕ್ರಮಂ ।**
**ವಿಸ್ತರೇಣಾನುಪೂರ್ವ್ಯಾ ಚ ಕಿಮನ್ಯಚ್ಛ್ರೋತುಮಿಚ್ಛಥ ॥೪೭॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇಽಗ್ನಿವಂಶೋ ನಾಮೈಕಪಂಚಾಶೋಽಧ್ಯಾಯಃ**

---

೪೩. ಮನ್ವಂತರಗಳಲ್ಲಿ ಮೊದಲನೆಯದೆನಿಸಿ ಕಳೆದುಹೋದ ಸ್ವಾಯಂಭುವ ಮನ್ವಂತರದಲ್ಲಿ ಶುಕ್ರರು, ಯಾಮರು ಮೊದಲಾದ ದೇವಗಣಗಳೊಡನೆ ಈ ಅಗ್ನಿಗಳು ತಮ್ಮ ತಮ್ಮ ಅಧಿಕಾರಗಳಲ್ಲಿ ನಿರತರಾಗಿದ್ದರು.

೪೪. ಸ್ವಾರೋಚಿಷನಿಂದ ತೊಡಗಿ ಸಾವರ್ಣಿಯ ವರೆಗಿನ ಏಳು ಜನ ಮನುಗಳ ಅಂತರಗಳಲ್ಲಿ ಅಗ್ನಿಗಳ ಉತ್ಪತ್ತಿಯನ್ನೂ, ಅವರ ಉತ್ಪತ್ತಿಸ್ಥಾನಗಳನ್ನೂ ಹಿಂದೆ ತಿಳಿಸಿದಂತೆ ವಿವರಿಸಿದುದಾಯಿತು.

೪೫. ಈಗ ನಡೆಯುತ್ತಿರುವ ವೈವಸ್ವತಮನ್ವಂತರದಲ್ಲೂ, ಮುಂದೆ ಬರಲಿರುವ ಮಿಕ್ಕ ಮನ್ವಂತರಗಳಲ್ಲೂ ಅಗ್ನಿಗಳ ಲಕ್ಷಣವು ಹೀಗೆಯೇ ಇರುವುದೆಂದು ಪ್ರಾಜ್ಞರು ನಿಷ್ಕರ್ಷಿಸಿರುವರು.

೪೬. ಬಗೆಬಗೆಯ ರೂಪವೂ ಪ್ರಯೋಜನವೂ ಉಳ್ಳ ಯಾಮರೇ ಮೊದಲಾದ ದೇವಗಣಗಳೊಡನೆ ಮೇಲೆ ಹೇಳಿದ ಅಗ್ನಿಗಳೂ ಸಹ ಮನ್ವಂತರಗಳಲ್ಲೆಲ್ಲ ಸ್ಥಿರವಾಗಿರುವರು.

೪೭. ಭವಿಷ್ಯತ್ಕಾಲದಲ್ಲಿ ಅಧಿಕಾರಕ್ಕೆ ಬರುವ ದೇವತೆಗಳೊಡನೆ ಅಗ್ನಿಗಳೂ ಸಹ ಬಂದು ಅಧಿಕಾರವನ್ನು ನಡೆಸುವರು. ಅಗ್ನಿಪ್ರಭೇದಗಳನ್ನು ಹೀಗೆ ಯಥಾಕ್ರಮವಾಗಿ ವಿಸ್ತರಿಸಿ ಹೇಳಿದೆನು. ಇನ್ನೇನು ಕೇಳಬೇಕೆಂದಿರುವಿರಿ?

ಅಧ್ಯಾಯ ೫೧

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಅಗ್ನಿಯ ವಂಶವನ್ನೂ ಪ್ರಭೇದಗಳನ್ನೂ ತಿಳಿಸಿದೆ.

ಸ್ವಾಯಂಭುವ ಮನ್ವಂತರದಲ್ಲಿ ಬ್ರಹ್ಮನ ಮಾನಸಪುತ್ರನಾಗಿ ಅಗ್ನಿ ಜನಿಸಿದನು. ಅವನಿಗೆ ಸ್ವಾಹಾದೇವಿಯಲ್ಲಿ ಪಾವಕ, ಪವಮಾನ, ಶುಚಿ ಎಂಬ ಮಕ್ಕಳು ಹುಟ್ಟಿದರು. ಇವರಲ್ಲಿ ಒಬ್ಬೊಬ್ಬರ ವಂಶವೂ ಬೆಳೆಯಿತು. ಹವ್ಯವಾಹನನು ಕಾವೇರಿ ಮೊದಲಾದ ಹದಿನಾರು ನದಿಗಳಲ್ಲಿ ಧಿಷ್ಣುಗಳೆಂಬ ಪುತ್ರರನ್ನು ಪಡೆದನು. ಲೋಕದಲ್ಲಿ ವಿಧವಿಧವಾದ ಕಾರ್ಯಗಳಿಗೆ ಉಪಯೋಗವಾಗುವ ಅಗ್ನಿಗಳೆಲ್ಲರೂ ಇವರ ವಂಶದಲ್ಲೇ ಹುಟ್ಟಿದರು. ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ ಜಠರಾಗ್ನಿ, ಬಡಬಾಗ್ನಿ ಮುಂತಾದವರು ಇವರಲ್ಲಿ ಕೆಲವರು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಅಗ್ನಿವಂಶವೆಂಬ ಐವತ್ತೊಂದನೆಯ ಅಧ್ಯಾಯವು ಮುಗಿದುದು.



## ಅಥ ದ್ವಿಪಂಚಾಶೋಽಧ್ಯಾಯಃ

॥ ಋಷಯ ಊಚುಃ ॥

ಇದಾನೀಂ ಪ್ರಾಹ ಯದ್ವಿಷ್ಣುಃ ಪೃಷ್ಟಃ ಪರಮುಮುತ್ತಮಂ ।
ತಮಿದಾನೀಂ ಸಮಾಚಕ್ಷ್ವ ಧರ್ಮಾಧರ್ಮಸ್ಯ ವಿಸ್ತರಂ ॥ ೧ ॥

॥ ಸೂತ ಉವಾಚ ॥

ಏವಮೇಕಾರ್ಣವೇ ತಸ್ಮಿನ್ ಮತ್ಸ್ಯರೂಪೀ ಜನಾರ್ದನಃ ।
ವಿಸ್ತಾರಮಾದಿಸರ್ಗಸ್ಯ ಪ್ರತಿಸರ್ಗಸ್ಯ ಚಾಖಿಲಂ ॥ ೨ ॥

ಕಥಯಾಮಾಸ ವಿಶ್ವಾತ್ಮಾ ಮನವೇ ಸೂರ್ಯಸೂನವೇ ।
ಕರ್ಮಯೋಗಂ ಚ ಸಾಂಖ್ಯಂ ಚ ಯಥಾವದ್ವಿಸ್ತರಾನ್ವಿತಂ ॥ ೩ ॥

॥ ಋಷಯ ಊಚುಃ ॥

ಶ್ರೋತುಮಿಚ್ಛಾಮಹೇ ಸೂತ ಕರ್ಮಯೋಗಸ್ಯ ಲಕ್ಷಣಂ ।
ಯಸ್ಮಾದವಿದಿತಂ ಲೋಕೇ ನ ಕಿಂಚಿತ್ತವ ಸುವ್ರತ ॥ ೪ ॥

---

೧. ಋಷಿಗಳು ಹೇಳಿದರು.—ಮನುಚಕ್ರವರ್ತಿಯು ಪ್ರಶ್ನೆಮಾಡಲು, ವಿಷ್ಣುವು ಪರಮಶ್ರೇಷ್ಠನಾದ ಯಾವ ವಿಷಯವನ್ನು ಹೇಳಿದನೋ ಅಂತಹ ಧರ್ಮಾಧರ್ಮ ವಿಚಾರವನ್ನು ಈಗ ಸ್ಪಷ್ಟವಾಗಿ ತಿಳಿಸು.

೨-೩. ಸೂತಪೌರಾಣಿಕನು ಹೇಳಿದನು.—ಆ ಜಲಪ್ರಳಯದಲ್ಲಿ ಮತ್ಸ್ಯರೂಪಧಾರಿಯಾದ ಮಹಾವಿಷ್ಣುವು ಸೂರ್ಯಪುತ್ರನಾದ ವೈವಸ್ವತಮನುವಿಗೆ ಸೃಷ್ಟಿ ಮತ್ತು ಪ್ರತಿಸೃಷ್ಟಿಯ ಕ್ರಮವನ್ನು ವಿಸ್ತಾರವಾಗಿ ತಿಳಿಸಿದನು. ತರುವಾಯ ವಿಶ್ವರೂಪಿಯಾದ ಆ ಭಗವಂತನು ಕರ್ಮಯೋಗವನ್ನೂ, ಸಾಂಖ್ಯವೆಂಬ ಜ್ಞಾನ ಯೋಗವನ್ನೂ, ವಿವರವಾಗಿ ಉಪದೇಶಿಸಿದನು.

೪. ಋಷಿಗಳು ಹೇಳಿದರು.—ಓ ಸೂತಾ, ಕರ್ಮಯೋಗದ ಲಕ್ಷಣವನ್ನು ಕೇಳಲಪೇಕ್ಷಿಸುತ್ತೇವೆ. ಎಲೈ ವ್ರತಶೀಲನೇ, ಲೋಕದಲ್ಲಿ ನಿನಗೆ ತಿಳಿಯದಂತಹ ವಿಚಾರವಾವುದೂ ಇಲ್ಲ.

॥ ಸೂತ ಉವಾಚ ॥

ಕರ್ಮಯೋಗಂ ಚ ವಕ್ಷ್ಯಾಮಿ ಯಥಾ ವಿಷ್ಣುವಿಭಾಷಿತಂ ।
ಜ್ಞಾನಯೋಗಸಹಸ್ರಾದ್ಧಿ ಕರ್ಮಯೋಗಃ ಪ್ರಶಸ್ಯತೇ ॥ ೫ ॥

ಕರ್ಮಯೋಗೋದ್ಭವಂ ಜ್ಞಾನಂ ತಸ್ಮಾತ್ತತ್ಪರಮಂ ಪದಂ ।
ಕರ್ಮಜ್ಞಾನೋದ್ಭವಂ ಬ್ರಹ್ಮ ನ ಚ ಜ್ಞಾನಮಕರ್ಮಣಃ ॥ ೬ ॥

ತಸ್ಮಾತ್ಕರ್ಮಣಿ ಯುಕ್ತಾತ್ಮಾ ತತ್ತ್ವಮಾಪ್ನೋತಿ ಶಾಶ್ವತಂ ।
ವೇದೋಽಖಿಲೋ ಧರ್ಮಮೂಲಮಾಚಾರಶ್ಚೈವ ತದ್ವಿದಾಂ ॥ ೭ ॥

ಅಷ್ಟಾವಾತ್ಮಗುಣಾಸ್ತಸ್ಮಿನ್ ಪ್ರಧಾನತ್ವೇನ ಸಂಸ್ಥಿತಾಃ ।
ದಯಾ ಸರ್ವೇಷು ಭೂತೇಷು ಕ್ಷಾಂತೀ ರಕ್ಷಾತುರಸ್ಯ ತು ॥ ೮ ॥

ಅನಸೂಯಾ ತಥಾ ಲೋಕೇ ಶೌಚಮಂತರ್ಬಹಿರ್ದ್ವಿಜಾಃ ।
ಅನಾಯಾಸೇಷು ಕಾರ್ಯೇಷು ಮಾಂಗಲ್ಯಾಚಾರಸೇವನಂ ॥ ೯ ॥

---

೫. ಸೂತಮುನಿ ಹೇಳಿದನು.—ವಿಷ್ಣುವು ಹೇಳಿದಂತೆ ಕರ್ಮಯೋಗವನ್ನು ನಿಮಗೆ ತಿಳಿಸುವೆನು. ಸಾವಿರ ಜ್ಞಾನಯೋಗಗಳಿಗಿಂತಲೂ ಒಂದು ಕರ್ಮಯೋಗವು ಶ್ರೇಷ್ಠವಾದುದು.

೬. ಕರ್ಮಯೋಗದಿಂದ ಜ್ಞಾನಯೋಗವು ಹುಟ್ಟುವುದು. ಆದುದರಿಂದ ಅದು ಸದ್ಗತಿ ಪ್ರದವು. ಕರ್ಮಯೋಗಜ್ಞಾನದಿಂದ ಬ್ರಹ್ಮಜ್ಞಾನವು ಮೂಡುವುದು. ಕರ್ಮವಿಲ್ಲದೆ ಜ್ಞಾನವಿಲ್ಲ.

೭. ಆದುದರಿಂದ ಕರ್ಮಯೋಗದಲ್ಲಿ ಜ್ಞಾನವನ್ನು ನೆಲೆಗೊಳಿಸಿದರೆ ಶಾಶ್ವತತತ್ತ್ವವು ಲಭಿಸುವುದು. ಸಕಲವೇದಗಳೂ, ಅವುಗಳ ರಹಸ್ಯವನ್ನು ಬಲ್ಲವರ ಆಚಾರವೂ ಧರ್ಮವನ್ನರಿಯಲು ಸಾಧನಗಳು.

೮-೧೧. ಧರ್ಮಾಚರಣೆಯಲ್ಲಿ ಎಂಟು ಬಗೆಯ ಆತ್ಮಗುಣಗಳು ಪ್ರಧಾನವಾದುವು. ಸರ್ವಪ್ರಾಣಿಗಳಲ್ಲೂ ದಯೆ, ಕ್ಷಮೆ, ದೀನರಕ್ಷಣೆ, ಹೊಟ್ಟೆಗಿಚ್ಚಿಲ್ಲದಿರುವಿಕೆ, ಒಳಗಣ ಮತ್ತು ಹೊರಗಣ ಪಾರಿಶುಧ್ಯ, ಕಾರ್ಯಗಳನ್ನು ಆಯಾಸವಿಲ್ಲದಂತೆ ನೆರವೇರಿಸುವುದು, ಮಂಗಲಪ್ರದವಾದ ಆಚಾರಗಳನ್ನು ಅನುಸರಿಸುವುದು,

**ನ ಚ ದ್ರವ್ಯೇಷು ಕಾರ್ಪಣ್ಯಮಾರ್ತೇಷೂಪಾರ್ಜಿತೇಷು ಚ ।**
**ತಥಾಽಸ್ಪೃಹಾ ಪರದ್ರವ್ಯೇ ಪರಸ್ತ್ರೀಷು ಚ ಸರ್ವದಾ ॥೧೦॥**

**ಅಷ್ಟಾವಾತ್ಮಗುಣಾಃ ಪ್ರೋಕ್ತಾಃ ಪುರಾಣಸ್ಯ ತು ಕೋವಿದೈಃ ।**
**ಅಯಮೇವ ಕ್ರಿಯಾಯೋಗೋ ಜ್ಞಾನಯೋಗಸ್ಯ ಸಾಧಕಃ ॥೧೧॥**

**ಕರ್ಮಯೋಗಂ ವಿನಾ ಜ್ಞಾನಂ ಕಸ್ಯ ಚಿನ್ನೇಹ ದೃಶ್ಯತೇ ।**
**ಶ್ರುತಿಸ್ಮೃತ್ಯುದಿತಂ ಧರ್ಮಮುಪತಿಷ್ಠೇತ್ಪ್ರಯತ್ನತಃ ॥೧೨॥**

**ದೇವತಾನಾಂ ಪಿತೄಣಾಂ ಚ ಮನುಷ್ಯಾಣಾಂ ಚ ಸರ್ವದಾ ।**
**ಕುರ್ಯಾದಹರಹರ್ಯಜ್ಞೈರ್ಭೂತರ್ಷಿಗಣತರ್ಪಣಂ ॥೧೩॥**

**ಸ್ವಾಧ್ಯಾಯೈರರ್ಚಯೇಚ್ಚರ್ಷೀನ್ಹೋಮೈರ್ದೇವಾನ್ಯಥಾವಿಧಿ ।**
**ಪಿತೄಞ್ಛ್ರಾದ್ಧೈರನ್ನದಾನೈರ್ಭೂತಾನಿ ಬಲಿಕರ್ಮಭಿಃ ॥೧೪॥**

---

ತನ್ನಲ್ಲಿರುವ ಮತ್ತು ತಾನು ಸಂಪಾದಿಸಿದ ಪದಾರ್ಥಗಳಲ್ಲಿ ಕೃಪಣ ಬುದ್ಧಿಯನ್ನು ಮಾಡದೆ ದೀನರಿಗೆ ದಾನಮಾಡುವುದು, ಪರದ್ರವ್ಯದಲ್ಲೂ, ಪರಸ್ತ್ರೀಯರಲ್ಲೂ ಅಭಿಲಾಷೆಯಿಲ್ಲದಿರುವುದು ಈ ಎಂಟು ವಿಧವಾದ ಆತ್ಮಗುಣಗಳನ್ನು ಸನಾತನ ಧರ್ಮವನ್ನರಿತವರು ಹೇಳಿರುವರು. ಇದೇ ಕರ್ಮಯೋಗ. ಇದೇ ಜ್ಞಾನಯೋಗಕ್ಕೆ ಸಾಧಕವಾದುದು.

೧೨. ಕರ್ಮಯೋಗವನ್ನುಳಿದು ಜ್ಞಾನವನ್ನು ಸಂಪಾದಿಸಿದವನೊಬ್ಬನೂ ಕಾಣಬರುವುದಿಲ್ಲ. ಶ್ರುತಿಗಳಲ್ಲೂ ಸ್ಮೃತಿಗಳಲ್ಲೂ ಹೇಳಿರುವ ಧರ್ಮವನ್ನು ಪ್ರಯತ್ನಪೂರ್ವಕವಾಗಿ ನೆರವೇರಿಸಬೇಕು.

೧೩. ಪ್ರತಿದಿನವೂ ದೇವತೆಗಳು, ಪಿತೃಗಳು, ಮನುಷ್ಯರು, ಭೂತಗಳು ಮತ್ತು ಋಷಿಗಳು ಇವರಿಗೆ ಪಂಚಮಹಾಯಜ್ಞಗಳ ಮೂಲಕ ತೃಪ್ತಿಯನ್ನುಂಟು ಮಾಡಬೇಕು.

೧೪. ವೇದಾಧ್ಯಯನದಿಂದ ಋಷಿಗಳನ್ನೂ, ಶಾಸ್ತ್ರೋಕ್ತವಾಗಿ ಅಗ್ನಿಹೋತ್ರಾದಿಗಳ ಆಚರಣೆಯಿಂದ ದೇವತೆಗಳನ್ನೂ ಪೂಜಿಸಬೇಕು. ಶ್ರಾದ್ಧಗಳಿಂದ ಪಿತೃಗಳನ್ನೂ, ಅನ್ನದಾನಗಳಿಂದ ಅತಿಥಿಗಳನ್ನೂ (ಮನುಷ್ಯರನ್ನೂ) ಸಂತೋಷಗೊಳಿಸಬೇಕು. ಬಲಿಕರ್ಮದಿಂದ ಎಲ್ಲ ಪ್ರಾಣಿಗಳಿಗೂ ತೃಪ್ತಿಯನ್ನು ಕೊಡಬೇಕು.

**ಪಂಚೈತೇ ವಿಹಿತಾ ಯಜ್ಞಾಃ ಪಂಚಸೂನಾಪನುತ್ತಯೇ ।**
**ಕಂಡಿನೀ ಪೇಷಣೀ ಚುಲ್ಲೀ ಜಲಕುಂಭೀ ಪ್ರಮಾರ್ಜನೀ ॥೧೫॥**

**ಪಂಚ ಸೂನಾ ಗೃಹಸ್ಥಸ್ಯ ತೇನ ಸ್ವರ್ಗಂ ನ ಗಚ್ಛತಿ ।**
**ತತ್ಪಾಪನಾಶನಾಯಾಮೀ ಪಂಚ ಯಜ್ಞಾಃ ಪ್ರಕೀರ್ತಿತಾಃ ॥೧೬॥**

**ದ್ವಾವಿಂಶತಿಸ್ತಥಾಷ್ಟೌ ಚ ಯೇ ಸಂಸ್ಕಾರಾಃ ಪ್ರಕೀರ್ತಿತಾಃ ।**
**ತದ್ಯುಕ್ತೋಽಪಿ ನ ಮೋಕ್ಷಾಯ ಯಸ್ತ್ವಾತ್ಮಗುಣವರ್ಜಿತಃ ॥೧೭॥**

**ತಸ್ಮಾದಾತ್ಮಗುಣೋಪೇತಃ ಶ್ರುತಿಕರ್ಮ ಸಮಾಚರೇತ್ ।**
**ಗೋಬ್ರಾಹ್ಮಣಾನಾಂ ವಿತ್ತೇನ ಸರ್ವದಾ ಭದ್ರಮಾಚರೇತ್ ॥೧೮॥**

**ಗೋಭೂಹಿರಣ್ಯವಾಸೋಭಿರ್ಗಂಧಮಾಲ್ಯೋದಕೇನ ಚ ।**
**ಪೂಜಯೇದ್ಬ್ರಹ್ಮವಿಷ್ಣ್ವರ್ಕರುದ್ರವಸ್ವಾತ್ಮಕಂ ಶಿವಂ ॥೧೯॥**

---

೧೫-೧೬. ಐದುಬಗೆಯ ಹತ್ಯಾಪಾಪಗಳನ್ನು ಪರಿಹರಿಸಿಕೊಳ್ಳುವುದಕ್ಕಾಗಿ ಈ ಪಂಚಮಹಾಯಜ್ಞಗಳು ವಿಹಿತವಾಗಿವೆ. ಒರಳು, ಬೀಸುವಕಲ್ಲು, ಒಲೆ, ನೀರು ತುಂಬುವ ಪಾತ್ರೆ, ಕಸಪೊರಕೆ ಈ ಐದನ್ನುಪಯೋಗಿಸುವಾಗ ಗೃಹಸ್ಥನಿಗೆ ಪ್ರಾಣಿ ಹತ್ಯಾ ದೋಷವು ಒದಗುವ ಸಂಭವವಿದೆ. ಅದರಿಂದ ಅವನ ಸದ್ಗತಿಗೆ ಅಡ್ಡಿ ಯಾಗುವುದು. ಆ ಪಾಪದ ಪರಿಹಾರಕ್ಕೋಸ್ಕರ ಈ ಪಂಚಯಜ್ಞಗಳನ್ನು ಆಚರಿಸ ಬೇಕೆಂದು ಶಾಸ್ತ್ರಗಳಲ್ಲಿ ಹೇಳಿದೆ.

೧೭. ಶಾಸ್ತ್ರಗಳಲ್ಲಿ ಹೇಳಿರುವ ಮೂವತ್ತು ಬಗೆಯ ಸಂಸ್ಕಾರಗಳಿಂದ ಕೂಡಿ ದವನಾದರೂ, ಈ ಮೇಲೆ ಹೇಳಿದ ಆತ್ಮಗುಣಗಳು ಇಲ್ಲದಿದ್ದರೆ ಅವನಿಗೆ ಮೋಕ್ಷವಿಲ್ಲ.

೧೮. ಆದುದರಿಂದ ಆತ್ಮಗುಣಗಳನ್ನು ಪಡೆದು ವೇದೋಕ್ತವಾದ ಕರ್ಮ ಗಳನ್ನು ನಡೆಸಬೇಕು. ತಾನು ಸಂಪಾದಿಸಿದ ದ್ರವ್ಯದಿಂದ ಗೋಬ್ರಾಹ್ಮಣರ ಹಿತ ವನ್ನು ಸಾಧಿಸಬೇಕು.

೧೯. ಗೋದಾನ, ಭೂದಾನ, ಹಿರಣ್ಯದಾನ ವಸ್ತ್ರದಾನಗಳಿಂದಲೂ, ಗಂಧ, ಪುಷ್ಪ, ಅರ್ಘ್ಯ, ಪಾದ್ಯ ಮೊದಲಾದ ಉಪಚಾರಗಳಿಂದಲೂ ಬ್ರಹ್ಮ, ವಿಷ್ಣು, ಸೂರ್ಯ, ರುದ್ರ ಇವರ ಸ್ವರೂಪನೆನಿಸಿದ ಶಿವನನ್ನು ಆರಾಧಿಸಬೇಕು. ವ್ರತಗಳು, ಉಪವಾಸಗಳು ಇವುಗಳನ್ನು ನಿಯಮಾನುಸಾರವಾಗಿ ಶ್ರದ್ಧೆಯಿಂದ ಮಾತ್ಸರ್ಯ ವಿಲ್ಲದೆ ನಡೆಸಿದರೆ ಪರಮೇಶ್ವರನನ್ನು ಪೂಜಿಸಿದಂತಾಗುವುದು.

ವ್ರತೋಪವಾಸೈರ್ವಿಧಿವಚ್ಛ್ರದ್ಧಯಾ ಚ ವಿಮತ್ಸರಃ ।
ಯೋಽಸಾವತೀಂದ್ರಿಯಶ್ಶಾಂತಃ ಸೂಕ್ಷ್ಮೋಽವ್ಯಕ್ತಃ ಸನಾತನಃ ।
ವಾಸುದೇವೋ ಜಗನ್ಮೂರ್ತಿಸ್ತಸ್ಯ ಸಂಭೂತಯೋ ಹ್ಯಮೀ ॥೨೦॥

ಬ್ರಹ್ಮಾ ವಿಷ್ಣುಶ್ಚ ಭಗವಾನ್ ಮಾರ್ತಂಡೋ ವೃಷವಾಹನಃ ।
ಅಷ್ಟೌ ಚ ವಸವಸ್ತದ್ವದೇಕಾದಶ ಗಣಾಧಿಪಾಃ ।
ಲೋಕಪಾಲಾಧಿಪಾಶ್ಚೈವ ಪಿತರೋ ಮಾತರಸ್ತಥಾ ॥೨೧॥

ಇಮಾ ವಿಭೂತಯಃ ಪ್ರೋಕ್ತಾಶ್ಚರಾಚರಸಮನ್ವಿತಾಃ ।
ಬ್ರಹ್ಮಾದ್ಯಾಶ್ಚತುರೋ ಮೂಲಮವ್ಯಕ್ತಾಧಿಪತಿಃ ಸ್ಮೃತಃ ॥೨೨॥

ಬ್ರಹ್ಮಣಾ ಚಾಥ ಸೂರ್ಯೇಣ ವಿಷ್ಣುನಾಥ ಶಿವೇನ ವಾ ।
ಅಭೇದಾತ್ಪೂಜಿತೇನ ಸ್ಯಾತ್ಪೂಜಿತಂ ಸಚರಾಚರಂ ॥೨೩॥

---

೨೦-೨೧. ಬ್ರಹ್ಮ, ವಿಷ್ಣು, ಸೂರ್ಯದೇವ, ಪರಮೇಶ್ವರ, ಅಷ್ಟವಸುಗಳು, ಏಕಾದಶರುದ್ರರು, ಲೋಕಪಾಲಕರು, ಪಿತೃದೇವತೆಗಳು, ಸಪ್ತಮಾತೃಕೆಯರು ಇವರೆಲ್ಲರೂ ಇಂದ್ರಿಯಗಳಿಗೆ ಗೋಚರನಾಗದೆ, ಶಾಂತಚಿತ್ತನಾಗಿ, ಸೂಕ್ಷ್ಮನೂ, ಅವ್ಯಕ್ತನೂ, ಶಾಶ್ವತನೂ, ಜಗತ್ಸ್ವರೂಪನೂ ಆದ ವಾಸುದೇವನ ವಿಭೂತಿ ವಿಶೇಷಗಳು.

೨೨. ಚರಾಚರ ಸಹಿತರಾದ ಬ್ರಹ್ಮ, ಸೂರ್ಯ, ವಿಷ್ಣು ಮತ್ತು ಶಿವ ಈ ನಾಲ್ವರೂ ಸಹ ವಾಸುದೇವನ ವಿಭೂತಿಗಳೆಂದೆನಿಸಿರುವರು. ಸಕಲ ಜಗತ್ತಿಗೂ ಅವನೇ ಮೂಲ. ಅವನು ಪ್ರಕೃತಿಯ ಅಧಿಪತಿ; ಎಂದರೆ ಅದರ ಬಂಧನಕ್ಕೆ ಸಿಕ್ಕದವನು.

೨೩. ಬ್ರಹ್ಮ, ಸೂರ್ಯ, ವಿಷ್ಣು, ಶಿವ, ಈ ನಾಲ್ವರಲ್ಲಿ ಭೇದಬುದ್ಧಿಯನ್ನೆಣಿಸದೆ ಪೂಜೆಮಾಡಿದರೆ, ಸ್ಥಾವರಜಂಗಮ ಸಹಿತವಾದ ಸಕಲ ಜಗತ್ತನ್ನೂ ಪೂಜಿಸಿದಂತೆ ಆಗುವುದು.

**ಬ್ರಹ್ಮಾದೀನಾಂ ಪರಂ ಧಾಮ ತ್ರಯಾಣಾಮಪಿ ಸಂಸ್ಥಿತಿಃ ।**
**ವೇದಮೂರ್ತಿವರಃ ಪೂಷಾ ಪೂಜನೀಯಃ ಪ್ರಯತ್ನತಃ ॥೨೪॥**

**ತಸ್ಮಾದಗ್ನಿದ್ವಿಜಮುಖಾನ್ ಕೃತ್ವಾ ಸಂಪೂಜಯೇದಿಮಾನ್ ।**
**ದಾನೈರ್ವ್ರತೋಪವಾಸೈಶ್ಚ ಜಪಹೋಮಾದಿನಾ ನರಃ ॥೨೫॥**

**ಇತಿ ಕ್ರಿಯಾಯೋಗಪರಾಯಣಸ್ಯ**
**ವೇದಾಂತಶಾಸ್ತ್ರಸ್ಮೃತಿವತ್ಸಲಸ್ಯ ।**
**ವಿಕರ್ಮಭೀತಸ್ಯ ಸದಾ ನ ಕಿಂಚಿ**
**ತ್ಪ್ರಾಪ್ತವ್ಯಮಸ್ತೀಹ ಪರೇ ಚ ಲೋಕೇ ॥೨೬॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಯೋಗಮಾಹಾತ್ಮ್ಯಂ ನಾಮ ದ್ವಿಪಂಚಾಶೋಽಧ್ಯಾಯಃ**

---

೨೪. ಸೂರ್ಯನು ಬ್ರಹ್ಮ, ವಿಷ್ಣು, ಶಿವರೆಂಬ ತ್ರಿಮೂರ್ತಿಗಳಿಗೆ ಆಶ್ರಯ ಸ್ಥಾನನು. ದಿವ್ಯತೇಜೋಮಯನು ; ವೇದಮೂರ್ತಿಯು ; ಅವನನ್ನು ಪ್ರಯತ್ನ ದಿಂದ ಪೂಜಿಸಬೇಕು.

೨೫. ಆದುದರಿಂದ ಅಗ್ನಿಯನ್ನೂ, ಬ್ರಾಹ್ಮಣರನ್ನೂ ಮುಂದಿಟ್ಟುಕೊಂಡು ದಾನ, ವ್ರತ, ಉಪವಾಸ, ಜಪ, ಹೋಮ ಮೊದಲಾದುವುಗಳಿಂದ ಮೇಲೆ ತಿಳಿಸಿದವರೆಲ್ಲರನ್ನೂ ಪೂಜಿಸಬೇಕು. (ಅಗ್ನಿಸೇವೆಯನ್ನೂ ಬ್ರಾಹ್ಮಣಪೂಜೆಯನ್ನೂ ಮಾಡಿದರೆ ಎಲ್ಲ ದೇವತೆಗಳೂ ತೃಪ್ತರಾಗುವರೆಂದು ಭಾವ.)

೨೬. ಈ ರೀತಿಯಾದ ಕರ್ಮಯೋಗವನ್ನು ಆಚರಿಸುತ್ತ, ವೇದಾಂತ ಶಾಸ್ತ್ರದಲ್ಲೂ ಧರ್ಮಶಾಸ್ತ್ರಗಳಲ್ಲೂ ಶ್ರದ್ಧಾಭಕ್ತಿಗಳನ್ನಿರಿಸಿ, ಅಕಾರ್ಯಗಳಿಗೆ ಹೆದರಿ ನಡೆಯುವ ಮನುಷ್ಯನು ಈ ಲೋಕದಲ್ಲೂ, ಪರಲೋಕದಲ್ಲೂ ಅಪೇಕ್ಷಿಸಬೇಕಾದ ವಿಷಯವಾವುದೂ ಇಲ್ಲ. ಎಂದರೆ ಅವನ ಸಕಲೇಷ್ಟಾರ್ಥಗಳೂ ನೆರವೇರುವುವೆಂದು ಅಭಿಪ್ರಾಯ.

ಶ್ರೀಮತ್ಸ್ಯಮಹಾಪುರಾಣಂ

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಕರ್ಮಯೋಗದ ಮಹಿಮೆಯನ್ನು ವರ್ಣಿಸಿದೆ.

ಜ್ಞಾನಯೋಗಕ್ಕಿಂತಲೂ ಕರ್ಮಯೋಗವೇ ಮೇಲು. ಕರ್ಮಯೋಗವಿಲ್ಲದೆ ಜ್ಞಾನಯೋಗವಿಲ್ಲ, ದಯೆ, ಕ್ಷಾಂತಿ, ಅನಸೂಯೆ ಮೊದಲಾದ ಎಂಟು ಬಗೆಯ ಆತ್ಮಗುಣಗಳನ್ನು ಪ್ರತಿಯೊಬ್ಬನೂ ಬೆಳೆಸಿಕೊಳ್ಳಬೇಕು. ಇವಿಲ್ಲದಿದ್ದರೆ ಯಾವ ಕರ್ಮವನ್ನು ಮಾಡಿದರೂ ವ್ಯರ್ಥ. ಗೃಹಸ್ಥನು ಪ್ರತಿದಿನವೂ ಒದಗುವ ಜೀವ ಹತ್ಯಾದೋಷದ ಪ್ರಾಯಶ್ಚಿತ್ತಕ್ಕಾಗಿ ಪಂಚಯಜ್ಞಗಳನ್ನು ಆಚರಿಸಬೇಕು. ಬ್ರಹ್ಮ, ವಿಷ್ಣು, ಶಿವ, ಸೂರ್ಯ ಈ ನಾಲ್ವರನ್ನೂ ಅಭೇದ ಬುದ್ಧಿಯಿಂದ ಪೂಜಿಸಬೇಕು. ಇದರಿಂದ ಚರಾಚರಾತ್ಮಕವಾದ ಜಗತ್ತೆಲ್ಲವನ್ನೂ ಪೂಜಿಸಿದಂತೆ ಆಗುವುದು. ಇಂತಹ ಕರ್ಮಯೋಗಾಚರಣೆಯಿಂದ ಇಹಪರಗಳೆರಡರಲ್ಲೂ ಸಕಲೇಷ್ಟಾರ್ಥಗಳೂ ಲಭಿಸುವುವು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಯೋಗಮಾಹಾತ್ಮ್ಯವೆಂಬ ಐವತ್ತೆರಡನೆಯ ಅಧ್ಯಾಯವು ಮುಗಿದುದು.



## ಅಥ ತ್ರಿಪಂಚಾಶೋಽಧ್ಯಾಯಃ

॥ ಮುನಯ ಊಚುಃ ॥

ಪುರಾಣಸಂಖ್ಯಾಮಾಚಕ್ಷ್ವ ಸೂತ ವಿಸ್ತರಶಃ ಕ್ರಮಾತ್ ।
ದಾನಧರ್ಮಮಶೇಷಂ ತು ಯಥಾವದನುಪೂರ್ವಶಃ ॥ ೧ ॥

॥ ಸೂತ ಉವಾಚ ॥

ಇದಮೇವ ಪುರಾಣೇಷು ಪುರಾಣಪುರುಷಸ್ತದಾ ।
ಯದುಕ್ತವಾನ್ ಸ ವಿಶ್ವಾತ್ಮಾ ಮನವೇ ತನ್ನಿಬೋಧತ ॥ ೨ ॥

॥ ಮತ್ಸ್ಯ ಉವಾಚ ॥

ಪುರಾಣಂ ಸರ್ವಶಾಸ್ತ್ರಾಣಾಂ ಪ್ರಥಮಂ ಬ್ರಹ್ಮಣಾ ಸ್ಮೃತಂ ।
ಅನಂತರಂ ಚ ವಕ್ತ್ರೇಭ್ಯೋ ವೇದಾಸ್ತಸ್ಯ ವಿನಿರ್ಗತಾಃ ॥ ೩ ॥

ಪುರಾಣಮೇಕಮೇವಾಸೀತ್ತದಾ ಕಲ್ಪಾಂತರೇಽನಘ ।
ತ್ರಿವರ್ಗಸಾಧನಂ ಪುಣ್ಯಂ ಶತಕೋಟಿಪ್ರವಿಸ್ತರಂ ॥ ೪ ॥

---

೧. ಮುನಿಗಳು ಹೇಳಿದರು.—ಎಲೈ ಸೂತನೇ, ಪುರಾಣಗಳ ಸಂಖ್ಯೆಯನ್ನು ಕ್ರಮವಾಗಿ ವಿಸ್ತರಿಸಿ ಹೇಳು. ದಾನಧರ್ಮಗಳ ಸ್ವರೂಪವೆಲ್ಲವನ್ನೂ ತಿಳಿಸು.

೨. ಸೂತಪೌರಾಣಿಕನು ಹೇಳಿದನು. — ಪುರಾಣಪುರುಷನೂ, ವಿಶ್ವರೂಪಿಯೂ ಆದ ಭಗವಂತನು ಆ ಪ್ರಳಯಕಾಲದಲ್ಲಿ ವೈವಸ್ವತಮನುವಿಗೆ ಪುರಾಣಗಳ ಸಂಬಂದವಾದ ಇದೇ ವಿಷಯವನ್ನು ತಿಳಿಸಿದನು. ಅದನ್ನೇ ನಿಮಗೆ ಹೇಳುವೆನು ಕೇಳಿರಿ.

೩. ಮತ್ಸ್ಯಮೂರ್ತಿ ಹೇಳಿದನು.—ಎಲ್ಲ ಶಾಸ್ತ್ರಗಳಿಗಿಂತಲೂ ಮೊದಲು ಪುರಾಣವು ಬ್ರಹ್ಮನ ಸ್ಮೃತಿಪಥಕ್ಕೆ ಬಂದಿತು. ತರುವಾಯ ಅವನ ಮುಖಗಳಿಂದ ವೇದಗಳು ಹೊರಟು ಬಂದುವು.

೪. ದೋಷದೂರನಾದ ಎಲೈ ಮನುಚಕ್ರವರ್ತಿಯೇ, ಧರ್ಮಾರ್ಥಕಾಮಗಳನ್ನು ಸಾಧಿಸಿಕೊಡುವ ಪವಿತ್ರವಾದ ಪುರಾಣವು ಹಿಂದೆ ಕಲ್ಪಾಂತರದಲ್ಲಿ ಏಕರಾಶಿ ರೂಪದಿಂದ ಇದ್ದಿತು. ಅದು ನೂರುಕೋಟಿ ಗ್ರಂಥಾತ್ಮಕವಾಗಿತ್ತು.

**ನಿರ್ದಗ್ಧೇಷು ಚ ಲೋಕೇಷು ವಾಜಿರೂಪೇಣ ವೈ ಮಯಾ ।**
**ಅಂಗಾನಿ ಚತುರೋ ವೇದಾನ್ ಪುರಾಣಂ ನ್ಯಾಯವಿಸ್ತರಂ ॥ ೫ ॥**

**ಮೀಮಾಂಸಾಂ ಧರ್ಮಶಾಸ್ತ್ರಂ ಚ ಪರಿಗೃಹ್ಯ ಮಯಾ ಕೃತಂ ।**
**ಮತ್ಸ್ಯರೂಪೇಣ ಚ ಪುನಃ ಕಲ್ಪಾದಾವುದಕಾರ್ಣವೇ ॥ ೬ ॥**

**ಅಶೇಷಮೇತತ್ಕಥಿತಮುದಕಾಂತರ್ಗತೇನ ಚ ।**
**ಶ್ರುತ್ವಾ ಜಗಾದ ಚ ಮುನೀನ್ ಪ್ರತಿ ದೇವಾಂಶ್ಚತುರ್ಮುಖಃ ॥ ೭ ॥**

**ಪ್ರವೃತ್ತಿಃ ಸರ್ವಶಾಸ್ತ್ರಾಣಾಂ ಪುರಾಣಸ್ಯಾಭವತ್ತತಃ ।**
**ಕಾಲೇನಾಗ್ರಹಣಂ ದೃಷ್ಟ್ವಾ ಪುರಾಣಸ್ಯ ತತೋ ನೃಪ ॥ ೮ ॥**

**ವ್ಯಾಸರೂಪಮಹಂ ಕೃತ್ವಾ ಸಂಹರಾಮಿ ಯುಗೇ ಯುಗೇ ।**
**ಚತುರ್ಲಕ್ಷಪ್ರಮಾಣೇನ ದ್ವಾಪರೇ ದ್ವಾಪರೇ ಸದಾ ॥ ೯ ॥**

---

೫-೬. ಲೋಕಗಳೆಲ್ಲ ಸುಟ್ಟುಹೋಗಲು, ನಾನು ಹಯಗ್ರೀವ ರೂಪವನ್ನು ಧರಿಸಿ ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ ಮತ್ತು ಕಲ್ಪಗಳೆಂಬ ವೇದಾಂಗಗಳನ್ನೂ, ಋಗ್ಯಜುಸ್ಸಾಮಾಥರ್ವಣಗಳೆಂಬ ನಾಲ್ಕು ವೇದಗಳನ್ನೂ, ಪುರಾಣವನ್ನೂ, ನ್ಯಾಯಶಾಸ್ತ್ರವನ್ನೂ, ಮೀಮಾಂಸಾಶಾಸ್ತ್ರವನ್ನೂ ಬೇರೆ ಬೇರೆ ಮಾಡಿದೆನು. ಕಲ್ಪದ ಆದಿಯಲ್ಲಿ ಜಗತ್ತನ್ನೆಲ್ಲ ಸಾಗರವು ಆಕ್ರಮಿಸಿ ಜಲಮಯವಾಗಿ ಮಾಡಿರಲು, ಮತ್ಸ್ಯರೂಪವನ್ನು ಧರಿಸಿ ಮತ್ತೆ ಹಾಗೆಯೇ ವಿಂಗಡಿಸಿದೆನು.

೭. ನೀರಿನೊಳಗಿದ್ದುಕೊಂಡು ಇದೆಲ್ಲವನ್ನೂ ಹೇಳಿದೆನು. ಬ್ರಹ್ಮನು ಅದನ್ನು ಕೇಳಿ ಮುನಿಗಳಿಗೆ ಉಪದೇಶಿಸಿದನು.

೮-೯. ಅಖಂಡವಾದ ಆ ಪುರಾಣದ ಜ್ಞಾನದಿಂದ ಸರ್ವಶಾಸ್ತ್ರಗಳಲ್ಲಿಯೂ ಪ್ರವೃತ್ತಿಯುಂಟಾಯಿತು. ಬಳಿಕ ಕಾಲಕ್ರಮದಿಂದ ಅದನ್ನು ತಿಳಿದುಕೊಳ್ಳುವುದು ಕಷ್ಟವಾದುದನ್ನು ಕಂಡು, ನಾನು ಒಂದೊಂದು ದ್ವಾಪರಯುಗದಲ್ಲಿಯೂ ವ್ಯಾಸ ರೂಪವನ್ನು ಧರಿಸಿ, ನಾಲ್ಕು ಲಕ್ಷಪ್ರಮಾಣದ ಗ್ರಂಥಕ್ಕೆ ಅದನ್ನು ಸಂಕೋಚ ಪಡಿಸುತ್ತಿರುವೆನು.

ತಥಾಷ್ಟದಶಧಾ ಕೃತ್ವಾ ಭೂರ್ಲೋಕೇಽಸ್ಮಿನ್ ಪ್ರಕಾಶ್ಯತೇ।
ಅದ್ಯಾಪಿ ದೇವಲೋಕೇಸ್ಮಿಞ್ಛತಕೋಟಿಪ್ರವಿಸ್ತರಂ ॥೧೦॥

ನಾಮತಸ್ತಾನಿ ವಕ್ಷ್ಯಾಮಿ ಶೃಣುಧ್ವಂ ಮುನಿಸತ್ತಮಾಃ।
ಬ್ರಹ್ಮಣಾಭಿಹಿತಂ ಪೂರ್ವಂ ಯಾವನ್ಮಾತ್ರಂ ಮರೀಚಯೇ ॥೧೧॥

ಬ್ರಾಹ್ಮಂ ತ್ರಿದಶಸಾಹಸ್ರಂ ಪುರಾಣಂ ಪರಿಕೀರ್ತ್ಯತೇ।
ಲಿಖಿತ್ವಾ ತಚ್ಚ ಯೋ ದದ್ಯಾಜ್ಜಲಧೇನುಸಮನ್ವಿತಂ ॥೧೨॥

ವೈಶಾಖಪೂರ್ಣಿಮಾಯಾಂ ಚ ಬ್ರಹ್ಮಲೋಕೇ ಮಹೀಯತೇ।
ಏತದೇವ ಯದಾ ಪದ್ಮಮಭೂದ್ಧೈರಣ್ಮಯಂ ಜಗತ್ ॥೧೩॥

ತದ್ವೃತ್ತಾಂತಾಶ್ರಯಂ ತದ್ವತ್ಪಾದ್ಮಮಿತ್ಯುಚ್ಯತೇ ಬುಧೈಃ।
ಪಾದ್ಮಂ ತತ್ಪಂಚಪಂಚಾಶತ್ಸಹಸ್ರಾಣೀಹ ಕಥ್ಯತೇ ॥೧೪॥

---

೧೦. ಅದು ಹದಿನೆಂಟು ಪುರಾಣಗಳ ರೂಪದಿಂದ ವಿಭಾಗವಾಗಿ ಭೂಲೋಕದಲ್ಲಿ ಮೆರೆಯುತ್ತಿದೆ. ದೇವಲೋಕದಲ್ಲಿ ಮಾತ್ರ ಇಂದಿಗೂ ಶತಕೋಟಿ ಗ್ರಂಥರೂಪದಿಂದಲೇ ಇದೆ.

೧೧. ಓ ಋಷಿಶ್ರೇಷ್ಠರೇ, ಬ್ರಹ್ಮನು ಮರೀಚಿ ಮಹರ್ಷಿಗೆ ಹೇಳಿದ ರೀತಿಯಲ್ಲಿ ಆ ಪುರಾಣಗಳ ಹೆಸರನ್ನೂ ಪ್ರಮಾಣವನ್ನೂ ತಿಳಿಸುವೆನು ಕೇಳಿರಿ.

೧೨-೧೩. ಬ್ರಹ್ಮಪುರಾಣವು ಹದಿಮೂರು ಸಾವಿರ ಗ್ರಂಥಾತ್ಮಕವಾದುದೆಂದು ಹೇಳುತ್ತಾರೆ. ಅದನ್ನು ಬರೆದು ವೈಶಾಖಮಾಸದ ಹುಣ್ಣಿಮೆಯ ದಿನ ಜಲಧೇನು ಸಮೇತವಾಗಿ ದಾನಮಾಡತಕ್ಕವನು ಬ್ರಹ್ಮಲೋಕದಲ್ಲಿ ಮನ್ನಣೆಯನ್ನು ಪಡೆಯುತ್ತಾನೆ.

೧೪. ಪ್ರಪಂಚವು ಸುವರ್ಣಮಯವಾದ ಪದ್ಮರೂಪದಿಂದಿತ್ತು. ಆ ವೃತ್ತಾಂತವನ್ನು ಕುರಿತ ಪುರಾಣಕ್ಕೆ ಪಾದ್ಮಪುರಾಣವೆಂದು ಹೆಸರು. ಅದು ಐವತ್ತೈದು ಸಾವಿರ ಗ್ರಂಥಗಳಿಂದ ಕೂಡಿದುದು.

**ತತ್ಪುರಾಣಂ ಚ ಯೋ ದದ್ಯಾತ್ಸುವರ್ಣಕಮಲಾನ್ವಿತಂ।**
**ಜ್ಯೇಷ್ಠೇ ಮಾಸಿ ತಿಲೈರ್ಯುಕ್ತಮಶ್ವಮೇಧಫಲಂ ಲಭೇತ್ ॥೧೫॥**

**ವಾರಾಹಕಲ್ಪವೃತ್ತಾಂತಮಧಿಕೃತ್ಯ ಪರಾಶರಃ।**
**ಯತ್ರಾಹ ಧರ್ಮಾನಖಿಲಾಂಸ್ತದ್ಯುಕ್ತಂ ವೈಷ್ಣವಂ ವಿದುಃ ॥೧೬॥**

**ತದಾಷಾಢೇ ಚ ಯೋ ದದ್ಯಾದ್ಘೃತಧೇನುಸಮನ್ವಿತಂ।**
**ಪೌರ್ಣಮಾಸ್ಯಾಂ ವಿಪೂತಾತ್ಮಾ ಸ ಪದಂ ಯಾತಿ ವಾರುಣಂ॥**
**ತ್ರಯೋವಿಂಶತಿಸಾಹಸ್ರಂ ತತ್ಪ್ರಮಾಣಂ ವಿದುರ್ಬುಧಾಃ ॥೧೭॥**

**ಶ್ವೇತಕಲ್ಪಪ್ರಸಂಗೇನ ಧರ್ಮಾನ್ವಾಯುರಿಹಾಬ್ರವೀತ್।**
**ಯತ್ರ ತದ್ವಾಯವೀಯಂ ಸ್ಯಾದ್ರುದ್ರಮಾಹಾತ್ಮ್ಯಸಂಯುತಂ।**
**ಚತುರ್ವಿಂಶತ್ಸಹಸ್ರಾಣಿ ಪುರಾಣಂ ತದಿಹೋಚ್ಯತೇ ॥೧೮॥**

---

೧೫. ಆ ಪುರಾಣವನ್ನು ಬರೆದು, ಸುವರ್ಣಕಲಶದೊಡನೆ ಜ್ಯೇಷ್ಠಮಾಸದಲ್ಲಿ ಎಳ್ಳು ಸಹಿತವಾಗಿ ದಾನ ಮಾಡಿದರೆ ಅಶ್ವಮೇಧಯಾಗ ಮಾಡಿದಷ್ಟು ಫಲವು ಬರುವುದು.

೧೬. ವಾರಾಹಕಲ್ಪದ ವೃತ್ತಾಂತವನ್ನು ಕುರಿತು ಪರಾಶರಮಹರ್ಷಿಯು ಹೇಳಿದ ಪುರಾಣವನ್ನು ವಿಷ್ಣುಪುರಾಣವೆನ್ನುವರು. ಅದರಲ್ಲಿ ಸಕಲ ಧರ್ಮಗಳೂ ಪ್ರತಿಪಾದಿತವಾಗಿವೆ.

೧೭. ಅದನ್ನು ಆಷಾಢಮಾಸದಲ್ಲಿ ಹುಣ್ಣಿಮೆಯ ದಿನ ಘೃತಧೇನು ಸಮೇತವಾಗಿ ದಾನಮಾಡುವವನು ಪರಿಶುದ್ಧಾತ್ಮನಾಗಿ ವರುಣನ ಸಾನ್ನಿಧ್ಯವನ್ನು ಪಡೆಯುತ್ತಾನೆ. ಅದರ ಪ್ರಮಾಣವು ಇಪ್ಪತ್ತುಮೂರು ಸಾವಿರ ಗ್ರಂಥವೆಂದು ಪ್ರಾಜ್ಞರು ಹೇಳುತ್ತಾರೆ.

೧೮. ಶ್ವೇತಕಲ್ಪದ ಪ್ರಸಂಗದಿಂದ ವಾಯುದೇವನು ಧರ್ಮಗಳನ್ನು ಹೇಳಿದನು. ಅವುಗಳನ್ನು ಒಳಗೊಂಡ ಪುರಾಣವು ವಾಯುಪುರಾಣವೆನಿಸುವುದು. ಅದರಲ್ಲಿ ರುದ್ರಮಾಹಾತ್ಮ್ಯವು ವರ್ಣಿತವಾಗಿದೆ. ಅದು ಇಪ್ಪತ್ತು ನಾಲ್ಕುಸಾವಿರ ಗ್ರಂಥಾತ್ಮಕವಾದುದು.

ಶ್ರಾವಣ್ಯಾಂ ಶ್ರಾವಣೇ ಮಾಸಿ ಗುಡಧೇನುಸಮನ್ವಿತಂ ।
ಯೋ ದದ್ಯಾದ್ವೃಷಸಂಯುಕ್ತಂ ಬ್ರಾಹ್ಮಣಾಯ ಕುಟುಂಬಿನೇ ।
ಶಿವಲೋಕೇ ಸ ಪೂತಾತ್ಮಾ ಕಲ್ಪಮೇಕಂ ವಸೇನ್ನರಃ ॥೧೯॥

ಯತ್ರಾಧಿಕೃತ್ಯ ಗಾಯತ್ರೀಂ ವರ್ಣ್ಯತೇ ಧರ್ಮವಿಸ್ತರಃ ।
ವೃತ್ರಾಸುರವಧೋಪೇತಂ ತದ್ಭಾಗವತಮುಚ್ಯತೇ ॥೨೦॥

ಸಾರಸ್ವತಸ್ಯ ಕಲ್ಪಸ್ಯ ಮಧ್ಯೇ ಯೇ ಸ್ಯುರ್ನರೋತ್ತಮಾಃ ।
ತದ್ವೃತ್ತಾಂತೋದ್ಭವಂ ಲೋಕೇ ತದ್ಭಾಗವತಮುಚ್ಯತೇ ॥೨೧॥

ಲಿಖಿತ್ವಾ ತಚ್ಚ ಯೋ ದದ್ಯಾದ್ಧೇಮಸಿಂಹಸಮನ್ವಿತಂ ।
ಪೌರ್ಣಮಾಸ್ಯಾಂ ಪ್ರೌಷ್ಠಪದ್ಯಾಂ ಸ ಯಾತಿ ಪರಮಾಂ ಗತಿಂ ॥
ಅಷ್ಟಾದಶ ಸಹಸ್ರಾಣಿ ಪುರಾಣಂ ತತ್ಪ್ರಚಕ್ಷತೇ ॥೨೨॥

---

೧೯. ಶ್ರಾವಣಮಾಸದಲ್ಲಿ ಶ್ರವಣನಕ್ಷತ್ರಸಹಿತವಾದ ಹುಣ್ಣಿಮೆಯ ದಿನ ಗುಡಧೇನುವಿನೊಡನೆ (ಬೆಲ್ಲದಿಂದ ಮಾಡಿದ ಹಸು) ಎತ್ತಿನ ಸಹಿತವಾಗಿ ಕುಟುಂಬಿಯಾದ ಬ್ರಾಹ್ಮಣನಿಗೆ ಅದನ್ನು ದಾನಮಾಡಿದರೆ, ಪರಿಶುದ್ಧಾತ್ಮನಾಗಿ ಒಂದು ಕಲ್ಪಕಾಲ ಪೂರ್ಣವಾಗಿ ಶಿವಲೋಕದಲ್ಲಿ ವಾಸಿಸುವನು.

೨೦. ಗಾಯತ್ರಿಯ ಅರ್ಥವನ್ನು ವಿಚಾರಮಾಡಿ ಧರ್ಮವನ್ನು ಪ್ರತಿಪಾದಿಸುವ ಪುರಾಣವು ಭಾಗವತವೆನಿಸಿಕೊಳ್ಳುವುದು. ಅದರಲ್ಲಿ ವೃತ್ರಾಸುರನ ವಧವನ್ನು ವರ್ಣಿಸಿದೆ.

೨೧. ಆ ಪುರಾಣವು ಸಾರಸ್ವತ ಕಲ್ಪದ ಮಧ್ಯದಲ್ಲಿದ್ದ ಮಹಾಪುರುಷರ ವೃತ್ತಾಂತವನ್ನು ಒಳಗೊಂಡಿರುವುದು. ಅದನ್ನೇ ಭಾಗವತವೆನ್ನುತ್ತಾರೆ.

೨೨. ಅದನ್ನು ಬರೆದು ಭಾದ್ರಪದಮಾಸದ ಹುಣ್ಣಿಮೆಯ ದಿನದಲ್ಲಿ ಚಿನ್ನದ ಸಿಂಹದೊಡನೆ ದಾನಮಾಡಿದರೆ ಉತ್ತಮಗತಿಯು ದೊರಕುವುದು. ಆ ಪುರಾಣದ ಪರಿಮಿತಿ ಹದಿನೆಂಟುಸಾವಿರ ಗ್ರಂಥ.

**ಯತ್ರಾಹ ನಾರದೋ ಧರ್ಮಾನ್ಬೃಹತ್ಕಲ್ಪಾಶ್ರಯಾಣಿ ಚ।**
**ಪಂಚವಿಂಶತ್ಸಹಸ್ರಾಣಿ ನಾರದೀಯಂ ತದುಚ್ಯತೇ ॥೨೩॥**

**ಆಶ್ವಿನೇ ಪಂಚದಶ್ಯಾಂ ತು ದದ್ಯಾದ್ಧೇನುಸಮನ್ವಿತಂ।**
**ಪರಮಾಂ ಸಿದ್ಧಿಮಾಪ್ನೋತಿ ಪುನರಾವೃತ್ತಿದುರ್ಲಭಾಂ ॥೨೪॥**

**ಯತ್ರಾಧಿಕೃತ್ಯ ಶಕುನೀನ್ ಧರ್ಮಾಧರ್ಮವಿಚಾರಣಾ।**
**ವ್ಯಾಖ್ಯಾತಾ ವೈ ಮುನಿಪ್ರಶ್ನೇ ಮುನಿಭಿರ್ಧರ್ಮಚಾರಿಭಿಃ ॥೨೫॥**

**ಮಾರ್ಕಂಡೇಯೇನ ಕಥಿತಂ ತತ್ಸರ್ವಂ ವಿಸ್ತರೇಣ ತು।**
**ಪುರಾಣಂ ನವಸಾಹಸ್ರಂ ಮಾರ್ಕಂಡೇಯಮಿಹೋಚ್ಯತೇ ॥೨೬॥**

**ಪ್ರತಿಲಿಖ್ಯ ಚ ಯೋ ದದ್ಯಾತ್ಸೌವರ್ಣಕರಿಸಂಯುತಂ।**
**ಕಾರ್ತಿಕ್ಯಾಂ ಪುಂಡರೀಕಸ್ಯ ಯಜ್ಞಸ್ಯ ಫಲಭಾಗ್ಭವೇತ್ ॥೨೭॥**

---

೨೩. ಬೃಹತ್ಕಲ್ಪಕ್ಕೆ ಸಂಬಂಧಿಸಿದ ಧರ್ಮಗಳನ್ನು ನಾರದ ಮಹರ್ಷಿಯು ಹೇಳಿರುವ ಪುರಾಣವು ನಾರದೀಯವೆನಿಸುವುದು. ಅದರಲ್ಲಿ ಇಪ್ಪತ್ತೈದು ಸಾವಿರ ಶ್ಲೋಕಗಳಿವೆ.

೨೪. ಆಶ್ವಯುಜಮಾಸದ ಹುಣ್ಣಿಮೆಯಲ್ಲಿ ಅದನ್ನು ಗೋಸಹಿತವಾಗಿ ದಾನ ಮಾಡಬೇಕು. ಅದರಿಂದ ಪುನರ್ಜನ್ಮವಿಲ್ಲದಂತಹ ಉತ್ತಮಗತಿಯು ದೊರಕುವುದು.

೨೫–೨೬. ಧರ್ಮಚಾರಿಗಳಾದ ಮಹರ್ಷಿಗಳು ಪಕ್ಷಿಗಳನ್ನು ಉದ್ದೇಶಿಸಿ ಪ್ರಶ್ನೋತ್ತರ ರೂಪವಾಗಿ ಧರ್ಮಾಧರ್ಮ ವಿಚಾರವನ್ನು ನಡೆಸಿರುವರು. ಅದೆಲ್ಲವನ್ನೂ ಮಾರ್ಕಂಡೇಯ ಮುನಿಯು ವಿಸ್ತಾರವಾಗಿ ಮಾರ್ಕಂಡೇಯ ಪುರಾಣದಲ್ಲಿ ಪ್ರತಿಪಾದಿಸಿರುವನು. ಅದರಲ್ಲಿ ಒಂಬತ್ತುಸಾವಿರ ಗ್ರಂಥಗಳಿವೆ.

೨೭. ಅದರ ಕೈಬರೆಹದ ಪ್ರತಿಯನ್ನು ಕಾರ್ತಿಕಮಾಸದ ಹುಣ್ಣಿಮೆಯ ದಿನ ಚಿನ್ನದ ಆನೆಯ ಸಮೇತವಾಗಿ ದಾನಮಾಡತಕ್ಕವನಿಗೆ ಪುಂಡರೀಕಯಜ್ಞವನ್ನು ಮಾಡಿದಷ್ಟು ಫಲವು ಬರುವುದು.

ಯತ್ತದೀಶಾನಕಂ ಕಲ್ಪಂ ವೃತ್ತಾಂತಮಧಿಕೃತ್ಯ ಚ।
ವಸಿಷ್ಠಾಯಾಗ್ನಿನಾ ಪ್ರೋಕ್ತಮಾಗ್ನೇಯಂ ತತ್ಪ್ರಚಕ್ಷತೇ ॥೨೮॥

ಲಿಖಿತ್ವಾ ತಚ್ಚ ಯೋ ದದ್ಯಾದ್ಧೇಮಪದ್ಮಸಮನ್ವಿತಂ।
ಮಾರ್ಗಶೀರ್ಷ್ಯಾಂ ವಿಧಾನೇನ ತಿಲಧೇನುಸಮನ್ವಿತಂ॥
ತಚ್ಚ ಷೋಡಶಸಾಹಸ್ರಂ ಸರ್ವಕ್ರತುಫಲಪ್ರದಂ ॥೨೯॥

ಯತ್ರಾಧಿಕೃತ್ಯ ಮಾಹಾತ್ಮ್ಯಮಾದಿತ್ಯಸ್ಯ ಚತುರ್ಮುಖಃ।
ಅಘೋರಕಲ್ಪವೃತ್ತಾಂತಪ್ರಸಂಗೇನ ಜಗತ್ಸ್ಥಿತಿಂ।
ಮನವೇ ಕಥಯಾಮಾಸ ಭೂತಗ್ರಾಮಸ್ಯ ಲಕ್ಷಣಂ ॥೩೦॥

ಚತುರ್ದಶ ಸಹಸ್ರಾಣಿ ತಥಾ ಪಂಚ ಶತಾನಿ ಚ
ಭವಿಷ್ಯಚರಿತಪ್ರಾಯಂ ಭವಿಷ್ಯಂ ತದಿಹೋಚ್ಯತೇ ॥೩೧॥

ತತ್ಪೌಷೇ ಮಾಸಿ ಯೋ ದದ್ಯಾತ್ಪೌರ್ಣಮಾಸ್ಯಾಂ ವಿಮತ್ಸರಃ।
ಗುಡಕುಂಭಸಮಾಯುಕ್ತಮಗ್ನಿಷ್ಟೋಮಫಲಂ ಲಭೇತ್ ॥೩೨॥

---

೨೮. ಈಶಾನಕಲ್ಪದ ವೃತ್ತಾಂತವನ್ನು ಕುರಿತು ವಸಿಷ್ಠಮಹರ್ಷಿಗೆ ಅಗ್ನಿಯು ಹೇಳಿದುದೇ ಆಗ್ನೇಯ ಪುರಾಣವು.

೨೯. ಅದನ್ನು ಬರೆದು ಚಿನ್ನದ ತಾವರೆಯೊಡನೆ ಮಾರ್ಗಶೀರ್ಷಮಾಸದ ಹುಣ್ಣಿಮೆಯಲ್ಲಿ ತಿಲಧೇನು (ಎಳ್ಳಿನ ಹಸು) ಸಹಿತವಾಗಿ ದಾನಮಾಡಿದರೆ ಸಕಲ ಯಜ್ಞಗಳನ್ನೂ ಮಾಡಿದಷ್ಟು ಫಲವು ಲಭಿಸುವುದು. ಅದು ಹದಿನಾರು ಸಾವಿರ ಗ್ರಂಥಯುಕ್ತವಾದುದು.

೩೦-೩೧. ಚತುರ್ಮುಖಬ್ರಹ್ಮನು ಅಘೋರ ಕಲ್ಪವೃತ್ತಾಂತದ ಪ್ರಸಂಗದಿಂದ ಜಗತ್ತಿನ ಸ್ಥಿತಿಯನ್ನು ಮನುವಿಗೆ ಹೇಳಿದನು. ಆ ಪುರಾಣವು ಭವಿಷ್ಯ ಪುರಾಣ ವೆನಿಸುವುದು. ಅದರಲ್ಲಿ ಸೂರ್ಯನ ಮಾಹಾತ್ಮ್ಯವೂ, ಪ್ರಾಣಿವರ್ಗದ ಲಕ್ಷಣವೂ ಪ್ರತಿಪಾದ್ಯವಾಗಿವೆ. ಮುಂದೆ ಬರಲಿರುವ ವೃತ್ತಾಂತವನ್ನೂ ವಿಶೇಷವಾಗಿ ಅದು ಒಳಗೊಂಡಿದೆ. ಅದು ಹದಿನಾಲ್ಕುಸಾವಿರದ ಐದುನೂರು ಗ್ರಂಥಗಳಿಂದ ಕೂಡಿದೆ.

೩೨. ಅದನ್ನು ಪುಷ್ಯಮಾಸದ ಪೌರ್ಣಮಿಯ ದಿವಸದಲ್ಲಿ ಶುದ್ಧ ಮನಸ್ಸಿನಿಂದ ಬೆಲ್ಲತುಂಬಿದ ಪಾತ್ರೆಯೊಡನೆ ದಾನಮಾಡಿದರೆ ಅಗ್ನಿಷ್ಟೋಮ ಯಾಗದ ಫಲವುಂಟಾಗುವುದು.

ರಥಂತರಸ್ಯ ಕಲ್ಪಸ್ಯ ವೃತ್ತಾಂತಮಧಿಕೃತ್ಯ ಚ ।
ಸಾವರ್ಣಿನಾ ನಾರದಾಯ ಕೃಷ್ಣಮಾಹಾತ್ಮ್ಯಮುತ್ತಮಂ ॥೩೩॥

ಯತ್ರ ಬ್ರಹ್ಮವರಾಹಸ್ಯ ಚೋದಂತಂ ವರ್ಣಿತಂ ಮುಹುಃ ।
ತದಷ್ಟಾದಶಸಾಹಸ್ರಂ ಬ್ರಹ್ಮವೈವರ್ತಮುಚ್ಯತೇ ॥೩೪॥

ಪುರಾಣಂ ಬ್ರಹ್ಮವೈವರ್ತಂ ಯೋ ದದ್ಯಾನ್ಮಾಘಮಾಸಿ ಚ ।
ಪೌರ್ಣಮಾಸ್ಯಾಂ ಶುಭದಿನೇ ಬ್ರಹ್ಮಲೋಕೇ ಮಹೀಯತೇ ॥೩೫॥

ಯತ್ರಾಗ್ನಿಲಿಂಗಮಧ್ಯಸ್ಥಃ ಪ್ರಾಹ ದೇವೋ ಮಹೇಶ್ವರಃ ।
ಧರ್ಮಾರ್ಥಕಾಮಮೋಕ್ಷಾರ್ಥಮಾಗ್ನೇಯಮಧಿಕೃತ್ಯ ಚ ॥
ಕಲ್ಪಾಂತೇ ಲೈಂಗಮಿತ್ಯುಕ್ತಂ ಪುರಾಣಂ ಬ್ರಹ್ಮಣಾ ಸ್ವಯಂ ॥೩೬॥

ತದೇಕಾದಶಸಾಹಸ್ರಂ ಫಾಲ್ಗುನ್ಯಾಂ ಯಃ ಪ್ರಯಚ್ಛತಿ ।
ತಿಲಧೇನುಸಮಾಯುಕ್ತಂ ಸ ಯಾತಿ ಶಿವಸಾಮ್ಯತಾಂ ॥೩೭॥

---

೩೩-೩೪. ಬ್ರಹ್ಮವೈವರ್ತಪುರಾಣವು ರಥಂತರ ಕಲ್ಪದ ವೃತ್ತಾಂತವನ್ನು ಅಧಿಕರಿಸಿ ರಚಿತವಾದುದು. ಅದರಲ್ಲಿ ಸಾವರ್ಣಿ ಮನುವು ನಾರದನಿಗೆ ಶ್ರೇಷ್ಠವಾದ ಕೃಷ್ಣ ಮಹಿಮೆಯನ್ನೂ, ಅಡಿಗಡಿಗೆ ಬ್ರಹ್ಮವರಾಹನ ವೃತ್ತಾಂತವನ್ನೂ ಹೇಳಿರುವನು. ಅದು ಹದಿನೆಂಟುಸಾವಿರ ಶ್ಲೋಕಗಳಿಂದ ಕೂಡಿರುವುದು.

೩೫. ಮಾಘಮಾಸದ ಹುಣ್ಣಿಮೆಯಲ್ಲಿ ಬ್ರಹ್ಮವೈವರ್ತಪುರಾಣದ ಕೈಬರೆಹದ ಪ್ರತಿಯನ್ನು ದಾನಮಾಡುವವನು ಬ್ರಹ್ಮಲೋಕದಲ್ಲಿ ಮಾನ್ಯನೆನಿಸುವನು.

೩೬. ಅಗ್ನಿಲಿಂಗದ ಮಧ್ಯದಲ್ಲಿ ನಿಂತು ಮಹೇಶ್ವರನು ಕುಮಾರಸ್ವಾಮಿಯನ್ನು ಕುರಿತು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕುಬಗೆಯ ಪುರುಷಾರ್ಥಗಳ ಸಿದ್ಧಿಗಾಗಿ ಕಲ್ಪಾಂತದಲ್ಲಿ ಹೇಳಿದ ಪುರಾಣವನ್ನು ಸಾಕ್ಷಾತ್ ಬ್ರಹ್ಮದೇವನು ಲೈಂಗ ಪುರಾಣವೆಂದು ಕರೆದನು.

೩೭. ಹನ್ನೊಂದುಸಾವಿರ ಗ್ರಂಥವುಳ್ಳ ಆ ಲೈಂಗ ಪುರಾಣವನ್ನು ಫಾಲ್ಗುನ ಮಾಸದ ಪೌರ್ಣಮಿಯಲ್ಲಿ ಎಳ್ಳುತುಂಬಿದ ಪಾತ್ರೆಯೊಡನೆ ದಾನಮಾಡುವವನು ಶಿವನ ಸಾಮ್ಯವನ್ನು ಪಡೆಯುವನು.

ಮಹಾವರಾಹಸ್ಯ ಪುನರ್ಮಾಹಾತ್ಮ್ಯಮಧಿಕೃತ್ಯ ಚ ।
ವಿಷ್ಣುನಾಭಿಹಿತಂ ಕ್ಷೋಣ್ಯೈ ತದ್ವಾರಾಹಮಿಹೋಚ್ಯತೇ ॥೩೮॥

ಮಾನವಸ್ಯ ಪ್ರಸಂಗೇನ ಕಲ್ಪಸ್ಯ ಮುನಿಸತ್ತಮಾಃ ।
ಚತುರ್ವಿಂಶತ್ಸಹಸ್ರಾಣಿ ತತ್ಪುರಾಣಮಿಹೋಚ್ಯತೇ ॥೩೯॥

ಕಾಂಚನಂ ಗರುಡಂ ಕೃತ್ವಾ ತಿಲಧೇನುಸಮನ್ವಿತಂ ।
ಪೌರ್ಣಮಾಸ್ಯಾಂ ಮಧೌ ದದ್ಯಾದ್ಬ್ರಾಹ್ಮಣಾಯ ಕುಟುಂಬಿನೇ ॥೪೦॥

ಯತ್ರ ಮಾಹೇಶ್ವರಾರ್ ಧರ್ಮಾನಧಿಕೃತ್ಯ ಚ ಷಣ್ಮುಖಃ ।
ಕಲ್ಪೇ ತತ್ಪುರುಷಂ ವೃತ್ತಂ ಚರಿತೈರುಪಬೃಂಹಿತಂ ॥೪೧॥

ಸ್ಕಾಂದಂ ನಾಮ ಪುರಾಣಂ ಚ ಹ್ಯೇಕಾಶೀತಿ ನಿಗದ್ಯತೇ ।
ಸಹಸ್ರಾಣಿ ಶತಂ ಚೈಕಮಿತಿ ಮರ್ತ್ಯೇಷು ಗದ್ಯತೇ ॥೪೨॥

---

೩೮. ಪರಮ ಪವಿತ್ರವಾದ ವರಾಹ ರೂಪವನ್ನು ಧರಿಸಿದ ಭಗವಂತನ ಮಾಹಾತ್ಮ್ಯವನ್ನು ಉದ್ದೇಶಿಸಿ ವಿಷ್ಣುವು ಭೂದೇವಿಗೆ ಹೇಳಿದ ಪುರಾಣವನ್ನು ವಾರಾಹವೆನ್ನುವರು.

೩೯. ಓ ಮುನಿವರ್ಯರೇ, ಆ ಪುರಾಣವು ಮಾನವಕಲ್ಪದ ಪ್ರಸಂಗದಿಂದ ರಚಿತವಾದುದು. ಅದು ಇಪ್ಪತ್ತುನಾಲ್ಕುಸಾವಿರ ಶ್ಲೋಕಗಳುಳ್ಳದು.

೪೦. ಚಿನ್ನದ ಗರುಡನ ಪ್ರತಿಮೆಯನ್ನು ಮಾಡಿಸಿ, ಅದನ್ನು ತಿಲಧೇನು ಸಹಿತವಾಗಿ ಚೈತ್ರಮಾಸದ ಹುಣ್ಣಿಮೆಯಲ್ಲಿ ಕುಟುಂಬಿಯಾದ ಬ್ರಾಹ್ಮಣನಿಗೆ ಈ ಪುರಾಣದ ಪ್ರತಿಯೊಡನೆ ದಾನಮಾಡಬೇಕು. ವರಾಹಸ್ವಾಮಿಯ ಅನುಗ್ರಹದಿಂದ ಅವನು ವಿಷ್ಣುವಿನ ಸಾನ್ನಿಧ್ಯವನ್ನು ಪಡೆಯುವನು.

೪೧-೪೨. ಕುಮಾರಸ್ವಾಮಿಯು ಮಾಹೇಶ್ವರ ಧರ್ಮಗಳನ್ನು ಪ್ರತಿಪಾದಿಸಿ ಪರಮೇಶ್ವರನ ವೃತ್ತಾಂತವನ್ನೂ, ಚರಿತಗಳನ್ನೂ ವಿಸ್ತರಿಸಿ ಹೇಳಿದ ಪುರಾಣವನ್ನು ಸ್ಕಾಂದವೆನ್ನುವರು. ಅದು ಎಂಬತ್ತೊಂದುಸಾವಿರದ ಒಂದುನೂರು ಗ್ರಂಥಗಳಿಂದ ಕೂಡಿದೆಯೆಂದು ಮನುಷ್ಯಲೋಕದಲ್ಲಿ ವ್ಯವಹಾರವಿದೆ.

**ಪರಿಲಿಖ್ಯ ಚ ಯೋ ದದ್ಯಾದ್ಧೇಮಶೂಲಸಮನ್ವಿತಂ ।**
**ಶೈವಂ ಪದಮವಾಪ್ನೋತಿ ಮೀನೇ ಚೋಪಗತೇ ರವೌ ॥೪೩॥**

**ತ್ರಿವಿಕ್ರಮಸ್ಯ ಮಾಹಾತ್ಮ್ಯಮಧಿಕೃತ್ಯ ಚತುರ್ಮುಖಃ ।**
**ತ್ರಿವರ್ಗಮಭ್ಯಧಾತ್ತಚ್ಚ ವಾಮನಂ ಪರಿಕೀರ್ತಿತಂ ॥೪೪॥**

**ಪುರಾಣಂ ದಶಸಾಹಸ್ರಂ ಕೂರ್ಮಕಲ್ಪಾನುಗಂ ಶಿವಂ ।**
**ಯಃ ಶರದ್ವಿಷುವೇ ದದ್ಯಾದ್ವೈಷ್ಣವಂ ಯಾತ್ಯಸೌ ಪದಂ ॥೪೫॥**

**ಯತ್ರ ಧರ್ಮಾರ್ಥಕಾಮಾನಾಂ ಮೋಕ್ಷಸ್ಯ ಚ ರಸಾತಲೇ ।**
**ಮಾಹಾತ್ಮ್ಯಂ ಕಥಯಾಮಾಸ ಕೂರ್ಮರೂಪೀ ಜನಾರ್ದನಃ ॥೪೬॥**

**ಇಂದ್ರದ್ಯುಮ್ನಪ್ರಸಂಗೇನ ಋಷಿಭ್ಯಃ ಶಕ್ರಸನ್ನಿಧೌ ।**
**ಅಷ್ಟಾದಶ ಸಹಸ್ರಾಣಿ ಲಕ್ಷ್ಮೀಕಲ್ಪಾನುಷಂಗಿಕಂ ॥೪೭॥**

---

೪೩. ಆ ಪುರಾಣವನ್ನು ಬರೆದು, ಚಿನ್ನದ ಶೂಲಾಯುಧ ಸಮೇತವಾಗಿ ಸೂರ್ಯನು ಮೀನರಾಶಿಯಲ್ಲಿರುವಾಗ ದಾನಮಾಡಿದರೆ ಶಿವಸಾನ್ನಿಧ್ಯವು ಲಭಿಸುವುದು.

೪೪. ಬ್ರಹ್ಮದೇವನು ತ್ರಿವಿಕ್ರಮನ ಮಾಹಾತ್ಮ್ಯವನ್ನು ಅವಲಂಬಿಸಿ ಧರ್ಮಾರ್ಥಕಾಮಗಳ ಸ್ವರೂಪವನ್ನು ಪ್ರತಿಪಾದನಮಾಡಿದನು. ಅದು ವಾಮನ ಪುರಾಣವೆನಿಸಿತು.

೪೫. ಅದು ಕೂರ್ಮಕಲ್ಪದ ವೃತ್ತಾಂತವನ್ನು ತಿಳಿಸುವ ಮಂಗಳಕರವಾದ ಪುರಾಣ. ಅದರಲ್ಲಿ ಹತ್ತುಸಾವಿರ ಶ್ಲೋಕಗಳಿವೆ. ಅದನ್ನು ತುಲಾಸಂಕ್ರಮಣದ ದಿನದಲ್ಲಿ ದಾನಮಾಡುವವನು ವಿಷ್ಣು ಸಾನ್ನಿಧ್ಯವನ್ನು ಪಡೆಯುವನು.

೪೬-೪೭. ಕೂರ್ಮರೂಪವನ್ನು ಧರಿಸಿದ ಶ್ರೀಮಹಾವಿಷ್ಣುವು ಇಂದ್ರದ್ಯುಮ್ನನ ಪ್ರಸಂಗದಿಂದ, ಇಂದ್ರನೆದುರಿನಲ್ಲಿ ಋಷಿಗಳಿಗೆ ಧರ್ಮಾರ್ಥಕಾಮ ಮೋಕ್ಷಗಳೆಂಬ ನಾಲ್ಕು ವಿಧವಾದ ಪುರುಷಾರ್ಥಗಳ ಮಾಹಾತ್ಮ್ಯವನ್ನು ಪಾತಾಲಲೋಕದಲ್ಲಿ ಹೇಳಿದನು. ಅದೇ ಕೂರ್ಮಪುರಾಣ. ಅದು ಲಕ್ಷ್ಮೀಕಲ್ಪಕ್ಕೆ ಸಂಬಂಧಪಟ್ಟುದು. ಉತ್ತರಾಯಣದ ಅಥವಾ ದಕ್ಷಿಣಾಯನದ ಪುಣ್ಯಕಾಲದಲ್ಲಿ ಅದನ್ನು ಚಿನ್ನದ

**ಯೋ ದದ್ಯಾದಯನೇ ಕೂರ್ಮಂ ಹೇಮಕೂರ್ಮಸಮನ್ವಿತಂ ।**
**ಗೋಸಹಸ್ರಪ್ರದಾನಸ್ಯ ಫಲಂ ಸಂಪ್ರಾಪ್ನುಯಾನ್ನರಃ** ॥೪೮॥

**ಶ್ರುತೀನಾಂ ಯತ್ರ ಕಲ್ಪಾದೌ ಪ್ರವೃತ್ತ್ಯರ್ಥಂ ಜನಾರ್ದನಃ ।**
**ಮತ್ಸ್ಯರೂಪೇಣ ಮನವೇ ನರಸಿಹ್ಮೋಪವರ್ಣನಂ** ॥೪೯॥

**ಅಧಿಕೃತ್ಯಾಬ್ರವೀತ್ಸಪ್ತಕಲ್ಪವೃತ್ತಂ ಮುನೀಶ್ವರಾಃ ।**
**ತನ್ಮಾತ್ಸ್ಯಮಿತಿ ಜಾನೀಧ್ವಂ ಸಹಸ್ರಾಣಿ ಚತುರ್ದಶ** ॥೫೦॥

**ವಿಷುವೇ ಹೇಮಮತ್ಸ್ಯೇನ ಧೇನ್ವಾ ಚೈವ ಸಮನ್ವಿತಂ ।**
**ಯೋ ದದ್ಯಾತ್ಪೃಥಿವೀ ತೇನ ದತ್ತಾ ಭವತಿ ಚಾಖಿಲಾ** ॥೫೧॥

**ಯದಾ ಚ ಗಾರುಡೇ ಕಲ್ಪೇ ವಿಶ್ವಾಂಡಾದ್ಗರುಡೋದ್ಭವಂ ।**
**ಅಧಿಕೃತ್ಯಾಬ್ರವೀತ್ಕೃಷ್ಣೋ ಗಾರುಡಂ ತದಿಹೋಚ್ಯತೇ** ॥೫೨॥

---

ಆಮೆಯ ಸಹಿತವಾಗಿ ದಾನಮಾಡಿದ ಮನುಷ್ಯನು ಒಂದು ಸಾವಿರ ಗೋದಾನವನ್ನು ಮಾಡಿದ ಫಲವನ್ನು ಪಡೆಯುವನು. ಕೂರ್ಮಪುರಾಣವು ಹದಿನೆಂಟುಸಾವಿರ ಲೆಕ್ಕದ ಗ್ರಂಥಗಳಿಂದ ಕೂಡಿದೆ.

೪೯-೫೦. ಓ ಮುನೀಶ್ವರರೇ, ವೇದಗಳನ್ನು ಉದ್ಧರಿಸುವುದಕ್ಕಾಗಿ ಮತ್ಸ್ಯರೂಪವನ್ನು ಧರಿಸಿದ ಶ್ರೀ ಮಹಾವಿಷ್ಣುವು ಈಗ ನಡೆಯುತ್ತಿರುವ ಶ್ವೇತವರಾಹ ಕಲ್ಪದ ಆದಿಯಲ್ಲಿ ವೈವಸ್ವತಮನುವಿಗೆ ಹೇಳಿದ ಪುರಾಣಕ್ಕೆ ಮತ್ಸ್ಯಪುರಾಣವೆಂದು ಹೆಸರು. ಅದರಲ್ಲಿ ನರಸಿಂಹಾವತಾರವನ್ನು ವರ್ಣಿಸಿದೆ. ಏಳು ಕಲ್ಪಗಳ ವೃತ್ತಾಂತವೂ ಪ್ರತಿಪಾದಿತವಾಗಿದೆ. ಅದು ಹದಿನಾಲ್ಕುಸಾವಿರ ಗ್ರಂಥಗಳಿಂದ ಕೂಡಿದೆ.

೫೧. ವಿಷುಪುಣ್ಯಕಾಲದಲ್ಲಿ ಅದನ್ನು ಚಿನ್ನದ ಮತ್ಸ್ಯದೊಡನೆ ಗೋಸಹಿತವಾಗಿ ದಾನಮಾಡಿದರೆ ಸಮಸ್ತ ಭೂಮಂಡಲವನ್ನೂ ಕೊಟ್ಟಷ್ಟು ಫಲವು ಲಭಿಸುವುದು.

೫೨. ಗಾರುಡಕಲ್ಪದಲ್ಲಿ ಅಂಡಾಕಾರವಾದ ವಿಶ್ವದಿಂದ ಗರುತ್ಮಂತನು ಉದ್ಭವವಾದ ವಿಷಯವನ್ನು ಕುರಿತು ಕೃಷ್ಣನು ಹೇಳಿದ ಪುರಾಣವು ಗಾರುಡವೆನಿಸುವುದು.

ತದಷ್ಟಾದಶಕಂ ಚೈವ ಸಹಸ್ರಾಣೀಹ ಪಠ್ಯತೇ ।
ಸೌವರ್ಣಹಂಸಸಂಯುಕ್ತಂ ಯೋ ದದಾತಿ ಪುಮಾನಿಹ
ಸ ಸಿದ್ಧಿಂ ಲಭತೇ ಮುಖ್ಯಾಂ ಶಿವಲೋಕೇ ಚ ಸಂಸ್ಥಿತಿಂ ॥೫೩॥

ಬ್ರಹ್ಮಾ ಬ್ರಹ್ಮಾಂಡಮಾಹಾತ್ಮ್ಯಮಧಿಕೃತ್ಯಾಬ್ರವೀತ್ಪುನಃ ।
ತಚ್ಚ ದ್ವಾದಶಸಾಹಸ್ರಂ ಬ್ರಹ್ಮಾಂಡಂ ದ್ವಿಶತಾಧಿಕಂ ॥೫೪॥
ಭವಿಷ್ಯಾಣಾಂ ಚ ಕಲ್ಪಾನಾಂ ಶ್ರೂಯತೇ ಯತ್ರ ವಿಸ್ತರಃ ।
ತದ್ಬ್ರಹ್ಮಾಂಡಪುರಾಣಂ ಚ ಬ್ರಹ್ಮಣಾ ಸಮುದಾಹೃತಂ ॥೫೫॥
ಯೋ ದದ್ಯಾತ್ತದ್ವ್ಯತೀಪಾತೇ ಪೀತೋರ್ಣಾಯುಗಸಂಯುತಂ ।
ರಾಜಸೂಯಸಹಸ್ರಸ್ಯ ಫಲಮಾಪ್ನೋತಿ ಮಾನವಃ ॥
ಹೇಮಧೇನ್ವಾ ಯುತಂ ತಚ್ಚ ಬ್ರಹ್ಮಲೋಕಫಲಪ್ರದಂ ॥೫೬॥
ಚತುರ್ಲಕ್ಷಮಿದಂ ಪ್ರೋಕ್ತಂ ವ್ಯಾಸೇನಾದ್ಭುತಕರ್ಮಣಾ ।
ಮತ್ಪಿತುರ್ಮಮ ಪಿತ್ರಾ ಚ ಮಯಾ ತುಭ್ಯಂ ನಿವೇದಿತಂ ॥೫೭॥

---

೫೩. ಅದು ಹದಿನೆಂಟು ಸಾವಿರ ಗ್ರಂಥ ಪರಿಮಿತಿಯುಳ್ಳದೆಂದು ಹೇಳುತ್ತಾರೆ. ಸುವರ್ಣಮಯವಾದ ಹಂಸದೊಡನೆ ಅದನ್ನು ದಾನಮಾಡುವ ಮನುಷ್ಯನ ಇಷ್ಟಾರ್ಥವು ಈಡೇರುವುದು. ಅವನು ಶಿವಲೋಕದಲ್ಲಿ ಸ್ಥಿರವಾಗಿ ವಾಸಿಸುವನು.

೫೪-೫೫. ಬ್ರಹ್ಮನು ಬ್ರಹ್ಮಾಂಡದ ಮಾಹಾತ್ಮ್ಯವನ್ನು ತಿಳಿಸುವ ಉದ್ದೇಶದಿಂದ ಹೇಳಿದ ಪುರಾಣವು ಬ್ರಹ್ಮಾಂಡಪುರಾಣವೆನಿಸುವುದು. ಅದು ಹನ್ನೆರಡು ಸಾವಿರದ ಇನ್ನೂರು ಶ್ಲೋಕಗಳಿಂದ ಕೂಡಿದೆ. ಅದರಲ್ಲಿ ಮುಂದೆ ಬರುವ ಕಲ್ಪಗಳ ವಿಚಾರವನ್ನು ವಿಸ್ತಾರವಾಗಿ ಹೇಳಿದೆ.

೫೬. ವ್ಯತೀಪಾತದ ದಿನದಲ್ಲಿ ಹಳದಿಯ ಬಣ್ಣದ ಒಂದು ಜೋಡಿ ಶಾಲುವಿನೊಡನೆ ಆ ಪುರಾಣದ ಹಸ್ತಲಿಖಿತ ಪ್ರತಿಯನ್ನು ಚಿನ್ನದ ಹಸುವಿನ ಸಹಿತವಾಗಿ ದಾನಮಾಡುವ ಮನುಜನಿಗೆ ಒಂದು ಸಾವಿರ ರಾಜಸೂಯ ಯಾಗವನ್ನು ಮಾಡಿದ ಫಲವು ಬರುತ್ತದೆ.

೫೭. ಆಶ್ಚರ್ಯ ಕರ್ಮನಿರತನಾದ ವ್ಯಾಸಮುನಿಯು ನಾಲ್ಕುಲಕ್ಷ ಗ್ರಂಥಪರಿಮಿತವಾದ ಈ ಪುರಾಣ ರಾಶಿಯನ್ನು ನಮ್ಮ ತಂದೆಗೆ ವಿವರಿಸಿ ಹೇಳಿದನು. ನಮ್ಮ ತಂದೆಯು ನನಗೆ ಹೇಳಿದನು. ಅದನ್ನೇ ನಾನೂ ನಿಮಗೆ ತಿಳಿಸಿದೆನು.

ಇಹ ಲೋಕಹಿತಾರ್ಥಾಯ ಸಂಕ್ಷಿಪ್ತಂ ಪರಮರ್ಷಿಣಾ।
ಇದಮದ್ಯಾಪಿ ದೇವೇಷು ಶತಕೋಟಿಪ್ರವಿಸ್ತರಂ ॥೫೮॥

ಉಪಭೇದಾನ್ ಪ್ರವಕ್ಷ್ಯಾಮಿ ಲೋಕೇ ಯೇ ಸಂಪ್ರತಿಷ್ಠಿತಾಃ।
ಪಾದ್ಮೇ ಪುರಾಣೇ ಯತ್ರೋಕ್ತಂ ನರಸಿಂಹೋಪವರ್ಣನಂ।
ತಚ್ಚಾಷ್ಟಾದಶಸಾಹಸ್ರಂ ನಾರಸಿಂಹಮಿಹೋಚ್ಯತೇ ॥೫೯॥

ನಂದಾಯಾ ಯತ್ರ ಮಾಹಾತ್ಮ್ಯಂ ಕಾರ್ತಿಕೇಯೇನ ವರ್ಣ್ಯತೇ।
ನಂದೀಪುರಾಣಂ ತಲ್ಲೋಕೈರಾಖ್ಯಾತಮಿತಿ ಕೀರ್ತ್ಯತೇ ॥೬೦॥

ಯತ್ರ ಸಾಂಬಂ ಪುರಸ್ಕೃತ್ಯ ಭವಿಷ್ಯೇಽಪಿ ಕಥಾನಕಂ।
ಪ್ರೋಚ್ಯತೇ ತತ್ಪುನರ್ಲೋಕೇ ಸಾಂಬಮೇತನ್ಮುನಿವ್ರತಾಃ ॥೬೧॥

---

೫೮. ಪರಮರ್ಷಿಯಾದ ಕೃಷ್ಣದ್ವೈಪಾಯನನು ಈ ಲೋಕದ ಜನರ ಹಿತಕ್ಕೋಸ್ಕರ ಪುರಾಣವನ್ನು ಸಂಕ್ಷೇಪವಾಗಿ ಹೇಳಿದನು. ದೇವತೆಗಳಲ್ಲಿ ಇದು ಈಗಲೂ ನೂರುಕೋಟಿ ಗ್ರಂಥ ಪ್ರಮಾಣವಲ್ಲೇ ಇರುವುದು.

೫೯. ಇನ್ನು ಲೋಕದಲ್ಲಿ ನೆಲೆಸಿರುವ ಪುರಾಣಗಳ ಒಳಪಂಗಡಗಳನ್ನು ಹೇಳುವೆನು. ಪಾದ್ಮಪುರಾಣದಲ್ಲಿ ನರಸಿಂಹಾವತಾರ ವರ್ಣನವಿದೆ. ಅದು ಹದಿನೆಂಟುಸಾವಿರ ಗ್ರಂಥಾತ್ಮಕವಾದುದು. ಅದಕ್ಕೆ ನಾರಸಿಂಹ ಪುರಾಣವೆಂದು ಹೆಸರು.

೬೦. ಕುಮಾರಸ್ವಾಮಿಯು ನಂದಾದೇವಿಯ ಮಾಹಾತ್ಮ್ಯವನ್ನು ವರ್ಣಿಸಿ ಹೇಳಿದ ಪುರಾಣಕ್ಕೆ ನಂದೀ ಪುರಾಣವೆಂಬ ಹೆಸರು ಲೋಕದಲ್ಲಿ ಬಂದಿದೆ.

೬೧. ಮೌನವ್ರತಧಾರಿಗಳಾದ ಓ ಮಹರ್ಷಿಗಳೇ, ಭವಿಷ್ಯತ್ಪುರಾಣದಲ್ಲಿ ಪಾರ್ವತೀರಮಣನಾದ ಪರಮೇಶ್ವರನನ್ನು ವರ್ಣಿಸುವ ಕಥಾಭಾಗವು ಸಾಂಬಪುರಾಣವೆಂದು ಪ್ರಸಿದ್ಧವಾಗಿದೆ.

ಪುರಾತನಸ್ಯ ಕಲ್ಪಸ್ಯ ಪುರಾಣಾನಿ ವಿದುರ್ಬುಧಾಃ ।
ಧನ್ಯಂ ಯಶಸ್ಯಮಾಯುಷ್ಯಂ ಪುರಾಣಾನಾಮನುಕ್ರಮಂ ।
ಏವಮಾದಿತ್ಯಸಂಜ್ಞಾ ಚ ತತ್ರೈವ ಪರಿಗದ್ಯತೇ ||೬೨||

ಅಷ್ಟಾದಶಭ್ಯಸ್ತು ಪೃಥಕ್ಪುರಾಣಂ ಯತ್ಪ್ರದಿಶ್ಯತೇ ।
ವಿಜಾನೀಧ್ವಂ ದ್ವಿಜಶ್ರೇಷ್ಠಾಸ್ತದೇತೇಭ್ಯೋ ವಿನಿರ್ಗತಂ ||೬೩||

ಪಂಚಾಂಗಾನಿ ಪುರಾಣೇಷು ಆಖ್ಯಾನಕಮಿತಿ ಸ್ಮೃತಂ ।
ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ ।
ವಂಶ್ಯಾನುಚರಿತಂ ಚೈವ ಪುರಾಣಂ ಪಂಚಲಕ್ಷಣಂ ||೬೪||

ಬ್ರಹ್ಮವಿಷ್ಣ್ವರ್ಕರುದ್ರಾಣಾಂ ಮಾಹಾತ್ಮ್ಯಂ ಭುವನಸ್ಯ ಚ ।
ಸಸಂಹಾರಪ್ರದಾನಾಂ ಚ ಪುರಾಣೇ ಪಂಚವರ್ಣಕೇ ||೬೫||

---

೬೨. ಪುರಾಣಗಳು ಹಿಂದಿನ ಕಲ್ಪದ ವೃತ್ತಾಂತಬೋಧಕಗಳೆಂದು ಪ್ರಾಜ್ಞರು ತಿಳಿಯುವರು. ಮೇಲೆ ತಿಳಿಸಿದಂತೆ ಇವುಗಳ ಆನುಪೂರ್ವಿಯನ್ನು ಅರಿಯುವುದರಿಂದ ಜೀವನವು ಸಾರ್ಥಕವಾಗುವುದು; ಕೀರ್ತಿಯು ಲಭಿಸುವುದು; ಆಯುಸ್ಸು ಹೆಚ್ಚುವುದು. ಹೀಗೆಯೇ ಆದಿತ್ಯಪುರಾಣವೂ ಸಹ ಉಪಪುರಾಣಗಳಲ್ಲಿಯೇ ಅಂತರ್ಗತವಾಗುವುದು.

೬೩. ಎಲೈ ಬ್ರಾಹ್ಮಣಶ್ರೇಷ್ಠರೇ, ಮೇಲೆ ಹೇಳಿದ ಹದಿನೆಂಟು ಪುರಾಣಗಳಲ್ಲದೆ ಬೇರೆ ಯಾವುದು ಇದ್ದರೂ ಅದು ಈ ಹದಿನೆಂಟು ಮಹಾ ಪುರಾಣಗಳಿಂದಲೇ ಹುಟ್ಟಿದುದೆಂದು ತಿಳಿಯಿರಿ.

೬೪. ಪುರಾಣಗಳಲ್ಲಿ ಹೇಳುವ ವಿಷಯವನ್ನು ಮುಖ್ಯವಾಗಿ ಐದು ಭಾಗವಾಗಿ ವಿಂಗಡಿಸಬಹುದು. ಅವುಗಳಿಗೆ ಆಖ್ಯಾನಕಗಳೆಂದು ಹೆಸರು. ಚತುರ್ಮುಖಬ್ರಹ್ಮನು ಮಾಡುವ ಸಾಕ್ಷಾತ್ಸೃಷ್ಟಿ, ಅವನ ಮಾನಸಪುತ್ರರಾದ ಮರೀಚ್ಯಾದಿ ಪ್ರಜಾಪತಿಗಳಿಂದ ನಡೆಯುವ ಪ್ರತಿಸೃಷ್ಟಿ, ಚಂದ್ರ ಸೂರ್ಯಾದಿ ವಂಶಗಳು, ಹದಿನಾಲ್ಕು ಮನ್ವಂತರಗಳು, ಬೇರೆ ಬೇರೆ ವಂಶದಲ್ಲಿ ಹುಟ್ಟಿದ ರಾಜರ ಅಥವಾ ಋಷಿಗಳ ಚರಿತ್ರೆ ಈ ಐದು ವಿಷಯಗಳ ವರ್ಣನವೇ ಪುರಾಣದ ಮುಖ್ಯ ಲಕ್ಷಣವೆನ್ನುವರು.

೬೫-೬೬. ಐದು ಬಗೆಯ ಲಕ್ಷಣಗಳಿಂದ ಕೂಡಿದ ಈ ಪುರಾಣಗಳಲ್ಲಿ ಜಗತ್ತಿನ ಸೃಷ್ಟಿಸಂಹಾರಗಳಿಗೆ ಕಾರಣಕರ್ತರಾದ ಬ್ರಹ್ಮ, ವಿಷ್ಣು, ಸೂರ್ಯ, ರುದ್ರ

ಧರ್ಮಶ್ಚಾರ್ಥಶ್ಚ ಕಾಮಶ್ಚ ಮೋಕ್ಷಶ್ಚೈವಾತ್ರ ಕೀರ್ತ್ಯತೇ ।
ಸರ್ವೇಷ್ವಪಿ ಪುರಾಣೇಷು ತದ್ವಿರುದ್ಧಂ ಚ ಯತ್ಫಲಂ ॥೬೬॥

ಸಾತ್ತ್ವಿಕೇಷು ಪುರಾಣೇಷು ಮಾಹಾತ್ಮ್ಯಮಧಿಕಂ ಹರೇಃ ।
ರಾಜಸೇಷು ಚ ಮಾಹಾತ್ಮ್ಯಮಧಿಕಂ ಬ್ರಹ್ಮಣೋ ವಿದುಃ ॥೬೭॥

ತದ್ವದಗ್ನೇಶ್ಚ ಮಾಹಾತ್ಮ್ಯಂ ತಾಮಸೇಷು ಶಿವಸ್ಯ ಚ ।
ಸಂಕೀರ್ಣೇಷು ಸರಸ್ವತ್ಯಾಃ ಪಿತೄಣಾಂ ಚ ನಿಗದ್ಯತೇ ॥೬೮॥

ಅಷ್ಟಾದಶ ಪುರಾಣಾನಿ ಕೃತ್ವಾ ಸತ್ಯವತೀಸುತಃ ।
ಭಾರತಾಖ್ಯಾನಮಖಿಲಂ ಚಕ್ರೇ ತದುಪಬೃಂಹಿತಂ ।
ಲಕ್ಷೇಣೈಕೇನ ಯತ್ಪ್ರೋಕ್ತಂ ವೇದಾರ್ಥಪರಿಬೃಂಹಿತಂ ॥೬೯॥

ವಾಲ್ಮೀಕಿನಾ ತು ಯತ್ಪ್ರೋಕ್ತಂ ರಾಮೋಪಾಖ್ಯಾನಮುತ್ತಮಂ ।
ಬ್ರಹ್ಮಣಾಭಿಹಿತಂ ಯಚ್ಚ ಶತಕೋಟಿಪ್ರವಿಸ್ತರಂ ॥೭೦॥

---

ಇವರ ಮಾಹಾತ್ಮ್ಯವು ವರ್ಣಿತವಾಗಿದೆ. ಧರ್ಮಾರ್ಥಕಾಮ ಮೋಕ್ಷಗಳೆಂಬ ನಾಲ್ಕು ವಿಧವಾದ ಪುರುಷಾರ್ಥಗಳನ್ನೂ, ಮತ್ತು ಅವುಗಳಿಗೆ ವಿರುದ್ಧವಾದ ಫಲದ ಸ್ವರೂಪವನ್ನೂ ಎಲ್ಲ ಪುರಾಣಗಳೂ ತಿಳಿಸುವುವು.

೬೭. ಪುರಾಣಗಳನ್ನು ನಾಲ್ಕು ಗುಂಪಾಗಿ ವಿಂಗಡಿಸುವರು. ಸಾತ್ತ್ವಿಕ ಪುರಾಣಗಳಲ್ಲಿ ವಿಷ್ಣುವಿನ ಮಹಿಮೆಯೂ, ರಾಜಸ ಪುರಾಣಗಳಲ್ಲಿ ಬ್ರಹ್ಮನ ಮಹಿಮೆಯೂ ವಿಶೇಷವಾಗಿರುವುವು.

೬೮. ಹಾಗೆಯೇ ತಾಮಸ ಪುರಾಣಗಳಲ್ಲಿ ಅಗ್ನಿಯ ಮತ್ತು ಶಿವನ ಮಹಿಮೆಯೂ, ಸಂಕೀರ್ಣಗಳಲ್ಲಿ ಸರಸ್ವತಿಯ ಮತ್ತು ಪಿತೃಗಳ ಆಧಿಕ್ಯವೂ ವರ್ಣಿತವಾಗಿರುವುವು.

೬೯. ಸತ್ಯವತಿಯ ಪುತ್ರನಾದ ವ್ಯಾಸಮಹಾಮುನಿಯು ಹದಿನೆಂಟು ಪುರಾಣಗಳನ್ನು ರಚಿಸಿ, ಅವುಗಳ ವಿವರಣರೂಪವಾದ ಮಹಾಭಾರತವೆಂಬ ಇತಿಹಾಸವನ್ನು ಬರೆದನು. ಅದು ವೇದಾರ್ಥವನ್ನು ವಿಶದಪಡಿಸುವ ಗ್ರಂಥ; ಲಕ್ಷಶ್ಲೋಕಗಳಿಂದ ಕೂಡಿದುದು.

೭೦-೭೧. ಬ್ರಹ್ಮನು ನೂರುಕೋಟಿ ಶ್ಲೋಕಗಳಷ್ಟು ವಿಸ್ತಾರವಾದ ಶ್ರೀರಾಮ ಚರಿತ್ರವನ್ನು ದೇವತೆಗಳಿಗೆ ಉಪದೇಶಿಸಿದ್ದನು. ಅದನ್ನೇ ನಾರದ ಮಹರ್ಷಿಯು

**ಆಹೃತ್ಯ ನಾರದಾಯ್ವೈವ ತೇನ ವಾಲ್ಮೀಕಯೇ ಪುನಃ ।**
**ವಾಲ್ಮೀಕಿನಾ ಚ ಲೋಕೇಷು ಧರ್ಮಕಾಮಾರ್ಥಸಾಧನಂ ।**
**ಏವಂ ಸಪಾದಾಃ ಪಂಚೈತೇ ಲಕ್ಷಾ ಮರ್ತ್ಯೇ ಪ್ರಕೀರ್ತಿತಾಃ ॥೭೧॥**

**ಪುರಾತನಸ್ಯ ಕಲ್ಪಸ್ಯ ಪುರಾಣಾನಿ ವಿದುರ್ಬುಧಾಃ ।**
**ಧನ್ಯಂ ಯಶಸ್ಯಮಾಯುಷ್ಯಂ ಪುರಾಣಾನಾಮನುಕ್ರಮಂ ।**
**ಯಃ ಪಠೇಚ್ಛೃಣುಯಾದ್ವಾಽಪಿ ಸ ಯಾತಿ ಪರಮಾಂ ಗತಿಂ ॥೭೨॥**

**ಇದಂ ಪವಿತ್ರಂ ಯಶಸೋ ನಿಧಾನ**
**ಮಿದಂ ಪಿತೃಣಾಮತಿವಲ್ಲಭಂ ಚ ।**
**ಇದಂ ಚ ದೇವೇಷ್ವಮೃತಾಯಿತಂ ಚ**
**ನಿತ್ಯಂ ತ್ವಿದಂ ಪಾಪಹರಂ ಚ ಪುಂಸಾಂ ॥೭೩॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಪುರಾಣಾನುಕ್ರಮಣಿಕಾಭಿಧಾನಂ ನಾಮ ತ್ರಿಪಂಚಾಶೋಽಧ್ಯಾಯಃ**

---

ತಿಳಿದು ಬಂದು ವಾಲ್ಮೀಕಿಮುನಿಗೆ ಅನುಗ್ರಹಿಸಿದನು. ಆ ಮುನಿಯು ಲೋಕಾನುಗ್ರಹಾರ್ಥವಾಗಿ ಧರ್ಮಕಾಮಾರ್ಥಗಳೆಂಬ ಪುರುಷಾರ್ಥಸಾಧಕವಾದ ಶ್ರೀಮದ್ರಾಮಾಯಣವೆಂಬ ದಿವ್ಯಕಾವ್ಯವನ್ನು ರಚಿಸಿದನು. ಹೀಗೆ ಪುರಾಣಗಳು, ಮಹಾಭಾರತ, ಮತ್ತು ರಾಮಾಯಣಕಾವ್ಯ ಇವೆಲ್ಲವೂ ಸೇರಿ ಐದೂಕಾಲು ಲಕ್ಷಗ್ರಂಥಗಳು ಭೂಲೋಕದಲ್ಲಿ ಪ್ರಸಿದ್ಧವಾಗಿವೆ.

೭೨. ಪುರಾಣಗಳು ಹಿಂದಿನ ಕಲ್ಪದ ವೃತ್ತಾಂತ ಬೋಧಕಗಳೆಂದು ಪ್ರಾಜ್ಞರು ತಿಳಿಯುವರು. ಇವುಗಳ ಆನುಪೂರ್ವಿಯನ್ನು ಅರಿಯುವುದರಿಂದ ಜೀವನವು ಸಾರ್ಥಕವಾಗುವುದು; ಕೀರ್ತಿಯು ಹರಡುವುದು; ಆಯುಸ್ಸು ಹೆಚ್ಚುವುದು. ಇದನ್ನು ಓದಲಿ, ಅಥವಾ ಕೇಳಲಿ ಆ ಮನುಷ್ಯನು ಉತ್ತಮ ಗತಿಯನ್ನು ಪಡೆಯುವನು.

೭೩. ಇದು ಪಾವನವಾದುದು; ಕೀರ್ತಿಪ್ರದವಾದುದು; ಪಿತೃಗಳಿಗೆ ಬಹಳ ಪ್ರಿಯವೆನಿಸಿರುವುದು. ದೇವತೆಗಳಿಗೆ ಅಮೃತ ಸದೃಶವಾದ ತೃಪ್ತಿಯನ್ನು ಹುಟ್ಟಿಸುವುದು; ಮತ್ತು ಸರ್ವದಾ ಮನುಷ್ಯರ ಪಾಪವನ್ನು ಕಳೆಯುವುದು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಎಲ್ಲ ಪುರಾಣಗಳ ಹೆಸರನ್ನೂ ಅವುಗಳ ಪರಿಮಾಣ ವನ್ನೂ ಸೂಚಿಸಿದೆ. ಪುರಾಣವು ಸರ್ವಶಾಸ್ತ್ರಗಳಿಗೂ ಮೂಲವೆನಿಸಿದೆ.

ಆದಿಯಲ್ಲಿ ಇದು ಅಖಂಡವಾಗಿ ಒಂದೇ ಆಗಿತ್ತು. ದೇವಲೋಕದಲ್ಲಿ ಒಂದು ನೂರು ಕೋಟಿ ಗ್ರಂಥಗಳಷ್ಟು ವಿಸ್ತಾರವಾಗಿ ಪ್ರಚಾರದಲ್ಲಿರುವ ಈ ಪುರಾಣ ರಾಶಿಯನ್ನು ವ್ಯಾಸಮಹರ್ಷಿಯು ಮನುಷ್ಯರ ಸೌಕರ್ಯಕ್ಕಾಗಿ ನಾಲ್ಕುಲಕ್ಷ ಶ್ಲೋಕ ಗಳಲ್ಲಿ ಸಂಗ್ರಹಿಸಿ ರಚಿಸಿ, ಮತ್ಸ್ಯ, ಕೂರ್ಮ ಮೊದಲಾದ ಹದಿನೆಂಟು ಪುರಾಣ ಗಳಾಗಿ ವಿಂಗಡಿಸಿದನು. ಅವುಗಳನ್ನು ಬರೆದು ಆ ಪ್ರತಿಯನ್ನು ಗೊತ್ತಾದ ಪುಣ್ಯ ಕಾಲದಲ್ಲಿ ದಾನಮಾಡಿದರೆ ಬಹು ಫಲವುಂಟು. ನಾರಸಿಹ್ಮ, ಸಾಂಬ ಮೊದಲಾ ದುವು ಉಪ ಪುರಾಣಗಳು. ಇವು ಮೇಲೆ ಹೇಳಿದ ಹದಿನೆಂಟು ಮಹಾಪುರಾಣ ಗಳಿಂದಲೇ ಹುಟ್ಟಿದುವು.

ವೇದಾರ್ಥವನ್ನು ವಿಶದಗೊಳಿಸುವ ಮಹಾಭಾರತವೆಂಬ ಇತಿಹಾಸಗ್ರಂಥವೂ ಸಹ ವ್ಯಾಸಮುನಿಯಿಂದಲೇ ರಚಿತವಾಯಿತು. ಅದು ಒಂದು ಲಕ್ಷ ಶ್ಲೋಕಗಳನ್ನು ಒಳಗೊಂಡಿದೆ. ನಾರದರ ಉಪದೇಶದಿಂದ ವಾಲ್ಮೀಕಿ ಮಹಾಮುನಿಯು ಶ್ರೀರಾಮ ಚರಿತರೂಪವಾದ ದಿವ್ಯಕಾವ್ಯವನ್ನು ರಚಿಸಿದನು. ಈ ಪವಿತ್ರವಾದ ಗ್ರಂಥಗಳನ್ನು ಓದುವುದರಿಂದಲೂ, ಕೇಳುವುದರಿಂದಲೂ ಅನಂತ ಪುಣ್ಯ ಫಲವು ಲಭಿಸುವುದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಪುರಾಣಾನುಕ್ರಮಣಿಕಾಭಿಧಾನವೆಂಬ
ಐವತ್ತಮೂರನೆಯ ಅಧ್ಯಾಯವು ಮುಗಿದುದು.



## ಅಥ ಚತುಃಪಂಚಾಶೋಽಧ್ಯಾಯಃ

॥ ಸೂತ ಉವಾಚ ॥

ಅತಃ ಪರಂ ಪ್ರವಕ್ಷ್ಯಾಮಿ ದಾನಧರ್ಮಾನಶೇಷತಃ ।
ವ್ರತೋಪವಾಸಸಂಯುಕ್ತಾನ್ಯಥಾ ಮತ್ಸ್ಯೋದಿತಾನಿಹ ॥ ೧ ॥

ಮಹಾದೇವಸ್ಯ ಸಂವಾದೇ ನಾರದಸ್ಯ ಚ ಧೀಮತಃ ।
ಯಥಾವೃತ್ತಂ ಪ್ರವಕ್ಷ್ಯಾಮಿ ಧರ್ಮಕಾಮಾರ್ಥಸಾಧಕಂ ॥ ೨ ॥

ಕೈಲಾಸಶಿಖರಾಸೀನಮಪೃಚ್ಛನ್ನಾರದಃ ಪುರಾ ।
ತ್ರಿಶೂಲಿನಮನಂಗಾರಿಮಂಗನಾರ್ಧಧರಂ ಹರಂ ॥ ೩ ॥

॥ ನಾರದ ಉವಾಚ ॥

ಭಗವನ್ ದೇವದೇವೇಶ ಬ್ರಹ್ಮವಿಷ್ಣ್ವಿಂದ್ರನಾಯಕ ।
ಶ್ರೀಮದಾರೋಗ್ಯರೂಪಾಯುರ್ಭಾಗ್ಯಸೌಭಾಗ್ಯಸಂಪದಾ ।
ಸಂಯುಕ್ತಸ್ತವ ವಿಷ್ಣೋರ್ವಾ ಪುಮಾನ್ ಭಕ್ತಃ ಕಥಂ ಭವೇತ್ ॥ ೪ ॥

---

೧. ಸೂತಮಹರ್ಷಿ ಹೇಳಿದನು.—ಮತ್ಸ್ಯರೂಪನಾದ ಭಗವಂತನು ಅಪ್ಪಣೆಕೊಡಿಸಿದ ರೀತಿಯಲ್ಲಿ ವ್ರತ, ಉಪವಾಸ ಇವುಗಳೊಡನೆ ಧರ್ಮಾಧರ್ಮಗಳ ಸ್ವರೂಪವನ್ನು ಇನ್ನುಮುಂದೆ ಸಾಂಗವಾಗಿ ಹೇಳುವೆನು.

೨. ಪರಮೇಶ್ವರನಿಗೂ ಪ್ರಾಜ್ಞನಾದ ನಾರದಮುನಿಗೂ ಆದ ಸಂವಾದವನ್ನು ಅದು ನಡೆದ ರೀತಿಯಲ್ಲೇ ತಿಳಿಸುವೆನು. ಆ ಸಂವಾದವು ಧರ್ಮ, ಕಾಮ, ಅರ್ಥ ಗಳೆಂಬ ಪುರುಷಾರ್ಥಗಳನ್ನು ಸಾಧಿಸಲು ಸಹಕಾರಿಯಾಗಿದೆ.

೩. ಪೂರ್ವದಲ್ಲಿ ತ್ರಿಶೂಲಧಾರಿಯೂ, ಮನ್ಮಥಶತ್ರುವೂ, ಅರ್ಧನಾರೀ ರೂಪಧರನೂ ಆದ ಪರಮೇಶ್ವರನು ಕೈಲಾಸ ಶಿಖರದಲ್ಲಿ ಕುಳಿತಿರಲು ನಾರದನು ಅವನನ್ನು ಕೇಳಿದನು.

೪. ನಾರದಮುನಿ ಹೇಳಿದನು.—ಓ ಭಗವಂತಾ, ದೇವಾಧಿದೇವಾ, ಬ್ರಹ್ಮ, ಇಂದ್ರ, ವಿಷ್ಣು ಇವರ ಅಧಿಪತಿಯಾದವನೇ, ಮನುಜನು ಕಾಂತಿ, ಆರೋಗ್ಯ, ಸೌಂದರ್ಯ, ಆಯುಸ್ಸು, ಭಾಗ್ಯ, ಸೌಭಾಗ್ಯ ಮೊದಲಾಧ ಸಂಪತ್ತುಗಳಿಂದ ಕೂಡಿ ನಿನ್ನ ಇಲ್ಲವೇ ವಿಷ್ಣುವಿನ ಭಕ್ತನೆನಿಸಿಕೊಳ್ಳುವುದು ಹೇಗೆ?

ನಾರೀ ವಾಽವಿಧವಾ ಸರ್ವಗುಣಸೌಭಾಗ್ಯಸಂಯುತಾ ।
ಕ್ರಮಾನ್ಮುಕ್ತಿಪ್ರದಂ ದೇವ ಕಿಂಚಿದ್ವ್ರತಮಿಹೋಚ್ಯತಾಂ ॥ ೫ ॥

॥ ಈಶ್ವರ ಉವಾಚ ॥

ಸಮ್ಯಕ್ಪೃಷ್ಟಂ ತ್ವಯಾ ಬ್ರಹ್ಮನ್ ಸರ್ವಲೋಕಹಿತಾವಹಂ ।
ಶ್ರುತಮಪ್ಯತ್ರ ಯಚ್ಛಾಂತ್ಯೈ ತದ್ವ್ರತಂ ಶೃಣು ನಾರದ ॥ ೬ ॥

ನಕ್ಷತ್ರಪುರುಷಂ ನಾಮ ವ್ರತಂ ನಾರಾಯಣಾತ್ಮಕಂ ।
ಪಾದಾದಿ ಕುರ್ಯಾದ್ವಿಧಿವದ್ವಿಷ್ಣುನಾಮಾನುಕೀರ್ತನಂ ॥ ೭ ॥

ಪ್ರತಿಮಾಂ ವಾಸುದೇವಸ್ಯ ಮೂಲಕ್ಷಾರ್ದಿಷು ಚಾರ್ಚಯೇತ್ ।
ಚೈತ್ರಮಾಸಂ ಸಮಾಸಾದ್ಯ ಕೃತ್ವಾ ಬ್ರಾಹ್ಮಣವಾಚನಂ ॥ ೮ ॥

ಮೂಲೇ ನಮೋ ವಿಶ್ವಧರಾಯ ಪಾದೌ
ಗುಲ್ಫಾವನಂತಾಯ ಚ ರೋಹಿಣೀಷು ।

---

೫. ಸ್ತ್ರೀಯೂ ಸಹ ಸುಮಂಗಲಿಯಾಗಿ ಸಕಲ ಸೌಭಾಗ್ಯಗುಣಗಳಿಂದ ಪರಿಪೂರ್ಣಳಾಗುವುದೆಂತು ? ದೇವಾ, ಕ್ರಮವಾಗಿ ಮೋಕ್ಷವನ್ನು ಕೊಡಬಲ್ಲ ಯಾವುದಾದರೊಂದು ವ್ರತವನ್ನು ಹೇಳು.

೬. ಈಶ್ವರನು ಹೇಳಿದನು.—ಎಲೈ ಬ್ರಹ್ಮಜ್ಞಾನಿಯೇ, ನೀನು ಚೆನ್ನಾಗಿ ಕೇಳಿದೆ. ನಿನ್ನ ಪ್ರಶ್ನೆಯು ಎಲ್ಲರಿಗೂ ಹಿತಕರವಾದುದು. ಕೇಳಿದ ಮಾತ್ರದಿಂದಲೇ ಮನಸ್ಸಿಗೆ ಶಾಂತಿಯನ್ನು ಕೊಡುವ ವ್ರತವನ್ನು ಹೇಳುವೆನು ಕೇಳು.

೭. ನಾರಾಯಣಾತ್ಮಕವಾದ, ನಕ್ಷತ್ರಪುರುಷವೆಂದು ಪ್ರಸಿದ್ಧವಾದ ವ್ರತವುಂಟು. ಅದರಲ್ಲಿ ಪಾದಗಳಿಂದ ಹಿಡಿದು ಶಾಸ್ತ್ರೋಕ್ತವಾಗಿ ವಿಷ್ಣುವಿನ ದಿವ್ಯನಾಮಗಳನ್ನು ಹೇಳುತ್ತ ವಾಸುದೇವನಿಗೆ ಅರ್ಚನೆಮಾಡಬೇಕು.

೮. ಚೈತ್ರಮಾಸದಲ್ಲಿ ಬ್ರಾಹ್ಮಣರ ಅನುಜ್ಞೆಯನ್ನು ಪಡೆದು ವಾಸುದೇವನ ಪ್ರತಿಮೆಯನ್ನು ಮೂಲವೇ ಮೊದಲಾದ ನಕ್ಷತ್ರಗಳಲ್ಲಿ ಪೂಜಿಸಬೇಕು.

೯. ಪ್ರಪಂಚವೆಲ್ಲವನ್ನೂ ಧರಿಸಿರುವ ಮಹಾತ್ಮನಿಗೆ ನಮಸ್ಕಾರವೆಂದು ಮೂಲಾನಕ್ಷತ್ರದ ದಿನ ಪಾದಗಳನ್ನೂ, ಅನಂತನಿಗೆ ನಮಸ್ಕಾರವೆಂದು ರೋಹಿಣೀ ನಕ್ಷತ್ರದಲ್ಲಿ ಹಿಮ್ಮಡಿಯನ್ನೂ, ವರವನ್ನು ಕರುಣಿಸುವವನಿಗೆ ನಮಸ್ಕಾರವೆಂದು

ಜಂಘೇऽಭಿಪೂಜ್ಯೇ ವರದಾಯ ಚೈವ
ದ್ವೇ ಜಾನುನೀ ವಾಶ್ವಿಕುಮಾರಋಕ್ಷೇ ॥ ೯ ॥
ಪೂರ್ವೋತ್ತರಾಷಾಢಯುಗೇ ತಥೋರೂ
ನಮಃಶ್ಶಿವಾಯೇತ್ಯಭಿಪೂಜನೀಯಂ ।
ಪೂರ್ವೋತ್ತರಾಫಲ್ಗುನಿಯುಗ್ಮಕೇ ಚ
ಮೇಢ್ರಂ ನಮಃ ಪಂಚಶರಾಯ ಪೂಜ್ಯಂ ॥೧೦॥
ಕಟಿಂ ನಮಃ ಶಾರ್ಙ್ಗಧರಾಯ ವಿಷ್ಣೋಃ
ಸಂಪೂಜಯೇನ್ನಾರದ ಕೃತ್ತಿಕಾಸು ।
ತಥಾರ್ಚಯೇದ್ಭಾದ್ರಪದಾದ್ವಯೇ ಚ
ಪಾರ್ಶ್ವೇ ನಮಃ ಕೇಶನಿಷೂದನಾಯ ॥೧೧॥
ಕುಕ್ಷಿದ್ವಯಂ ನಾರದ ರೇವತೀಷು
ದಾಮೋದರಾಯೇತ್ಯಭಿಪೂಜನೀಯಂ ।
ಋಕ್ಷೇऽನುರಾಧಾಸು ಚ ಮಾಧವಾಯ
ನಮಸ್ತಥೋರಸ್ಥಲಮೇವ ಪೂಜ್ಯಂ ॥೧೨॥

---

ಅಶ್ವಿನೀ ನಕ್ಷತ್ರದ ದಿವಸದಲ್ಲಿ ಪವಿತ್ರವಾದ ಮೊಣಕಾಲು ಮತ್ತು ಮಂಡಿಗಳನ್ನೂ ಅರ್ಚಿಸಬೇಕು.

೧೦. ಪೂರ್ವಾಷಾಢ ಮತ್ತು ಉತ್ತರಾಷಾಢವೆಂಬ ನಕ್ಷತ್ರಗಳಲ್ಲಿ ನಮಃ ಶಿವಾಯ ಎಂಬ ಮಂತ್ರದಿಂದ ತೊಡೆಗಳೆರಡನ್ನೂ ಪೂಜಿಸಬೇಕು. ಪೂರ್ವ ಮತ್ತು ಉತ್ತರ ಫಲ್ಗುನೀ ನಕ್ಷತ್ರ ದಿವಸಗಳಲ್ಲಿ ಮನ್ಮಥನಿಗೆ ನಮಸ್ಕಾರವೆಂದು ಹೇಳಿ ಪೂಜ್ಯವಾದ ಮೇಢ್ರಾವಯವವನ್ನು ಅರ್ಚಿಸಬೇಕು.

೧೧. ಶಾರ್ಙ್ಗವೆಂಬ ಬಿಲ್ಲು ಹಿಡಿದವನಿಗೆ ನಮಸ್ಕಾರವೆಂದು ವಿಷ್ಣುವಿನ ಸೊಂಟವನ್ನು ಕೃತ್ತಿಕಾ ನಕ್ಷತ್ರದಲ್ಲಿ ಆರಾಧಿಸಬೇಕು. ಓ ನಾರದಾ, ಕೇಶಾಸುರ ಸಂಹಾರಕನಿಗೆ ನಮಸ್ಕಾರವೆಂದು ಹೇಳಿ ಪೂರ್ವಾಭಾದ್ರೆ ಮತ್ತು ಉತ್ತರಾಭಾದ್ರೆ ಗಳೆಂಬ ನಕ್ಷತ್ರಗಳಲ್ಲಿ ಪಾರ್ಶ್ವಗಳನ್ನು ಅರ್ಚಿಸಬೇಕು.

೧೨. ದಾಮೋದರಾಯ ನಮಃ ಎಂಬ ಮಂತ್ರದಿಂದ ರೇವತೀನಕ್ಷತ್ರಯುಕ್ತವಾದ ದಿನದಲ್ಲಿ ವಾಸುದೇವನ ಮೇಲಣ ಮತ್ತು ಕೆಳಗಣ ಹೊಟ್ಟೆಗಳೆರಡನ್ನೂ ಅರ್ಚಿಸಬೇಕು. ಮಾಧವಾಯ ನಮಃ ಎಂದು ಅನೂರಾಧಾನಕ್ಷತ್ರದಲ್ಲಿ ಲಕ್ಷ್ಮೀ ವಾಸದಿಂದ ಪೂಜ್ಯವೆನಿಸಿದ ಎದೆಯನ್ನು ಆರಾಧಿಸಬೇಕು.

ಪೃಷ್ಠಂ ಧನಿಷ್ಠಾಸು ಚ ಪೂಜನೀಯ
ಮಘೌಘವಿಧ್ವಂಸಕರಾಯ ತಚ್ಚ ।
ಶ್ರೀಶಂಖಚಕ್ರಾಸಿಗದಾಧರಾಯ
ನಮೋ ವಿಶಾಖಾಸು ಭುಜಾಶ್ಚ ಪೂಜ್ಯಾಃ ॥೧೩॥

ಹಸ್ತೇ ತು ಹಸ್ತಾ ಮಧುಸೂದನಾಯ
ನಮೋಽಭಿಪೂಜ್ಯಾ ಇತಿ ಕೈಟಭಾರೇಃ ।
ಪುನರ್ವಸಾವಂಗುಲಿಪೂರ್ವಭಾಗಾಃ
ಸಾಮ್ನಾಮಧೀಶಾಯ ನಮೋಽಭಿಪೂಜ್ಯಾಃ ॥೧೪॥

ಭುಜಂಗನಕ್ಷತ್ರದಿನೇ ನಖಾನಿ
ಸಂಪೂಜಯೇನ್ಮತ್ಸ್ಯಶರೀರಭಾಜಃ ।
ಕೂರ್ಮಸ್ಯ ಪಾದೌ ಶರಣಂ ವ್ರಜಾಮಿ
ಜ್ಯೇಷ್ಠಾಸು ಕಂಠೇ ಹರಿರರ್ಚನೀಯಃ ॥೧೫॥

---

೧೩. ಪಾಪರಾಶಿಯನ್ನು ಪರಿಹರಿಸುವಾತನಿಗೆ ನಮಸ್ಕಾರವೆಂದು ಧನಿಷ್ಠಾ ನಕ್ಷತ್ರದಲ್ಲಿ ಬೆನ್ನನ್ನು ಪೂಜಿಸಬೇಕು. ಶಂಖ ಚಕ್ರ ಗದಾ ಖಡ್ಗಗಳನ್ನು ಧರಿಸಿದವನಿಗೆ ನಮಸ್ಕಾರವೆಂದು ಹೇಳುತ್ತಾ ತೋಳುಗಳನ್ನು ವಿಶಾಖಾನಕ್ಷತ್ರದಲ್ಲಿ ಅರ್ಚಿಸಬೇಕು.

೧೪. ಮಧುಸೂದನಾಯ ನಮಃ ಎಂಬ ಮಂತ್ರವನ್ನು ಉಚ್ಚರಿಸಿ ಕೈಟಭಾಸುರಧ್ವಂಸಿಯಾದ ಮಹಾವಿಷ್ಣುವಿನ ಹಸ್ತಗಳನ್ನು ಹಸ್ತನಕ್ಷತ್ರದ ದಿನ ಆರಾಧಿಸಬೇಕು. ಸಾಮವೇದಗಳ ಅಧಿಪತಿಗೆ ನಮಸ್ಕಾರವೆಂದು ಪುನರ್ವಸೂ ನಕ್ಷತ್ರದಲ್ಲಿ ಮುಂಬೆರಳುಗಳಿಗೆ ಪೂಜೆಯನ್ನು ಸಲ್ಲಿಸಬೇಕು.

೧೫. ಆಶ್ಲೇಷಾನಕ್ಷತ್ರದ ದಿನದಲ್ಲಿ ಮತ್ಸ್ಯಾವತಾರವೆತ್ತಿದ ಭಗವಂತನ ಉಗುರುಗಳನ್ನು ಪೂಜಿಸಬೇಕು. ಕೂರ್ಮರೂಪವನ್ನೆತ್ತಿದ ವಾಸುದೇವನ ಪಾದಗಳನ್ನು ಮರೆಹೊಗುತ್ತೇನೆಂದು ಜ್ಯೇಷ್ಠಾನಕ್ಷತ್ರದಲ್ಲಿ ಹರಿಯ ಕಂಠದೇಶವನ್ನು ಅರ್ಚನೆಮಾಡಬೇಕು.

ಶ್ರೋತ್ರೇ ವರಾಹಾಯ ನಮೋಽಭಿಪೂಜ್ಯೇ
ಜನಾರ್ದನಸ್ಯ ಶ್ರವಣೇನ ಸಮ್ಯಕ್ ।
ಪುಷ್ಯೇ ಮುಖಂ ದಾನವಸೂದನಾಯ
ನಮೋ ನೃಸಿಂಹಾಯ ಚ ಪೂಜನೀಯಂ ॥೧೬॥

ನಮೋ ನಮಃ ಕಾರಣವಾಮನಾಯ
ಸ್ವಾತೀಷು ದಂತಾಗ್ರಮಥಾರ್ಚನೀಯಂ ।
ಆಸ್ಯಂ ಹರೇರ್ಭಾರ್ಗವನಂದನಾಯ
ಸಂಪೂಜನೀಯಂ ದ್ವಿಜ ವಾರುಣೇ ತು ॥೧೭॥

ನಮೋಽಸ್ತು ರಾಮಾಯ ಮಘಾಸು ನಾಸಾ
ಸಂಪೂಜನೀಯಾ ರಘುನಂದನಸ್ಯ ।
ಮೃಗೋತ್ತಮಾಂಗೇ ನಯನೇಽಭಿಪೂಜ್ಯೇ
ನಮೋಽಸ್ತು ತೇ ರಾಮ ವಿಘೂರ್ಣಿತಾಕ್ಷ ॥೧೮॥

---

೧೬. ವರಾಹಾಯ ನಮಃ ಎಂಬ ಮಂತ್ರಪೂರ್ವಕವಾಗಿ ಶ್ರವಣನಕ್ಷತ್ರದಲ್ಲಿ ಮಹಾವಿಷ್ಣುವಿನ ಶ್ರೋತ್ರಗಳನ್ನು ಆರಾಧಿಸಬೇಕು. ದಾನವಾಂತಕನಾದ ನೃಸಿಹ್ಮನಿಗೆ ನಮಸ್ಕಾರವೆಂದು ಪುಷ್ಯನಕ್ಷತ್ರದಲ್ಲಿ ಮುಖವನ್ನು ಅರ್ಚಿಸಬೇಕು.

೧೭. ದೇವತೆಗಳನ್ನು ರಕ್ಷಿಸುವುದಕ್ಕಾಗಿ ವಾಮನಾವತಾರವೆತ್ತಿದ ಭಗವಂತನಿಗೆ ನಮಸ್ಕಾರ, ನಮಸ್ಕಾರವೆಂದೆನ್ನುತ್ತ ಸ್ವಾತೀ ನಕ್ಷತ್ರದಲ್ಲಿ ದಂತಾಗ್ರಗಳನ್ನು ಅರ್ಚಿಸಬೇಕು. ಓ ನಾರದಾ, ಪರಶುರಾಮನಿಗೆ ನಮಸ್ಕಾರವೆಂದು ಶತಭಿಷಕ್ ನಕ್ಷತ್ರದಲ್ಲಿ ಹರಿಯ ವದನವನ್ನು ಪೂಜಿಸಬೇಕು.

೧೮. ರಾಮನಿಗೆ ನಮಸ್ಕಾರವೆನ್ನುತ್ತ ಮಖಾ ನಕ್ಷತ್ರದ ದಿವಸ ಶ್ರೀರಾಮಚಂದ್ರನ ಮೂಗನ್ನು ಅರ್ಚಿಸಬೇಕು. ಮದದಿಂದ ಕಣ್ಣುಗಳು ತೊಳಲುತ್ತಿರುವ ಎಲೈ ಬಲಭದ್ರನೇ, ನಿನಗೆ ನಮಸ್ಕಾರವೆಂದು ಬೇಡಿ ಮೃಗಶೀರ್ಷ ನಕ್ಷತ್ರದಲ್ಲಿ ಕಣ್ಣುಗಳನ್ನು ಪೂಜಿಸಬೇಕು.

**ಬುದ್ಧಾಯ ಶಾಂತಾಯ ನಮೋ ಲಲಾಟಂ**
**ಚಿತ್ರಾಸು ಸಂಪೂಜ್ಯತಮಂ ಮುರಾರೇಃ ।**
**ಶಿರೋಽಭಿಪೂಜ್ಯಂ ಭರಣೀಷು ವಿಷ್ಣೋಃ**
**ನಮೋಽಸ್ತು ವಿಶ್ವೇಶ್ವರ ಕಲ್ಕಿರೂಪಿಣೇ** ॥೧೯॥
**ಆರ್ದ್ರಾಸು ಕೇಶಾಃ ಪುರುಷೋತ್ತಮಸ್ಯ**
**ಸಂಪೂಜನೀಯಾ ಹರಯೇ ನಮಸ್ತೇ ।**
**ಉಪೋಷಿತೇನರ್ಕ್ಷದಿನೇಷು ಭಕ್ತ್ಯಾ**
**ಸಂಪೂಜನೀಯಾ ದ್ವಿಜಪುಂಗವಾಃ ಸ್ಯುಃ** ॥೨೦॥
**ಪೂರ್ಣೇ ವ್ರತೇ ಸರ್ವಗುಣಾನ್ವಿತಾಯ**
**ವಾಗ್ರೂಪಶೀಲಾಯ ಚ ಸಾಮಗಾಯ ।**
**ಹೈಮೀಂ ವಿಶಾಲಾಯತಬಾಹುದಂಡಾಂ**
**ಮುಕ್ತಾಫಲೇಂದೂಪಲವಜ್ರಯುಕ್ತಾಂ** ॥೨೧॥
**ಜಲಸ್ಯಪೂರ್ಣೇ ಕಲಶೇ ನಿವಿಷ್ಟಾ**
**ಮರ್ಚಾಂ ಹರೇರ್ವಸ್ತ್ರಗವಾ ಸಹೈವ ।**

---

೧೯. ಶಾಂತಾತ್ಮನಾದ ಬುದ್ಧನಿಗೆ ನಮಸ್ಕಾರವೆಂದು ಚಿತ್ತಾ ನಕ್ಷತ್ರದಲ್ಲಿ ಮುರಾರಿಯ ಪೂಜ್ಯತಮವಾದ ಹಣೆಯನ್ನೂ, ಕಲ್ಕಿರೂಪವನ್ನು ಧಾರಣೆಮಾಡುವ ವಿಶ್ವೇಶ್ವರನಿಗೆ ನಮಸ್ಕಾರವೆನ್ನುತ್ತ ಭರಣೀ ನಕ್ಷತ್ರದಲ್ಲಿ ಶಿರಸ್ಸನ್ನೂ ಆರಾಧಿಸ ಬೇಕು.

೨೦. ಓ ಹರೀ, ನಿನಗೆ ನಮಸ್ಕಾರವೆಂದು ಹೇಳಿ ಆರ್ದ್ರಾ ನಕ್ಷತ್ರದಲ್ಲಿ ಪುರುಷೋತ್ತಮನ ಕೇಶಗಳನ್ನು ಅರ್ಚಿಸಬೇಕು. ಆಯಾ ನಕ್ಷತ್ರಗಳ ದಿವಸಗಳಲ್ಲಿ ಉಪವಾಸವಿದ್ದು ಭಕ್ತಿಯಿಂದ ದ್ವಿಜೋತ್ತಮರನ್ನು ಸತ್ಕರಿಸಬೇಕು.

೨೧-೨೨. ವ್ರತವು ಸಾಂಗವಾಗಿ ಮುಗಿದ ಮೇಲೆ ವಿಶಾಲವೂ ದೀರ್ಘವೂ ಆದ ಬಾಹುಗಳಿಂದ ಕೂಡಿ ಮುತ್ತು, ಚಂದ್ರಕಾಂತ, ವಜ್ರ ಇವುಗಳ ಆಭರಣ ಗಳಿಂದ ಅಲಂಕೃತವಾದ ವಾಸುದೇವನ ಮೂರ್ತಿಯನ್ನು ಪೂರ್ಣಕುಂಭದಲ್ಲಿರಿಸಿ ದ್ವಿಜೋತ್ತಮನಿಗೆ ದಾನಮಾಡಬೇಕು. ಆತನು ಸಕಲ ಸದ್ಗುಣಯುಕ್ತನೂ, ಮಾತು, ನಡತೆ, ರೂಪು ಇವುಗಳಲ್ಲಿ ಉತ್ತಮನೂ, ಸಾಮವೇದಾಧ್ಯಾಯಿಯೂ,

**ಶಯ್ಯಾಂ ತಥೋಪಸ್ಕರಭಾಜನಾದಿ**
**ಯುಕ್ತಾಂ ಪ್ರದದ್ಯಾದ್ದ್ವಿಜಪುಂಗವಾಯ ||೨೨||**

**ಯದ್ಯಸ್ತಿ ಯತ್ಕಿಂಚಿದಿಹಾಸ್ತಿ ದೇಯಂ**
**ದದ್ಯಾದ್ದ್ವಿಜಾಯಾತ್ಮಹಿತಾಯ ಸರ್ವಂ ।**
**ಮನೋರಥಂ ನಃ ಸಫಲೀಕುರುಷ್ವ**
**ಹಿರಣ್ಯಗರ್ಭಾಚ್ಯುತ ರುದ್ರರೂಪಿನ್ ||೨೩||**

**ಸಲಕ್ಷ್ಮೀಕಂ ಸಭಾರ್ಯಾಯ ಕಾಂಚನಂ ಪುರುಷೋತ್ತಮಂ ।**
**ಶಯ್ಯಾಂ ಚ ದದ್ಯಾನ್ಮಂತ್ರೇಣ ಗ್ರಂಥಿಭೇದವಿವರ್ಜಿತಂ ||೨೪||**

**ಯಥಾ ನ ವಿಷ್ಣುಭಕ್ತಾನಾಂ ವೃಜಿನಂ ಜಾಯತೇ ಕ್ವಚಿತ್ ।**
**ತಥಾ ಸುರೂಪತಾರೋಗ್ಯಂ ಕೇಶವೇ ಭಕ್ತಿಮುತ್ತಮಾಂ ||೨೫||**

**ಯಥಾ ನ ಲಕ್ಷ್ಮ್ಯಾ ಶಯನಂ ತವ ಶೂನ್ಯಂ ಜನಾರ್ದನ ।**
**ಶಯ್ಯಾ ಮಮಾಪ್ಯಶೂನ್ಯಾಸ್ತು ಕೃಷ್ಣ ಜನ್ಮನಿ ಜನ್ಮನಿ ||೨೬||**

---

ಆಗಿರಬೇಕು. ವಸ್ತ್ರದಾನ, ಗೋದಾನ, ಶಯ್ಯಾದಾನ, ಗೃಹಕೃತ್ಯೋಪಯುಕ್ತವಾದ ಪಾತ್ರಾದಿವಸ್ತುಗಳ ದಾನ ಇವೆಲ್ಲವನ್ನೂ ಪ್ರತಿಮಾದಾನದೊಡನೆ ಮಾಡಬೇಕು.

೨೩. ದಾನಮಾಡತಕ್ಕುದೇನಾದರೂ ಇದ್ದರೆ ಅದೆಲ್ಲವನ್ನೂ ದ್ವಿಜನಿಗೆ ಕೊಡಬೇಕು. ಅದರಿಂದ ತನಗೆ ಹಿತವುಂಟು. "ಬ್ರಹ್ಮ ವಿಷ್ಣು ರುದ್ರ ರೂಪನಾದ ಎಲೈ ದ್ವಿಜೋತ್ತಮಾ, ನಮ್ಮ ಇಷ್ಟಾರ್ಥವನ್ನು ಈಡೇರಿಸು" ಎಂದು ಪ್ರಾರ್ಥಿಸಬೇಕು.

೨೪. ಲಕ್ಷ್ಮೀವಿಶಿಷ್ಟನಾದ ನಾರಾಯಣನ ಸುವರ್ಣವಿಗ್ರಹವನ್ನು ಪತ್ನೀ ಸಹಿತನಾದ ಬ್ರಾಹ್ಮಣನಿಗೆ ದಾನಮಾಡಬೇಕು. ಗಂಟೂ ಹರಕೂ ಇಲ್ಲದ ಹಾಸಿಗೆಯನ್ನೂ ಸಹ ಮಂತ್ರಪೂರ್ವಕವಾಗಿ ಕೊಡಬೇಕು.

೨೫. "ವಿಷ್ಣುಭಕ್ತರಿಗೆ ಎಂದೆಂದಿಗೂ ಪಾಪವು ಬಾರದು. ಹಾಗೆಯೇ ಅವರಿಗೆ ಸೌಂದರ್ಯವೂ, ಆರೋಗ್ಯವೂ ವಿಷ್ಣುಭಕ್ತಿಯೂ ಸ್ಥಿರವಾಗಿರುವುವು.

೨೬. ಓ ಜನಾರ್ದನಾ, ವಾಸುದೇವಾ, ನಿನ್ನ ಹಾಸಿಗೆಯು ಯಾವಾಗಲೂ ಲಕ್ಷ್ಮಿಯಿಂದ ಕೂಡಿರುವುದು. ಅದು ಎಂದಿಗೂ ಬರಿದಾಗಿರದು. ಹಾಗೆಯೇ ಪ್ರತಿಯೊಂದು ಜನ್ಮದಲ್ಲೂ ನನ್ನ ಹಾಸಿಗೆಯೂ ಶೂನ್ಯವಾಗದಿರಲಿ." (ಪ್ರತಿಜನ್ಮದಲ್ಲಿಯೂ ಶಾಶ್ವತವಾದ ದಾಂಪತ್ಯ ಸೌಖ್ಯವು ಲಭಿಸಬೇಕೆಂದು ಅಭಿಪ್ರಾಯ.)

ಏವಂ ನಿವೇದ್ಯ ತತ್ಸರ್ವಂ ವಸ್ತ್ರಮಾಲ್ಯಾನುಲೇಪನಂ ।
ನಕ್ಷತ್ರಪುರುಷಜ್ಞಾಯ ವಿಪ್ರಾಯಾಥ ವಿಸರ್ಜಯೇತ್ ॥೨೭॥

ಭುಂಜೀತಾತೈಲಲವಣಂ ಸರ್ವರ್ಕ್ಷೇಷ್ವಪ್ಯುಪೋಷಿತಃ ।
ಭೋಜನಂ ಚ ಯಥಾಶಕ್ತಿ ವಿತ್ತಶಾಠ್ಯಂ ವಿವರ್ಜಯೇತ್ ॥೨೮॥

ಇತಿ ನಕ್ಷತ್ರಪುರುಷಮುಪಾಸ್ಯ ವಿಧಿವತ್ಸ್ವಯಂ ।
ಸರ್ವಾನ್ ಕಾಮಾನವಾಪ್ನೋತಿ ವಿಷ್ಣುಲೋಕೇ ಮಹೀಯತೇ ॥೨೯॥

ಬ್ರಹ್ಮಹತ್ಯಾದಿಕಂ ಕಿಂಚಿದಿಹ ವಾಽಮುತ್ರ ವಾ ಕೃತಂ ।
ಆತ್ಮನಾ ವಾಥ ಪಿತೃಭಿಸ್ತತ್ಸರ್ವಂ ಕ್ಷಯಮಾಪ್ನುಯಾತ್ ॥೩೦॥

ಇತಿ ಪಠತಿ ಶೃಣೋತಿ ಯಶ್ಚ ಭಕ್ತ್ಯಾ
ಪುರುಷವರೋ ವ್ರತಮಂಗನಾಽಥ ಕುರ್ಯಾತ್ ।

---

೨೭. ಹೀಗೆಂದು ಭಗವಂತನಲ್ಲಿ ವಿಜ್ಞಾಪನೆಮಾಡಿ, ಗಂಧ ಪುಷ್ಪ ವಸ್ತ್ರಾದಿಗಳೆಲ್ಲವನ್ನೂ ನಕ್ಷತ್ರಪುರುಷವ್ರತದ ವಿಧಾನವನ್ನು ಬಲ್ಲ ಬ್ರಾಹ್ಮಣನಿಗೆ ದಾನ ಮಾಡಬೇಕು.

೨೮. ಹಿಂದೆ ಹೇಳಿದ ದಿನಗಳಲ್ಲೆಲ್ಲ ಉಪವಾಸವಿದ್ದು, ವ್ರತವು ಸಾಂಗವಾಗಿ ಮುಗಿಯುವ ವರೆಗೆ ಎಣ್ಣೆಯನ್ನೂ ಉಪ್ಪನ್ನೂ ಬಿಟ್ಟು ಭೋಜನಮಾಡಬೇಕು. ತನ್ನ ಯೋಗ್ಯತಾನುಸಾರವಾಗಿ ಅನ್ನದಾನ ಮಾಡಬೇಕು. ದುಡ್ಡಿನಲ್ಲಿ ಜಿಪುಣತನವನ್ನು ಮಾಡಬಾರದು.

೨೯. ಹೀಗೆ ನಕ್ಷತ್ರಪುರುಷನಾಮಕನಾದ ವಾಸುದೇವನನ್ನು ಶಾಸ್ತ್ರೋಕ್ತವಾಗಿ ಉಪಾಸನೆ ಮಾಡಿದವನು ಸಕಲೇಷ್ಟಾರ್ಥಗಳನ್ನೂ ಪಡೆಯುವನು. ವಿಷ್ಣುಲೋಕವನ್ನು ಸೇರಿ ಮಾನ್ಯನೆನಿಸುವನು.

೩೦. ತಾನೋ, ತನ್ನ ಪಿತೃಗಳೋ ಈ ಜನ್ಮದಲ್ಲಾಗಲಿ ಬೇರೆ ಜನ್ಮದಲ್ಲಾಗಲಿ ಮಾಡಿರಬಹುದಾದ ಬ್ರಹ್ಮಹತ್ಯಾದಿ ಪಾತಕವೇನೇ ಇದ್ದರೂ ಅವೆಲ್ಲವೂ ಈ ವ್ರತದಿಂದ ಕ್ಷಯಿಸುವುದು.

೩೧. ಮೇಲೆ ಹೇಳಿದ ನಕ್ಷತ್ರಪುರುಷವ್ರತವನ್ನು ಭಕ್ತಿಯಿಂದ ಓದಲಿ, ಕೇಳಲಿ, ಇಲ್ಲವೇ ಆಚರಿಸಲಿ ಆ ಸತ್ಪುರುಷನು ಅಥವಾ ನಾರೀಮಣಿಯು

**ಕಲಿಕಲುಷವಿದಾರಣಂ ಮುರಾರೇಃ**
**ಸಕಲವಿಭೂತಿಫಲಪ್ರದಂ ಚ ಪುಂಸಾಂ** ॥೩೧॥

**ಇತಿ ಶ್ರೀಮಾತ್ಸ್ಯೇಮಹಾಪುರಾಣೇ ನಕ್ಷತ್ರಪುರುಷವ್ರತಂ ನಾಮ ಚತುಃಪಂಚಾಶೋಽಧ್ಯಾಯಃ**

---

ಕಲಿಸಂಬಂಧದಿಂದುಂಟಾದ ಸಕಲ ಪಾಪಗಳನ್ನೂ ಕಳೆದುಕೊಳ್ಳುವರು. ಮನುಷ್ಯರಿಗೆ ಇಷ್ಟವಾದ ಸಕಲ ಐಶ್ವರ್ಯಗಳೂ ಅವರಿಗೆ ಸಿದ್ಧಿಸುವುವು.

### ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ನಕ್ಷತ್ರ ಪುರುಷವ್ರತವನ್ನು ವರ್ಣಿಸಿದೆ.

ಚೈತ್ರಮಾಸದಲ್ಲಿ ದ್ವಿಜೋತ್ತಮರಿಂದ ಅನುಜ್ಞೆಯನ್ನು ಪಡೆದು ಮೂಲಾ ನಕ್ಷತ್ರ ಮೊದಲುಗೊಂಡು ಒಂದೊಂದು ನಕ್ಷತ್ರದಲ್ಲೂ ವಾಸುದೇವನ ಸುವರ್ಣ ಮೂರ್ತಿಯ ಪ್ರತಿಯೊಂದು ಅವಯವವನ್ನೂ ಕ್ರಮವಾಗಿ ಅರ್ಚಿಸಬೇಕು. ವ್ರತವು ಸಾಂಗವಾಗಿ ಮುಗಿದ ಮೇಲೆ ಆ ಅರ್ಚಾಮೂರ್ತಿಯನ್ನು ಸಕಲ ದಾನಗಳೊಡನೆ ಸಾಮವೇದಾಧ್ಯಾಯಿಯಾದ ಬ್ರಾಹ್ಮಣನಿಗೆ ಕೊಡಬೇಕು. ಭೋಜನಾದಿಗಳಿಂದ ದ್ವಿಜರನ್ನು ಸತ್ಕರಿಸಬೇಕು. ಈ ವ್ರತದ ಆಚರಣೆಯಿಂದ ಸಕಲ ಪಾಪಗಳೂ ಪರಿಹಾರವಾಗುವುವು; ಇಷ್ಟಾರ್ಥವು ಲಭಿಸುವುದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ನಕ್ಷತ್ರಪುರುಷವ್ರತವೆಂಬ
ಐವತ್ತನಾಲ್ಕನೆಯ ಅಧ್ಯಾಯವು ಮುಗಿದುದು.

*

## ಅಥ ಪಂಚಪಂಚಾಶೋऽಧ್ಯಾಯಃ

॥ ನಾರದ ಉವಾಚ ॥

ಉಪವಾಸೇಷ್ವಶಕ್ತಸ್ಯ ತದೇವ ಫಲಮಿಚ್ಛತಃ ।
ಅನಭ್ಯಾಸೇನ ರೋಗಾದ್ವಾ ಕಿಮಿಷ್ಟಂ ವ್ರತಮುತ್ತಮಂ ॥ ೧ ॥

॥ ಈಶ್ವರ ಉವಾಚ ॥

ಉಪವಾಸೇऽಪ್ಯಶಕ್ತಾನಾಂ ನಕ್ತಂ ಭೋಜನಮಿಷ್ಯತೇ ।
ಯಸ್ಮಿನ್ ವ್ರತೇ ತದಪ್ಯತ್ರ ಶ್ರೂಯತಾಮಕ್ಷಯಂ ಮಹತ್ ॥ ೨ ॥

ಆದಿತ್ಯಶಯನಂ ನಾಮ ಯಥಾವಚ್ಛಂಕರಾರ್ಚನಂ ।
ಯೇಷು ನಕ್ಷತ್ರಯೋಗೇಷು ಪುರಾಣಜ್ಞಾಃ ಪ್ರಚಕ್ಷತೇ ॥ ೩ ॥

ಯದಾ ಹಸ್ತೇನ ಸಪ್ತಮ್ಯಾಮಾದಿತ್ಯಸ್ಯ ದಿನಂ ಭವೇತ್ ।
ಸೂರ್ಯಸ್ಯ ಚಾಥ ಸಂಕ್ರಾಂತಿಸ್ತಿಥಿಸ್ಸಾ ಸಾರ್ವಕಾಮಿಕೀ ॥ ೪ ॥

---

೧. ನಾರದಮುನಿ ಹೇಳಿದನು.—ಅಭ್ಯಾಸವಿಲ್ಲದೆ ಇರುವುದರಿಂದಲೋ, ರೋಗದಿಂದಲೋ ಉಪವಾಸಮಾಡಲು ಕೈಲಾಗದ ಮನುಷ್ಯನು ಅದೇ ಫಲವನ್ನು ಅಪೇಕ್ಷಿಸಿದರೆ ಅವನು ಮಾಡಬೇಕಾದ ಉತ್ತಮವ್ರತವು ಯಾವುದು ?

೨. ಈಶ್ವರನು ಹೇಳಿದನು.—ಉಪವಾಸವಿರಲು ಅಶಕ್ತರಾದವರು ರಾತ್ರಿ ಭೋಜನವನ್ನು ಮಾಡಬಹುದು. ಅದು ಯಾವ ವ್ರತದಲ್ಲೆಂದರೆ ಅಕ್ಷಯಫಲಪ್ರದವಾದ ಆ ಮಹಾವ್ರತವನ್ನು ಹೇಳುವೆನು ಕೇಳು.

೩. ಶಾಸ್ತ್ರೋಕ್ತವಿಧಿಯಿಂದ ಈಶ್ವರನನ್ನು ಪೂಜಿಸುವ ಆದಿತ್ಯಶಯನವೆಂಬ ವ್ರತವೊಂದುಂಟು. ಅದನ್ನು ಕೆಲವು ಗೊತ್ತಾದ ನಕ್ಷತ್ರಗಳು ಒದಗಿದ ದಿನ ನೆರವೇರಿಸಬೇಕೆಂದು ಪುರಾಣಜ್ಞರು ಹೇಳುತ್ತಾರೆ.

೪. ಹಸ್ತನಕ್ಷತ್ರಸಹಿತವಾದ ಸಪ್ತಮಿಯ ದಿನ ಭಾನುವಾರವೂ, ಸೂರ್ಯನ ಸಂಕ್ರಮಣವೂ ಒದಗಿದರೆ ಆ ತಿಥಿಯು ಸಕಲೇಷ್ಟಾರ್ಥಗಳನ್ನೂ ಪೂರ್ಣ ಮಾಡತಕ್ಕುದು.

**ಉಮಾಮಹೇಶ್ವರಸ್ಯಾರ್ಚಾಮರ್ಚಯೇತ್ಸೂರ್ಯನಾಮಭಿಃ ।**
**ಸೂರ್ಯಾರ್ಚಾಂ ಶಿವಲಿಂಗೇ ಚ ಪ್ರಕುರ್ವನ್ ಪೂಜಯೇದ್ಯತಃ ॥ ೫ ॥**

**ಉಮಾಪತೇ ರವೇರ್ವಾಪಿ ನ ಭೇದೋ ದೃಶ್ಯತೇ ಕ್ವಚಿತ್ ।**
**ಯಸ್ಮಾತ್ತಸ್ಮಾನ್ಮುನಿಶ್ರೇಷ್ಠ ಗೃಹೇ ಶಂಭುಂ ಸಮರ್ಚಯೇತ್ ॥ ೬ ॥**

**ಹಸ್ತೇ ಚ ಸೂರ್ಯಾಯ ನಮೋಽಸ್ತು ಪಾದಾ**
**ವರ್ಕಾಯ ಚಿತ್ರಾಸು ಚ ಗುಲ್ಫದೇಶಂ ।**
**ಸ್ವಾತೀಷು ಜಂಘೇ ಪುರುಷೋತ್ತಮಾಯ**
**ಧಾತ್ರೇ ವಿಶಾಖಾಸು ಚ ಜಾನುದೇಶಂ ॥ ೭ ॥**

**ತಥಾನುರಾಧಾಸು ನಮೋಽಭಿಪೂಜ್ಯ**
**ಮೂರುದ್ವಯಂ ಚೈವ ಸಹಸ್ರಭಾನೋಃ ।**
**ಜ್ಯೇಷ್ಠಾಸ್ವನಂಗಾಯ ನಮೋಽಸ್ತು ಗುಹ್ಯ**
**ಮಿಂದ್ರಾಯ ಸೋಮಾಯ ಕಟೀ ಚ ಮೂಲೇ ॥ ೮ ॥**

---

೫. ಸೂರ್ಯನ ನಾಮಗಳಿಂದ ಉಮಾಮಹೇಶ್ವರನ ಅರ್ಚಾಮೂರ್ತಿಯನ್ನು ಪೂಜಿಸಬೇಕು. ಹಾಗೆಯೇ ನಿಯಮವಂತನಾಗಿ ಶಿವಲಿಂಗದಲ್ಲಿ ಸೂರ್ಯದೇವನ ಅರ್ಚನೆಯನ್ನೂ ಸಹ ನಡೆಸಬೇಕು.

೬. ಪಾರ್ವತೀರಮಣನಾದ ಈಶ್ವರನಿಗೂ ಸೂರ್ಯನಿಗೂ ಭೇದವೆಂದಿಗೂ ಇಲ್ಲ. ಆದುದರಿಂದ, ಮುನಿಶ್ರೇಷ್ಠನೆನಿಸಿದ ಓ ನಾರದಾ, ಮನೆಯಲ್ಲಿ ಪರಮೇಶ್ವರನನ್ನು ಪೂಜಿಸಬೇಕು.

೭. ಸರ್ವಕರ್ಮಪ್ರೇರಕನೆನಿಸಿದ ಸೂರ್ಯನಿಗೆ ನಮಸ್ಕಾರವೆಂದು ಹಸ್ತ ನಕ್ಷತ್ರದಲ್ಲಿ ಪಾದಗಳನ್ನೂ, ಪೂಜ್ಯನಿಗೆ ನಮಸ್ಕಾರವೆಂದು ಚಿತ್ತಾನಕ್ಷತ್ರದಲ್ಲಿ ಹಿಮ್ಮಡಿಯನ್ನೂ, ಪುರುಷೋತ್ತಮನಿಗೆ ನಮಸ್ಕಾರವೆಂದು ಸ್ವಾತೀ ನಕ್ಷತ್ರದಲ್ಲಿ ಮೊಣಕಾಲುಗಳನ್ನೂ, ಸೃಷ್ಟಿಕರ್ತನಿಗೆ ನಮಸ್ಕಾರವೆಂದು ವಿಶಾಖಾನಕ್ಷತ್ರದಲ್ಲಿ ಮುಂಡಿಯನ್ನೂ ಅರ್ಚಿಸಬೇಕು.

೮. ಹಾಗೆಯೇ ಅನೂರಾಧಾ ನಕ್ಷತ್ರದಲ್ಲಿ ಸಹಸ್ರಸೂರ್ಯಪ್ರಕಾಶನಾದ ಪರಮೇಶ್ವರನ ಪೂಜ್ಯವಾದ ತೊಡೆಗಳೆರಡನ್ನೂ ನಮಸ್ಕಾರವೆಂದು ಹೇಳುತ್ತ ಆರಾಧಿಸಬೇಕು. ಕರ್ಮಶರೀರ ರಹಿತನಾದವನಿಗೆ ನಮಸ್ಕಾರವೆನ್ನುತ್ತ ಜ್ಯೇಷ್ಠಾನಕ್ಷತ್ರದಲ್ಲಿ ಗುಪ್ತದೇಶವನ್ನೂ, ಇಂದ್ರನಿಗೂ ಸೋಮನಿಗೂ ನಮಸ್ಕಾರವೆಂದು ಮೂಲಾ ನಕ್ಷತ್ರದಲ್ಲಿ ಸೊಂಟವನ್ನೂ ಪೂಜಿಸಬೇಕು.

ಪೂರ್ವೋತ್ತರಾಷಾಢಯುಗೇ ಚ ನಾಭಿಂ
ತ್ವಷ್ಟ್ರೇ ನಮಃ ಸಪ್ತತುರಂಗಮಾಯ ।
ತೀಕ್ಷ್ಣಾಂಶವೇ ಚ ಶ್ರವಣೇ ಚ ಕುಕ್ಷಿಂ
ಪೃಷ್ಠಂ ಧನಿಷ್ಠಾಸು ವಿಕರ್ತನಾಯ ॥ ೯ ॥

ಚಕ್ಷುಃಸ್ಥಲಂ ಧ್ವಾಂತವಿನಾಶನಾಯ
ಜಲಾಧಿಪರ್ಕ್ಷೇ ಪರಿಪೂಜನೀಯಂ ।
ಪೂರ್ವೋತ್ತರಾಭಾದ್ರಪದಾದ್ವಯೇ ಚ
ಬಾಹೂ ನಮಶ್ಚಂಡಕರಾಯ ಪೂಜ್ಯೌ ॥೧೦॥

ಸಾಮ್ನಾಮಧೀಶಾಯ ಕರದ್ವಯಂ ಚ
ಸಂಪೂಜನೀಯಂ ದ್ವಿಜ ರೇವತೀಷು ।
ನಖಾನಿ ಪೂಜ್ಯಾನಿ ತಥಾಽಶ್ವಿನೀಷು
ನಮೋಽಸ್ತು ಸಪ್ತಾಶ್ವಧುರಂಧರಾಯ ॥೧೧॥

---

೯. ಪೂರ್ವಾಷಾಢಾ ಮತ್ತು ಉತ್ತರಾಷಾಢಾ ನಕ್ಷತ್ರಗಳಲ್ಲಿ ತ್ವಷ್ಟ್ರನಿಗೂ, ಸಪ್ತಾಶ್ವನಿಗೂ ನಮಸ್ಕಾರವೆಂದು ನಾಭಿ ಪ್ರದೇಶವನ್ನು ಪೂಜಿಸಬೇಕು. ಶ್ರವಣ ನಕ್ಷತ್ರದಲ್ಲಿ ಉಷ್ಣಕಿರಣನಿಗೆ ನಮಸ್ಕಾರವೆಂದು ಉದರವನ್ನೂ, ಭಕ್ತರ ರೋಗ ಪರಿಹಾರಕನಿಗೆ ನಮಸ್ಕಾರವೆಂದು ಧನಿಷ್ಠಾ ನಕ್ಷತ್ರದಲ್ಲಿ ಬೆನ್ನನ್ನೂ ಅರ್ಚಿಸಬೇಕು.

೧೦. ಶತಭಿಷಙ್ನಕ್ಷತ್ರದಲ್ಲಿ ಅಂಧಕಾರವನ್ನು ಕಳೆಯುವಾತನಿಗೆ ನಮಸ್ಕಾರವೆನ್ನುತ್ತ ನೇತ್ರಗಳನ್ನೂ, ಪೂರ್ವಾಭಾದ್ರೆ ಮತ್ತು ಉತ್ತರಾಭಾದ್ರೆಗಳೆಂಬ ಎರಡು ನಕ್ಷತ್ರಗಳಲ್ಲಿ ಕಿರಣಗಳು ಉಗ್ರವಾಗಿರುವವನಿಗೆ ನಮಸ್ಕಾರವೆಂದು ಬಾಹುಗಳನ್ನೂ ಪೂಜಿಸಬೇಕು.

೧೧. ಎಲೈ ನಾರದಮಹರ್ಷಿಯೇ, ರೇವತೀ ನಕ್ಷತ್ರದಲ್ಲಿ ಸಾಮವೇದಗಳ ಅಧಿಪತಿಗೆ ನಮಸ್ಕಾರವೆಂದು ಹಸ್ತಗಳೆರಡನ್ನೂ ಅರ್ಚಿಸಬೇಕು. ಏಳು ಕುದುರೆಗಳನ್ನು ಹೂಡಿದ ತೇರಿನಲ್ಲಿ ಸಂಚರಿಸುವಾತನಿಗೆ ನಮಸ್ಕಾರವೆಂದು ಅಶ್ವಿನೀ ನಕ್ಷತ್ರದಲ್ಲಿ ನಖಗಳನ್ನು ಪೂಜಿಸಬೇಕು.

**ಕಠೋರಧಾಮ್ನೇ ಭರಣೀಷು ಕಂಠಂ**
**ದಿವಾಕರಾಯೇತ್ಯಭಿಪೂಜನೀಯಂ ।**
**ಗ್ರೀವಾಗ್ನಿಋಕ್ಷೇಽಧರಮಂಬುಜೇಶೇ**
**ಸಂಪೂಜಯೇನ್ನಾರದ ರೋಹಿಣೀಷು** ॥೧೨॥

**ಮೃಗೋತ್ತಮಾಂಗೇ ದಶನಾ ಮುರಾರೇಃ**
**ಸಂಪೂಜನೀಯಾ ಹರಯೇ ನಮಸ್ತೇ ।**
**ನಮಸ್ಸವಿತ್ರೇ ರಸನಾಂ ಶಂಕರೇ ಚ**
**ನಾಸಾಭಿಪೂಜ್ಯಾ ಚ ಪುನರ್ವಸೌ ಚ** ॥೧೩॥

**ಲಲಾಟಮಂಭೋರುಹವಲ್ಲಭಾಯ**
**ಪುಷ್ಯೇಽಲಕಾ ವೇದಶರೀರಧಾರಿಣೇ ।**
**ಸಾರ್ಪೇಽಥ ಮೌಲಿಂ ವಿಬುಧಪ್ರಿಯಾಯ**
**ಮಘಾಸು ಕರ್ಣಾವಿತಿ ಗೌಗಣೇಶೇ** ॥೧೪॥

---

೧೨. ಉಗ್ರತೇಜಸ್ವಿಯಾಗಿ ಹಗಲುಹೊತ್ತಿನಲ್ಲಿ ಬೆಳಗುವಾತನಿಗೆ ನಮಸ್ಕಾರವೆಂದು ಕಂಠವನ್ನು ಭರಣೀನಕ್ಷತ್ರದಲ್ಲಿ ಪೂಜಿಸಬೇಕು. ಓ ನಾರದಾ, ಕಮಲದ ಅಧಿಪತಿಗೆ ನಮಸ್ಕಾರವನ್ನು ಸಲ್ಲಿಸಿ ಕೃತ್ತಿಕಾ ನಕ್ಷತ್ರದ ದಿನ ಕುತ್ತಿಗೆಯನ್ನೂ, ರೋಹಿಣೀ ನಕ್ಷತ್ರದಲ್ಲಿ ತುಟಿಯನ್ನೂ ಅರ್ಚಿಸಬೇಕು.

೧೩. ಭಕ್ತರ ಅನಿಷ್ಟವನ್ನು ಕಳೆಯುವವನಿಗೆ ನಮಸ್ಕಾರವೆಂದು ಬೇಡಿ, ಮೃಗಶೀರ್ಷ ನಕ್ಷತ್ರದಲ್ಲಿ ಪರಮೇಶ್ವರನ ದಂತವನ್ನು ಪೂಜಿಸಬೇಕು. ಸರ್ವ ಪ್ರೇರಕನಿಗೆ ನಮಸ್ಕಾರವೆಂದು ನಾಲಗೆಯನ್ನು ಆರ್ದ್ರಾ ನಕ್ಷತ್ರದಲ್ಲೂ, ನಾಸಿಕೆಯನ್ನು ಪುನರ್ವಸುವಿನಲ್ಲೂ ಆರಾಧಿಸಬೇಕು.

೧೪. ಕಮಲನಾಥನಿಗೆ ನಮಸ್ಕಾರವೆಂದು ಪುಷ್ಯನಕ್ಷತ್ರದಲ್ಲಿ ಹಣೆಯನ್ನೂ, ವೇದಮಯವಾದ ಶರೀರವುಳ್ಳಾತನಿಗೆ ನಮಸ್ಕಾರವೆಂದು ಆಶ್ಲೇಷಾನಕ್ಷತ್ರದಲ್ಲಿ ಮುಂಗುರಳನ್ನೂ, ಸುರಪ್ರಿಯನಿಗೆ ನಮಸ್ಕಾರವೆಂದು ಮಘಾನಕ್ಷತ್ರದಲ್ಲಿ ಶಿರಸ್ಸನ್ನೂ, ಕಿರಣರಾಶಿಯ ಅಧಿಪತಿಗೆ ನಮಸ್ಕಾರವೆಂದು ಶ್ರೋತ್ರಗಳನ್ನೂ ಪೂಜಿಸಬೇಕು.

**ಪೂರ್ವಾಸು ಗೋಬ್ರಾಹ್ಮಣನಂದನಾಯ**
**ನೇತ್ರಾಣಿ ಸಂಪೂಜ್ಯತಮಾನಿ ಶಂಭೋಃ ।**
**ಅಥೋತ್ತರಾಫಲ್ಗುನಿಭೇ ಭ್ರುವೌ ಚ**
**ವಿಶ್ವೇಶ್ವರಾಯೇತಿ ಚ ಪೂಜನೀಯೇ** ||೧೫||

**ನಮೋಽಸ್ತು ಪಾಶಾಂಕುಶಶೂಲಪದ್ಮ**
**ಕಪಾಲಸರ್ಪೇಂದುಧನುರ್ಧರಾಯ ।**
**ಗಜಾಸುರಾನಂಗಪುರಾಂಧಕಾದಿ**
**ವಿನಾಶಮೂಲಾಯ ನಮಶ್ಶಿವಾಯ** ||೧೬||

**ಇತ್ಯಾದಿ ಚಾಸ್ತ್ರಾಣಿ ಚ ಪೂಜ್ಯ ನಿತ್ಯಂ**
**ವಿಶ್ವೇಶ್ವರಾಯೇತಿ ಶಿವೋಽಭಿಪೂಜ್ಯಃ ।**
**ಭೋಕ್ತವ್ಯಮತ್ರೈವಮತೈಲಶಾಕ**
**ಮಮಾಂಸಮಕ್ಷಾರಮಭುಕ್ತಶೇಷಂ** ||೧೭||

---

೧೫. ಪೂರ್ವಫಲ್ಗುನಿಯಲ್ಲಿ ಗೋಬ್ರಾಹ್ಮಣರ ಆನಂದದಾಯಕನಿಗೆ ನಮಸ್ಕಾರವೆಂದು ಪರಮೇಶ್ವರನ ಪೂಜ್ಯತಮಗಳಾದ ನೇತ್ರಗಳನ್ನು ಅರ್ಚಿಸಬೇಕು. ಬಳಿಕ ಉತ್ತರಫಲ್ಗುನಿಯಲ್ಲಿ ವಿಶ್ವೇಶರನಿಗೆ ನಮಸ್ಕಾರವೆಂದು ಹುಬ್ಬುಗಳನ್ನು ಪೂಜಿಸಬೇಕು.

೧೬. ಪಾಶಾಯುಧ, ಅಂಕುಶ, ಶೂಲ, ಪದ್ಮ, ಕಪಾಲ ಸರ್ಪ, ಚಂದ್ರ, ಪಿನಾಕವೆಂಬ ಬಿಲ್ಲು ಇವುಗಳನ್ನು ಧರಿಸಿರುವಾತನಿಗೆ ನಮಸ್ಕಾರ. ಗಜಾಸುರ, ಮನ್ಮಥ, ತ್ರಿಪುರಾಸುರರು, ಅಂಧಕಾಸುರ ಮುಂತಾದ ದುಷ್ಟರನ್ನು ಸಂಹರಿಸಿದ ಪರಮೇಶ್ವರನಿಗೆ ನಮಸ್ಕಾರ.

೧೭. ಇವೇ ಮೊದಲಾದ ಅಸ್ತ್ರಗಳನ್ನು ನಿತ್ಯವೂ ಪೂಜಿಸಬೇಕು. ವಿಶ್ವೇಶ್ವರನಿಗೆ ನಮಸ್ಕಾರವೆಂದು ಶಿವನನ್ನು ಆರಾಧಿಸಬೇಕು. ಈ ವ್ರತವನ್ನು ಆಚರಿಸುವಾಗ ಎಣ್ಣೆ, ತರಕಾರಿ, ಮಾಂಸ, ಉಪ್ಪು ಇವನ್ನು ತಿನ್ನಬಾರದು. ಶೇಷವು ಉಳಿಯದಂತೆ ಭೋಜನಮಾಡಬೇಕು.

ಇತ್ಯೇವಂ ದ್ವಿಜ ನಕ್ತಾನಿ ಕೃತ್ವಾ ದದ್ಯಾತ್ಪುನರ್ವಸೌ।
ಶಾಲೇಯತಂಡುಲಪ್ರಸ್ಥಮೌದುಂಬರಮಯೇ ಘೃತಂ ॥೧೮॥

ಸಂಸ್ಥಾಪ್ಯ ಪಾತ್ರೇ ವಿಪ್ರಾಯ ಸಹಿರಣ್ಯಂ ನಿವೇದಯೇತ್।
ಸಪ್ತಮೇ ವಸ್ತ್ರಯುಗ್ಮಂ ಚ ಪಾರಣೇ ತ್ವಧಿಕಂ ಭವೇತ್ ॥೧೯॥

ಚತುರ್ದಶೇ ತು ಸಂಪ್ರಾಪ್ತೇ ಪಾರಣೇ ನಾರದಾಬ್ದಿಕೇ।
ಬ್ರಾಹ್ಮಣಾನ್ ಭೋಜಯೇದ್ಭಕ್ತ್ಯಾ ಗುಡಕ್ಷೀರಘೃತಾದಿಭಿಃ ॥೨೦॥

ಕೃತ್ವಾ ತು ಕಾಂಚನಂ ಪದ್ಮಮಷ್ಟಪತ್ರಂ ಸಕರ್ಣಿಕಂ।
ಶುದ್ಧಮಷ್ಟಾಂಗುಲಂ ತಚ್ಚ ಪದ್ಮರಾಗದಲಾನ್ವಿತಂ ॥೨೧॥

ಶಯ್ಯಾಂ ವಿಲಕ್ಷಣಾಂ ಕೃತ್ವಾ ವಿರುದ್ಧಗ್ರಂಥಿವರ್ಜಿತಾಂ।
ಸೋಪಧಾನಕವಿಶ್ರಾಮಸ್ವಾಸ್ತರವ್ಯಜನಾನಿ ಚ ॥೨೨॥

---

೧೮. ಎಲೈ ನಾರದ ಮಹರ್ಷಿಯೇ, ಹೀಗೆ ರಾತ್ರಿಭೋಜನ ವ್ರತವನ್ನು ಆಚರಿಸಿ ಪುನರ್ವಸೂ ನಕ್ಷತ್ರದಲ್ಲಿ ದಾನಮಾಡಬೇಕು. ಒಂದು ಬಳ್ಳದಲ್ಲಿ ಅಕ್ಕಿಯನ್ನೂ, ಅತ್ತಿಯಮರದ ಪಾತ್ರೆಯಲ್ಲಿ ತುಪ್ಪವನ್ನೂ ಇರಿಸಿ ಹಿರಣ್ಯಸಹಿತವಾಗಿ ಬ್ರಾಹ್ಮಣನಿಗೆ ಕೊಡಬೇಕು.

೧೯-೨೦. ಏಳನೆಯ ಪಾರಣೆಯ ದಿನದಲ್ಲಿ ಇವುಗಳ ಜೊತೆಗೆ ಒಂದು ಜೊತೆ ವಸ್ತ್ರವನ್ನು ಹೆಚ್ಚಾಗಿ ಕೊಡಬೇಕು. ಓ ನಾರದಾ, ವರ್ಷಾಂತದಲ್ಲಿ ನಡೆಯುವ ಹದಿನಾಲ್ಕನೆಯ ಪಾರಣೆಯ ದಿವಸವು ಬಂದಾಗ ಬ್ರಾಹ್ಮಣರಿಗೆ ತುಪ್ಪ, ಹಾಲು, ಬೆಲ್ಲ ಇವುಗಳಿಂದ ಭಕ್ತಿಯೊಡನೆ ಭೋಜನಮಾಡಿಸಬೇಕು.

೨೧. ಎಂಟು ಎಸಳೂ ಕರ್ಣಿಕೆಯೂ ಇರುವ ತಾವರೆಯೊಂದನ್ನು ಶುದ್ಧವಾದ ಚಿನ್ನದಿಂದ ರಚಿಸಬೇಕು. ಅದು ಎಂಟು ಅಂಗುಲ ಪ್ರಮಾಣನಲ್ಲಿ ಇರಬೇಕು. ಪದ್ಮರಾಗ ರತ್ನದ ದಲಗಳಿಂದ ಅದು ಕೂಡಿರಬೇಕು.

೨೨. ವೈಯ್ಯನ್ನೊತ್ತುವ ಗಂಟುಗಳಾವುವೂ ಇಲ್ಲದಂತೆ ತಲೆದಿಂಬು, ಒರಗು ದಿಂಬು, ಮಗ್ಗುಲಹಾಸಿಗೆ, ಬೀಸಣಿಗೆ ಇವೆಲ್ಲವುಗಳಿಂದ ಕೂಡಿದ ಅಂದವಾಗಿರುವ ಹಾಸಿಗೆಯನ್ನು ಮಾಡಿಸಬೇಕು.

ಭಾಜನೋಪಾನಹಚ್ಛತ್ರಚಾಮರಾಸನದರ್ಪಣೈಃ ।
ಭೂಷಣೈರಪಿ ಸಂಯುಕ್ತಾಂ ಫಲವಸ್ತ್ರಾನುಲೇಪನೈಃ ॥೨೩॥

ತಸ್ಯಾಂ ನಿಧಾಯ ತತ್ಪದ್ಮಮಲಂಕೃತ್ಯ ಗುಣಾನ್ವಿತಂ ।
ಕಪಿಲಾಂ ವಸ್ತ್ರಸಂಯುಕ್ತಾಂ ಸುಶೀಲಾಂ ಚ ಪಯಸ್ವಿನೀಂ ॥೨೪॥

ರೌಪ್ಯಖುರೀಂ ಹೈಮಶೃಂಗೀಂ ಸವತ್ಸಾಂ ಕಾಂಸ್ಯದೋಹನಾಂ ।
ದದ್ಯಾನ್ಮಂತ್ರೇಣ ಪೂರ್ವಾಹ್ಣೇ ನ ಚೈನಾಮಭಿಲಂಘಯೇತ್ ॥೨೫॥

ಯಥೈವಾದಿತ್ಯ ಶಯನಮಶೂನ್ಯಂ ತವ ಸರ್ವದಾ ।
ಕಾಂತ್ಯಾ ಧೃತ್ಯಾ ಶ್ರಿಯಾ ರತ್ಯಾ ತಥಾ ಮೇ ಸಂತು ಸಿದ್ಧಯಃ ॥೨೬॥

ಯಥಾ ನ ದೇವಾಃ ಶ್ರೇಯಾಂಸಂ ತ್ವದನ್ಯಮನಘಂ ವಿದುಃ ।
ತಥಾ ಮಾಮುದ್ಧರಾಶೇಷದುಃಖಸಂಸಾರಸಾಗರಾತ್ ॥೨೭॥

---

೨೩. ಪಾತ್ರೆಗಳು, ಪಾದರಕ್ಷೆ, ಕೊಡೆ, ಚಾಮರ, ಆಸನ, ಕನ್ನಡಿ, ಒಡವೆಗಳು, ಹಣ್ಣುಗಳು, ವಸ್ತ್ರಗಳು ಮತ್ತು ಗಂಧ ಇವೆಲ್ಲವೂ ಹಾಸಿಗೆಯೊಡನೆ ಇರಬೇಕಾದ ಪದಾರ್ಥಗಳು.

೨೪-೨೫. ಆ ಹಾಸಿಗೆಯಲ್ಲಿ ಸಕಲ ಗುಣಸಹಿತವಾದ ಆ ತಾವರೆಯನ್ನು ಅಲಂಕರಿಸಿ ಇಡಬೇಕು. ಇದನ್ನೂ, ಒಳ್ಳೆಯ ಸ್ವಭಾವದ, ಹಾಲುಕರೆಯುವ, ಎಳೆಗರುವಿನ ಹಸುವನ್ನೂ ಮಂತ್ರಪೂರ್ವಕವಾಗಿ ಪೂರ್ವಾಹ್ಣದಲ್ಲಿ ದಾನಮಾಡಬೇಕು. ಹಸುವಿನ ಗೊರಸುಗಳನ್ನು ಬೆಳ್ಳಿಯಿಂದಲೂ, ಕೊಂಬುಗಳನ್ನು ಚಿನ್ನದಿಂದಲೂ ಸಿಂಗರಿಸಿ ಅದಕ್ಕೆ ತಕ್ಕ ವಸ್ತ್ರವನ್ನು ಧರಿಸಬೇಕು. ಹಾಲುಕರೆಯಲು ಕಂಚಿನ ಪಾತ್ರೆಯನ್ನೂ ಸಹ ಕೊಡಬೇಕು.

೨೬. ಓ ಆದಿತ್ಯಾ, ನಿನ್ನ ಹಾಸಿಗೆಯು ಬರಿದಾಗಿರದೆ ಕಾಂತಿ, ಧೃತಿ, ಶ್ರೀ, ರತಿ ಇವುಗಳಿಂದ ಪೂರ್ಣವಾಗಿರುವಂತೆ ನನ್ನ ಸಿದ್ಧಿಗಳೂ ವ್ಯರ್ಥವಾಗದೆ ಪೂರ್ಣವಾಗಿರಲಿ.

೨೭. ದೇವತೆಗಳು ಪವಿತ್ರನಾದ ನಿನ್ನನ್ನಲ್ಲದೆ ಬೇರೆ ಯಾರನ್ನೂ ತಮ್ಮ ಆಪ್ತನೆಂದು ತಿಳಿದಿಲ್ಲ. ನಾನೂ ಹಾಗೆಯೇ ಭಾವಿಸಿರುವೆನು. ನನ್ನನ್ನು ಅತಿ ದುಃಖಮಯವಾದ ಈ ಸಂಸಾರವೆಂಬ ಸಾಗರದಿಂದ ಪಾರುಮಾಡು.

ತತಃ ಪ್ರದಕ್ಷಿಣೀಕೃತ್ಯ ಪ್ರಣಿಪತ್ಯ ವಿಸರ್ಜಯೇತ್ ।
ಶಯ್ಯಾಗವಾದಿ ತತ್ಸರ್ವಂ ದ್ವಿಜಸ್ಯ ಭವನಂ ನಯೇತ್ ॥೨೮॥

ನೈತದ್ವಿಶೀಲಾಯ ನ ದಾಂಭಿಕಾಯ
ಕುತರ್ಕದುಷ್ಟಾಯ ವಿನಿಂದಕಾಯ ।
ಪ್ರಕಾಶನೀಯಂ ವ್ರತಮಿಂದುಮೌಲೇ
ರ್ಯಶ್ಚಾಪಿ ನಿಂದಾಮಧಿಕಾಂ ವಿಧತ್ತೇ ॥೨೯॥

ಭಕ್ತಾಯ ದಾಂತಾಯ ಚ ಗುಹ್ಯಮೇತ
ದಾಖ್ಯೇಯಮಾನಂದಕರಂ ಶಿವಸ್ಯ ।
ಇದಂ ಮಹಾಪಾತಕಭಿನ್ನರಾಣಾ
ಮಪ್ಯಕ್ಷರಂ ವೇದವಿದೋ ವದಂತಿ ॥೩೦॥

ನ ಬಂಧುಪುತ್ರೇಣ ಧನೈರ್ವಿಯುಕ್ತಃ
ಪತ್ನೀಭಿರಾನಂದಕರಃ ಸುರಾಣಾಂ ।

---

೨೮. ಬಳಿಕ ಪ್ರದಕ್ಷಿಣಮಾಡಿ, ನಮಸ್ಕರಿಸಿ ಬೀಳ್ಕೊಡಬೇಕು. ಹಾಸಿಗೆ, ಹಸು ಮೊದಲಾದ ಅವೆಲ್ಲವನ್ನೂ ಬ್ರಾಹ್ಮಣನ ಮನೆಗೆ ಕಳುಹಿಸಿಕೊಡಬೇಕು.

೨೯. ಚಂದ್ರಶೇಖರನನ್ನು ಉದ್ದೇಶಿಸಿಮಾಡುವ ಈ ವ್ರತವನ್ನು ನಡತೆಗೆಟ್ಟವನು, ಕಪಟಿ, ಇಲ್ಲದ ಸಲ್ಲದ ಪ್ರಶ್ನೆಗಳನ್ನು ಕೇಳುತ್ತ ಮನಸ್ಸನ್ನು ಕೆಡಿಸಿಕೊಂಡವನು, ಕಂಡವರನ್ನು ದೂಷಿಸುವವನು ಮತ್ತು ಬಹಳ ನಿಂದಾರ್ಹನು ಇವರಿಗೆ ಹೇಳಬಾರದು.

೩೦. ಶಿವನಿಗೆ ಪ್ರೀತಿಕರವೆನಿಸಿದ ಈ ವ್ರತವನ್ನು ಭಕ್ತನೂ, ಜಿತೇಂದ್ರಿಯನೂ ಆದವನಿಗೆ ರಹಸ್ಯವಾಗಿ ಹೇಳಬೇಕು. ಇದರ ಒಂದಕ್ಷರವೂ ಕೂಡ ಮನುಷ್ಯರ ಮಹಾ ಪಾತಕಗಳನ್ನು ಕಳೆಯಬಲ್ಲುದೆಂದು ವೇದವನ್ನು ಅರಿತವರು ಹೇಳುತ್ತಾರೆ.

೩೧. ಈ ವ್ರತವನ್ನು ಭಕ್ತಿಯಿಂದ ಆಚರಿಸಿದರೆ ಪುರುಷನು ಬಂಧುಗಳು, ಮಕ್ಕಳು, ಐಶ್ವರ್ಯ ಮತ್ತು ಪತ್ನಿಯರು ಇವರ ವಿಯೋಗ ದುಃಖವಿಲ್ಲದೆ ದೇವತೆ

ನಾಭ್ಯೇತಿ ರೋಗಂ ನ ಚ ಶೋಕದುಃಖಂ
ಯಾ ವಾಽಥ ನಾರೀ ಕುರುತೇಽತಿಭಕ್ತ್ಯಾ ॥೩೦॥

ಇದಂ ವಸಿಷ್ಠೇನ ಪುರಾರ್ಜುನೇನ
ಕೃತಂ ಕುಬೇರೇಣ ಪುರಂದರೇಣ ।
ಯತ್ಕೀರ್ತನೇನಾಪ್ಯಖಿಲಾನಿ ನಾಶ
ಮಾಯಾಂತಿ ಪಾಪಾನಿ ನ ಸಂಶಯೋಽಸ್ತಿ ॥೩೨॥

ಇತಿ ಪಠತಿ ಶೃಣೋತಿ ವಾ ಯ ಇತ್ಥಂ
ರವಿಶಯನಂ ಪುರುಹೂತವಲ್ಲಭಃ ಸ್ಯಾತ್ ।
ಅಪಿ ನರಕಗತಾನ್ ಪಿತ್ರ್ಯಾನಶೇಷಾ
ನಪಿ ದಿವಮಾನಯತೀಹ ಯಃ ಕರೋತಿ ॥೩೩॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಆದಿತ್ಯಶಯನವ್ರತಂ ನಾಮ
ಪಂಚಪಂಚಾಶೋಽಧ್ಯಾಯಃ

---

ಗಳಿಗೆ ಆನಂದವನ್ನು ಕೊಡುವನು. ಹೆಂಗಸಾದರೋ ರೋಗರುಜಿನಗಳೂ, ಸಂಕಟ ವ್ಯಸನಗಳೂ ಇಲ್ಲದೆ ಸುಖವಾಗಿರುವಳು.

೩೨. ಇದನ್ನು ಹಿಂದೆ ವಸಿಷ್ಠ, ಅರ್ಜುನ, ಕುಬೇರ, ಇಂದ್ರ ಇವರೆಲ್ಲರೂ ಆಚರಿಸಿದ್ದಾರೆ. ಇದನ್ನು ಕೀರ್ತನಮಾಡಿದರೆ ಸಾಕು ; ಎಲ್ಲ ಪಾಪಗಳೂ ನಾಶ ವಾಗುವುವು. ಇದರಲ್ಲಿ ಸಂಶಯವಿಲ್ಲ.

೩೩. ಮೇಲೆ ಹೇಳಿದ ಆದಿತ್ಯಶಯನ ವ್ರತವನ್ನು ಓದಲಿ, ಅಥವಾ ಕೇಳಲಿ ಆ ಮನುಷ್ಯನು ದೇವೇಂದ್ರನಿಗೆ ಪ್ರೀತಿಪಾತ್ರನಾಗುವನು. ಈ ವ್ರತವನ್ನು ಮಾಡಿದವನ ಪಿತೃಗಳು ನರಕದಲ್ಲಿದ್ದರೂ ಸಹ ಅವರೆಲ್ಲರೂ ಸ್ವರ್ಗವನ್ನು ಸೇರುವರು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಆದಿತ್ಯಶಯನ ವ್ರತವನ್ನು ವಿವರಿಸಿದೆ.

ಹಸ್ತನಕ್ಷತ್ರ, ಸಪ್ತಮೀತಿಥಿ, ಸಂಕ್ರಮಣ ಇವು ಸೇರಿದ ಭಾನುವಾರವು ಈ ವ್ರತದ ಆರಂಭಕ್ಕೆ ಪ್ರಶಸ್ತವಾದದು. ಹಸ್ತಮೊದಲಾದ ನಕ್ಷತ್ರಗಳಲ್ಲಿ ಉಮಾ ಮಹೇಶ್ವರಮೂರ್ತಿಯ ಒಂದೊಂದು ಅವಯವವನ್ನೂ ಸೂರ್ಯದೇವನ ನಾಮಗಳಿಂದ ಅರ್ಚಿಸಬೇಕು. ವ್ರತವು ಸಮಾಪ್ತವಾದ ಬಳಿಕ ಆ ಅರ್ಚಾಮೂರ್ತಿಯನ್ನು ಸಕಲ ದಾನಗಳ ಸಹಿತವಾಗಿ ದ್ವಿಜನಿಗೆ ದಾನಮಾಡಬೇಕು. ಇದು ಸಕಲಪಾಪಹರವಾದ ವ್ರತ. ವಸಿಷ್ಠ, ಅರ್ಜುನ ಮೊದಲಾದವರೆಲ್ಲರೂ ಪೂರ್ವದಲ್ಲಿ ಇದನ್ನು ಆಚರಿಸಿದರು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಆದಿತ್ಯಶಯನವ್ರತವೆಂಬ ಐವತ್ತೈದನೆಯ ಅಧ್ಯಾಯವು ಮುಗಿದುದು.



# ಅಥ ಷಟ್ತ್ರಿಂಚಾಶೋಽಧ್ಯಾಯಃ

॥ ಶ್ರೀ ಭಗವಾನುವಾಚ ॥

ಕೃಷ್ಣಾಷ್ಟಮೀಮಥೋ ವಕ್ಷ್ಯೇ ಸರ್ವಪಾಪಪ್ರಣಾಶಿನೀಂ ।
ಶಾಂತಿರ್ಮುಕ್ತಿಶ್ಚ ಭವತಿ ಜಯಃ ಪುಂಸಾಂ ವಿಶೇಷತಃ ॥ ೧ ॥

ಶಂಕರಂ ಮಾರ್ಗಶಿರಸಿ ಶಂಭುಂ ಪೌಷೇಽಭಿಪೂಜಯೇತ್ ।
ಮಾಘೇ ಮಹೇಶ್ವರಂ ದೇವಂ ಮಹಾದೇವಂ ಚ ಫಾಲ್ಗುನೇ ॥ ೨ ॥

ಸ್ಥಾಣುಂ ಚೈತ್ರೇ ಶಿವಂ ತದ್ವದ್ವೈಶಾಖೇ ತ್ವರ್ಚಯೇನ್ನರಃ ।
ಜ್ಯೇಷ್ಠೇ ಪಶುಪತಿಂ ಚಾರ್ಚೇದಾಷಾಢೇ ಉಗ್ರಮರ್ಚಯೇತ್ ॥ ೩ ॥

ಪೂಜಯೇಚ್ಛ್ರಾವಣೇ ಶರ್ವಂ ನಭಸ್ಯೇ ತ್ರ್ಯಂಬಕಂ ತಥಾ
ಹರಮಾಶ್ವಯುಜೇ ಮಾಸಿ ತಥೇಶಾನಂ ಚ ಕಾರ್ತಿಕೇ ॥ ೪ ॥

---

೧. ಭಗವಂತನು ಹೇಳಿದನು.—ಇನ್ನು ಮುಂದೆ ಸರ್ವಪಾಪಹರವಾದ ಕೃಷ್ಣಾಷ್ಟಮೀವ್ರತವನ್ನು ಹೇಳುವೆನು. ಇದರಿಂದ ಮನುಷ್ಯರಿಗೆ ಶಾಂತಿ, ಮೋಕ್ಷ, ಜಯ ಇವು ವಿಶೇಷವಾಗಿ ಲಭಿಸುವುವು.

೨. ಬೇರೆ ಬೇರೆ ತಿಂಗಳಲ್ಲಿ ಪರಮೇಶ್ವರನನ್ನು ಬೇರೆಬೇರೆ ಹೆಸರಿನಿಂದ ಆರಾಧಿಸಬೇಕು. ಮಾರ್ಗಶೀರ್ಷದಲ್ಲಿ ಶಂಕರನನ್ನೂ, ಪುಷ್ಯದಲ್ಲಿ ಶಂಭುವನ್ನೂ, ಮಾಘದಲ್ಲಿ ಮಹೇಶ್ವರನನ್ನೂ, ಫಾಲ್ಗುನದಲ್ಲಿ ಮಹಾದೇವನನ್ನೂ ಪೂಜಿಸಬೇಕು.

೩. ಚೈತ್ರಮಾಸದಲ್ಲಿ ಸ್ಥಾಣುವನ್ನೂ, ವೈಶಾಖದಲ್ಲಿ ಶಿವನನ್ನೂ, ಜ್ಯೇಷ್ಠದಲ್ಲಿ ಪಶುಪತಿಯನ್ನೂ, ಆಷಾಢದಲ್ಲಿ ಉಗ್ರನನ್ನೂ ಆರಾಧಿಸಬೇಕು.

೪. ಶ್ರಾವಣದಲ್ಲಿ ಶರ್ವನನ್ನೂ, ಭಾದ್ರಪದದಲ್ಲಿ ತ್ರ್ಯಂಬಕನನ್ನೂ, ಆಶ್ವಯುಜದಲ್ಲಿ ಹರನನ್ನೂ, ಕಾರ್ತಿಕದಲ್ಲಿ ಈಶಾನನನ್ನೂ ಅರ್ಚಿಸಬೇಕು.

ಕೃಷ್ಣಾಷ್ಟಮೀಷು ಸರ್ವಾಸು ಶಕ್ತ್ಯಾ ಸಂಪೂಜಯೇದ್ದ್ವಿಜಾನ್ ।
ಗೋಭೂಹಿರಣ್ಯವಾಸೋಭಿಃ ಶಿವಭಕ್ತಾನುಪೋಷಿತಃ ॥ ೫ ॥

ಗೋಮೂತ್ರಘೃತಗೋಕ್ಷೀರತಿಲಾನ್ಯವಕುಶೋದಕಂ ।
ಗೋಶೃಂಗೋದಶಿರೀಷಾರ್ಕಬಿಲ್ವಪತ್ರದಧೀನಿ ಚ ।
ಪಂಚಗವ್ಯಂ ಚ ಸಂಪ್ರಾಶ್ಯ ಶಂಕರಂ ಪೂಜಯೇನ್ನಿಶಿ ॥ ೬ ॥

ಅಶ್ವತ್ಥಂ ಚ ವಟಂ ಚೈವೋದುಂಬರಂ ಪ್ಲಕ್ಷಮೇವ ಚ ।
ಪಲಾಶಂ ಜಂಬುವೃಕ್ಷಂ ಚ ವಿದುಃ ಷಷ್ಠಂ ಮಹರ್ಷಯಃ ॥ ೭ ॥

ಮಾರ್ಗಶೀರ್ಷಾಢಮಾಸಾಭ್ಯಾಂ ದ್ವಾಭ್ಯಾಂ ದ್ವಾಭ್ಯಾಮಿತಿ ಕ್ರಮಾತ್ ।
ಏಕೈಕಂ ದಂತಪವನಂ ವೃಕ್ಷೇಷ್ವೇತೇಷು ಭಕ್ಷಯೇತ್ ॥ ೮ ॥

ದೇವಾಯ ದದ್ಯಾದರ್ಘ್ಯಂ ಚ ಕೃಷ್ಣಾಂ ಗಾಂ ಕೃಷ್ಣವಾಸಸಂ ।
ದದ್ಯಾತ್ಸಮಾಪ್ತೇ ದಧ್ಯನ್ನಂ ವಿತಾನಧ್ವಜಚಾಮರಂ ॥ ೯ ॥

---

೫. ಕೃಷ್ಣಪಕ್ಷದ ಅಷ್ಟಮೀ ದಿನಗಳಲ್ಲೆಲ್ಲ ಅನುಕೂಲವಿರತಕ್ಕವನು ದ್ವಿಜರನ್ನು ಪೂಜಿಸಬೇಕು. ಉಪವಾಸವಿದ್ದು ಗೋದಾನ, ಭೂದಾನ, ಹಿರಣ್ಯದಾನ, ವಸ್ತ್ರದಾನ ಇವುಗಳಿಂದ ಪರಮೇಶ್ವರನ ಭಕ್ತರನ್ನು ಸತ್ಕರಿಸಬೇಕು.

೬. ತಿಂಗಳಿಗೆ ಒಂದರಂತೆ ಕ್ರಮವಾಗಿ ಗೋಮೂತ್ರ, ತುಪ್ಪ, ಹಾಲು, ಎಳ್ಳು, ಗೋಧಿ, ದರ್ಭೋದಕ, ಗೋಶೃಂಗೋದಕ, ಬಾಗೆಯ ಹೂ, ಎಕ್ಕದೆಲೆ, ಬಿಲ್ವಪತ್ರ, ಮೊಸರು ಮತ್ತು ಪಂಚಗವ್ಯ ಇವುಗಳನ್ನು ಪ್ರಾಶನಮಾಡಿ ರಾತ್ರಿಯಲ್ಲಿ ಶಂಕರನನ್ನು ಪೂಜಿಸಬೇಕು.

೭-೮. ಅರಳಿ, ಆಲ, ಅತ್ತಿ, ಬಸರಿ, ಮುತ್ತುಗ, ನೇರಿಲೆ ಈ ಆರು ಮರಗಳಲ್ಲಿ ಕ್ರಮವಾಗಿ ಒಂದೊಂದರ ಎಲೆಯನ್ನು ಮಾರ್ಗಶಿರ ಮತ್ತು ಆಷಾಢ ಮಾಸಗಳಿಂದ ಪ್ರಾರಂಭಿಸಿ ಎರಡು ತಿಂಗಳ ಕಾಲ ಭಕ್ಷಿಸಬೇಕು. ಆಯಾ ಕಾಲಗಳಲ್ಲಿ ಇವುಗಳಿಂದ ಹಲ್ಲನ್ನೂ ಉಜ್ಜಬಹುದು.

೯. ಮಹಾದೇವನಿಗೆ ಅರ್ಘ್ಯವನ್ನು ಕೊಟ್ಟು ಕಪ್ಪುಬಣ್ಣದ ಹಸುವನ್ನೂ ವಸ್ತ್ರವನ್ನೂ ಒಪ್ಪಿಸಬೇಕು. ಪೂಜೆ ಮುಗಿದಾಗ ಮೊಸರನ್ನು ನೈವೇದ್ಯಮಾಡಿ ಧ್ವಜ, ಚಾಮರ ಇವುಗಳ ಉಪಚಾರವನ್ನು ಸಲ್ಲಿಸಬೇಕು.

**ದ್ವಿಜಾನಾಮುದಕುಂಭಾಂಶ್ಚ ಪಂಚರತ್ನಸಮನ್ವಿತಾನ್ ।**
**ಗಾವಃ ಕೃಷ್ಣಾಃ ಸುವರ್ಣಂ ಚ ವಾಸಾಂಸಿ ವಿವಿಧಾನಿ ಚ ।**
**ಅಶಕ್ತಸ್ತು ಪುನರ್ದದ್ಯಾದ್ಗಾಮೇಕಾಮಪಿ ಶಕ್ತಿತಃ** ॥೧೦॥
**ನ ವಿತ್ತಶಾಠ್ಯಂ ಕುರ್ವೀತ ಕುರ್ವನ್ ದೋಷಮವಾಪ್ನುಯಾತ್ ।**
**ಕೃಷ್ಣಾಷ್ಟಮೀಮುಪೋಷ್ಯೈವ ಸಪ್ತಕಲ್ಪಶತತ್ರಯಂ ।**
**ಪುಮಾನ್ ಸಂಪೂಜಿತೋ ದೇವೈಃ ಶಿವಲೋಕೇ ಮಹೀಯತೇ** ॥೧೧॥

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಕೃಷ್ಣಾಷ್ಟಮೀವ್ರತಂ ನಾಮ ಷಟ್ಪಂಚಾಶೋಽಧ್ಯಾಯಃ**

---

೧೦. ಐದು ಬಗೆಯ ರತ್ನಗಳೊಡಗೂಡಿದ ಜಲಕುಂಭಗಳು, ಕಪ್ಪು ಹಸುಗಳು, ಚಿನ್ನ, ಬಗೆಬಗೆಯ ವಸ್ತ್ರಗಳು ಇವನ್ನು ಬ್ರಾಹ್ಮಣರಿಗೆ ದಾನಮಾಡ ಬೇಕು. ಇಷ್ಟಕ್ಕೆ ಅವಕಾಶವಿಲ್ಲದೆ ಇದ್ದರೆ ಕೊನೆಗೆ ತನ್ನ ಶಕ್ತಿಯನ್ನು ನೋಡಿ ಕೊಂಡು ಒಂದು ಹಸುವನ್ನಾದರೂ ಕೊಡಬೇಕು.

೧೧. ಹಣವನ್ನು ವೆಚ್ಚಮಾಡಲು ಜಿಪುಣತನ ಮಾಡಬಾರದು ; ಮಾಡಿದರೆ ದೋಷಿಯಾಗುವನು. ಕೃಷ್ಣಾಷ್ಟಮಿಯ ದಿನದಲ್ಲಿ ಉಪವಾಸಮಾಡಿದ ಮಾತ್ರ ದಿಂದಲೇ ಮನುಷ್ಯನು ಎರಡುಸಾವಿರದ ಒಂದುನೂರು ಕಲ್ಪಗಳ ಕಾಲ ದೇವತೆ ಗಳಿಂದ ಪೂಜಿತನಾಗಿ ಶಿವಲೋಕದಲ್ಲಿ ಮಾನ್ಯನೆನಿಸುವನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಕೃಷ್ಣಾಷ್ಟಮೀ ವ್ರತವನ್ನು ತಿಳಿಸಿದೆ.

ಒಂದೊಂದು ತಿಂಗಳಲ್ಲಿಯೂ ಈಶ್ವರನನ್ನು ಒಂದೊಂದು ಹೆಸರಿನಿಂದ ಆರಾ ಧಿಸಬೇಕು. ಕೃಷ್ಣಾಷ್ಟಮಿಯ ದಿನ ಪಂಚಗವ್ಯಸೇವನೆಯಿಂದ ಪರಿಶುದ್ಧನಾಗಿ ರಾತ್ರಿ ಯಲ್ಲಿ ಶಂಕರನನ್ನು ಪೂಜಿಸಬೇಕು. ಬ್ರಾಹ್ಮಣರನ್ನು ಸತ್ಕರಿಸಿ ಬಗೆಬಗೆಯ ದಾನ ಗಳನ್ನು ಕೊಡಬೇಕು. ಈ ಪುಣ್ಯದಿನದಲ್ಲಿ ಉಪವಾಸಮಾಡಿದ ಮಾತ್ರದಿಂದಲೇ ಮನುಷ್ಯನು ಎಷ್ಟೋ ಕಲ್ಪಗಳ ಕಾಲ ಶಿವಲೋಕದಲ್ಲಿ ಮನ್ನಣೆಯನ್ನು ಪಡೆಯುವನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಕೃಷ್ಣಾಷ್ಟಮೀವ್ರತವೆಂಬ ಐವತ್ತಾರನೆಯ ಅಧ್ಯಾಯವು ಮುಗಿದುದು.

## ಅಥ ಸಪ್ತಪಂಚಾಶೋಽಧ್ಯಾಯಃ

॥ ನಾರದ ಉವಾಚ ॥

ದೀರ್ಘಾಯುರಾರೋಗ್ಯಕುಲಾಭಿವೃದ್ಧಿ
ಯುಕ್ತಃ ಪುಮಾನ್ ಭೂಪಕುಲಾಯುತಃ ಸ್ಯಾತ್ ।
ಮುಹುರ್ಮುಹುರ್ಜನ್ಮನಿ ಯೇನ ಸಮ್ಯ
ಗ್ವ್ರತಂ ಸಮಾಚಕ್ಷ್ವ ತದಿಂದುಮೌಲೇ ॥ ೧ ॥

॥ ಶ್ರೀ ಭಗವಾನುವಾಚ ॥

ತ್ವಯಾ ಪೃಷ್ಟಮಿದಂ ಸಮ್ಯಗುಕ್ತಂ ಚಾಕ್ಷಯ್ಯಕಾರಕಂ ।
ರಹಸ್ಯಂ ತವ ವಕ್ಷ್ಯಾಮಿ ಯತ್ಪುರಾಣವಿದೋ ವಿದುಃ ॥ ೨ ॥

ರೋಹಿಣೀಚಂದ್ರಶಯನಂ ನಾಮ ವ್ರತಮಿಹೋತ್ತಮಂ ।
ತಸ್ಮಿನ್ನಾರಾಯಣಸ್ಯಾರ್ಚಾಮರ್ಚಯೇದಿಂದುನಾಮಭಿಃ ॥ ೩ ॥

ಯದಾ ಸೋಮದಿನೇ ಶುಕ್ಲಾ ಭವೇತ್ಪಂಚದಶೀ ಕ್ವಚಿತ್ ।
ಅಥವಾ ಬ್ರಹ್ಮನಕ್ಷತ್ರಂ ಪೌರ್ಣಮಾಸ್ಯಾಂ ಪ್ರಜಾಯತೇ ॥ ೪ ॥

---

೧. ನಾರದಮುನಿ ಹೇಳಿದನು.—ಮನುಷ್ಯನು ಯಾವ ವ್ರತವನ್ನಾಚರಿಸಿದರೆ ಪ್ರತಿಜನ್ಮದಲ್ಲಿಯೂ ಧೀರ್ಘಾಯುಸ್ಸು, ಆರೋಗ್ಯ, ವಂಶಾಭಿವೃದ್ಧಿ ಇವುಗಳಿಂದ ಕೂಡಿ ರಾಜಕುಲದಲ್ಲುದಿಸುವನು? ಎಲೈ ಚಂದ್ರಶೇಖರನೇ, ಅಂತಹ ಉತ್ತಮ ವ್ರತವನ್ನು ಹೇಳು.

೨. ಭಗವಂತನು ಹೇಳಿದನು.—ನೀನು ಚೆನ್ನಾಗಿ ಕೇಳಿದೆ. ಇದು ಸರಿಯಾದ ಮಾತು. ಅನಂತಫಲವನ್ನು ಕೊಡತಕ್ಕದೆಂದು ಪುರಾಣಜ್ಞರು ತಿಳಿದಿರುವ ರಹಸ್ಯ ವಿಷಯವನ್ನು ನಿನಗೆ ಹೇಳುವೆನು.

೩. ರೋಹಿಣೀಚಂದ್ರಶಯನವೆಂಬ ವ್ರತವು ಅತಿ ಶ್ರೇಷ್ಠವಾದುದು. ಅದರಲ್ಲಿ ನಾರಾಯಣನ ಅರ್ಚಾಮೂರ್ತಿಯನ್ನು ಚಂದ್ರನ ನಾಮಗಳಿಂದ ಅರ್ಚಿಸಬೇಕು.

೪-೫. ಸೋಮವಾರದಲ್ಲಿ ಹುಣ್ಣಿಮೆ ಬರಲಿ; ಇಲ್ಲವೇ ಹುಣ್ಣಿಮೆಯ ದಿನ ರೋಹಿಣೀನಕ್ಷತ್ರ ಬರಲಿ ಆ ದಿವಸ ಜ್ಞಾನಿಯಾದವನು ಪಂಚಗವ್ಯದಿಂದಲೂ

ತದಾ ಸ್ನಾನಂ ನರಃ ಕುರ್ಯಾತ್ಪಂಚಗವ್ಯೇನ ಸರ್ಪಿಷಾ ।
ಆಪ್ಯಾಯಸ್ವೇತಿ ತು ಜಪೇದ್ವಿದ್ವಾನಷ್ಟಶತಂ ಪುನಃ ॥ ೫ ॥

ಶೂದ್ರೋಽಪಿ ಪರಯಾ ಭಕ್ತ್ಯಾ ಪಾಷಂಡಾಲಾಪವರ್ಜಿತಃ ।
ಸೋಮಾಯ ವರದಾಯಾಥ ವಿಷ್ಣವೇ ಚ ನಮೋ ನಮಃ ॥ ೬ ॥

ಕೃತಜಪ್ಯಃ ಸ್ವಭವನಮಾಗತ್ಯ ಮಧುಸೂದನಂ ।
ಪೂಜಯೇತ್ಫಲಪುಷ್ಪೈಶ್ಚ ಸೋಮನಾಮಾನಿ ಕೀರ್ತಯನ್ ॥ ೭ ॥

ಸೋಮಾಯ ಶಾಂತಾಯ ನಮೋಽಸ್ತು ಪಾದಾ
ವನಂತಧಾಮ್ನೇತಿ ಚ ಜಾನುಜಂಘೇ ।
ಊರುದ್ವಯಂ ಚಾಪಿ ಜಲೋದರಾಯ
ಸಂಪೂಜಯೇನ್ಮೇಢ್ರಮನಂತಬಾಹವೇ ॥ ೮ ॥

ನಮೋ ನಮಃ ಕಾಮಸುಖಪ್ರದಾಯ
ಕಟಿಃ ಶಶಾಂಕಸ್ಯ ಸದಾರ್ಚನೀಯಾ ।
ತಥೋದರಂ ಚಾಪ್ಯಮೃತೋದರಾಯ
ನಾಭಿಃ ಶಶಾಂಕಾಯ ನಮೋಽಭಿಪೂಜ್ಯಾ ॥ ೯ ॥

---

ತುಪ್ಪದಿಂದಲೂ ಸ್ನಾನಮಾಡಬೇಕು. "ಆಪ್ಯಾಯಸ್ವ" ಎಂಬ ಮಂತ್ರವನ್ನು ಎಂಟು ನೂರು ಸಲ ಜಪಿಸಬೇಕು.

೬–೭. ಶೂದ್ರನೇ ಆಗಲಿ ಬಹಳ ಭಕ್ತಿಯಿಂದ ಕೂಡಿ ಧರ್ಮಬಾಹಿರ ರೊಡನೆ ಮಾತನಾಡದೆ, ಚಂದ್ರನಿಗೂ, ವರವನ್ನು ಕರುಣಿಸುವ ವಿಷ್ಣುವಿಗೂ ನಮಸ್ಕಾರ ನಮಸ್ಕಾರವೆಂದು ಜಪಮಾಡಬೇಕು. ಮನೆಗೆ ಬಂದು, ಹಣ್ಣು ಹೂಗಳಿಂದ ಚಂದ್ರನ ನಾಮಗಳನ್ನು ಹೇಳುತ್ತ ವಿಷ್ಣುವನ್ನು ಪೂಜಿಸಬೇಕು.

೮. ಶಾಂತನಾದ ಸೋಮನಿಗೆ ನಮಸ್ಕಾರವೆಂದು ಪಾದಗಳನ್ನೂ, ಅಪರಿಮಿತ ತೇಜೋವಂತನಿಗೆ ನಮಸ್ಕಾರವೆಂದು ತೊಡೆಗಳೆರಡನ್ನೂ, ಲೆಕ್ಕವಿಲ್ಲದಷ್ಟು ತೋಳುಗಳಿರುವಾತನಿಗೆ ನಮಸ್ಕಾರವೆಂದು ಮೇಢ್ರಾವಯವವನ್ನೂ ಪೂಜಿಸಬೇಕು.

೯. ಕಾಮಸುಖವನ್ನು ಕೊಡುವಾತನಿಗೆ ನಮಸ್ಕಾರವೆಂದು ಚಂದ್ರನ ಮಧ್ಯದೇಶವನ್ನು ಯಾವಾಗಲೂ ಅರ್ಚಿಸಬೇಕು. ಉದರದಲ್ಲಿ ಅಮೃತವಿರತಕ್ಕವನಿಗೆ ನಮಸ್ಕಾರವೆಂದು ಉದರವನ್ನೂ, ಮೊಲದ ಮಚ್ಚೆಯಿಂದ ಮೆರೆಯುವವನಿಗೆ ನಮಸ್ಕಾರವೆಂದು ನಾಭಿಯನ್ನೂ ಪೂಜಿಸಬೇಕು.

ನಮೋಽಸ್ತು ಚಂದ್ರಾಯ ಮುಖಂ ಚ ಪೂಜ್ಯಂ
ದಂತಾ ದ್ವಿಜಾನಾಮಧಿಪಾಯ ಪೂಜ್ಯಾಃ ।
ಹಾಸ್ಯಂ ನಮಶ್ಚಂದ್ರಮಸೇಽಭಿಪೂಜ್ಯ
ಮೋಷ್ಠೌ ಕುಮುದ್ವಂತವನಪ್ರಿಯಾಯ ॥೧೦॥

ನಾಸಾ ಚ ನಾಥಾಯ ವನೌಷಧೀನಾ
ಮಾನಂದಭೂತಾಯ ಪುನರ್ಭ್ರುವೌ ಚ ।
ನೇತ್ರದ್ವಯಂ ಪದ್ಮನಿಭಂ ತಥೇಂದೋ
ರಿಂದೀವರಶ್ಯಾಮಕರಾಯ ಶೌರೇಃ ॥೧೧॥

ನಮಃ ಸಮಸ್ತಾಧ್ವರವಂದಿತಾಯ
ಕರ್ಣದ್ವಯಂ ದೈತ್ಯನಿಷೂದನಾಯ ।
ಲಲಾಟಮಿಂದೋರುದಧಿಪ್ರಿಯಾಯ
ಕೇಶಾಃ ಸುಷುಮ್ನಾಧಿಪತೇಃ ಪ್ರಪೂಜ್ಯಾಃ ॥೧೨॥

ಶಿರಃ ಶಶಾಂಕಾಯ ನಮೋ ಮುರಾರೇ
ರ್ವಿಶ್ವೇಶ್ವರಾಯೇತಿ ನಮಃ ಕಿರೀಟಂ ।

---

೧೦. ಚಂದ್ರನಿಗೆ ನಮಸ್ಕಾರವೆಂದು ಪೂಜ್ಯವಾದ ಮುಖವನ್ನೂ, ದ್ವಿಜರ ಅಧಿಪತಿಗೆ ನಮಸ್ಕಾರವೆಂದು ಮಂದಹಾಸವನ್ನೂ, ನೈದಿಲೆಗಳ ವನಕ್ಕೆ ಪ್ರಿಯನಾದವನಿಗೆ ನಮಸ್ಕಾರವೆಂದು ತುಟಿಗಳನ್ನೂ ಆರಾಧಿಸಬೇಕು.

೧೧. ಕಾಡಿನ ಗಿಡಮೂಲಿಕೆಗಳ ಅಧಿಪನಿಗೆ ನಮಸ್ಕಾರವೆಂದು ಹುಬ್ಬುಗಳನ್ನೂ, ನೈದಿಲೆಯಂತೆ ನೀಲಬಣ್ಣದ ಕಿರಣಗಳುಳ್ಳವನಿಗೆ ನಮಸ್ಕಾರವೆಂದು ವಾಸುದೇವನ ತಾವರೆಯಂತಿರುವ ಕಣ್ಣುಗಳನ್ನೂ ಪೂಜಿಸಬೇಕು.

೧೨. ಸಕಲ ಯಾಗಗಳಲ್ಲೂ ಪೂಜೆಯನ್ನು ತಳೆದವನಿಗೆ ನಮಸ್ಕಾರವೆಂದು ಎರಡು ಕಿವಿಗಳನ್ನೂ, ದೈತ್ಯನಾಶಕನಿಗೆ ನಮಸ್ಕಾರವೆಂದು ಹಣೆಯನ್ನೂ, ಸಮುದ್ರಪ್ರಿಯನಿಗೆ ನಮಸ್ಕಾರವೆಂದು ಸುಷುಮ್ನಾನಾಡಿಯ ಅಧಿಪತಿಯೆನಿಸಿದ ಚಂದ್ರನ ಕೇಶಗಳನ್ನೂ ಅರ್ಚಿಸಬೇಕು.

೧೩. ಶಶಾಂಕನಿಗೆ ನಮಸ್ಕಾರವೆಂದು ವಿಷ್ಣುವಿನ ತಲೆಯನ್ನೂ, ವಿಶ್ವೇಶ್ವರನಿಗೆ ನಮಸ್ಕಾರವೆಂದು ಕಿರೀಟವನ್ನೂ ಪೂಜಿಸಬೇಕು. "ರೋಹಿಣಿಯೆಂಬ ಹೆಸರನ್ನು

ಪದ್ಮಪ್ರಿಯೇ ರೋಹಿಣಿ ನಾಮ ಲಕ್ಷ್ಮಿ
ಸೌಭಾಗ್ಯಸೌಖ್ಯಾಮೃತಚಾರುಕಾಯೇ ॥೧೩॥

ದೇವೀಂ ಚ ಸಂಪೂಜ್ಯ ಸುಗಂಧಪುಷ್ಪೈ
ರ್ನೈವೇದ್ಯಧೂಪಾದಿಭಿರಿಂದುಪತ್ನೀಂ ।
ಸುಪ್ತ್ವಾಥ ಭೂಮೌ ಪುನರುತ್ಥಿತೇನ
ಸ್ನಾತ್ವಾ ಚ ವಿಪ್ರಾಯ ಹವಿಷ್ಯಯುಕ್ತಃ ॥೧೪॥

ದೇಯಃ ಪ್ರಭಾತೇ ಸಹಿರಣ್ಯವಾರಿ
ಕುಂಭೋ ನಮಃ ಪಾಪವಿನಾಶನಾಯ ।
ಸಂಪ್ರಾಶ್ಯ ಗೋಮೂತ್ರಮಮಾಂಸಮನ್ನ
ಮಕ್ಷಾರಮಷ್ಟಾವಥ ವಿಂಶತಿಂ ಚ ।
ಗ್ರಾಸಾನ್ ಪಯಸ್ಸರ್ಪಿಯುತಾನುಪೋಷ್ಯ
ಭುಕ್ತ್ವೇತಿಹಾಸಂ ಶೃಣುಯಾನ್ಮುಹೂರ್ತಂ ॥೧೫॥

---

ತಳೆದ ಎಲೌ ಲಕ್ಷ್ಮೀ, ಪದ್ಮವು ನಿನಗೆ ಪ್ರಿಯವಾದುದು. ನಿನ್ನ ಸುಂದರ ದೇಹವು ಸೌಭಾಗ್ಯ, ಸೌಖ್ಯ ಇವುಗಳಿಂದ ಅಮೃತಮಯವೆನಿಸಿರುವುದು.

೧೪. ಪರಿಮಳಯುಕ್ತವಾದ ಗಂಧಪುಷ್ಪಗಳಿಂದಲೂ, ಧೂಪನೈವೇದ್ಯಾದಿಗಳಿಂದಲೂ ಚಂದ್ರನ ಪತ್ನಿಯಾದ ರೋಹಿಣೀದೇವಿಯನ್ನೂ ಸಹ ವಿಶೇಷವಾಗಿ ಪೂಜಿಸಬೇಕು.

೧೫. ಪಾಪವಿನಾಶಕನಿಗೆ ನಮಸ್ಕಾರವೆಂದು ಹೇಳುತ್ತ, ಹಿರಣ್ಯದೊಡಗೂಡಿದ ಜಲಕುಂಭವನ್ನು ದಾನಮಾಡಬೇಕು. ಉಪವಾಸಾನಂತರ ಗೋಮೂತ್ರವನ್ನು ಪ್ರಾಶನಮಾಡಿ ಮಾಂಸ, ಉಪ್ಪು ಇವನ್ನು ಬಿಟ್ಟು, ಹಾಲು ತುಪ್ಪಗಳಲ್ಲಿ ಕಲೆಸಿದ ಇಪ್ಪತ್ತೆಂಟು ತುತ್ತು ಅನ್ನವನ್ನು ಊಟಮಾಡಬೇಕು. ಅನಂತರ ಎರಡು ಗಳಿಗೆಗಳ ಕಾಲ ಇತಿಹಾಸವನ್ನು ಕೇಳಬೇಕು.

ಕದಂಬನೀಲೋತ್ಪಲಕೇತಕಾನಿ
ಜಾತೀ ಸರೋಜಂ ಶತಪತ್ರಿಕಾ ಚ।
ಅಮ್ಲಾನಕುಂಭಾನ್ಯಥ ಸಿಂಧುವಾರಂ
ಪುಷ್ಪಂ ಪುನರ್ನಾಗರದ ಮಲ್ಲಿಕಾಯಾಃ।
ಶುಭ್ರಂ ಚ ವಿಷ್ಣೋಃ ಕರವೀರಪುಷ್ಪಂ
ಶ್ರೀಚಂಪಕಂ ಚಂದ್ರಮಸಃ ಪ್ರದೇಯಂ ॥೧೬॥

ಶ್ರಾವಣಾದಿಷು ಮಾಸೇಷು ಕ್ರಮಾದೇತಾನಿ ಸರ್ವದಾ।
ಯಸ್ಮಿನ್ ಮಾಸೇ ವ್ರತಾದಿಃ ಸ್ಯಾತ್ತತ್ಪುಷ್ಪೈರರ್ಚಯೇದ್ಧರಿಂ ॥೧೭॥

ಏವಂ ಸಂವತ್ಸರಂ ಯಾವದುಪಾಸ್ಯ ವಿಧಿವನ್ನರಃ।
ವ್ರತಾಂತೇ ಶಯನಂ ದದ್ಯಾದ್ದರ್ಪಣೋಪಸ್ಕರಾನ್ವಿತಂ ॥೧೮॥

ರೋಹಿಣೀಚಂದ್ರಮಿಥುನಂ ಕಾರಯಿತ್ವಾಥ ಕಾಂಚನಂ।
ಚಂದ್ರಃ ಷಡಂಗುಲಃ ಕಾರ್ಯೋ ರೋಹಿಣೀ ಚತುರಂಗುಲಾ ॥೧೯॥

---

೧೬. ಕಡಹ, ಕರಿನೈದಿಲೆ, ತಾಳೆ ಜಾಜಿ, ತಾವರೆ, ನೂರೆಸಳಿನ ತಾವರೆ, ಗೋರಂಟೆ, ಗುಗ್ಗುಳ, ಲಕ್ಕಿ ಈ ಹೂಗಳನ್ನು ವಿಷ್ಣುವಿಗೆ ಧರಿಸಬೇಕು. ಕೆಂಪು ಗಣಿಗಲೆ ಮತ್ತು ಕೆಂಪುಸಂಪಿಗೆ ಹೂಗಳನ್ನು ಚಂದ್ರನಿಗೆ ಒಪ್ಪಿಸಬೇಕು.

೧೭. ಶ್ರಾವಣವೇ ಮೊದಲಾದ ತಿಂಗಳುಗಳಲ್ಲಿ ಕ್ರಮವಾಗಿ ಈ ಹೂಗಳನ್ನು ಉಪಯೋಗಿಸಬಹುದು. ಯಾವತಿಂಗಳಲ್ಲಿ ವ್ರತವು ಪ್ರಾರಂಭವಾಗಿ ನಡೆಯುತ್ತದೆಯೋ ಆ ತಿಂಗಳಲ್ಲಿ ದೊರಕುವ ಹೂಗಳಿಂದ ಹರಿಯನ್ನು ಪೂಜಿಸಬೇಕು.

೧೮. ಮನುಜನು ಹೀಗೆ ಒಂದು ವರ್ಷಕಾಲ ಶಾಸ್ತ್ರೋಕ್ತವಾಗಿ ಪೂಜಿಸಿ, ವ್ರತವು ಮುಗಿದ ಬಳಿಕ ಕನ್ನಡಿ ಮೊದಲಾದ ಸಕಲ ಸಾಮಗ್ರೀ ಸಹಿತವಾಗಿ ಶಯ್ಯಾದಾನವನ್ನು ಮಾಡಬೇಕು.

೧೯. ದಂಪತಿಗಳೆನಿಸಿದ ರೋಹಿಣೀ ಚಂದ್ರರಿಬ್ಬರ ಪ್ರತಿಮೆಯನ್ನು ಚಿನ್ನದಿಂದ ಮಾಡಿಸಬೇಕು. ಚಂದ್ರನ ಎತ್ತರ ಆರಂಗುಲವೂ, ರೋಹಿಣಿಯದು ನಾಲ್ಕಂಗುಲವೂ ಇರಬೇಕು.

ಮುಕ್ತಾಫಲಾಷ್ಟಕಯುತಂ ಸಿತನೇತ್ರಪಟಾವೃತಂ ।
ಕ್ಷೀರಕುಂಭೋಪರಿ ಪುನಃ ಕಾಂಸ್ಯಪಾತ್ರಾಕ್ಷತಾನ್ವಿತಂ ।
ದದ್ಯಾನ್ಮಂತ್ರೇಣ ಪೂರ್ವಾಹ್ಣೇ ಶಾಲೀಕ್ಷುಫಲಸಂಯುತಂ ॥೨೦॥

ಶ್ವೇತಾಮಥ ಸುವರ್ಣಾಸ್ಯಾಂ ಖುರೈ ರೌಪ್ಯೈಃ ಸಮನ್ವಿತಾಂ ।
ಸವಸ್ತ್ರಭಾಜನಾಂ ಧೇನುಂ ತಥಾ ಶಂಖಂ ಚ ಶೋಭನಂ ॥೨೧॥

ಭೂಷಣೈರ್ದ್ವಿಜದಾಂಪತ್ಯಮಲಂಕೃತ್ಯ ಗುಣಾನ್ವಿತಂ ।
ಚಂದ್ರೋಽಯಂ ದ್ವಿಜರೂಪೇಣ ಸಭಾರ್ಯ ಇತಿ ಕಲ್ಪಯೇತ್ ॥೨೨॥

ಯಥಾ ನ ರೋಹಿಣೀ ಕೃಷ್ಣ ಶಯ್ಯಾಂ ಸಂತ್ಯಜ್ಯ ಗಚ್ಛತಿ ।
ಸೋಮರೂಪಸ್ಯ ತೇ ತದ್ವನ್ಮಮಾಽಭೇದೋಽಸ್ತು ಭೂತಿಭಿಃ ॥೨೩॥

ಯಥಾ ತ್ವಮೇವ ಸರ್ವೇಷಾಂ ಪರಮಾನಂದಮುಕ್ತಿದಃ ।
ಭುಕ್ತಿರ್ಮುಕ್ತಿಸ್ತಥಾ ಭಕ್ತಿಸ್ತ್ವಯಿ ಚಂದ್ರಾಸ್ತು ಮೇ ಸದಾ ॥೨೪॥

---

೨೦. ಆ ಪ್ರತಿಮೆಗೆ ಎಂಟು ಮುತ್ತುಗಳಿಂದ ಅಲಂಕಾರಮಾಡಿ ತೆಳ್ಳಗಿರುವ ಬಿಳಿಯ ವಸ್ತ್ರವನ್ನು ಧರಿಸಬೇಕು. ಅದನ್ನು ಕ್ಷೀರಕುಂಭದ ಮೇಲೆ ಕಂಚಿನ ಪಾತ್ರೆಯಲ್ಲಿ ಅಕ್ಷತೆಯೊಡನೆ ಇಟ್ಟು ಬತ್ತ, ಕಬ್ಬು, ಹಣ್ಣು ಇವುಗಳೊಡನೆ ಪೂರ್ವಾಹ್ಣದಲ್ಲಿ ಮಂತ್ರಪೂರ್ವಕವಾಗಿ ದಾನಮಾಡಬೇಕು.

೨೧. ಮುಖಕ್ಕೆ ಚಿನ್ನದ ಒಡವೆಗಳನ್ನೂ, ಗೊರಸುಗಳಿಗೆ ಬೆಳ್ಳಿಯ ಒಡವೆಗಳನ್ನೂ ಇಟ್ಟು ವಸ್ತ್ರದಿಂದ ಅಲಂಕರಿಸಿದ ಬಿಳಿಯ ಹಸುವನ್ನು ಕರೆಯುವ ಪಾತ್ರೆಯೊಡನೆ ದಾನ ಕೊಡಬೇಕು. ಹಾಗೆಯೇ ಮಂಗಳಕರವಾದ ಶಂಖದಾನವನ್ನೂ ಮಾಡಬೇಕು.

೨೨. ಸದ್ಗುಣಭರಿತರಾದ ಬ್ರಾಹ್ಮಣದಂಪತಿಗಳನ್ನು ಭೂಷಣಗಳಿಂದ ಅಲಂಕರಿಸಿ, ಪತ್ನೀ ಸಮೇತನಾದ ಚಂದ್ರನೇ ಈ ದ್ವಿಜರೂಪದಿಂದ ಬಂದಿರುವನೆಂದು ತಿಳಿಯಬೇಕು.

೨೩. "ಕೃಷ್ಣಾ, ರೋಹಿಣಿಯು ಚಂದ್ರರೂಪನಾದ ನಿನ್ನ ಶಯನವನ್ನು ಬಿಟ್ಟು ಹೋಗದಿರುವಹಾಗೆ ಸಂಪತ್ತುಗಳು ನನ್ನನ್ನು ಬಿಟ್ಟು ಬೇರೆಯಾಗದಿರಲಿ.

೨೪. ಓ ಚಂದ್ರಾ, ಎಲ್ಲರಿಗೂ ಪರಮಾನಂದಕರವಾದ ಮುಕ್ತಿಯನ್ನು ಕೊಡುವವನು ನೀನೇ. ಹಾಗೆಯೇ ಸುಖವೂ ಮೋಕ್ಷವೂ ನಿನ್ನಿಂದ ನನಗೂ ಲಭಿಸಲಿ. ಯಾವಾಗಲೂ ನಿನ್ನಲ್ಲಿ ನನಗೆ ಭಕ್ತಿಯು ಇರಲಿ."

ಇತಿ ಸಂಸಾರಭೀತಸ್ಯ ಮುಕ್ತಿಕಾಮಸ್ಯ ಚಾಽನಘ ।
ರೂಪಾರೋಗ್ಯಾಯುಷಾಮೇತದ್ವಿಧಾಯಕಮನುತ್ತಮಂ ॥೨೫॥

ಇದಮೇವ ಪಿತೃಣಾಂ ಚ ಸರ್ವದಾ ವಲ್ಲಭಂ ಮುನೇ ।
ತ್ರೈಲೋಕ್ಯಾಧಿಪತಿರ್ಭೂತ್ವಾ ಸಪ್ತಕಲ್ಪಶತತ್ರಯಂ ।
ಚಂದ್ರಲೋಕಮವಾಪ್ನೋತಿ ವಿದ್ಯುದ್ಭೂತ್ವಾ ತು ಮುಚ್ಯತೇ ॥೨೬॥

ನಾರೀ ವಾ ರೋಹಿಣೀಚಂದ್ರಶಯನಂ ಯಾ ಸಮಾಚರೇತ್ ।
ಸಾಽಪಿ ತತ್ಫಲಮಾಪ್ನೋತಿ ಪುನರಾವೃತ್ತಿದುರ್ಲಭಂ ॥೨೭॥

ಇತಿ ಪಠತಿ ಶೃಣೋತಿ ವಾ ಯ ಇತ್ಥಂ
ಮಧುಮಥನಾರ್ಚನಮಿಂದುಕೀರ್ತನೇನ ।
ಮತಿಮಪಿ ಚ ದದಾತಿ ಸೋಽಪಿ ಶೌರೇ
ರ್ಭವನಗತಃ ಪರಿಪೂಜ್ಯತೇಽಮರೌಘೈಃ ॥೨೮॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ರೋಹಿಣೀಚಂದ್ರಶಯನವ್ರತಂ ನಾಮ ಸಪ್ತಪಂಚಾಶೋಽಧ್ಯಾಯಃ

---

೨೫. ನಿರ್ಮಲಮನಸ್ಕನಾದ ಓ ನಾರದಾ, ಸಂಸಾರದಿಂದ ಭೀತನಾಗಿ ಮೋಕ್ಷಾಭಿಲಾಷಿಯಾದವನಿಗೆ ರೂಪ, ಆರೋಗ್ಯ, ಆಯುಸ್ಸುಗಳೆಲ್ಲವನ್ನೂ ಕೊಡುವ ಅತ್ಯುತ್ತಮ ವ್ರತವೆಂದರೆ ಇದೇ.

೨೬. ಎಲೈ ಮುನಿಯೇ, ಇದೇ ಪಿತೃಗಳಿಗೆ ಯಾವಾಗಲೂ ಇಷ್ಟವಾದ ವ್ರತವು. ಇದನ್ನು ಮಾಡಿದವನು ಮೂರು ಲೋಕಗಳ ಅಧಿಪತಿಯಾಗಿ ಎರಡು ಸಾವಿರದ ನೂರು ಕಲ್ಪಗಳ ಕಾಲ ಚಂದ್ರಲೋಕದಲ್ಲಿ ವಾಸಿಸುವನು. ಮಿಂಚಿನ ರೂಪವನ್ನು ತಾಳಿ ಮೋಕ್ಷವನ್ನು ಸೇರುವನು.

೨೭. ಈ ರೋಹಿಣೀಚಂದ್ರಶಯನವೆಂಬ ವ್ರತವನ್ನು ನೆರವೇರಿಸಿದ ಹೆಂಗಸೂ ಸಹ ಮೇಲಿನ ಫಲವನ್ನೇ ಪಡೆಯುವಳು. ಅವಳಿಗೆ ಪುನರ್ಜನ್ಮವು ಬಾರದು.

೨೮. ಚಂದ್ರನ ನಾಮಕೀರ್ತನದ ಮೂಲಕ ವಿಷ್ಣುವನ್ನು ಪೂಜಿಸುವ ಈ ವ್ರತವನ್ನು ಯಾವನು ನಿತ್ಯವೂ ಓದುತ್ತಾನೋ, ಇಲ್ಲವೇ ಕೇಳುತ್ತಾನೋ, ಅಥವಾ ಇತರರಿಗೆ ಇದರಲ್ಲಿ ಬುದ್ಧಿ ಹುಟ್ಟುವಂತೆ ಮಾಡುತ್ತಾನೋ ಅವನು ವಿಷ್ಣುಲೋಕ ವನ್ನು ಸೇರಿ, ದೇವತೆಗಳ ಸತ್ಕಾರಕ್ಕೆ ಪಾತ್ರನಾಗುವನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯವು ರೋಹಿಣೀ ಚಂದ್ರಶಯನವೆಂಬ ವ್ರತದ ವಿಧಿಯನ್ನು ತಿಳಿಸುವುದು.

ಚಂದ್ರನ ದಿವ್ಯ ನಾಮಗಳನ್ನು ಕೀರ್ತಿಸುತ್ತ ವಿಷ್ಣುವಿನ ಒಂದೊಂದು ಅವಯವವನ್ನೂ ಕ್ರಮವಾಗಿ ಪೂಜಿಸಬೇಕು. ಸೋಮವಾರವು ಇಲ್ಲವೇ ರೋಹಿಣೀ ನಕ್ಷತ್ರವು ಕೂಡಿದ ಹುಣ್ಣಿಮೆಯು ಈ ವ್ರತದ ಪ್ರಾರಂಭಕ್ಕೆ ಯುಕ್ತವಾದ ಕಾಲ. ಶಾಸ್ತ್ರೋಕ್ತವಾಗಿ ವ್ರತವನ್ನು ಆಚರಿಸಿದ ಬಳಿಕ ಹಿಂದಿನ ವ್ರತಗಳಲ್ಲಿ ತಿಳಿಸಿದಂತೆಯೇ ದಾನಗಳನ್ನು ನಡೆಸಬೇಕು. ಇದರ ಆಚರಣೆಯಿಂದ ಮನೋರಥಗಳೆಲ್ಲ ಸಿದ್ಧಿಸುವುವು. ಮೋಕ್ಷಲಾಭವುಂಟಾಗುವುದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ರೋಹಿಣೀಚಂದ್ರಶಯನವ್ರತವೆಂಬ
ಐವತ್ತೇಳನೆಯ ಅಧ್ಯಾಯವು ಮುಗಿದುದು.



# ಅಥಾಷ್ಟಪಂಚಾಶೋಽಧ್ಯಾಯಃ

॥ ಸೂತ ಉವಾಚ ॥

ಜಲಾಶಯಗತಂ ವಿಷ್ಣುಮುವಾಚ ರವಿನಂದನಃ ।
ತಡಾಗಾರಾಮಕೂಪಾನಾಂ ವಾಪೀಷು ನಲಿನೀಷು ಚ ॥ ೧ ॥

ವಿಧಿಂ ಪೃಚ್ಛಾಮಿ ದೇವೇಶ ದೇವತಾಯತನೇಷು ಚ ।
ಕೇ ತತ್ರ ಚರ್ತ್ವಿಜೋ ನಾಥ ದೇವೀ ವಾ ಕೀದೃಶೀ ಭವೇತ್ । ॥ ೨ ॥

ದಕ್ಷಿಣಾ ಬಲಯಃ ಕಾಲಃ ಸ್ಥಾನಮಾಚಾರ್ಯ ಏವ ಚ ।
ದ್ರವ್ಯಾಣಿ ಕಾನಿ ಶಸ್ತಾನಿ ಸರ್ವಮಾಚಕ್ಷ್ವ ತತ್ತ್ವತಃ ॥ ೩ ॥

॥ ಮತ್ಸ್ಯ ಉವಾಚ ॥

ಶೃಣು ರಾಜನ್ ಮಹಾಬಾಹೋ ತಡಾಗಾದಿಷು ಯೋ ವಿಧಿಃ ।
ಪುರಾಣೇಷ್ವಿತಿಹಾಸೋಽಯಂ ಪಠ್ಯತೇ ವೇದವಾದಿಭಿಃ ॥ ೪ ॥

---

೧. ಸೂತಮುನಿ ಹೇಳಿದನು.—ಸೂರ್ಯಪುತ್ರನಾದ ವೈವಸ್ವತ ಮನುವು ಸಮುದ್ರದಲ್ಲಿದ್ದ ವಿಷ್ಣುವನ್ನು ಬೇಡಿದನು. ಓ ದೇವೇಶಾ, ಕೆರೆ, ತೋಟ, ಬಾವಿ, ಕೊಳ, ಸರೋವರ, ಮತ್ತು ದೇವಸ್ಥಾನ ಇವುಗಳ ಪ್ರತಿಷ್ಠಾಕಾಲದಲ್ಲಿ ನಡೆಸಬೇಕಾದ ವಿಧಿಯನ್ನು ಕೇಳಬಯಸುತ್ತೇನೆ.

೨-೩. ಪ್ರಭೂ, ಆ ಕರ್ಮದಲ್ಲಿ ಋತ್ವಿಜರು ಯಾರು? ಅರ್ಚನೆಮಾಡಬೇಕಾದ ದೇವತೆ ಯಾವುದು? ದಕ್ಷಿಣೆ, ಪೂಜಾಸಾಮಗ್ರಿಗಳು, ಕಾಲ, ಸ್ಥಾನ, ಆಚಾರ್ಯ ಇವರ ಲಕ್ಷಣಗಳಾವುವು? ಯಾವ ಯಾವ ದ್ರವ್ಯಗಳು ಪ್ರಶಸ್ತವಾದುವು? ಇವೆಲ್ಲವನ್ನೂ ಯಥಾವತ್ತಾಗಿ ತಿಳಿಸು.

೪. ಮತ್ಸ್ಯಮೂರ್ತಿ ಹೇಳಿದನು.—ಶೂರಾಗ್ರೇಸರನಾದ ಎಲೈ ರಾಜನೇ, ಕೆರೆ, ಕೊಳ ಮೊದಲಾದುವುಗಳ ಪ್ರತಿಷ್ಠೆಗೆ ಸಂಬಂಧಪಟ್ಟ ಶಾಸ್ತ್ರವಿಧಿಯನ್ನು ಹೇಳುವೆನು ಕೇಳು. ಈ ವೃತ್ತಾಂತವು ಪುರಾಣಸಿದ್ಧವಾದುದೆಂದು ವೇದವನ್ನು ಬಲ್ಲವರು ಹೇಳುತ್ತಾರೆ.

ಪ್ರಾಪ್ಯ ಪಕ್ಷಂ ಶುಭಂ ಶುಕ್ಲಮತೀತೇ ಚೋತ್ತರಾಯಣೇ ।
ಪುಣ್ಯೇಽಹ್ನಿ ವಿಪ್ರಕಥಿತೇ ಕೃತ್ವಾ ಬ್ರಾಹ್ಮಣವಾಚನಂ ॥ ೫ ॥

ಪ್ರಾಗುದಕ್ಪ್ರವಣೇ ದೇಶೇ ತಡಾಗಸ್ಯ ಸಮೀಪತಃ ।
ಚತುರ್ಹಸ್ತಾಂ ಶುಭಾಂ ವೇದೀಂ ಚತುರಸ್ರಾಂ ಚತುರ್ಮುಖಾಂ ॥ ೬ ॥

ತಥಾ ಷೋಡಶಹಸ್ತಃ ಸ್ಯಾನ್ಮಂಡಪಶ್ಚ ಚತುರ್ಮುಖಃ ।
ವೇದ್ಯಾಶ್ಚ ಪರಿತೋ ಗರ್ತಾ ರತ್ನಿಮಾತ್ರಾಸ್ತ್ರಿಮೇಖಲಾಃ ॥ ೭ ॥

ನವ ಸಪ್ತಾಥ ವಾ ಪಂಚ ನಾತಿರಿಕ್ತಾ ನೃಪಾತ್ಮಜ ।
ವಿತಸ್ತಿಮಾತ್ರಾ ಯೋನಿಃ ಸ್ಯಾತ್ಷಟ್ಸಪ್ತಾಂಗುಲಿವಿಸ್ತೃತಾ ॥ ೮ ॥

---

೫-೬. ಸೂರ್ಯನು ಉತ್ತರಾಯಣವನ್ನು ಪ್ರವೇಶಿಸಿದ ಬಳಿಕ, ಶುಭಮಯವಾದ ಶುಕ್ಲಪಕ್ಷದಲ್ಲಿ ಶಾಸ್ತ್ರಜ್ಞರಾದ ಬ್ರಾಹ್ಮಣರು ಹೇಳಿದ ಒಳ್ಳೆಯ ದಿನದಲ್ಲಿ ದ್ವಿಜರ ಅನುಗ್ರಹವನ್ನು ಪಡೆದು, ಕೆರೆಯ ಹತ್ತಿರ ಪೂರ್ವಕ್ಕಾಗಲೀ ಉತ್ತರಕ್ಕಾಗಲೀ ಇಳಿಜಾರಾದ ಸ್ಥಳದಲ್ಲಿ ನಾಲ್ಕು ಮೊಳದ ಚಚ್ಚೌಕವಾದ ವೇದಿಕೆಯನ್ನು ನಿರ್ಮಿಸಬೇಕು. ಅದಕ್ಕೆ ನಾಲ್ಕು ಕಡೆಗಳಲ್ಲೂ ಮುಖಗಳಿರಬೇಕು.

೭. ಹಾಗೆಯೇ ಯಾಗಮಂಟಪವೂ ಸಹ ಹದಿನಾರು ಮೊಳ ಉದ್ದವೂ ಅಷ್ಟೇ ಅಗಲವೂ ಆಗಿ, ನಾಲ್ಕುಕಡೆಗಳಲ್ಲಿಯೂ ಬಾಗಿಲುಗಳುಳ್ಳದಾಗಿರಬೇಕು. ವೇದಿಕೆಯ ನಾಲ್ಕು ಕಡೆಯೂ ಗುದ್ದುಮೊಳದ ಅಳತೆಯ ಕುಂಡಗಳನ್ನು ತೋಡಬೇಕು. ಅವುಗಳಿಗೆ ಮೂರು ಮೇಖಲೆಗಳು ಎಂದರೆ ಸುತ್ತುಗಟ್ಟುಗಳು ಇರಬೇಕು.

೮. ಓ ರಾಜಪುತ್ರಾ, ಮೇಖಲೆಗಳು ಕ್ರಮವಾಗಿ ಒಂಬತ್ತು, ಏಳು, ಮತ್ತು ಐದು ಅಂಗುಲಗಳ ಪ್ರಮಾಣವಿರಬೇಕು. ಅದಕ್ಕಿಂತ ಅಧಿಕವಾಗಿರಬಾರದು. ಯೋನಿಯು—ಎಂದರೆ ಹೋಮಮಾಡುವಾಗ ನೆಲದ ಮೇಲೆ ಚೆಲ್ಲಿದ ತುಪ್ಪವು ಅಗ್ನಿಕುಂಡದೊಳಕ್ಕೆ ಹರಿದುಹೋಗುವಂತೆ ಇಳಿಜಾರಾಗಿ ರಚಿಸಿರುವ, ಆನೆಯ ತುಟಿಗಳ ಆಕಾರದ ಒಂದು ಬಗೆಯ ಬಚ್ಚಲು—ಆರೇಳಂಗುಲ ಅಗಲವೂ ಹನ್ನೆರಡಂಗುಲ ಉದ್ದವೂ ಇರಬೇಕು.

**ಗರ್ತಾಶ್ಚ ತತ್ರ ಸಪ್ತ ಸ್ಯುಸ್ತ್ರಿಪರ್ವೋಚ್ಛ್ರಿತಮೇಖಲಾಃ ।**
**ಸರ್ವತಸ್ತು ಸವರ್ಣಾಃ ಸ್ಯುಃ ಪತಾಕಾಧ್ವಜಸಂಯುತಾಃ ॥ ೯ ॥**

**ಅಶ್ವತ್ಥೋದುಂಬರಪ್ಲಕ್ಷವಟಶಾಖಾಕೃತಾನಿ ತು ।**
**ಮಂಡಪಸ್ಯ ಪ್ರತಿದಿಶಂ ದ್ವಾರಾಣ್ಯೇತಾನಿ ಕಾರಯೇತ್ ॥೧೦॥**

**ಶುಭಾಸ್ತತ್ರಾಷ್ಟ ಹೋತಾರೋ ದ್ವಾರಪಾಲಾಸ್ತಥಾಷ್ಟ ವೈ ।**
**ಅಷ್ಟೌ ತು ಜಾಪಕಾಃ ಕಾರ್ಯಾ ಬ್ರಾಹ್ಮಣಾ ವೇದಪಾರಗಾಃ ॥೧೧॥**

**ಸರ್ವಲಕ್ಷಣಸಂಪೂರ್ಣೋ ಮಂತ್ರವಿದ್ವಿಜಿತೇಂದ್ರಿಯಃ ।**
**ಕುಲಶೀಲಸಮಾಯುಕ್ತಃ ಪುರೋಧಾಃ ಸ್ಯಾದ್ದ್ವಿಜೋತ್ತಮಃ ॥೧೨॥**

**ಪ್ರತಿಗರ್ತೇಷು ಕಲಶಾ ಯಜ್ಞೋಪಕರಣಾನಿ ಚ ।**
**ವ್ಯಜನಂ ಚಾಮರೇ ಶುಭ್ರೇ ತಾಮ್ರಪಾತ್ರೇ ಸುವಿಸ್ತೃತೇ ॥೧೩॥**

---

೯. ಅಗ್ನಿಕುಂಡಗಳ ಸಂಖ್ಯೆ ಏಳು. ಅವುಗಳ ಮೇಖಲೆಗಳು (ಸುತ್ತು ಗಟ್ಟುಗಳು) ಒಂದಕ್ಕಿಂತ ಮತ್ತೊಂದು ಉನ್ನತವಾಗಿದ್ದು ಮೂರು ಮೆಟ್ಟಲುಗಳಂತಿರುವುವು. ನಾಲ್ಕು ಕಡೆಗಳಲ್ಲಿಯೂ ಅಗ್ನಿಕುಂಡಗಳು ಒಂದೇ ಆಕಾರದ ಮತ್ತು ಬಣ್ಣದ ಧ್ವಜಗಳಿಂದ ಅಲಂಕೃತವಾಗಿರುವುವು.

೧೦. ಅರಳಿ, ಅತ್ತಿ, ಬಸರಿ, ಆಲ ಈ ಮರಗಳ ಕೊಂಬೆಗಳಿಂದ ಮಾಡಿದ ಬಾಗಿಲುಗಳನ್ನು ಮಂಟಪದ ಒಂದೊಂದು ದಿಕ್ಕಿನಲ್ಲಿ ಇಡಬೇಕು.

೧೧. ವೇದಪಾರಂಗತರೂ ಮಂಗಳಸ್ವರೂಪರೂ ಆದ ಬ್ರಾಹ್ಮಣರಲ್ಲಿ ಎಂಟು ಜನರನ್ನು ಹೋತೃಗಳನ್ನಾಗಿಯೂ, ಎಂಟು ಜನರನ್ನು ದ್ವಾರಪಾಲಕರನ್ನಾಗಿಯೂ, ಮತ್ತೆ ಎಂಟು ಜನರನ್ನು ಜಪಕರ್ತೃಗಳನ್ನಾಗಿಯೂ ವರಿಸಬೇಕು.

೧೨. ಸಕಲ ಲಕ್ಷಣಗಳಿಂದಲೂ ಕೂಡಿ, ಮಂತ್ರಜ್ಞನೂ, ಜಿತೇಂದ್ರಿಯನೂ, ಕುಲಶೀಲಗಳಲ್ಲಿ ಪ್ರಶಸ್ತನೂ ಆದ ಬ್ರಾಹ್ಮಣೋತ್ತಮನನ್ನು ಪುರೋಹಿತನಾಗಿರುವಂತೆ ಪ್ರಾರ್ಥಿಸಬೇಕು.

೧೩. ಪ್ರತಿಯೊಂದು ಕುಂಡದ ಬಳಿಯಲ್ಲೂ ಕಲಶಗಳನ್ನೂ, ಯಜ್ಞೋಪಕರಣಗಳನ್ನೂ, ಬೀಸಣಿಗೆಯನ್ನೂ, ಶುಭ್ರವಾದ ಎರಡು ಚಾಮರಗಳನ್ನೂ ಅಗಲವಾದ ಎರಡು ತಾಮ್ರದ ಪಾತ್ರೆಗಳನ್ನೂ ಇರಿಸಬೇಕು.

ತತಸ್ತ್ವನೇಕವರ್ಣಾಃ ಸ್ಯುಶ್ಚರವಃ ಪ್ರತಿದೈವತಂ ।
ಆಚಾರ್ಯಃ ಪ್ರಕ್ಷಿಪೇದ್ಭೂಮಾವನುಮಂತ್ರ್ಯ ವಿಚಕ್ಷಣಃ ॥೧೪॥
ತ್ರ್ಯರತ್ನಿಮಾತ್ರೋ ಯೂಪಃ ಸ್ಯಾತ್ಕ್ಷೀರವೃಕ್ಷವಿನಿರ್ಮಿತಃ ।
ಯಜಮಾನಪ್ರಮಾಣೋ ವಾ ಸಂಸ್ಥಾಪ್ಯೋ ಭೂತಿಮಿಚ್ಛತಾ ॥೧೫॥
ಹೇಮಾಲಂಕಾರಿಣಃ ಕಾರ್ಯಾಃ ಪಂಚವಿಂಶತಿಋತ್ವಿಜಃ ।
ಕುಂಡಲಾನಿ ಚ ಹೈಮಾನಿ ಕೇಯೂರಕಟಕಾನಿ ಚ ॥೧೬॥
ತಥಾಂಗುಲೀಪವಿತ್ರಾಣಿ ವಾಸಾಂಸಿ ವಿವಿಧಾನಿ ಚ ।
ಪೂಜಯೇತ್ತು ಸಮಂ ಸರ್ವಾನಾಚಾರ್ಯೋ ದ್ವಿಗುಣಂ ಪುನಃ ।
ದದ್ಯಾಚ್ಛಯನಸಂಯುಕ್ತಮಾತ್ಮನಶ್ಚಾಪಿ ಯತ್ಪ್ರಿಯಂ ॥೧೭॥
ಸೌವರ್ಣಕೂರ್ಮಮಕರೌ ರಾಜತೌ ಮತ್ಸ್ಯದುಂದುಭೌ ।
ತಾಮ್ರೌ ಕುಲೀರಮಂಡೂಕಾವಾಯಸಃ ಶಿಂಶುಮಾರಕಃ ।
ಏವಮಾಸಾದ್ಯ ತತ್ಸರ್ವಮಾದಾವೇವ ವಿಶಾಂ ಪತೇ ॥೧೮॥

---

೧೪. ಒಂದೊಂದು ದೇವತೆಗೂ ತಕ್ಕಂತೆ ಬೇರೆ ಬೇರೆ ಬಣ್ಣದ ಅನ್ನವನ್ನು ಬಲಿಗಾಗಿ ಸಿದ್ಧಪಡಿಸಬೇಕು. ಶಾಸ್ತ್ರಜ್ಞನಾದ ಆಚಾರ್ಯನು ಮಂತ್ರೋಚ್ಚಾರಣ ಪೂರ್ವಕವಾಗಿ ಅದನ್ನು ನೆಲದ ಮೇಲೆ ಹಾಕುವನು.

೧೫. ಕ್ಷೀರವೃಕ್ಷದಿಂದ ನಿರ್ಮಿತವಾದ ಯೂಪಸ್ತಂಭವನ್ನು ನೆಡಬೇಕು. ಅದು ಮೂರು ಮೊಳ ಎತ್ತರವಿರಬೇಕು. ಅಥವಾ ಯಜಮಾನನು ಸಂಪತ್ಕಾಮನಾಗಿದ್ದರೆ ಅವನಷ್ಟೇ ಉನ್ನತವಾಗಿದ್ದರೂ ಇರಬಹುದು.

೧೬-೧೭. ಇಪ್ಪತ್ತೈದು ಜನ ಋತ್ವಿಕ್ಕುಗಳಿಗೂ ಕುಂಡಲಗಳು, ತೋಳ್ಬಳೆಗಳು, ಮುಂಗೈ ಬಳೆಗಳು, ಬೆರಳುಗಳಿಗೆ ಪವಿತ್ರಗಳು, ಮುಂತಾದ ಸುವರ್ಣಾಭರಣಗಳನ್ನೂ ವಿಧವಿಧವಾದ ವಸ್ತ್ರಗಳನ್ನೂ ಕೊಡಬೇಕು. ಎಲ್ಲರನ್ನೂ ಸಮಾನವಾಗಿ ಗೌರವಿಸಬೇಕು. ಆಚಾರ್ಯನಿಗಾದರೋ ಮಿಕ್ಕವರಿಗಿಂತ ದ್ವಿಗುಣವಾಗಿ ಸತ್ಕಾರವನ್ನು ಸಲ್ಲಿಸಬೇಕು. ಆತನಿಗೆ ಹಾಸಿಗೆ ಮೊದಲಾಗಿ ಇಷ್ಟವಾದುದೆಲ್ಲವನ್ನೂ ಕೊಡಬಹುದು.

೧೮. ರಾಜಾ, ಆಮೆ ಮತ್ತು ಮಕರವನ್ನು ಚಿನ್ನದಿಂದಲೂ, ಮೀನು ಮತ್ತು ನೀರುಹಾವನ್ನು ಬೆಳ್ಳಿಯಿಂದಲೂ, ನಳ್ಳಿ ಮತ್ತು ಕಪ್ಪೆಯನ್ನು ತಾಮ್ರದಿಂದಲೂ, ಶಿಂಶುಮಾರವನ್ನು ಕಬ್ಬಿಣದಿಂದಲೂ ಮೊದಲೇ ಮಾಡಿಸಿ ಸಿದ್ಧಪಡಿಸಿಕೊಂಡಿರಬೇಕು.

ಶುಕ್ಲಮಾಲ್ಯಾಂಬರಧರಃ ಶುಕ್ಲಗಂಧಾನುಲೇಪನಃ ।
ಸರ್ವೌಷಧ್ಯುದಕೈಸ್ತತ್ರ ಸ್ನಾಪಿತೋ ವೇದಪಾರಗೈಃ ॥೧೯॥

ಯಜಮಾನಃ ಸಪತ್ನೀಕಃ ಪುತ್ರಪೌತ್ರಸಮನ್ವಿತಃ ।
ಪಶ್ಚಿಮಂ ದ್ವಾರಮಾಸಾದ್ಯ ಪ್ರವಿಶೇದ್ಯಾಗಮಂಡಪಂ ॥೨೦॥

ತತೋ ಮಂಗಲಶಬ್ದೇನ ಭೇರೀಣಾಂ ನಿಸ್ವನೇನ ಚ ।
ರಜಸಾ ಮಂಡಲಂ ಕುರ್ಯಾತ್ಪಂಚವರ್ಣೇನ ತತ್ತ್ವವಿತ್ ॥೨೧॥

ಷೋಡಶಾರಂ ತತಶ್ಚಕ್ರಂ ಪದ್ಮಗರ್ಭಂ ಚತುರ್ಮುಖಂ ।
ಚತುರಸ್ರಂ ಚ ಪರಿತೋ ವೃತ್ತಂ ಮಧ್ಯೇ ಸುಶೋಭನಂ ॥೨೨॥

ವೇದ್ಯಾಶ್ಚೋಪರಿ ತತ್ಕೃತ್ವಾ ಗ್ರಹಾನ್ ಲೋಕಪತೀಂಸ್ತತಃ ।
ವಿನ್ಯಸೇನ್ಮಂತ್ರತಃ ಸರ್ವಾನ್ ಪ್ರತಿದಿಕ್ಷು ವಿಚಕ್ಷಣಃ ॥೨೩॥

---

೧೯-೨೦. ವೇದಪಾರಂಗತರಾದ ಬ್ರಾಹ್ಮಣರು ಯಜಮಾನನಿಗೆ ಸಕಲ ವಿಧವಾದ ಮೂಲಿಕೆಗಳಿಂದ ಮಿಶ್ರವಾದ ನೀರಿನಲ್ಲಿ ಸ್ನಾನಮಾಡಿಸುವರು. ಅವನು ಬಿಳಿಯ ವಸ್ತ್ರವನ್ನು ಧರಿಸಿ, ಅದೇ ಬಣ್ಣದ ಹೂವಿನಿಂದಲೂ ಗಂಧದಿಂದಲೂ ಅಲಂಕೃತನಾಗಿ, ಹೆಂಡಿತಿ, ಮಗ, ಮೊಮ್ಮಗ ಇವರೊಡಗೂಡಿ ಪಶ್ಚಿಮದಿಕ್ಕಿನ ಬಾಗಿಲಿನಿಂದ ಯಾಗಮಂಟಪವನ್ನು ಪ್ರವೇಶಿಸುವನು.

೨೧. ಬಳಿಕ ಮಂಗಳವಾದ್ಯಗಳು ಘೋರ್ಗರೆಯುತ್ತಿರಲು, ನಗಾರಿಗಳು ಧ್ವನಿಮಾಡುತ್ತಿರಲು, ಶಾಸ್ತ್ರವಿಧಿಯನ್ನು ಬಲ್ಲ ಯಜಮಾನನು ಐದು ಬಣ್ಣದ ಪುಡಿಗಳಿಂದ ಮುಂದೆ ಹೇಳುವಂತೆ ಮಂಡಲವನ್ನು ರಚಿಸಬೇಕು.

೨೨-೨೩. ತರುವಾಯ ವೇದಿಕೆಯ ಮೇಲೆ ಹದಿನಾರು ಅರೆಗಾಲುಗಳಿಂದ ಕೂಡಿದ ಚಕ್ರವನ್ನು ಬರೆಯಬೇಕು. ಅದರ ಒಳಗಡೆ ತಾವರೆಯನ್ನು ಚಿತ್ರಿಸಬೇಕು. ಚಕ್ರದ ನಾಲ್ಕು ಪಕ್ಕಗಳನ್ನೂ ಸೇರಿಸಿ ಚೌಕವನ್ನು ರಚಿಸಬೇಕು. ಹೀಗೆ ಅದು ಹೊರಗಡೆ ಚಚ್ಚೌಕವೂ ಒಳಗಡೆ ವೃತ್ತವೂ ಆಗಿರುವುದು. ಆಮೇಲೆ ಅದರ ಒಂದೊಂದು ದಿಕ್ಕಿನಲ್ಲೂ ಕ್ರಮವಾಗಿ ಗ್ರಹಗಳನ್ನೂ ಲೋಕಪಾಲಕರನ್ನೂ ಮಂತ್ರಗಳಿಂದ ವಿನ್ಯಾಸಮಾಡಬೇಕು.

ಕೂರ್ಮಾದಿ ಸ್ಥಾಪಯೇನ್ಮಧ್ಯೇ ವಾರುಣಂ ಮಂತ್ರಮಾಶ್ರಿತಃ ।
ಬ್ರಹ್ಮಾಣಂ ಚ ಶಿವಂ ವಿಷ್ಣುಂ ತತ್ರೈವ ಸ್ಥಾಪಯೇದ್ಬುಧಃ ॥೨೪॥

ವಿನಾಯಕಂ ಚ ವಿನ್ಯಸ್ಯ ಕಮಲಾಮಂಬಿಕಾಂ ತಥಾ ।
ಶಾಂತ್ಯರ್ಥಂ ಸರ್ವಲೋಕಾನಾಂ ಭೂತಗ್ರಾಮಂ ನ್ಯಸೇತ್ತತಃ ॥೨೫॥

ಪುಷ್ಪಭಕ್ಷ್ಯಫಲೈರ್ಯುಕ್ತಮೇವಂ ಕೃತ್ವಾಧಿವಾಸನಂ ।
ಕುಂಭಾನ್ ಸಜಲಗರ್ಭಾಂಸ್ತಾನ್ವಾಸೋಭಿಃ ಪರಿವೇಷ್ಟಯೇತ್ ॥೨೬॥

ಪುಷ್ಪಗಂಧೈರಲಂಕೃತ್ಯ ದ್ವಾರಪಾಲಾನ್ ಸಮಂತತಃ ।
ಪಠಧ್ವಮಿತಿ ತಾನ್ ಬ್ರೂಯಾದಾಚಾರ್ಯಸ್ತ್ವಭಿಪೂಜಯೇತ್ ॥೨೭॥

ಬಹ್ವೃಚೌ ಪೂರ್ವತಃ ಸ್ಥಾಪ್ಯೌ ದಕ್ಷಿಣೇನ ಯಜುರ್ವಿದೌ ।
ಸಾಮಗೌ ಪಶ್ಚಿಮೇ ತದ್ವದುತ್ತರೇಣ ತ್ವಥರ್ವಣೌ ॥೨೮॥

ಉದಙ್ಮುಖೋ ದಕ್ಷಿಣತೋ ಯಜಮಾನ ಉಪಾವಿಶೇತ್ ।
ಯಜಧ್ವಮಿತಿ ತಾನ್ ಬ್ರೂಯಾದ್ಧೌತ್ರಿಕಾನ್ ಪುನರೇವ ತು ॥೨೯॥

---

೨೪. ನಡುವೆ ಆದಿಕೂರ್ಮ, ಆದಿಶೇಷ ಮುಂತಾದವರನ್ನು ಸ್ಥಾಪನೆಮಾಡಿ, ಅಲ್ಲಿಯೇ ವಾರುಣಮಂತ್ರದಿಂದ ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿಗಳನ್ನು ಆವಾಹಿಸಬೇಕು.

೨೫. ವಿನಾಯಕ, ಲಕ್ಷ್ಮೀ, ಪಾರ್ವತಿ ಇವರನ್ನೂ ನೆಲೆಗೊಳಿಸಿ ಸಕಲ ಲೋಕಗಳ ಶಾಂತಿಗೋಸ್ಕರವಾಗಿ ಭೂತವರ್ಗವನ್ನೂ ಸ್ಥಾಪಿಸಬೇಕು.

೨೬. ಜಲಪೂರ್ಣವಾದ ಕುಂಭಗಳನ್ನು ಗಂಧಪುಷ್ಪಾದಿಗಳಿಂದ ಸಂಸ್ಕರಿಸಿ, ಪುಷ್ಪಭಕ್ಷ್ಯಫಲಗಳ ಸಹಿತವಾಗಿ ಸ್ಥಾಪನಮಾಡಿ ವಸ್ತ್ರಗಳನ್ನು ಧರಿಸಬೇಕು.

೨೭. ಆಚಾರ್ಯನು ಸುತ್ತಲೂ ಇರುವ ದ್ವಾರಪಾಲಕರನ್ನು ಗಂಧಪುಷ್ಪಾದಿಗಳಿಂದ ಅಲಂಕರಿಸಿ "ಮಂತ್ರವನ್ನು ಪಠನಮಾಡಿರಿ" ಎಂದು ಪ್ರಾರ್ಥಿಸಬೇಕು.

೨೮. ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ ಇವುಗಳನ್ನು ಪಾರಾಯಣಮಾಡುವವರು ಕ್ರಮವಾಗಿ ಪೂರ್ವ, ದಕ್ಷಿಣ, ಪಶ್ಚಿಮ ಮತ್ತು ಉತ್ತರದಿಕ್ಕುಗಳಲ್ಲಿ ಆಸನಗಳನ್ನು ಅಲಂಕರಿಸುವರು.

೨೯. ಯಜಮಾನನು ಅಗ್ನಿಗೆ ಬಲಗಡೆಯಲ್ಲಿ ಉತ್ತರಾಭಿಮುಖವಾಗಿ ಕುಳಿತುಕೊಂಡು "ಹೋಮಮಾಡಿರಿ" ಎಂದು ಹೋತೃಗಳನ್ನು ಪ್ರಾರ್ಥಿಸಬೇಕು.

**ಉತ್ಕೃಷ್ಟಾನ್ ಮಂತ್ರಜಾಪೇನ ತಿಷ್ಠಧ್ವಮಿತಿ ಜಾಪಕಾನ್ ।**
**ಏವಮಾದಿಶ್ಯ ತಾನ್ಸರ್ವಾನ್ಪರ್ಯುಕ್ಷ್ಯಾಗ್ನಿಂ ಸ ಮಂತ್ರವಿತ್ ॥೩೦॥**

**ಜುಹುಯಾದ್ವಾರುಣೈರ್ಮಂತ್ರೈರಾಜ್ಯಂ ಚ ಸಮಿಧಸ್ತಥಾ ।**
**ಋತ್ವಿಗ್ಭಿಶ್ಚಾಥ ಹೋತವ್ಯಂ ವಾರುಣೈರೇವ ಸರ್ವತಃ ॥೩೧॥**

**ಗ್ರಹೇಭ್ಯೋ ವಿಧಿವದ್ಧುತ್ವಾ ತಥೇಂದ್ರಾಯೇಶ್ವರಾಯ ಚ ।**
**ಮರುದ್ಭ್ಯೋ ಲೋಕಪಾಲೇಭ್ಯೋ ವಿಧಿವದ್ವಿಶ್ವಕರ್ಮಣೇ ॥೩೨॥**

**ರಾತ್ರಿಸೂಕ್ತಂ ಚ ರೌದ್ರಂ ಚ ಪಾವಮಾನಂ ಸುಮಂಗಲಂ ।**
**ಜಪೇಯುಃ ಪೌರುಷಂ ಸೂಕ್ತಂ ಪೂರ್ವತೋ ಬಹ್ವೃಚಃ ಪೃಥಕ್ ॥೩೩॥**

**ಶಾಕ್ರಂ ರೌದ್ರಂ ಚ ಸೌಮ್ಯಂ ಚ ಕೂಷ್ಮಾಂಡಂ ಜಾತವೇದಸಂ ।**
**ಸೌರಸೂಕ್ತಂ ಜಪೇನ್ಮಂತ್ರಂ ದಕ್ಷಿಣೇನ ಯಜುರ್ವಿದಃ ॥೩೪॥**

---

೩೦. ಉತ್ಕೃಷ್ಟರಾದ ಜಪಕರ್ತೃಗಳನ್ನು "ನೀವು ಮಂತ್ರಜಪದಲ್ಲಿ ನಿರತರಾಗಿರಿ" ಎಂದು ಬೇಡಿ, ಮಂತ್ರಜ್ಞನಾದ ಯಜಮಾನನು ಅಗ್ನಿಗೆ ಪರಿಷೇಚನ ಮಾಡಬೇಕು.

೩೧. ವರುಣದೇವತಾಕವಾದ ಮಂತ್ರಗಳನ್ನು ಉಚ್ಚರಿಸುತ್ತ ತುಪ್ಪದಿಂದಲೂ ಸಮಿತ್ತುಗಳಿಂದಲೂ ಹೋಮವನ್ನು ಮಾಡಬೇಕು. ಎಲ್ಲೆಡೆಯಲ್ಲೂ ಇರುವ ಋತ್ವಿಕ್ಕುಗಳು ವಾರುಣಮಂತ್ರಗಳಿಂದಲೇ ಹೋಮ ಮಾಡಬೇಕು.

೩೨. ನವಗ್ರಹಗಳು, ಇಂದ್ರ, ಈಶ್ವರ, ಮರುದ್ದೇವತೆಗಳು, ಲೋಕಪಾಲಕರು, ವಿಶ್ವಕರ್ಮ ಇವರೆಲ್ಲರಿಗೂ ಶಾಸ್ತ್ರವಿಧಿಯನ್ನನುಸರಿಸಿ ಆಹುತಿಗಳನ್ನು ಕೊಡಬೇಕು.

೩೩. ಪೂರ್ವದಿಕ್ಕಿನಲ್ಲಿ ಕುಳಿತಿರುವ ಋಗ್ವೇದಿಗಳು ರಾತ್ರಿಸೂಕ್ತ, ರುದ್ರಸೂಕ್ತ, ಪವಮಾನಸೂಕ್ತ, ಸುಮಂಗಲಸೂಕ್ತ ಇವುಗಳನ್ನು ಬೇರೆ ಬೇರೆಯಾಗಿ ಜಪಿಸುವರು.

೩೪. ದಕ್ಷಿಣದಲ್ಲಿರುವ ಯಜುರ್ವೇದಿಗಳು ಶಕ್ರಸೂಕ್ತ, ರುದ್ರಸೂಕ್ತ, ಸೋಮಸೂಕ್ತ, ಕೂಷ್ಮಾಂಡಸೂಕ್ತ, ಅಗ್ನಿಸೂಕ್ತ ಮತ್ತು ಸೌರಸೂಕ್ತಗಳನ್ನು ಪಾರಾಯಣಮಾಡುವರು.

**ವೈರಾಜ್ಯಂ ಪೌರುಷಂ ಸೂಕ್ತಂ ಸೌವರ್ಣಂ ರುದ್ರಸಂಹಿತಾಂ ।**
**ಶೈಶವಂ ಪಂಚನಿಧನಂ ಗಾಯತ್ರಂ ಜ್ಯೇಷ್ಠಸಾಮ ಚ ॥೩೫॥**

**ವಾಮದೇವ್ಯಂ ಬೃಹತ್ಸಾಮ ರೌರವಂ ಸರಥಂತರಂ ।**
**ಗವಾಂ ವ್ರತಂ ಚ ಕಾಣ್ವಂ ಚ ರಕ್ಷೋಘ್ನಂ ವಯಸಸ್ತಥಾ ।**
**ಗಾಯೇಯುಃ ಸಾಮಗಾ ರಾಜನ್ ಪಶ್ಚಿಮಂ ದ್ವಾರಮಾಶ್ರಿತಾಃ ॥೩೬॥**

**ಅಥರ್ವಣಶ್ಚೋತ್ತರತಃ ಶಾಂತಿಕಂ ಪೌಷ್ಟಿಕಂ ತಥಾ ।**
**ಜಪೇಯುರ್ಮನಸಾ ದೇವಮಾಶ್ರಿತ್ಯ ವರುಣಂ ಪ್ರಭುಂ ॥೩೭॥**

**ಪೂರ್ವೇದ್ಯುರಭಿತೋ ರಾತ್ರಾವೇವಂ ಕೃತ್ವಾಧಿವಾಸನಂ ।**
**ಗಜಾಶ್ವರಥ್ಯಾವಲ್ಮೀಕಾತ್ಸಂಗಮಾದ್ಧ್ರದಗೋಕುಲಾತ್ ।**
**ಮೃದಮಾದಾಯ ಕುಂಭೇಷು ಪ್ರಕ್ಷಿಪೇಚ್ಚತ್ತ್ವರಾತ್ತಥಾ ॥೩೮॥**

**ರೋಚನಾಂ ಚ ಸಸಿದ್ಧಾರ್ಥಾಂ ಗಂಧಂ ಗುಗ್ಗುಲಮೇವ ಚ ।**
**ಸ್ನಪನಂ ತಸ್ಯ ಕರ್ತವ್ಯಂ ಪಂಚಗವ್ಯಸಮನ್ವಿತಂ ॥೩೯॥**

---

೩೫–೩೬. ಪಶ್ಚಿಮದಿಕ್ಕಿನ ಬಾಗಿಲ ಬಳಿಯಲ್ಲಿರುವ ಸಾಮವೇದಿಗಳು ವೈರಾಜ್ಯ ಸಾಮ, ಪುರುಷಸೂಕ್ತಸಾಮ, ಸೌವರ್ಣಸಾಮ, ರುದ್ರಸಂಹಿತಾಸಾಮ, ಶೈಶವ ಸಾಮ, ಪಂಚನಿಧನಸಾಮ, ಗಾಯತ್ರಸಾಮ, ಜ್ಯೇಷ್ಠಸಾಮ, ವಾಮದೇವ ಸಾಮ, ಬೃಹತ್ಸಾಮ, ರೌರವಸಾಮ, ರಥಂತರಸಾಮ, ಗವಾಂ ವ್ರತಸಾಮ, ಕಾಣ್ವಸಾಮ, ರಕ್ಷೋಘ್ನಸಾಮ, ಮತ್ತು ವಯಸ್ಸಾಮಗಳೆಂಬ ಮಂತ್ರಗಳನ್ನು ಗಾನಮಾಡುವರು.

೩೭. ಉತ್ತರದಲ್ಲಿರುವ ಅಥರ್ವಣವೇದಜ್ಞರು ಶಾಂತಿಮಂತ್ರಗಳನ್ನೂ, ಪುಷ್ಟಿಮಂತ್ರಗಳನ್ನೂ ಜಪಿಸುವರು. ಮನಸ್ಸಿನಲ್ಲಿ ವರುಣದೇವನನ್ನು ಧ್ಯಾನ ಮಾಡುತ್ತಿರುವರು.

೩೮. ಮೊದಲನೆಯ ದಿನ ರಾತ್ರಿ ಕುಂಭಗಳಿಗೆ ಅಧಿವಾಸನವನ್ನು ಮಾಡಿ, (ಸ್ಥಾಪನಾದಿ ಸಂಸ್ಕಾರಗಳನ್ನು ನಡೆಸಿ) ಆನೆಕುದುರೆಗಳು ಸಂಚರಿಸುವ ರಸ್ತೆ, ಹುತ್ತ, ನದೀಸಂಗಮ, ನೀರಿನ ಮಡು, ದನದ ಕೊಟ್ಟಿಗೆ, ನಾಲ್ಕುಬೀದಿಗಳ ಚೌಕ ಇತ್ಯಾದಿ ಸ್ಥಳಗಳಿಂದ ಮಣ್ಣನ್ನು ತಂದು ಆ ಕುಂಭಗಳಲ್ಲಿ ಹಾಕಬೇಕು.

೩೯. ಗೋರೋಚನ, ಬಿಳೀಸಾಸುವೆ, ಗಂಧ, ಗುಗ್ಗುಲ, ಇವುಗಳನ್ನೂ ಕೂಡ ಆ ಕಲಶಗಳಲ್ಲಿ ಹಾಕಿ ಪಂಚಗವ್ಯದಿಂದಲೂ ಶುದ್ಧೋದಕದಿಂದಲೂ ಪ್ರೋಕ್ಷಿಸಬೇಕು.

ಪ್ರತ್ಯೇಕಂ ತು ಮಹಾಮಂತ್ರೈರೇವಂ ಕೃತ್ವಾ ವಿಧಾನತಃ ।
ಏವಂ ಕ್ಷಪಾತಿವಾಹ್ಯಾಽಥ ವಿಧಿಯುಕ್ತೇನ ಕರ್ಮಣಾ ॥೪೦॥

ತತಃ ಪ್ರಭಾತೇ ವಿಮಲೇ ಸಂಜಾತೇಽಥ ಶತಂ ಗವಾಂ ।
ಬ್ರಾಹ್ಮಣೇಭ್ಯಃ ಪ್ರದಾತವ್ಯಮಷ್ಟಷಷ್ಟಿಶ್ಚ ವಾ ಪುನಃ ।
ಪಂಚಾಶದ್ವಾಽಥ ಷಟ್ತ್ರಿಂಶತ್ಪಂಚವಿಂಶತಿರಪ್ಯಥ ॥೪೧॥

ತತಃ ಸಾಂವತ್ಸರಪ್ರೋಕ್ತೇ ಶುಭೇ ಲಗ್ನೇ ಸುಶೋಭನೇ ।
ವೇದಶಬ್ದೈಶ್ಚ ಗಾಂಧರ್ವೈರ್ವಾದ್ಯೈಶ್ಚ ವಿವಿಧೈಃ ಪುನಃ ॥೪೨॥

ಕನಕಾಲಂಕೃತಾಂ ಕೃತ್ವಾ ಜಲೇ ಗಾಮವತಾರಯೇತ್ ।
ಸಾಮಗಾಯ ಚ ಸಾ ದೇಯಾ ಬ್ರಾಹ್ಮಣಾಯ ವಿಶಾಂ ಪತೇ ॥೪೩॥

ಪಾತ್ರೀಮಾದಾಯ ಸೌವರ್ಣೀಂ ಪಂಚರತ್ನಸಮನ್ವಿತಾಂ ।
ತತೋ ನಿಕ್ಷಿಪ್ಯ ಮಕರಮತ್ಸ್ಯಾದೀಂಶ್ಚೈವ ಸರ್ವಶಃ ।
ಧೃತಾಂ ಚತುರ್ಭಿರ್ವಿಪ್ರೈರ್ವೇದವೇದಾಂಗಪಾರಗೈಃ ॥೪೪॥

---

೪೦. ಪ್ರತಿಯೊಂದು ಕುಂಭಕ್ಕೂ ಬೇರೆಬೇರೆಯಾಗಿ ಮಹಾಮಂತ್ರಗಳಿಂದ ಹೀಗೆ ಪ್ರೋಕ್ಷಣಾದಿಗಳನ್ನು ಮಾಡಬೇಕು. ಶಾಸ್ತ್ರೋಕ್ತವಾದ ಈ ವಿಧಾನಗಳಿಂದ ರಾತ್ರಿಯನ್ನು ಕಳೆಯಬೇಕು.

೪೧. ಪ್ರಾತಃಕಾಲವಾದ ಬಳಿಕ ಬ್ರಾಹ್ಮಣರಿಗೆ ಒಂದುನೂರು ಹಸುಗಳನ್ನು ದಾನವಾಗಿ ಕೊಡಬೇಕು. ಅಷ್ಟಾಗದಿದ್ದರೆ ಅರವತ್ತೆಂಟು, ಇಲ್ಲದಿದ್ದರೆ ಐವತ್ತು, ಅದೂ ಆಗದಿದ್ದರೆ ಮೂವತ್ತಾರು, ಅದಕ್ಕೂ ಶಕ್ತಿಯಿಲ್ಲದಿದ್ದರೆ ಕೊನೆಗೆ ಇಪ್ಪತ್ತೈದು ಹಸುಗಳನ್ನಾದರೂ ಕೊಡಬೇಕು.

೪೨-೪೩. ಬಳಿಕ ಜ್ಯೌತಿಷ್ಕರು ಹೇಳಿದ ಶುಭಲಗ್ನದಲ್ಲಿ ವೇದಪಾಠವು ನಡೆಯುತ್ತಿರಲು, ಬಗೆಬಗೆಯ ಮಂಗಳವಾದ್ಯಗಳು ಮೊಳಗುತ್ತಿರಲು, ಹಸುವನ್ನು ಚಿನ್ನದ ಒಡವೆಗಳಿಂದ ಅಲಂಕರಿಸಿ ನೀರಿನಲ್ಲಿಳಿಸಬೇಕು. ಓ ರಾಜಾ, ಬಳಿಕ ಅದನ್ನು ಸಾಮವೇದಪಾರಂಗತನಾದ ಬ್ರಾಹ್ಮಣನಿಗೆ ದಾನಮಾಡಬೇಕು.

೪೪-೪೬. ಪಂಚರತ್ನಸಹಿತವಾದ ಸುವರ್ಣಪಾತ್ರೆಯಲ್ಲಿ ಹಿಂದೆ ಹೇಳಿದ ಲೋಹಮಯವಾದ ಮಕರಮತ್ಸ್ಯಾದಿಜಲಚರಗಳನ್ನು ಇಡಬೇಕು. ನಾಲ್ಕು

**ಮಹಾನದೀಜಲೋಪೇತಾಂ ದಧ್ಯಕ್ಷತಸಮನ್ವಿತಾಂ ।**
**ಉತ್ತರಾಭಿಮುಖೀಂ ಧೇನುಂ ಜಲಮಧ್ಯೇ ತು ಕಾರಯೇತ್ ॥೪೫॥**

**ಅಥರ್ವಣೇನ ಸಂಸ್ನಾತಾಂ ಪುನರ್ಮಾಮೇತ್ಯಥೇತಿ ಚ ।**
**ಆಪೋ ಹಿ ಷ್ಠೇತಿ ಮಂತ್ರೇಣ ಕ್ಷಿಪ್ತ್ವಾಽಽಗತ್ಯ ಚ ಮಂಡಲಂ ॥೪೬॥**

**ಪೂಜಯಿತ್ವಾ ಸರಸ್ತತ್ರ ಬಲಿಂ ದದ್ಯಾತ್ಸಮಂತತಃ ।**
**ಪುನರ್ದಿನಾನಿ ಹೋತವ್ಯಂ ಚತ್ವಾರಿ ಮುನಿಸತ್ತಮಾಃ ॥೪೭॥**

**ಚತುರ್ಥೀಕರ್ಮ ಕರ್ತವ್ಯಂ ದೇಯಾ ತತ್ರಾಽಪಿ ಶಕ್ತಿತಃ ।**
**ದಕ್ಷಿಣಾ ರಾಜಶಾರ್ದೂಲ ವರುಣಕ್ಷ್ಮಾಪಣಂ ತತಃ ॥೪೮॥**

**ಕೃತ್ವಾ ತು ಯಜ್ಞಪಾತ್ರಾಣಿ ಯಜ್ಞೋಪಕರಣಾನಿ ಚ ।**
**ಋತ್ವಿಗ್ಭ್ಯಸ್ತು ಸಮಂ ದತ್ವಾ ಮಂಡಪಂ ವಿಭಜೇತ್ಪುನಃ ।**
**ಹೇಮಪಾತ್ರೀಂ ಚ ಶಯ್ಯಾಂ ಚ ಸ್ಥಾಪಕಾಯ ನಿವೇದಯೇತ್ ॥೪೯॥**

---

ವೇದಗಳಲ್ಲಿಯೂ ಆರು ವೇದಾಂಗಗಳಲ್ಲಿಯೂ ನಿಷ್ಣಾತರಾದ ಬ್ರಾಹ್ಮಣರು ಅದನ್ನು ಎತ್ತಿಕೊಳ್ಳಬೇಕು. ಮಹಾನದಿಯ ಜಲವನ್ನೂ, ಮೊಸರನ್ನೂ ಆ ಪಾತ್ರೆಗೆ ಸ್ವಲ್ಪ ಸುರಿದು ಅಕ್ಷತೆಯ ಕಾಳನ್ನು ಹಾಕಬೇಕು. ಹಸುವನ್ನು ನಡುನೀರಿನಲ್ಲಿ ಉತ್ತಾರಾಭಿಮುಖವಾಗಿ ನಿಲ್ಲಿಸಿ ಅಥರ್ವಣ ಮಂತ್ರದಿಂದಲೂ, "ಪುನರ್ಮಾಮೇತಿ" ಎಂಬ ಮಂತ್ರದಿಂದಲೂ ಅಭಿಷೇಕಮಾಡಬೇಕು.

೪೬. "ಆಪೋ ಹಿ ಷ್ಠಾಮಯೋಭುವಃ" ಎಂಬ ಮಂತ್ರದಿಂದ ಆ ಸುವರ್ಣಮತ್ಸ್ಯಾದಿಗಳನ್ನು ನೀರಿನಲ್ಲಿ ಬಿಟ್ಟು ಮಂಡಲಸ್ಥಾನಕ್ಕೆ ಬರಬೇಕು. ಓ ಮುನಿವರ್ಯರೇ, ಸರೋವರವನ್ನು ಪೂಜಿಸಿ ಅದರ ಸುತ್ತಲೂ ಬಲಿಯನ್ನು ಹಾಕಬೇಕು. ನಾಲ್ಕು ದಿನಗಳು ಹೋಮವನ್ನು ಮಾಡಬೇಕು.

೪೮. ಎಲೈ ರಾಜೋತ್ತಮನೇ, ನಾಲ್ಕನೆಯ ದಿನದಲ್ಲಿ ಸಮಾಪ್ತಿಕರ್ಮವನ್ನು ನಡೆಸಿ, ತನ್ನ ಶಕ್ತಿಗೆ ತಕ್ಕಂತೆ ದಕ್ಷಿಣೆಯನ್ನು ಕೊಡಬೇಕು. ತರುವಾಯ ಉಪಚಾರೋಕ್ತಿಗಳಿಂದ ವರುಣನಲ್ಲಿ ಕ್ಷಮೆಯನ್ನು ಬೇಡಬೇಕು.

೪೯. ಕರ್ಮಗಳೆಲ್ಲವನ್ನೂ ಮಾಡಿದ ಬಳಿಕ ಯಜ್ಞಪಾತ್ರೆಗಳನ್ನೂ, ಯಜ್ಞೋಪಕರಣಗಳನ್ನೂ ಋತ್ವಿಕ್ಕುಗಳಿಗೆ ಕೊಡಬೇಕು. ಯಾಗಮಂಟಪವನ್ನೂ ಕೂಡ ಬಿಚ್ಚಿ ಅವರಿಗೇ ಹಂಚಿಬಿಡಬೇಕು. ಚಿನ್ನದಪಾತ್ರೆ, ಹಾಸಿಗೆ ಇವೆರಡೂ ಜಲಾಶಯದ ಸ್ಥಾಪಕನಿಗೆ ಸಲ್ಲತಕ್ಕುವು.

**ತತಃ ಸಹಸ್ರಂ ವಿಪ್ರಾಣಾಮಥವಾಷ್ಟಶತಂ ತಥಾ ।**
**ಭೋಜನೀಯಂ ಯಥಾಶಕ್ತಿ ಪಂಚಾಶದ್ವಾಽಥ ವಿಂಶತಿಃ ।**
**ಏವಮೇಷ ಪುರಾಣೇಷು ತಡಾಗವಿಧಿರುಚ್ಯತೇ ॥೫೦॥**

**ಕೂಪವಾಪೀಷು ಸರ್ವಾಸು ತಥಾ ಪುಷ್ಕರಿಣೀಷು ಚ ।**
**ಏಷ ಏವ ವಿಧಿರ್ದೃಷ್ಟಃ ಪ್ರತಿಷ್ಠಾಸು ತಥೈವ ಚ ॥೫೧॥**

**ಮಂತ್ರತಸ್ತು ವಿಶೇಷಃ ಸ್ಯಾತ್ಪ್ರಾಸಾದೋದ್ಯಾನಭೂಮಿಷು ।**
**ಅಯಂ ತ್ವಶಕ್ತಾವರ್ಧೇನ ವಿಧಿರ್ದೃಷ್ಟಃ ಸ್ವಯಂಭುವಾ ।**
**ಅಲ್ಪೇಷ್ವೇಕಾಗ್ನಿವತ್ಕೃತ್ವಾ ವಿತ್ತಶಾಠ್ಯಾದೃತೇ ನೃಣಾಂ ॥೫೨॥**

**ಪ್ರಾವೃಟ್ಕಾಲೇ ಸ್ಥಿತೇ ತೋಯೇ ಹ್ಯಗ್ನಿಷ್ಟೋಮಫಲಂ ಸ್ಮೃತಂ ।**
**ಶರತ್ಕಾಲೇ ಸ್ಥಿತಂ ಯತ್ಸ್ಯಾತ್ತದುಕ್ತಫಲದಾಯಕಂ ।**
**ವಾಜಪೇಯಾತಿರಾತ್ರಾಭ್ಯಾಂ ಹೇಮಂತೇ ಶಿಶಿರೇ ಸ್ಥಿತಂ ॥೫೩॥**

---

೫೦. ತರುವಾಯ ಸಾವಿರ ಅಥವಾ ಎಂಟುನೂರು ಜನ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು. ಅಷ್ಟಕ್ಕೆ ಶಕ್ತಿಯಿಲ್ಲದಿದ್ದರೆ ಐವತ್ತು ಅಥವಾ ಇಪ್ಪತ್ತು ಮಂದಿಯನ್ನಾದರೂ ತೃಪ್ತಿ ಪಡಿಸಬೇಕು. ಜಲಾಶಯಗಳ ಪ್ರತಿಷ್ಠೆಯ ವಿಧಾನವನ್ನು ಪುರಾಣಗಳಲ್ಲಿ ಈ ರೀತಿಯಾಗಿ ಹೇಳಿದೆ.

೫೧. ಬಾವಿ, ಕೊಳ, ಪುಷ್ಕರಿಣಿ ಮುಂತಾದುವನ್ನು ಕಟ್ಟಿಸುವಾಗಲೂ, ದೇವಾಲಯಗಳನ್ನು ಪ್ರತಿಷ್ಠೆ ಮಾಡುವಾಗಲೂ ಇದೇ ವಿಧಿಯನ್ನು ಅನುಸರಿಸಬೇಕು.

೫೨. ಆದರೆ ದೇವಾಲಯ, ಉದ್ಯಾನಭೂಮಿ ಇವುಗಳನ್ನು ಪ್ರತಿಷ್ಠೆ ಮಾಡುವಾಗ ಮಂತ್ರಗಳಲ್ಲಿ ವಿಶೇಷವುಂಟು. ಅಶಕ್ತನಾದವನು ಈಗ ಹೇಳಿದ ವಿಧಾನದಲ್ಲಿ ಅರ್ಧವಷ್ಟನ್ನಾದರೂ ನಡೆಸಬೇಕೆಂದು ಬ್ರಹ್ಮನು ಹೇಳಿರುವನು. ಸಣ್ಣ ಪುಟ್ಟ ಜಲಾಶಯಗಳ ವಿಷಯದಲ್ಲಾದರೆ ಏಕಾಗ್ನಿವಿಧಾನದಿಂದ ಕಾರ್ಯವನ್ನು ನೆರವೇರಿಸಬಹುದು. ಆಗಲೂ ಕೂಡ ದ್ರವ್ಯದ ವಿಷಯದಲ್ಲಿ ಮಾತ್ರ ಸಂಕೋಚವನ್ನು ಮಾಡಬಾರದು.

೫೩. ಕಟ್ಟಿಸಿದ ಕೆರೆಕಟ್ಟೆಗಳಲ್ಲಿ ನೀರು ಮಳೆಗಾಲದಲ್ಲಿ ನಿಲ್ಲುವಂತಿದ್ದರೆ ಯಜಮಾನನಿಗೆ ಅಗ್ನಿಷ್ಟೋಮಯಾಗದ ಫಲವು ಬರುವುದು. ಶರತ್ಕಾಲದವರೆಗೂ ನಿಲ್ಲುವುದಾದರೆ ಫಲಶ್ರುತಿಯಲ್ಲಿ ಹೇಳುವ ಸುಕೃತವು ಲಭಿಸುವುದು. ಹೇಮಂತ ಮತ್ತು ಶಿಶಿರರ್ತುಗಳಲ್ಲಿ ಸಹ ಅದು ಬತ್ತದೆ ಜಲಪೂರ್ಣವಾಗಿದ್ದರೆ ಕ್ರಮವಾಗಿ ವಾಜಪೇಯ ಮತ್ತು ಅತಿರಾತ್ರಗಳೆಂಬ ಯಾಗಗಳ ಫಲವು ದೊರೆಯುವುದು.

ಅಶ್ವಮೇಧಸಮಂ ಪ್ರಾಹ ವಸಂತಸಮಯೇ ಸ್ಥಿತಂ ।
ಗ್ರೀಷ್ಮೇಽಪಿ ತತ್ಸ್ಥಿತಂ ತೋಯಂ ರಾಜಸೂಯಾದ್ವಿಶಿಷ್ಯತೇ ॥೫೪॥

ಏತಾನ್ ಮಹಾರಾಜ ವಿಶೇಷಧರ್ಮಾನ್
ಕರೋತಿ ಯೋಽಪ್ಯಾಗಮಶುದ್ಧಬುದ್ಧಿಃ ।
ಸ ಯಾತಿ ರುದ್ರಾಲಯಮಾಶು ಪೂತಃ
ಕಲ್ಪಾನನೇಕಾನ್ ದಿವಿ ಮೋದತೇ ಚ ॥೫೫॥

ಅನೇಕಲೋಕಾನ್ ಸ ಮಹರ್ಜನಾದೀನ್
ಭುಕ್ತ್ವಾ ಪರಾರ್ಧದ್ವಯಮಂಗನಾಭಿಃ ।
ಸಹೈವ ವಿಷ್ಣೋಃ ಪರಮಂ ಪದಂ ಯತ್
ಪ್ರಾಪ್ನೋತಿ ತದ್ಯಾಗಫಲೇನ ಭೂಯಃ ॥೫೬॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ
ತಡಾಗವಿಧಿರ್ನಾಮಾಷ್ಟಪಂಚಾಶೋಽಧ್ಯಾಯಃ

---

೫೪. ವಸಂತಕಾಲದಲ್ಲಿ ನೀರು ಒಣಗದೆ ಇದ್ದರೆ ಅಶ್ವಮೇಧದ ಫಲವೂ, ಗ್ರೀಷ್ಮರ್ತುವಿನಲ್ಲಿಯೂ ನೀರು ನಿಂತರೆ ರಾಜಸೂಯಯಾಗಕ್ಕಿಂತ ಅತಿಶಯವಾದ ಫಲವೂ ಬರುವುವು.

೫೫. ಓ ಮಹಾರಾಜಾ, ವೇದೋಕ್ತವಾದ ಕರ್ಮಗಳಿಂದ ಬುದ್ಧಿಯನ್ನು ನಿರ್ಮಲಮಾಡಿಕೊಂಡು, ಈ ವಿಶೇಷ ಧರ್ಮಗಳನ್ನು ಯಾವನು ಆಚರಿಸುತ್ತಾನೋ ಅವನು ತಡೆಯಿಲ್ಲದೆ ಸಕಲಪಾಪಗಳನ್ನೂ ಕಳೆದುಕೊಳ್ಳುವನು. ಸ್ವರ್ಗದಲ್ಲಿ ಅನೇಕ ಕಲ್ಪಗಳ ಕಾಲ ಸುಖಪಟ್ಟು ಕೈಲಾಸವನ್ನು ಸೇರುವನು.

೫೬. ಅವನು ಆ ಯಾಗದ ಫಲದಿಂದ ಮಹೋಲೋಕ, ಜನೋಲೋಕ ಮುಂತಾದ ದಿವ್ಯ ಲೋಕಗಳಿಗೆ ಹೋಗಿ, ಎರಡು ಪರಾರ್ಧಗಳ ಕಾಲ ದಿವ್ಯ ನಾರಿಯರೊಡನೆ ಸುಖಿಸುವನು. ತರುವಾಯ ಅವರ ಸಂಗಡಲೇ ವಿಷ್ಣುವಿನ ಪರಮ ಪದವನ್ನೈದುವನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಜಲಾಶಯಗಳ ಪ್ರತಿಷ್ಠಾವಿಧಿಯು ವರ್ಣಿತವಾಗಿದೆ.

ಶುಭದಿನದಲ್ಲಿ ಯಾಗಮಂಟಪವನ್ನು ಜಲಾಶಯದ ಬಳಿಯಲ್ಲಿ ನಿರ್ಮಿಸಿ ಋತ್ವಿಕ್ಪುರೋಹಿತರನ್ನು ವರಿಸಬೇಕು. ಶಾಸ್ತ್ರೋಕ್ತವಾಗಿ ಜಪವೂ, ಹೋಮವೂ ನೆರವೇರಿದ ಬಳಿಕ ಸುವರ್ಣಾಭರಣಗಳಿಂದ ಅಲಂಕೃತವಾದ ಹಸುವನ್ನು ಉತ್ತರಾಭಿಮುಖವಾಗಿ ಕೆರೆಯ ನೀರಿನಲ್ಲಿಳಿಸಬೇಕು. ಅದನ್ನು ಸಾಮವೇದಾಧ್ಯಾಯಿಗೆ ದಾನ ಮಾಡಬೇಕು. ಅನಂತರ ಲೋಹ ನಿರ್ಮಿತಗಳಾದ ಮತ್ಸ್ಯ, ಕೂರ್ಮ, ಮಕರ ಮೊದಲಾದ ಜಲಚರಗಳನ್ನು ಜಲಾಶಯದೊಳಗೆ ಹಾಕಿ, ಮೇಲಕ್ಕೆ ಬಂದು ಬಲಿ ಕರ್ಮವನ್ನು ನಡೆಸಬೇಕು. ದಾನ ದಕ್ಷಿಣೆಗಳಿಂದ ಬ್ರಾಹ್ಮಣರನ್ನು ತೃಪ್ತಿಪಡಿಸಬೇಕು.

ಈ ಜಲಾಶಯಪ್ರತಿಷ್ಠಾಕರ್ಮದಿಂದ ಸಕಲ ಯಜ್ಞಗಳ ಫಲವೂ ದೊರೆಯುವುದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ತಟಾಕವಿಧಿಯೆಂಬ ಐವತ್ತೆಂಟನೆಯ
ಅಧ್ಯಾಯವು ಮುಗಿದುದು.



# ಅಥ ಏಕೋನಷಷ್ಟಿತಮೋಽಧ್ಯಾಯಃ

॥ ಋಷಯ ಊಚುಃ ॥

ಪಾದಪಾನಾಂ ವಿಧಿಂ ಸೂತ ಯಥಾವದ್ವಿಸ್ತರಾದ್ವದ ।
ವಿಧಿನಾ ಕೇನ ಕರ್ತವ್ಯಂ ಪಾದಪೋದ್ಯಾಪನಂ ಬುಧೈಃ ।
ಯೇ ಚ ಲೋಕಾಃ ಸ್ಮೃತಾಸ್ತೇಷಾಂ ತಾನಿದಾನೀಂ ವದಸ್ವ ನಃ ॥ ೧ ॥

॥ ಸೂತ ಉವಾಚ ॥

ಪಾದಪಾನಾಂ ವಿಧಿಂ ವಕ್ಷ್ಯೇ ತಥೈವೋದ್ಯಾನಭೂಮಿಷು
ತಡಾಗವಿಧಿವತ್ಸರ್ವಮಾಸಾದ್ಯ ಜಗದೀಶ್ವರ ॥ ೨ ॥

ಋತ್ವಿಙ್ಮಂಡಲಸಂಭಾರಶ್ಚಾಚಾರ್ಯಶ್ಚೈವ ತದ್ವಿಧಃ ।
ಪೂಜಯೇದ್ಬ್ರಾಹ್ಮಣಾಂಸ್ತದ್ವದ್ಧೇಮವಸ್ತ್ರಾನುಲೇಪನೈಃ ॥ ೩ ॥

---

೧. ಋಷಿಗಳು ಹೇಳಿದರು.—ಓ ಸೂತಾ, ಮರಗಳನ್ನು ನೆಡುವಾಗ ಆಚರಿಸಬೇಕಾದ ವಿಧಿಯನ್ನು ಕ್ರಮದಿಂದ ವಿವರಿಸು. ಪ್ರಾಜ್ಞರು ಯಾವ ಕ್ರಮದಿಂದ ವೃಕ್ಷೋದ್ಯಾಪನವನ್ನು ಮಾಡಬೇಕು? ಅಂತಹವರಿಗೆ ದೊರಕುವ ಪುಣ್ಯಲೋಕಗಳು ಯಾವುವು? ಅವೆಲ್ಲವನ್ನೂ ನಮಗೀಗ ತಿಳಿಯಪಡಿಸು.

೨. ಸೂತಪೌರಾಣಿಕನು ಹೇಳಿದನು.—ಎಲೈ ರಾಜೇಂದ್ರಾ, ಉದ್ಯಾನ ಪ್ರದೇಶಗಳಲ್ಲಿಯೂ ಉಳಿದೆಡೆಗಳಲ್ಲಿಯೂ ಆಚರಿಸಬೇಕಾದ ವೃಕ್ಷೋತ್ಸವದ ವಿಧಾನವನ್ನು ಹೇಳುವೆನು ಕೇಳು. ಮೇಲೆ ಹೇಳಿದ ತಟಾಕವಿಧಿಯಂತೆಯೇ ಇದರಲ್ಲಿಯೂ ಎಲ್ಲ ಸಿದ್ಧತೆಗಳನ್ನೂ ಮಾಡಿಕೊಳ್ಳಬೇಕು.

೩. ಋತ್ವಿಕ್ಕುಗಳನ್ನು ವರಿಸುವುದು, ಮಂಡಲರಚನೆ, ಸಂಭಾರಸಂಗ್ರಹ, ಆಚಾರ್ಯವರಣ ಇವೆಲ್ಲವೂ ಹಿಂದಿನಂತೆಯೇ. ಅಲ್ಲಿನ ಹಾಗೆಯೇ ಬ್ರಾಹ್ಮಣರನ್ನು ಸುವರ್ಣಾಭರಣಗಳಿಂದಲೂ, ವಸ್ತ್ರಗಳಿಂದಲೂ, ಗಂಧಪುಷ್ಪಗಳಿಂದಲೂ ಸತ್ಕರಿಸಬೇಕು.

**ಸರ್ವೌಷಧ್ಯುದಕೈಃ ಸಿಕ್ತಾನ್ಪಿಷ್ಟಾತಕವಿಭೂಷಿತಾನ್ ।**
**ವೃಕ್ಷಾನ್ ಮಾಲ್ಯೈರಲಂಕೃತ್ಯ ವಾಸೋಭಿರಭಿವೇಷ್ಟಯೇತ್ ॥ ೪ ॥**
**ಸೂಚ್ಯಾ ಸೌವರ್ಣಯಾ ಕಾರ್ಯಂ ಸರ್ವೇಷಾಂ ಕರ್ಣವೇಧನಂ ।**
**ಅಂಜನಂ ಚಾಪಿ ದಾತವ್ಯಂ ತದ್ವದ್ಧೇಮಶಲಾಕಯಾ ॥ ೫ ॥**
**ಫಲಾನಿ ಸಪ್ತ ಚಾಷ್ಟೌ ವಾ ಕಾಲಧೌತಾನಿ ಕಾರಯೇತ್ ।**
**ಪ್ರತ್ಯೇಕಂ ಸರ್ವವೃಕ್ಷಾಣಾಂ ವೇದ್ಯಾಂ ತಾನ್ಯಧಿವಾಸಯೇತ್ ॥ ೬ ॥**
**ಧೂಪೋಽತ್ರ ಗುಗ್ಗುಲಃ ಶ್ರೇಷ್ಠಸ್ತಾಮ್ರಪಾತ್ರೈರಧಿಷ್ಠಿತಾನ್ ।**
**ಸರ್ವಾನ್ ಧಾನ್ಯಸ್ಥಿತಾನ್ ಕೃತ್ವಾ ವಸ್ತ್ರಗಂಧಾನುಲೇಪನೈಃ ॥ ೭ ॥**
**ಕುಂಭಾನ್ ಸರ್ವೇಷು ವೃಕ್ಷೇಷು ಸ್ಥಾಪಯಿತ್ವಾ ನರೇಶ್ವರ ।**
**ಸಹಿರಣ್ಯಾನಶೇಷಾಂಸ್ತಾನ್ ಕೃತ್ವಾ ಬಲಿನಿವೇದನಂ ॥ ೮ ॥**
**ಯಥಾವಲ್ಲೋಕಪಾಲಾನಾಮಿಂದ್ರಾದೀನಾಂ ವಿಶೇಷತಃ ।**
**ವನಸ್ಪತೇಶ್ಚ ವಿದ್ವದ್ಭಿರ್ಹೋಮಃ ಕಾರ್ಯೋ ದ್ವಿಜಾತಿಭಿಃ ॥ ೯ ॥**

---

೪. ವೃಕ್ಷಗಳನ್ನು ಸಕಲೌಷಧಿಸಹಿತವಾದ ಜಲದಿಂದ ಪ್ರೋಕ್ಷಿಸಿ, ಪರಿಮಳ ಚೂರ್ಣದಿಂದ ಅಲಂಕರಿಸಬೇಕು. ಪುಷ್ಪಮಾಲೆಗಳನ್ನು ಹಾಕಿ ವಸ್ತ್ರಗಳನ್ನು ಧರಿಸಬೇಕು.

೫. ಎಲ್ಲ ಗಿಡಗಳಿಗೂ ಚಿನ್ನದ ಸೂಜಿಯಿಂದ ಕಿವಿಯನ್ನು ಚುಚ್ಚಿ, ಚಿನ್ನದ ಸಲಾಕೆಯಿಂದ ಕಾಡಿಗೆಯನ್ನು ಹಚ್ಚಬೇಕು.

೬. ಬಂಗಾರದಿಂದ ಏಳೆಂಟು ಹಣ್ಣುಗಳನ್ನು ಮಾಡಿಸಿ, ಎಲ್ಲ ವೃಕ್ಷಗಳಿಗೂ ಬೇರೆಬೇರೆಯಾಗಿ ಅವುಗಳನ್ನು ವೇದಿಕೆಯಲ್ಲಿ ಧಾನ್ಯದ ಮೇಲೆ ಇರಿಸಿ ಗಂಧ ಪುಷ್ಪಾದಿಗಳಿಂದ ಸಂಸ್ಕರಿಸಬೇಕು.

೭-೮. ರಾಜಾ, ಈ ವಿಧಿಯಲ್ಲಿ ಗುಗ್ಗುಲವು ಶ್ರೇಷ್ಠವಾದ ಧೂಪವೆನಿಸುವುದು. ಧಾನ್ಯದ ಮೇಲೆ ತಾಮ್ರದ ಕುಂಭಗಳನ್ನಿರಿಸಿ, ಗಂಧಪುಷ್ಪವಸ್ತ್ರಾದಿಗಳಿಂದ ಅಲಂಕರಿಸಿ, ಹಿರಣ್ಯಸಹಿತವಾಗಿ ಎಲ್ಲ ವೃಕ್ಷಗಳ ಸಮೀಪದಲ್ಲೂ ಸ್ಥಾಪಿಸಬೇಕು. ಬಲಿಗಾಗಿ ಸಿದ್ಧಮಾಡಿರುವ ಅನ್ನವನ್ನು ನಿವೇದನಮಾಡಬೇಕು.

೯. ಲೋಕಪಾಲಕರಾದ ಇಂದ್ರಾದಿಗಳಿಗೂ, ವಿಶೇಷವಾಗಿ ವನಸ್ಪತಿಗಳಿಗೂ ವಿಧಿಜ್ಞರಾದ ಬ್ರಾಹ್ಮಣರು ಹೋಮವನ್ನು ಮಾಡಬೇಕು.

**ತತಶ್ಶುಕ್ಲಾಂಬರಧರಾಂ ಸೌವರ್ಣಕೃತಭೂಷಣಾಂ ।**
**ಸಕಾಂಸ್ಯದೋಹಾಂ ಸೌವರ್ಣಶೃಂಗಾಭ್ಯಾಮತಿಶಾಲಿನೀಂ ।**
**ಪಯಸ್ವಿನೀಂ ವೃಕ್ಷಮಧ್ಯಾದುತ್ಸೃಜೇದ್ಗಾಮುದಙ್ಮುಖೀಂ ॥೧೦॥**
**ತತೋಽಭಿಷೇಕಮಂತ್ರೇಣ ವಾದ್ಯಮಂಗಲಗೀತಕೈಃ ।**
**ಋಗ್ಯಜುಸ್ಸಾಮಮಂತ್ರೈಶ್ಚ ವಾರುಣೈರಭಿತಸ್ತಥಾ ।**
**ತೈರೇವ ಕುಂಭೈಃ ಸ್ನಪನಂ ಕುರ್ಯಾದ್ಬ್ರಾಹ್ಮಣಪುಂಗವಃ ॥೧೧॥**
**ಸ್ನಾತಃ ಶುಕ್ಲಾಂಬರಸ್ತದ್ವದ್ಯಜಮಾನೋಽಭಿಪೂಜಯೇತ್ ।**
**ಗೋಭಿರ್ವಿಭವತಃ ಸರ್ವಾನೃತ್ವಿಜಸ್ತಾನ್ ಸಮಾಹಿತಃ ॥೧೨॥**
**ಹೇಮಸೂತ್ರೈಃ ಸಕಟಕೈರಂಗುಲೀಯಪವಿತ್ರಕೈಃ ।**
**ವಾಸೋಭಿಃ ಶಯನೀಯೈಶ್ಚ ತಥೋಪಸ್ಕರಪಾದುಕೈಃ ।**
**ಕ್ಷೀರೇಣ ಭೋಜನಂ ದದ್ಯಾದ್ಯಾವದ್ದಿನಚತುಷ್ಟಯಂ ॥೧೩॥**

---

೧೦. ಬಳಿಕ ಬಿಳಿಯ ಬಟ್ಟೆಯನ್ನು ಹೊದಿಸಿ, ಚಿನ್ನದ ಒಡವೆಗಳನ್ನು ತೊಡಿಸಿ, ಕೊಂಬುಗಳಿಗೆ ಹೊಂದೊಡವುಗಳನ್ನಿಟ್ಟು ಅಲಂಕರಿಸಿದ ಹಸುವನ್ನು ಹಾಲುಕರೆಯುವ ಕಂಚಿನ ಪಾತ್ರೆಯ ಸಹಿತವಾಗಿ ಮರಗಳ ನಡುವೆ ಉತ್ತರಾಭಿಮುಖವಾಗಿ ಬಿಡಬೇಕು.

೧೧. ಅನಂತರ ಬ್ರಾಹ್ಮಣೋತ್ತಮನು ಮಂಗಲವಾದ್ಯಗಳು ಮೊಳಗುತ್ತಿರಲು, ಅಭಿಷೇಕಮಂತ್ರದಿಂದಲೂ, ಋಗ್ವೇದ, ಯಜುರ್ವೇದ ಮತ್ತು ಸಾಮವೇದಗಳ ಮಂತ್ರಗಳಿಂದಲೂ, ವರುಣಮಂತ್ರದಿಂದಲೂ ಆ ಕುಂಭಗಳ ನೀರಿನಿಂದಲೇ ಸ್ನಾನಮಾಡಬೇಕು.

೧೨. ಯಜಮಾನನು ಸ್ನಾನಮಾಡಿ, ಶುಭ್ರವಸ್ತ್ರವನ್ನು ಧರಿಸಿ, ಶಾಂತಚಿತ್ತನಾಗಿ ಹಸುಗಳಿಂದಲೂ, ಸಕಲವಿಭವಗಳಿಂದಲೂ ಋತ್ವಿಜರೆಲ್ಲರನ್ನೂ ತಟಾಕವಿಧಿಯಲ್ಲಿ ಹೇಳಿವಂತೆಯೇ ಸತ್ಕರಿಸಬೇಕು.

೧೩. ಚಿನ್ನದ ಉಡಿದಾರ, ಬಳೆ, ಉಂಗುರ, ಪವಿತ್ರ, ವಸ್ತ್ರ, ಹಾಸಿಗೆ, ಪಾದರಕ್ಷೆ ಮತ್ತು ಗೃಹಕೃತ್ಯಕ್ಕೆ ಬೇಕಾದ ಮಿಕ್ಕ ಸಾಮಾನು ಇವೆಲ್ಲವನ್ನೂ ದಾನಮಾಡಬೇಕು.

ಹೋಮಶ್ಚ ಸರ್ಷಪೈಃ ಕಾರ್ಯೋ ಯವೈಃ ಕೃಷ್ಣತಿಲೈಸ್ತಥಾ।
ಪಲಾಶಸಮಿಧಃ ಶಸ್ತಾಶ್ಚತುರ್ಥೇಽಹ್ನಿ ತಥೋತ್ಸವಃ।
ದಕ್ಷಿಣಾ ಚ ಪುನಸ್ತದ್ವದ್ದೇಯಾ ತತ್ರಾಪಿ ಶಕ್ತಿತಃ ॥೧೪॥

ಯದ್ಯದಿಷ್ಟತಮಂ ಕಿಂಚಿತ್ತತ್ತದ್ದದ್ಯಾದಮತ್ಸರೀ।
ಆಚಾರ್ಯೇ ದ್ವಿಗುಣಂ ದದ್ಯಾತ್ಪ್ರಣಿಪತ್ಯ ವಿಸರ್ಜಯೇತ್ ॥೧೫॥

ಅನೇನ ವಿಧಿನಾ ಯಸ್ತು ಕುರ್ಯಾದ್ವೃಕ್ಷೋತ್ಸವಂ ಬುಧಃ।
ಸರ್ವಾನ್ ಕಾಮಾನವಾಪ್ನೋತಿ ಫಲಂ ಚಾನಂತ್ಯಮಶ್ನುತೇ ॥೧೬॥

ಯಶ್ಚೈಕಮಪಿ ರಾಜೇಂದ್ರ ವೃಕ್ಷಂ ಸಂಸ್ಥಾಪಯೇನ್ನರಃ।
ಸೋಽಪಿ ಸ್ವರ್ಗೇ ವಸೇದ್ರಾಜನ್ ಯಾವದಿಂದ್ರಾಯುತತ್ರಯಂ ॥೧೭॥

ಭೂತಾನ್ ಭವ್ಯಾಂಶ್ಚ ಮನುಜಾಂಸ್ತಾರಯೇದ್ದ್ರುಮಸಮ್ಮಿತಾನ್।
ಪರಮಾಂ ಸಿದ್ಧಿಮಾಪ್ನೋತಿ ಪುನರಾವೃತ್ತಿದುರ್ಲಭಾಂ ॥೧೮॥

---

೧೪. ಸಾಸವೆ, ಗೋಧಿ, ಕರಿಯೆಳ್ಳು ಇವುಗಳಿಂದ ಹೋಮಮಾಡಬೇಕು. ಮುತ್ತುಗದ ಸಮಿತ್ತುಗಳು ಶ್ರೇಷ್ಠವಾದುವು. ನಾಲ್ಕನೆಯ ದಿನ ಅವಭೃತವನ್ನು ನಡೆಸಬೇಕು. ಆಗಲೂ ಸಹ ಶಕ್ತ್ಯನುಸಾರವಾಗಿ ದಕ್ಷಿಣೆಯನ್ನು ಕೊಡಬೇಕು.

೧೫. ತನಗೆ ತುಂಬ ಪ್ರಿಯವಾದ ವಸ್ತುವೇನೇನುಂಟೋ ಅದು ಸ್ವಲ್ಪವೇ ಇರಲಿ. ಮತ್ಸರರಹಿತನಾಗಿ ಅವನ್ನು ದಾನಮಾಡಬೇಕು. ಆಚಾರ್ಯನಿಗೆ ಉಳಿದವರಿಗಿಂತ ದ್ವಿಗುಣವಾಗಿ ಕೊಟ್ಟು ಬೀಳ್ಕೊಡಬೇಕು.

೧೬. ಈ ಕ್ರಮದಿಂದ ವೃಕ್ಷೋತ್ಸವವನ್ನು ಮಾಡುವ ವಿದ್ವಾಂಸನ ಮನೋರಥಗಳೆಲ್ಲವೂ ಪೂರ್ಣವಾಗುವುವು. ಅವನಿಗೆ ಅಕ್ಷಯಫಲವು ಲಭಿಸುವುದು.

೧೭. ಓ ರಾಜೇಂದ್ರಾ, ಯಾವನು ಕೊನೆಗೆ ಒಂದು ಮರವನ್ನಾದರೂ ನೆಡುವನೋ ಅಂತಹವನೂ ಕೂಡ ಮೂವತ್ತುಸಾವಿರ ಇಂದ್ರರು ಆಧಿಪತ್ಯ ನಡೆಸುವಷ್ಟುಕಾಲ ಸ್ವರ್ಗದಲ್ಲಿ ವಾಸಿಸುವನು.

೧೮. ಹಿಂದಿದ್ದ ಮತ್ತು ಮುಂದೆ ಹುಟ್ಟುವ ತನ್ನ ವಂಶೀಯರನ್ನು ಆತನು ಉದ್ಧರಿಸುವನು. ಅವರು ಮರಗಳಂತೆ ಸ್ಥಿರರೂ ದೃಢರೂ ಆಗುವರು. ಆ ಯಜಮಾನನು ಪುನರ್ಜನ್ಮವಿಲ್ಲದಂತಹ ಅತಿಶ್ರೇಷ್ಠವಾದ ಸಿದ್ಧಿಯನ್ನು ಪಡೆಯುವನು.

**ಯ ಇದಂ ಶೃಣುಯಾನ್ನಿತ್ಯಂ ಶ್ರಾವಯೇದ್ವಾಽಪಿ ಮಾನವಃ।**
**ಸೋಽಪಿ ಸಂಪೂಜಿತೋ ದೇವೈರ್ಬ್ರಹ್ಮಲೋಕೇ ಮಹೀಯತೇ ॥೧೯॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ವೃಕ್ಷೋತ್ಸವೋ ನಾಮೈಕೋನಷಷ್ಟಿತಮೋಽಧ್ಯಾಯಃ**

---

೧೯. ಈ ವೃಕ್ಷೋತ್ಸವ ವಿಧಿಯನ್ನು ನಿತ್ಯವೂ ಕೇಳಲಿ, ಇಲ್ಲವೇ ಇತರರಿಗೆ ಹೇಳಲಿ, ಅಂತಹ ಮನುಜನೂ ಕೂಡ ದೇವತೆಗಳಿಂದ ಪೂಜಿತನಾಗಿ ಬ್ರಹ್ಮಲೋಕವಲ್ಲಿ ಮಾನ್ಯನಾಗುವನು.

**ಅಧ್ಯಾಯದ ಸಾರಾಂಶ**

ಈ ಅಧ್ಯಾಯದಲ್ಲಿ ಗಿಡಮರಗಳನ್ನು ನೆಡುವಾಗ ಆಚರಿಸಬೇಕಾದ ವಿಧಿಯನ್ನು ಹೇಳಿದೆ.

ಇದರ ಕ್ರಮವೆಲ್ಲವೂ ತಟಾಕವಿಧಿಯಂತೆಯೇ. ಹೋಮಕಾರ್ಯವೆಲ್ಲ ಮುಗಿದ ಬಳಿಕ ಅಲಂಕೃತವಾದ ಹಸುವನ್ನು ನೆಟ್ಟ ಗಿಡಗಳ ನಡುವೆ ಉತ್ತರಾಭಿಮುಖವಾಗಿ ಬಿಡಬೇಕು. ಋತ್ವಿಕ್ಕುಗಳಿಗೂ ಆಚಾರ್ಯನಿಗೂ ದಾನದಕ್ಷಿಣೆಗಳನ್ನಿತ್ತು ತೃಪ್ತಿಪಡಿಸಬೇಕು. ಕನಿಷ್ಠಪಕ್ಷ ಒಂದು ಮರವನ್ನಾದರೂ ಮನುಷ್ಯನು ತನ್ನ ಜೀವಮಾನದಲ್ಲಿ ಸ್ಥಾಪಿಸಬೇಕು. ಇದರಿಂದ ಅವನ ಇಷ್ಟಾರ್ಥಗಳೆಲ್ಲವೂ ಈಡೇರುವುವಲ್ಲದೆ ಅವನಿಗೆ ಶಾಶ್ವತವಾದ ಸದ್ಗತಿಯು ಲಭಿಸುವುದು. ಅವನ ವಂಶೀಯರು ಉತ್ತಮಗತಿಯನ್ನು ಪಡೆಯುವರು.

ಶ್ರೀಮತ್ಸ್ಯಮಹಾಪುರಾಣದಲ್ಲಿ ವೃಕ್ಷೋತ್ಸವವೆಂಬ ಐವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

## ಅಥ ಷಷ್ಟಿತಮೋಽಧ್ಯಾಯಃ

|| ಮತ್ಸ್ಯ ಉವಾಚ ||

ತಥೈವಾನ್ಯತ್ಪ್ರವಕ್ಷ್ಯಾಮಿ ಸರ್ವಕಾಮಫಲಪ್ರದಂ ।
ಸೌಭಾಗ್ಯಶಯನಂ ನಾಮ ಯತ್ಪುರಾಣವಿದೋ ವಿದುಃ || ೧ ||

ಪುರಾ ದಗ್ಧೇಷು ಲೋಕೇಷು ಭೂರ್ಭುವಃಸ್ವರ್ಮಹಾದಿಷು ।
ಸೌಭಾಗ್ಯಂ ಸರ್ವಭೂತಾನಾಮೇಕಸ್ಥಮಭವತ್ತದಾ ।
ತಚ್ಚ ವೈಕುಂಠಮಾಸಾದ್ಯ ವಿಷ್ಣೋರ್ವಕ್ಷಃಸ್ಥಲೇ ಸ್ಥಿತಂ || ೨ ||

ತತಃ ಕಾಲೇನ ಮಹತಾ ಪುನಃ ಸರ್ಗವಿಧೌ ನೃಪ ।
ಅಹಂಕಾರಾವೃತೇ ಲೋಕೇ ಪ್ರಧಾನಪುರುಷಾನ್ವಿತೇ || ೩ ||

ಸ್ಪರ್ಧಾಯಾಂ ಚ ಪ್ರವೃತ್ತಾಯಾಂ ಕಮಲಾಸನಕೃಷ್ಣಯೋಃ ।
ಲಿಂಗಾಕಾರಾ ಸಮುದ್ಭೂತಾ ವಹ್ನೇರ್ಜ್ವಾಲಾತಿಭೀಷಣಾ ।
ತಯಾಽಭಿತಪ್ತಸ್ಯ ಹರೇರ್ವಕ್ಷಸಸ್ತದ್ವಿನಿಃಸೃತಂ || ೪ ||

---

೧. ಹಿಂದಿನ ವ್ರತಗಳಂತೆಯೇ ಸಕಲ ಮನೋರಥಗಳನ್ನೂ ಈಡೇರಿಸುವ ಮತ್ತೊಂದನ್ನು ಹೇಳುವೆನು. ಪುರಾಣಜ್ಞರು ಅದನ್ನು ಸೌಭಾಗ್ಯಶಯನವೆನ್ನುವರು.

೨. ಭೂಲೋಕ, ಭುವರ್ಲೋಕ, ಸ್ವರ್ಲೋಕ, ಮಹೋಲೋಕ ಮೊದಲಾದ ಲೋಕಗಳೆಲ್ಲವೂ ಪೂರ್ವದಲ್ಲಿ ಸುಟ್ಟುಹೋದುವು. ಆಗ ಎಲ್ಲ ಪ್ರಾಣಿಗಳ ಸೌಭಾಗ್ಯವೂ ಒಂದೆಡೆಯಲ್ಲಿ ಸೇರಿತು. ಅದು ವೈಕುಂಠಕ್ಕೆ ಹೋಗಿ ವಿಷ್ಣುವಿನ ವಕ್ಷಃಸ್ಥಲದಲ್ಲಿ ನೆಲೆಸಿತು.

೩. ತರುವಾಯ ಎಷ್ಟೋ ಕಾಲವು ಕಳೆಯಿತು. ಮತ್ತೆ ಜಗತ್ತಿನ ಸೃಷ್ಟಿಯಾಯಿತು. ಪ್ರಕೃತಿಪುರುಷರಿಂದ ಕೂಡಿದ ಲೋಕವೆಲ್ಲವನ್ನೂ ಅಹಂಕಾರವು ವ್ಯಾಪಿಸಿಕೊಂಡಿತು.

೪. ಬ್ರಹ್ಮನಿಗೂ ವಿಷ್ಣುವಿಗೂ ಸ್ಪರ್ಧೆ ಹುಟ್ಟಿತು. ಅತಿ ಭಯಂಕರವಾದ ಅಗ್ನಿಜ್ವಾಲೆಯು ಲಿಂಗಾಕಾರವಾಗಿ ಉತ್ಪನ್ನವಾಯಿತು. ಅದರಿಂದ ವಿಷ್ಣುವಿನ ಎದೆ ಸುಟ್ಟುಹೋಗಲು, ಆ ಸ್ಥಳವನ್ನು ಆಶ್ರಯಿಸಿದ್ದ ಸೌಭಾಗ್ಯವು ಅಲ್ಲಿಂದ ಹೊರಟಿತು.

ವಕ್ಷಃಸ್ಥಲಂ ಸಮಾಶ್ರಿತ್ಯ ವಿಷ್ಣೋಃ ಸೌಭಾಗ್ಯಮಾಸ್ಥಿತಂ ।
ರಸರೂಪಂ ತತೋ ಯಾವತ್ಪ್ರಾಪ್ನೋತಿ ವಸುಧಾತಲಂ ॥ ೫ ॥

ಉತ್ಕ್ಷಿಪ್ತಮಂತರಿಕ್ಷೇ ತದ್ಬ್ರಹ್ಮಪುತ್ರೇಣ ಧೀಮತಾ ।
ದಕ್ಷೇಣ ಪೀತಮಾತ್ರಂ ತದ್ರೂಪಲಾವಣ್ಯಕಾರಕಂ ॥ ೬ ॥

ಬಲಂ ತೇಜೋ ಮಹಜ್ಜಾತಂ ದಕ್ಷಸ್ಯ ಪರಮೇಷ್ಠಿನಃ ।
ಶೇಷಂ ಯದಪತದ್ಭೂಮಾವಷ್ಟಧಾ ಸಮಜಾಯತ ॥ ೭ ॥

ತತೋ ಜನಾನಾಂ ಸಂಜಾತಾಃ ಸಪ್ತ ಸೌಭಾಗ್ಯದಾಯಕಾಃ ।
ಇಕ್ಷವೋ ರಸರಾಜಾಶ್ಚ ನಿಷ್ಪಾವಾಜಾಜಿಧಾನ್ಯಕಂ ॥ ೮ ॥

ವಿಕಾರವಚ್ಚ ಗೋಕ್ಷೀರಂ ಕುಸುಂಭಂ ಕುಂಕುಮಂ ತಥಾ ।
ಲವಣಂ ಚಾಷ್ಟಮಂ ತದ್ವತ್ಸೌಭಾಗ್ಯಾಷ್ಟಕಮುಚ್ಯತೇ ॥ ೯ ॥

ಪೀತಂ ಯದ್ಬ್ರಹ್ಮಪುತ್ರೇಣ ಯೋಗಜ್ಞಾನವಿದಾ ಪುನಃ ।
ದುಹಿತಾ ಸಾಽಭವತ್ತಸ್ಯ ಯಾ ಸತೀತ್ಯಭಿಧೀಯತೇ ॥೧೦॥

---

೫-೬. ದ್ರವರೂಪದಿಂದ ಅದು ಭೂಮಿಯನ್ನು ಸೇರಲು ಬರುತ್ತಿತ್ತು. ಅಂತರಿಕ್ಷದಲ್ಲಿ ಚೆಲ್ಲುತಿದ್ದ ಅದನ್ನು ಬ್ರಹ್ಮನ ಮಗನೂ, ಬುದ್ಧಿಶಾಲಿಯೂ ಆದ ದಕ್ಷಬ್ರಹ್ಮನು ಕುಡಿದನು. ಕೂಡಲೇ ಅದು ಅವನಲ್ಲಿ ರೂಪವನ್ನೂ ಲಾವಣ್ಯವನ್ನೂ ಹುಟ್ಟಿಸಿತು.

೭. ದಕ್ಷಬ್ರಹ್ಮನಿಗೆ ಬಲವೂ ತೇಜಸ್ಸೂ ಬಹಳವಾದವು. ಮಿಕ್ಕ ಸೌಭಾಗ್ಯರಸವು ಭೂಮಿಯಲ್ಲಿ ಬಿದ್ದು ಎಂಟು ರೂಪಗಳನ್ನು ತಾಳಿತು.

೮-೯. ಬಳಿಕ ಜನರಿಗೆ ಸೌಭಾಗ್ಯವನ್ನು ಕೊಡುವ ಏಳು ಬಗೆಯ ವಸ್ತುಗಳು ಉತ್ಪನ್ನವಾದುವು. ಕಬ್ಬು ಮೊದಲಾದ ರಸ ವಸ್ತುಗಳು, ಪಾದರಸ ಮೊದಲಾದ ಧಾತುಗಳು, ಅವರೆ, ಜೀರಿಗೆ, ಕೊತ್ತಂಬರಿಬೀಜ, ಮೊಸರು, ಮಜ್ಜಿಗೆ, ಬೆಣ್ಣೆ ಮುಂತಾದ ರೂಪಾಂತರಗಳನ್ನು ಪಡೆಯುವ ಹಸುವಿನ ಹಾಲು, ಕುಸುಂಭಪುಷ್ಪ, ಕೇಸರಿ ಮತ್ತು ಉಪ್ಪು.

೧೦. ಬ್ರಹ್ಮಪುತ್ರನೂ ಯೋಗಜ್ಞಾನಿಯೂ ಆದ ದಕ್ಷಬ್ರಹ್ಮನು ಸೌಭಾಗ್ಯರಸವನ್ನು ಕುಡಿದುದರಿಂದ ಅವನಿಗೊಬ್ಬ ಮಗಳು ಹುಟ್ಟಿದಳು. ಅವಳ ಹೆಸರೇ ಸತಿ.

ಲೋಕಾನತೀತ್ಯ ಲಾಲಿತ್ಯಾಲ್ಲಲಿತಾ ತೇನ ಚೋಚ್ಯತೇ ।
ತ್ರೈಲೋಕ್ಯಸುಂದರೀಮೇನಾಮುಪಯೇಮೇ ಪಿನಾಕಧೃತ್ ॥೧೧॥
ಯಾ ದೇವೀ ಸೌಭಾಗ್ಯಮಯೀ ಭುಕ್ತಿಮುಕ್ತಿಫಲಪ್ರದಾ ।
ತಾಮಾರಾಧ್ಯ ಪುಮಾರ್ನ್ ಭಕ್ತ್ಯಾ ನಾರೀ ವಾ ಕಿಂ ನ ವಿಂದತಿ ॥೧೨॥

॥ ಮನುರುವಾಚ ॥

ಕಥಮಾರಾಧನಂ ತಸ್ಯಾ ಜಗದ್ಧಾತ್ರ್ಯಾ ಜನಾರ್ದನ ।
ತದ್ವಿಧಾನಂ ಜಗನ್ನಾಥ ತತ್ಸರ್ವಂ ಚ ವದಸ್ವ ಮೇ ॥೧೩॥

॥ ಮತ್ಸ್ಯ ಉವಾಚ ॥

ವಸಂತಮಾಸಮಾಸಾದ್ಯ ತೃತೀಯಾಯಾಂ ಜನಪ್ರಿಯ ।
ಶುಕ್ಲಪಕ್ಷಸ್ಯ ಪೂರ್ವಾಹ್ಣೇ ತಿಲೈಃ ಸ್ನಾನಂ ಸಮಾಚರೇತ್ ॥೧೪॥
ತಸ್ಮಿನ್ನಹನಿ ಸಾ ದೇವೀ ಕಿಲ ವಿಶ್ವಾತ್ಮನಾ ಸತೀ ।
ಪಾಣಿಗ್ರಹಣಕೈರ್ಮಂತ್ರೈರುದೂಢಾ ವರವರ್ಣಿನೀ ॥೧೫॥

---

೧೧. ಸೌಂದರ್ಯದಲ್ಲಿ ಅವಳನ್ನು ಮೀರಿಸಬಲ್ಲವರು ಯಾವ ಲೋಕದಲ್ಲೂ ಇರಲಿಲ್ಲ. ಆದಕಾರಣ ಅವಳಿಗೆ ಲಲಿತೆಯೆಂದೂ ಹೆಸರು ಬಂದಿತು. ಲೋಕ ಸುಂದರಿಯಾದ ಅವಳನ್ನು ಪರಮೇಶ್ವರನು ಮದುವೆಯಾದನು.

೧೨. ಆ ದೇವಿಯು ಸೌಭಾಗ್ಯಸ್ವರೂಪಿಣಿ; ಸ್ವರ್ಗಾದಿಸುಖಸಂಪತ್ತಿಯನ್ನೂ ಮೋಕ್ಷಫಲವನ್ನೂ ಕೊಡತಕ್ಕವಳು. ಭಕ್ತಿಯಿಂದ ಅವಳನ್ನು ಆರಾಧಿಸಿದ ಪುರುಷ ನಿಗೂ ಸ್ತ್ರೀಗೂ ಏನು ತಾನೇ ದೊರೆಯದು?

೧೩. ಮನು ಹೇಳಿದನು.—ಜನಾರ್ದನಾ, ಅವಳನ್ನು ಪೂಜಿಸುವುದೆಂತು? ಎಲೈ ಜಗನ್ನಾಥನೇ, ಅದರ ವಿಧಾನವೆಲ್ಲವನ್ನೂ ನನಗೆ ತಿಳಿಸು.

೧೪. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಎಲೈ ನರಪಾಲಕನೇ, ಚೈತ್ರಮಾಸದ ಶುಕ್ಲಪಕ್ಷ ತೃತೀಯೆಯ ದಿನ ಪೂರ್ವಾಹ್ಣದಲ್ಲಿ ಎಳ್ಳಿನಿಂದ ಸ್ನಾನ ವನ್ನು ಮಾಡಬೇಕು.

೧೫. ಪರಮೇಶ್ವರನು ಲೋಕಸುಂದರಿಯಾದ ಸತೀದೇವಿಯನ್ನು ಪಾಣಿ ಗ್ರಹಣ ಮಂತ್ರಗಳಿಂದ ಮದುವೆಯಾದ ಶುಭದಿವಸವು ಅದೇ ಅಲ್ಲವೇ!

**ತಯಾ ಸಹೈವ ದೇವೇಶಂ ತೃತೀಯಾಯಾಮುಥಾರ್ಚಯೇತ್ ।**
**ಫಲೈರ್ನಾನಾವಿಧೈರ್ಧೂಪೈರ್ದೀಪನೈವೇದ್ಯಸಂಯುತೈಃ ||೧೬||**

**ಪ್ರತಿಮಾಂ ಪಂಚಗವ್ಯೇನ ತಥಾ ಗಂಧೋದಕೇನ ತು ।**
**ಸ್ನಾಪಯಿತ್ವಾಽರ್ಚಯೇದ್ಗೌರೀಮಿಂದುಶೇಖರಸಂಯುತಾಂ ||೧೭||**

**ನಮೋಽಸ್ತು ಪಾಟಲಾಯೈ ತು ಪಾದೌ ದೇವ್ಯಾಃ ಶಿವಸ್ಯ ತು ।**
**ಶಿವಾಯೇತಿ ಚ ಸಂಕೀರ್ತ್ಯ ಜಯಾಯೈ ಗುಲ್ಫಯೋರ್ದ್ವಯೋಃ ||೧೮||**

**ತ್ರಿಗುಣಾಯೇತಿ ರುದ್ರಾಯ ಭವಾನ್ಯೈ ಜಂಘಯೋರ್ಯುಗಂ ।**
**ಶಿವಾಂ ರುದ್ರೇಶ್ವರಾಯೈ ಚ ವಿಜಯಾಯೇತಿ ಜಾನುನೀ ।**
**ಸಂಕೀರ್ತ್ಯ ಹರಿಕೇಶಾಯ ತಥೋರೂ ವರದೇ ನಮಃ ||೧೯||**

---

೧೬. ಅವಳೊಡನೆಯೇ ಪರಮೇಶ್ವರನನ್ನೂ ಸಹ ತೃತೀಯೆಯ ದಿವಸ ಪೂಜಿಸಬೇಕು. ಬಗೆಬಗೆಯ ಹಣ್ಣುಗಳು ಧೂಪದೀಪನೈವೇದ್ಯಗಳು ಇವೆಲ್ಲವುಗಳಿಂದಲೂ ಉಪಚರಿಸಬೇಕು.

೧೭. ಉಮಾ ಮಹೇಶ್ವರರ ಪ್ರತಿಮೆಗೆ ಪಂಚಗವ್ಯದಿಂದಲೂ ಗಂಧೋದಕದಿಂದಲೂ ಮಜ್ಜನಮಾಡಿಸಿ, ಚಂದ್ರಶೇಖರನೊಡಗೂಡಿದ ಪಾರ್ವತೀದೇವಿಯನ್ನು ಪುಷ್ಪಗಳಿಂದ ಅರ್ಚಿಸಬೇಕು.

೧೮. ಪಾಟಲಾಯೈ ನಮಃ ಎಂದು ದೇವಿಯ ಪಾದಗಳಲ್ಲೂ, ಶಿವಾಯ ನಮಃ ಎಂದು ಪರಮೇಶ್ವರನ ಪಾದಗಳಲ್ಲೂ ಪುಷ್ಪಾರ್ಚನೆಯನ್ನು ಸಲ್ಲಿಸಬೇಕು. ಜಯಾಯೈ ನಮಃ ಎಂದು ಮಾತೆಯ ಹಿಮ್ಮಡಿಗಳೆರಡನ್ನೂ ಅರ್ಚಿಸಬೇಕು.

೧೯. ಸತ್ವರಜಸ್ತಮಸ್ಸುಗಳೆಂಬ ಮೂರು ಗುಣಗಳ ಸ್ವರೂಪನಿಗೆ ನಮಸ್ಕಾರವೆಂದು ಈಶ್ವರನ ಹಿಮ್ಮಡಿಗಳನ್ನು ಪೂಜಿಸಬೇಕು. ರುದ್ರಾಯ ನಮಃ, ಭವಾನ್ಯೈ ನಮಃ, ಎಂದು ಕ್ರಮವಾಗಿ ದೇವ ದೇವಿಯರಿಬ್ಬರ ಮೊಣಕಾಲುಗಳನ್ನೂ, ವಿಜಯಾಯ ನಮಃ, ರುದ್ರೇಶ್ವರಾಯೈ ನಮಃ ಎಂಬ ಮಂತ್ರಗಳಿಂದ ಮುಂಡಿಗಳನ್ನೂ ಅರ್ಚಿಸಬೇಕು. ಹರಿಕೇಶಾಯ ನಮಃ ಎಂದು ಮಹೇಶ್ವರನನ್ನೂ, ವರವನ್ನು ಅನುಗ್ರಹಿಸುವ ಓ ದೇವಿ, ನಿನಗೆ ನಮಸ್ಕಾರವೆಂದು ಪಾರ್ವತಿಯನ್ನೂ ಪ್ರಾರ್ಥಿಸಿ ತೊಡೆಗಳನ್ನು ಪೂಜಿಸಬೇಕು.

**ಈಶಾಯೈ ಚ ಕಟಿಂ ದೇವ್ಯಾಃ ಶಂಕರಾಯೇತಿ ಶಂಕರಂ ।**
**ಕುಕ್ಷಿದ್ವಯಂ ಚ ಕೋಟವ್ಯೈ ಶೂಲಿನೇ ಶೂಲಪಾಣಯೇ ॥೨೦॥**

**ಮಂಗಲಾಯೈ ನಮಸ್ತುಭ್ಯಮುದರಂ ಚಾಭಿಪೂಜಯೇತ್ ।**
**ಸರ್ವಾತ್ಮನೇ ನಮೋ ರುದ್ರಮೀಶಾನ್ಯೈ ಚ ಕುಚದ್ವಯಂ ॥೨೧॥**

**ಶಿವಂ ವೇದಾತ್ಮನೇ ತದ್ವದ್ರುದ್ರಾಣ್ಯೈ ಕಂಠಮರ್ಚಯೇತ್ ।**
**ತ್ರಿಪುರಘ್ನಾಯ ವಿಶ್ವೇಶಮನಂತಾಯೈ ಕರದ್ವಯಂ ॥೨೨॥**

**ತ್ರಿಲೋಚನಾಯ ಚ ಹರಂ ಬಾಹೂ ಕಾಲಾನಲಪ್ರಿಯೇ ।**
**ಸೌಭಾಗ್ಯಭವನಾಯೇತಿ ಭೂಷಣಾನಿ ಸದಾರ್ಚಯೇತ್ ।**
**ಸ್ವಾಹಾ ಸ್ವಧಾಯೈ ಚ ಮುಖಮೀಶ್ವರಾಯೇತಿ ಶೂಲಿನಂ ॥೨೩॥**

---

೨೦. ಈಶಾಯೈ ನಮಃ, ಶಂಕರಾಯ ನಮಃ ಎಂದು ದೇವಿಯ ಮತ್ತು ಈಶ್ವರನ ಸೊಂಟಗಳಲ್ಲಿ ಪುಷ್ಪಗಳನ್ನು ಅರ್ಪಿಸಬೇಕು. ಕೋಟವ್ಯೈ ನಮಃ, ಶೂಲ ಪಾಣಯೇ ನಮಃ ಎಂದು ಇಬ್ಬರ ಉದರಗಳನ್ನೂ ಅರ್ಚಿಸಬೇಕು.

೨೧. ಮಂಗಲಾಯೈ ನಮಃ ಎಂದು ಪಾರ್ವತಿಗೂ, ನಮಸ್ತುಭ್ಯಂ ಎಂದರೆ ದೇವಾ, ನಿನಗೆ ನಮಸ್ಕಾರ ಎಂದು ಪರಮೇಶ್ವರನಿಗೂ ಉದರದ ಮೇಲ್ಭಾಗದಲ್ಲಿ ಪುಷ್ಪಾರ್ಚನೆಮಾಡಬೇಕು. ಸರ್ವಾತ್ಮನೇ ನಮಃ ಎಂದು ರುದ್ರನ ವಕ್ಷಸ್ಥಲವನ್ನೂ, ಈಶಾನ್ಯೈನಮಃ ಎಂದು ಗೌರಿಯ ಕುಚಗಳನ್ನೂ ಪೂಜಿಸಬೇಕು.

೨೨. ವೇದಾತ್ಮನಿಗೆ ನಮಸ್ಕಾರವೆಂದೂ, ರುದ್ರಾಣಿಗೆ ನಮಸ್ಕಾರವೆಂದೂ ದೇವದೇವಿಯರ ಕಂಠಸ್ಥಲವನ್ನು ಅರ್ಚಿಸಬೇಕು. ತ್ರಿಪುರಾಂತಕನಿಗೆ ನಮಸ್ಕಾರ, ಅನಂತೆಗೆ ನಮಸ್ಕಾರ ಎಂದು ಕರಗಳೆರಡನ್ನೂ ಆರಾಧಿಸಬೇಕು.

೨೩. ತ್ರಿನೇತ್ರನಿಗೆ ನಮಸ್ಕಾರ, ಸಂಹಾರ ಮೂರ್ತಿಯ ಪ್ರಿಯಪತ್ನಿಯೇ, ನಿನಗೆ ನಮಸ್ಕಾರ ಎಂದು ಇಬ್ಬರ ಬಾಹುಗಳನ್ನೂ, ಸೌಭಾಗ್ಯದ ನೆಲೆಯೆನಿಸಿ ದಾತನಿಗೆ ನಮಸ್ಕಾರ, ಸ್ವಾಹಾಸ್ವರೂಪಿಣಿಗೆ ನಮಸ್ಕಾರವೆಂದು ಭೂಷಣಗಳನ್ನೂ, ಸ್ವಧಾದೇವಿಗೆ ನಮಸ್ಕಾರ, ಈಶ್ವರನಿಗೆ ನಮಸ್ಕಾರವೆಂದು ಪಾರ್ವತೀಪರಮೇಶ್ವರರ ಮುಖಗಳನ್ನೂ ಅರ್ಚಿಸಬೇಕು.

**ಅಶೋಕಮಧುವಾಸಿನ್ಯೈ ಪೂಜ್ಯಾವೋಷ್ಠೌ ಚ ಭೂತಿದೌ ।**
**ಸ್ಥಾಣವೇ ತು ಹರಂ ತದ್ವಚ್ಚಾಸ್ಯಂ ಚಂದ್ರಮುಖಪ್ರಿಯೇ ॥೨೪॥**

**ನಮೋಽರ್ಧನಾರೀಶ ಹರಮಸಿತಾಂಗೀತಿ ನಾಸಿಕಾಂ ।**
**ನಮ ಉಗ್ರಾಯ ಲೋಕೇಶಂ ಲಲಿತೇತಿ ಪುನರ್ಭ್ರುವೌ ॥೨೫॥**

**ಶರ್ವಾಯ ಪುರಹಂತಾರಂ ವಾಸವ್ಯೈ ತು ತಥಾಲಕಾ ।**
**ನಮಃ ಶ್ರೀಕಂಠನಾಥಾಯ್ಯೈ ಶಿವಕೇಶಾಂಸ್ತತೋಽರ್ಚಯೇತ್ ।**
**ಭೀಮೋಗ್ರಸಮರೂಪಿಣ್ಯೈ ಶಿರಃ ಸರ್ವಾತ್ಮನೇ ನಮಃ ॥೨೬॥**

**ಶಿವಮಭ್ಯರ್ಚ್ಯ ವಿಧಿವತ್ಸೌಭಾಗ್ಯಾಷ್ಟಕಮಗ್ರತಃ ।**
**ಸ್ಥಾಪಯೇದ್ಘೃತನಿಷ್ಪಾವಕುಸುಂಭಕ್ಷೀರಜೀರಕಾ ॥೨೭॥**

**ರಸರಾಜಂ ಚ ಲವಣಂ ಕುಸ್ತುಂಬುರು ತಥಾಷ್ಟಕಂ ।**
**ದತ್ತಂ ಸೌಭಾಗ್ಯಮಿತ್ಯಸ್ಮಾತ್ಸೌಭಾಗ್ಯಾಷ್ಟಕಮಿತ್ಯತಃ ॥೨೮॥**

---

೨೪. ಅಶೋಕ ಮಧುವಾಸಿನಿಗೆ ನಮಸ್ಕಾರವೆಂದು ಸಂಪತ್ಪ್ರದಗಳಾದ ತುಟಿಗಳನ್ನು ಪೂಜಿಸಬೇಕು. ಸ್ಥಾಣುವಿಗೆ ನಮಸ್ಕಾರ, ಚಂದ್ರಮುಖಪ್ರಿಯಳಿಗೆ ನಮಸ್ಕಾರವೆಂದು ಇಬ್ಬರ ಬಾಯಿಗಳನ್ನೂ ಅರ್ಚಿಸಬೇಕು.

೨೫. ಅರ್ಧನಾರೀಶ್ವರನೇ ನಿನಗೆ ನಮಸ್ಕಾರ; ಶ್ಯಾಮಲಾಂಗೀ, ನಿನಗೆ ನಮಸ್ಕಾರ ಎಂದು ಮೂಗನ್ನೂ, ಉಗ್ರನಿಗೆ ನಮಸ್ಕಾರ; ಓ ಲಲಿತೇ ನಿನಗೆ ನಮಸ್ಕಾರ ಎಂದು ಹುಬ್ಬುಗಳನ್ನೂ ಪೂಜಿಸಬೇಕು.

೨೬. ಶಿವನಿಗೆ ನಮಸ್ಕಾರ, ವಾಸವಿಗೆ ನಮಸ್ಕಾರವೆಂದು ಇಬ್ಬರ ಮುಂಗುರಳನ್ನೂ, ಪರಮೇಶ್ವರನ ಅಧಿದೇವತೆಗೆ ನಮಸ್ಕಾರ, ಎಲೈ ಶಿವನೇ, ನಿನಗೆ ನಮಸ್ಕಾರವೆನ್ನುತ್ತಾ ಕೇಶಗಳನ್ನೂ ಆರಾಧಿಸಬೇಕು. ಭಯಂಕರನೆನಿಸಿದ ಮಹಾದೇವನಿಗೆ ಸದೃಶವಾದ ರೂಪವನ್ನು ಪಡೆದವಳಿಗೆ ನಮಸ್ಕಾರ, ಸರ್ವಾತ್ಮನಿಗೆ ನಮಸ್ಕಾರ ಎಂದು ಇಬ್ಬರ ಶಿರಸ್ಸನ್ನೂ ಅರ್ಚಿಸಬೇಕು.

೨೭–೨೮. ಈಶ್ವರನನ್ನು ಶಾಸ್ತ್ರೋಕ್ತವಾಗಿ ಪೂಜಿಸಿ, ಅವನ ಮುಂಭಾಗದಲ್ಲಿ ಎಂಟು ಬಗೆಯ ಸೌಭಾಗ್ಯದ್ರವ್ಯಗಳನ್ನಿರಿಸಬೇಕು.—ತುಪ್ಪ, ಅವರೆ, ಕೇಸರಿ, ಹಾಲು, ಜೀರಿಗೆ, ಪಾದರಸ, ಉಪ್ಪು, ಮತ್ತು ಕೊತ್ತಂಬರಿ. ಇವು ಸೌಭಾಗ್ಯವನ್ನು ಕೊಡುವ ವಸ್ತುಗಳಾದುದರಿಂದ ಈ ಎಂಟಕ್ಕೂ ಸೌಭಾಗ್ಯಾಷ್ಟಕವೆಂದು ಹೆಸರು ಬಂದಿದೆ.

ಏವಂ ನಿವೇದ್ಯ ತತ್ಸರ್ವಮಗ್ರತಃ ಶಿವಯೋಃ ಪುನಃ ।
ರಾತ್ರೌ ಶೃಂಗೋದಕಂ ಪ್ರಾಶ್ಯ ಸ್ವಪೇದ್ಭೂಮಾವರಿಂದಮ ॥೨೯॥

ಪುನಃ ಪ್ರಭಾತೇ ತು ತಥಾ ಕೃತಸ್ನಾನಜಪಃ ಶುಚಿಃ ।
ಸಂಪೂಜ್ಯ ದ್ವಿಜದಾಂಪತ್ಯಂ ವಸ್ತ್ರಮಾಲ್ಯವಿಭೂಷಣೈಃ ॥೩೦॥

ಸೌಭಾಗ್ಯಾಷ್ಟಕಸಂಯುಕ್ತಂ ಸುವರ್ಣಪ್ರತಿಮಾದ್ವಯಂ ।
ಪ್ರೀಯತಾಮತ್ರ ಲಲಿತಾ ಬ್ರಾಹ್ಮಣಾಯ ನಿವೇದಯೇತ್ ॥೩೧॥

ಏವಂ ಸಂವತ್ಸರಂ ಯಾವತ್ತೃತೀಯಾಯಾಂ ಸದಾ ಮುನೇ ।
ಕರ್ತವ್ಯಂ ವಿಧಿವದ್ಭಕ್ತ್ಯಾ ಸರ್ವಸೌಭಾಗ್ಯಮೀಪ್ಸುಭಿಃ ॥೩೨॥

ಪ್ರಾಶನೇ ದಾನಮಂತ್ರೇ ಚ ವಿಶೇಷೋಽಯಂ ನಿಬೋಧ ಮೇ ।
ಶೃಂಗೋದಕಂ ಚೈತ್ರಮಾಸೇ ವೈಶಾಖೇ ಗೋಮಯಂ ಪುನಃ ॥೩೩॥

---

೨೯. ಅವೆಲ್ಲವನ್ನೂ ಪಾರ್ವತೀ ಪರಮೇಶ್ವರರಿಗೆ ನಿವೇದನಮಾಡಿ ಮರಳಿ ಅವರ ಮುಂದೆ ಇರಿಸಬೇಕು. ರಾತ್ರಿಯಲ್ಲಿ ಶೃಂಗೋದಕವನ್ನು (ಹಸುವಿನ ಕೊಂಬಿನಲ್ಲಿರಿಸಿದ ನೀರನ್ನು) ಸೇವಿಸಿ, ಬರಿಯ ನೆಲದ ಮೇಲೆ ಮಲಗಬೇಕು.

೩೦. ಪ್ರಾತಃಕಾಲದಲ್ಲಿ ಮರಳಿ ಸ್ನಾನ, ಜಪ ಇವುಗಳಿಂದ ಪರಿಶುದ್ಧನಾಗಿ ಬ್ರಾಹ್ಮಣದಂಪತಿಗಳನ್ನು ಗಂಧ ಪುಷ್ಪ ವಸ್ತ್ರಾದಿಗಳಿಂದ ಪೂಜಿಸಬೇಕು.

೩೧. ಚಿನ್ನದ ಪ್ರತಿಮೆಗಳೆರಡನ್ನೂ ಸೌಭಾಗ್ಯ ದ್ರವ್ಯಗಳೆಂಟರೊಡನೆ "ಲಲಿತಾದೇವಿಗೆ ಪ್ರೀತಿಯಾಗಲಿ" ಎಂದು ಹೇಳಿ ಬ್ರಾಹ್ಮಣನಿಗೆ ದಾನ ಮಾಡಬೇಕು.

೩೨. ಎಲೈ ನಾರದ ಮುನಿಯೇ, ಸರ್ವಸೌಭಾಗ್ಯವನ್ನೂ ಕೋರುವವರು ಹೀಗೆ ಶುಕ್ಲಪಕ್ಷದ ತೃತೀಯೆಯಲ್ಲಿ ವರ್ಷವೆಲ್ಲ ಭಕ್ತಿಯಿಂದ ಈ ವ್ರತವನ್ನು ನಡೆಸಬೇಕು.

೩೩. ಪ್ರಾಶನದಲ್ಲೂ ದಾನಮಂತ್ರದಲ್ಲೂ ವಿಶೇಷವುಂಟು. ಅದನ್ನು ಕೇಳು. ಚೈತ್ರಮಾಸದಲ್ಲಿ ಶೃಂಗೋದಕವನ್ನೂ, ವೈಶಾಖದಲ್ಲಿ ಗೋಮಯವನ್ನೂ ಸೇವಿಸಬೇಕು.

ಜ್ಯೇಷ್ಠೇ ಮಂದಾರಕುಸುಮಂ ಬಿಲ್ವಪತ್ರಂ ಶುಚೌ ಸ್ಮೃತಂ ।
ಶ್ರಾವಣೇ ದಧಿ ಸಂಪ್ರಾಶ್ಯಂ ನಭಸ್ಯೇ ಚ ಕುಶೋದಕಂ ॥೩೪॥

ಕ್ಷೀರಮಾಶ್ವಯುಜೇ ಮಾಸಿ ಕಾರ್ತಿಕೇ ಪೃಷದಾಜ್ಯಕಂ ।
ಮಾರ್ಗೇ ಮಾಸೇ ತು ಗೋಮೂತ್ರಂ ಪೌಷೇ ಸಂಪ್ರಾಶಯೇದ್ಘೃತಂ ॥

ಮಾಘೇ ಕೃಷ್ಣತಿಲಂ ತದ್ವತ್ಪಂಚಗವ್ಯಂ ಚ ಫಾಲ್ಗುನೇ ।
ಲಲಿತಾ ವಿಜಯಾ ಭದ್ರಾ ಭವಾನೀ ಕುಮುದಾ ಶಿವಾ ॥೩೬॥

ವಾಸುದೇವೀ ತಥಾ ಗೌರೀ ಮಂಗಲಾ ಕಮಲಾ ಸತೀ ।
ಉಮಾ ಚ ದಾನಕಾಲೇ ತು ಪ್ರೀಯತಾಮಿತಿ ಕೀರ್ತಯೇತ್ ॥೩೭॥

ಮಲ್ಲಿಕಾಶೋಕಕಮಲಂ ಕದಂಬೋತ್ಪಲಮಾಲತೀಃ ।
ಕುಬ್ಜಕಂ ಕರವೀರಂ ಚ ಬಾಣಮಮ್ಲಾನಕುಂಕುಮಂ ॥೩೮॥

---

೩೪. ಜ್ಯೇಷ್ಠಮಾಸದಲ್ಲಿ ಮಂದಾರಪುಷ್ಪ, ಆಷಾಢದಲ್ಲಿ ಬಿಲ್ವಪತ್ರ, ಶ್ರಾವಣದಲ್ಲಿ ಮೊಸರು, ಭಾದ್ರಪದದಲ್ಲಿ ದರ್ಭೋದಕ ಇವನ್ನು ಕ್ರಮವಾಗಿ ಪ್ರಾಶನ ಮಾಡಬೇಕು.

೩೫. ಆಶ್ವಯುಜಮಾಸದಲ್ಲಿ ಹಾಲು, ಕಾರ್ತಿಕದಲ್ಲಿ ಮೊಸರು ಬೆರೆತ ತುಪ್ಪ, ಮಾರ್ಗಶಿರದಲ್ಲಿ ಗೋಮೂತ್ರ, ಪುಷ್ಯದಲ್ಲಿ ತುಪ್ಪ ಇವು ಪ್ರಾಶನಕ್ಕೆ ಉಕ್ತವಾಗಿವೆ.

೩೬. ಮಾಘಮಾಸದಲ್ಲಿ ಕರಿಯೆಳ್ಳನ್ನೂ, ಫಾಲ್ಗುನದಲ್ಲಿ ಪಂಚಗವ್ಯವನ್ನೂ ಸೇವಿಸಬೇಕು.

೩೭. ಚೈತ್ರ ಮೊದಲಾದ ಹನ್ನೆರಡು ತಿಂಗಳಲ್ಲೂ ಕ್ರಮವಾಗಿ ಲಲಿತಾ, ವಿಜಯಾ, ಭದ್ರಾ, ಭವಾನೀ, ಕುಮುದಾ, ಶಿವಾ, ವಾಸುದೇವೀ, ಗೌರೀ, ಮಂಗಲಾ, ಕಮಲಾ, ಸತೀ ಮತ್ತು ಉಮಾದೇವಿಯರು ಪ್ರೀತರಾಗಲೆಂದು ಹೇಳಿ ವ್ರತಾನಂತರ ದಾನವನ್ನು ಕೊಡಬೇಕು.

೩೮. ಈ ಹನ್ನೆರಡು ತಿಂಗಳಿಗೂ ಕ್ರಮವಾಗಿ ಮಲ್ಲಿಗೆ, ಅಶೋಕ, ತಾವರೆ, ಕಡಹ, ಕನ್ನೈದಿಲೆ, ಜಾಜಿ, ಕುಬ್ಜಕ, ಕೆಂಪುಗಣಿಗಲೆ, ಕರೀಗೋರಂಟಿ, ದೊಡ್ಡಗೋರಂಟಿ, ಕೇಸರ ಮತ್ತು ಲಕ್ಕಿ ಈ ಹೂವುಗಳನ್ನು ಉಪಯೋಗಿಸಬೇಕು.

ಸಿಂಧುವಾರಂ ಚ ಸರ್ವೇಷು ಮಾಸೇಷು ಕ್ರಮಶಃ ಸ್ಮೃತಂ ।
ಜಪಾಕುಸುಂಭಕುಸುಮಂ ಮಾಲತೀ ಶತಪತ್ರಿಕಾ ॥೩೯॥

ಯಥಾಲಾಭಂ ಪ್ರಶಸ್ತಾನಿ ಕರವೀರಂ ಚ ಸರ್ವದಾ ।
ಏವಂ ಸಂವತ್ಸರಂ ಯಾವದುಪೋಷ್ಯ ವಿಧಿವನ್ನರಃ ॥೪೦॥

ಸ್ತ್ರೀ ಭಕ್ತಾ ವಾ ಕುಮಾರೀ ವಾ ಶಿವಮಭ್ಯರ್ಚ್ಯ ಭಕ್ತಿತಃ ।
ವ್ರತಾಂತೇ ಶಯನಂ ದದ್ಯಾತ್ಸರ್ವೋಪಸ್ಕರಸಂಯುತಂ ॥೪೧॥

ಉಮಾಮಹೇಶ್ವರಂ ಹೈಮಂ ವೃಷಭಂ ಚ ಗವಾ ಸಹ ।
ಸ್ಥಾಪಯಿತ್ವಾಽಥ ಶಯನೇ ಬ್ರಾಹ್ಮಣಾಯ ನಿವೇದಯೇತ್ ॥೪೨॥

ಅನ್ಯಾನ್ಯಪಿ ಯಥಾಶಕ್ತಿ ಮಿಥುನಾನ್ಯಂಬರಾದಿಭಿಃ ।
ಧಾನ್ಯಾಲಂಕಾರಗೋದಾನೈರಭ್ಯರ್ಚೇದ್ಧನಸಂಚಯೈಃ ।
ವಿತ್ತಶಾಠ್ಯೇನ ರಹಿತಃ ಪೂಜಯೇದ್ಗತವಿಸ್ಮಯಃ ॥೪೩॥

---

೩೯. ದಾಸವಾಳದ ಹೂ, ಜಾಜಿಯ ಹೂ, ನೂರೆಸಳಿನ ತಾವರೆ ಇವು ಶ್ರೇಷ್ಠವಾದುವು. ದೊರೆತಾಗಲೆಲ್ಲ ಇವನ್ನು ಉಪಯೋಗಿಸಬೇಕು. ಕೆಂಪುಗಣಿಗಲೆಯು ಯಾವಾಗಲೂ ಪ್ರಶಸ್ತವಾದುದು.

೪೦-೪೧. ಹೀಗೆ ವರ್ಷವು ಪೂರ್ಣವಾಗುವ ವರೆಗೂ ಗಂಡಸು, ಹೆಂಗಸು ಇಲ್ಲವೇ ಹುಡುಗಿಯು ಉಪವಾಸಾದಿ ನಿಯಮಗಳಿಂದ ಭಕ್ತಿಯೊಡಗೂಡಿ ಶಿವನನ್ನರ್ಚಿಸಿ, ವ್ರತದ ಕೊನೆಯಲ್ಲಿ ಸಕಲ ಸಾಮಗ್ರೀಸಹಿತವಾಗಿ ಶಯನವನ್ನು ದಾನ ಮಾಡಬೇಕು.

೪೨. ಚಿನ್ನದಿಂದ ಮಾಡಿದ ಉಮಾಮಹೇಶ್ವರ ವಿಗ್ರಹವನ್ನು ಶಯನದಲ್ಲಿರಿಸಿ, ಗೋವೃಷಭಗಳ ಸಹಿತವಾಗಿ ಬ್ರಾಹ್ಮಣನಿಗೆ ಕೊಡಬೇಕು.

೪೩. ಇನ್ನೂ ಹಲವರು ದಂಪತಿಗಳನ್ನು ತನ್ನ ಶಕ್ತ್ಯನುಸಾರವಾಗಿ ಧನಧಾನ್ಯವಸ್ತ್ರಾಲಂಕಾರಗಳಿಂದಲೂ, ಗೋದಾನದಿಂದಲೂ ಸತ್ಕರಿಸಬೇಕು. ಜಿಪುಣತನವಿಲ್ಲದೆ ಅಹಂಕಾರರಹಿತನಾಗಿ ಅವರನ್ನು ಆದರಿಸಬೇಕು.

ಏವಂ ಕರೋತಿ ಯಸ್ಸಮ್ಯಕ್ಸೌಭಾಗ್ಯಶಯನವ್ರತಂ ।
ಸರ್ವಾನ್ ಕಾಮಾನವಾಪ್ನೋತಿ ಪದಮುತ್ಯಂತಮಶ್ನುತೇ ।
ಫಲಸ್ಯೈಕಸ್ಯ ತ್ಯಾಗೇನ ವ್ರತಮೇತತ್ಸಮಾಚರೇತ್ ॥೪೪॥

ಯ ಇಚ್ಛೇತ್ ಕೀರ್ತಿಮಾಪ್ನೋತಿ ಪ್ರತಿಮಾಸಂ ನರಾಧಿಪ ।
ಸೌಭಾಗ್ಯಾರೋಗ್ಯರೂಪಾಯುರ್ವಸ್ತ್ರಾಲಂಕಾರಭೂಷಣೈಃ ।
ನ ವಿಯುಕ್ತೋ ಭವೇದ್ರಾಜನ್ನವಾರ್ಬುದಶತತ್ರಯಂ ॥೪೫॥

ಯಸ್ತು ದ್ವಾದಶವರ್ಷಾಣಿ ಸೌಭಾಗ್ಯಶಯನವ್ರತಂ ।
ಕರೋತಿ ಸಪ್ತ ಚಾಷ್ಟೌ ವಾ ಶ್ರೀಕಂಠಭವನೇಽಮರೈಃ ।
ಪೂಜ್ಯಮಾನೋ ವಸೇತ್ಸಮ್ಯಗ್ಯಾವತ್ಕಲ್ಪಾಯುತತ್ರಯಂ ॥೪೬॥

ನಾರೀ ವಾ ಕುರುತೇ ವಾಽಪಿ ಕುಮಾರೀ ವಾ ನರೇಶ್ವರ ।
ಸಾಽಪಿ ತತ್ಫಲಮಾಪ್ನೋತಿ ದೇವ್ಯನುಗ್ರಹಲಾಲಿತಾ ॥೪೭॥

---

೪೪. ಈ ಸೌಭಾಗ್ಯಶಯನ ವ್ರತವನ್ನು ಯಥೋಕ್ತರೀತಿಯಲ್ಲಿ ಆಚರಿಸುವವನು ಸಕಲೇಷ್ಟಾರ್ಥಗಳನ್ನೂ ಪಡೆಯುವನು. ಅತಿಶ್ರೇಷ್ಠವಾದ ಪದವಿಯನ್ನೈದುವನು. ಈ ವ್ರತವನ್ನು ನಡೆಸಿದುದರ ಫಲವಾಗಿ ಯಾವುದಾದರೊಂದು ಹಣ್ಣನ್ನು ಅಲ್ಲಿಂದ ಮುಂದೆ ತಿನ್ನುವುದಿಲ್ಲವೆಂಬ ನಿಯಮವನ್ನು ಕೈಗೊಳ್ಳಬೇಕು.

೪೫. ಓ ರಾಜಾ, ಪ್ರತಿಮಾಸದಲ್ಲೂ ಇದನ್ನು ಮಾಡುವವನು ಕೀರ್ತಿಯನ್ನು ಗಳಿಸುವನು. ಅವನಿಗೆ ಸೌಭಾಗ್ಯ, ಆರೋಗ್ಯ, ಸೌಂದರ್ಯ, ಆಯುಸ್ಸು, ವಸ್ತ್ರ, ಭೂಷಣ, ಅಲಂಕಾರ ಇವೆಲ್ಲವೂ ಪರಿಪೂರ್ಣವಾಗಿ ಲಭಿಸುವುವು. ಎರಡು ಸಾವಿರದ ಏಳು ನೂರು ಅರ್ಬುದ ವರ್ಷಗಳ ಕಾಲ ಆತನು ಪರಮಸುಖದಿಂದಿರುವನು.

೪೬. ಹನ್ನೆರಡು ವರ್ಷಗಳ, ಇಲ್ಲವೇ ಏಳೆಂಟು ವರ್ಷಗಳ ಕಾಲ ಈ ಸೌಭಾಗ್ಯಶಯನವ್ರತವನ್ನು ಮಾಡತಕ್ಕವನು ಕೈಲಾಸದಲ್ಲಿ ದೇವತೆಗಳಿಂದ ಪೂಜೆಗೊಳ್ಳುತ್ತ ಮೂವತ್ತುಸಾವಿರ ಕಲ್ಪಗಳ ಕಾಲ ಸೌಖ್ಯದಿಂದಿರುವನು.

೪೭. ಇದನ್ನು ನೆರವೇರಿಸುವ ಹೆಂಗಸಾಗಲಿ ಹುಡುಗಿಯಾಗಲಿ ಮೇಲೆ ಹೇಳಿದ ಫಲವನ್ನೇ ಪಡೆಯುವಳು ಪಾರ್ವತೀದೇವಿಯ ಅನುಗ್ರಹಕ್ಕೆ ಪಾತ್ರಳಾಗುವಳು.

**ಶೃಣುಯಾದಪಿ ಯಚ್ಚೈವ ಪ್ರದದ್ಯಾದಥವಾ ಮತಿಂ ।**
**ಸೋಽಪಿ ವಿದ್ಯಾಧರೋ ಭೂತ್ವಾ ಸ್ವರ್ಗಲೋಕೇ ಚಿರಂ ವಸೇತ್ ॥೪೮॥**

**ಇದಮಿಹ ಮದನೇನ ಪೂರ್ವಮಿಷ್ಟಂ**
**ಶತಧನುಷಾ ಕೃತವೀರ್ಯಸೂನುನಾ ಚ ।**
**ಕೃತಮಥ ವರುಣೇನ ನಂದಿನಾ ವಾ**
**ಕಿಮು ಜನನಾಥ ತತೋ ಯದುದ್ಭವಃ ಸ್ಯಾತ್ ॥೪೯॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸೌಭಾಗ್ಯಶಯನವ್ರತಂ ನಾಮ ಷಷ್ಟಿತಮೋಽಧ್ಯಾಯಃ**

---

೪೮. ಇದನ್ನು ಕೇಳುವವನು ಅಥವಾ ಈ ವ್ರತವನ್ನು ಮಾಡುವಂತೆ ಪ್ರೇರಿಸುವವನು ವಿದ್ಯಾಧರನಾಗಿ ಚಿರಕಾಲ ಸ್ವರ್ಗದಲ್ಲಿ ಬಾಳುವನು.

೪೯. ಈ ವ್ರತವನ್ನು ಹಿಂದೆ ಮನ್ಮಥನೂ, ಶತಧನ್ವನೂ, ಕಾರ್ತವೀರ್ಯನೂ ಆಚರಿಸಿದರು. ಬಳಿಕ ವರುಣನೂ ನಂದಿಯೂ ನಡೆಸಿದರು. ಓ ರಾಜಾ, ಅದರಿಂದ ಎಂತಹ ಅಪೂರ್ವಫಲವು ಬರುವುದೆಂದು ಹೇಳಬೇಕೇನು ?

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಸೌಭಾಗ್ಯಶಯನ ವ್ರತದ ವಿಧಿಯನ್ನು ಹೇಳಿದೆ.

ಚೈತ್ರಮಾಸದ ಶುಕ್ಲಪಕ್ಷತೃತೀಯೆಯ ಪೂರ್ವಾಹ್ಣದಲ್ಲಿ ಈ ವ್ರತವನ್ನು ಆರಂಭಿಸಬೇಕು. ವಿಷ್ಣುವಿನ ವಕ್ಷಸ್ಥಲದಲ್ಲಿದ್ದ ಸಕಲಲೋಕ ಸೌಭಾಗ್ಯವು ದ್ರವರೂಪದಿಂದ ನೆಲದ ಮೇಲೆ ಚೆಲ್ಲಲು ಕಬ್ಬು, ಪಾದರಸ ಮುಂತಾದ ಸೌಭಾಗ್ಯದಾಯಕಗಳಾದ ಎಂಟು ವಸ್ತುಗಳು ಹುಟ್ಟಿದುವು. ದಕ್ಷಬ್ರಹ್ಮನು ಆ ರಸವನ್ನು ಅಂತರಿಕ್ಷದಲ್ಲಿ ಕುಡಿಯಲು ಸಕಲಲೋಕಸುಂದರಿಯಾದ ಸತೀ ದೇವಿಯು ಜನಸಿದಳು. ಅವಳನ್ನೇ ಲಲಿತಾದೇವಿಯೆಂದೂ ಕರೆಯುವರು. ಇವಳನ್ನೂ ಪರಮೇಶ್ವರನನ್ನು ಪೂಜಿಸಿ, ಮೇಲೆ ಹೇಳಿದ ಸೌಭಾಗ್ಯವಸ್ತುಗಳನ್ನು ನೈವೇದ್ಯಮಾಡಿ, ಬ್ರಾಹ್ಮಣನಿಗೆ ದಾನಮಾಡಬೇಕು. ಈ ವ್ರತದಿಂದ ಸಕಲ ಸೌಭಾಗ್ಯಗಳೂ ಲಭಿಸುವುವು. ಸದ್ಗತಿ ದೊರೆಯುವುದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಸೌಭಾಗ್ಯಶಯನವ್ರತವೆಂಬ ಅರವತ್ತನೆಯ ಅಧ್ಯಾಯವು ಮುಗಿದುದು.

## ಅಥ ಏಕಷಷ್ಟಿತಮೋಽಧ್ಯಾಯಃ

॥ ನಾರದ ಉವಾಚ ॥

ಭೂರ್ಲೋಕೋಽಥ ಭುವರ್ಲೋಕಃ ಸ್ವರ್ಲೋಕೋಥ ಮಹರ್ಜನಃ ।
ತಪಸ್ಸತ್ಯಂ ಚ ಸಪ್ತೈತೇ ದೇವಲೋಕಾಃ ಪ್ರಕೀರ್ತಿತಾಃ ॥ ೧ ॥

ಪರ್ಯಾಯೇಣ ತು ಸರ್ವೇಷಾಮಾಧಿಪತ್ಯಂ ಕಥಂ ಭವೇತ್ ।
ಇಹ ಲೋಕೇ ಶುಭಂ ರೂಪಮಾಯುಸ್ಸೌಭಾಗ್ಯಮೇವ ಚ ।
ಲಕ್ಷ್ಮೀಶ್ಚ ವಿಪುಲಾ ನಾಥ ಕಥಂ ಸ್ಯಾತ್ಪುರಸೂದನ ॥ ೨ ॥

॥ ಮಹೇಶ್ವರ ಉವಾಚ ॥

ಪುರಾ ಹುತಾಶನಃ ಸಾರ್ಧಂ ಮಾರುತೇನ ಮಹೀತಲೇ ।
ಆದಿಷ್ಟಃ ಪುರುಹೂತೇನ ವಿನಾಶಾಯ ಸುರದ್ವಿಷಾಂ ॥ ೩ ॥

ನಿರ್ದಗ್ಧೇಷು ತತಸ್ತೇನ ದಾನವೇಷು ಸಹಸ್ರಶಃ ।
ತಾರಕಃ ಕಮಲಾಕ್ಷಶ್ಚ ಕಾಲದಂಷ್ಟ್ರಃ ಪರಾವಸುಃ ।
ವಿರೋಚನಶ್ಚ ಸಂಗ್ರಾಮಾದಪಲಾಯಂಸ್ತಪೋಧನ ॥ ೪ ॥

---

೧. ನಾರದಮುನಿ ಹೇಳಿದನು.—ಭೂಲೋಕ, ಭುವರ್ಲೋಕ, ಸುವರ್ಲೋಕ, ಮಹೋಲೋಕ, ಜನೋಲೋಕ, ತಪೋಲೋಕ ಮತ್ತು ಸತ್ಯಲೋಕಗಳೆಂಬ ಈ ಏಳೂ ದೇವಲೋಕಗಳೆನಿಸುವುವಷ್ಟೆ !

೨. ಈ ಎಲ್ಲ ಲೋಕಗಳ ಒಡೆತನವೂ ಸರದಿಯ ಮೇರೆಗೆ ಪ್ರಾಪ್ತವಾಗುವುದೆಂತು ? ಓ ಪುರಾಂತಕಾ, ಈ ಲೋಕದಲ್ಲಿ ಮಂಗಳಕರವಾದ ರೂಪ, ಆಯುಸ್ಸು, ಸೌಭಾಗ್ಯ, ವಿಪುಲವಾದ ಸಂಪತ್ತು ಇವೆಲ್ಲ ದೊರಕುವ ಸಾಧನವಾವುದು ?

೩. ಮಹೇಶ್ವರನು ಹೇಳಿದನು.—ಹಿಂದೆ ದೇವೇಂದ್ರನು ಭೂಲೋಕದಲ್ಲಿರುವ ದೇವಶತ್ರುಗಳಾದ ಅಸುರರನ್ನೆಲ್ಲ ನಾಶಮಾಡುವುದಕ್ಕಾಗಿ ಅಗ್ನಿಗೂ ವಾಯುವಿಗೂ ಅಪ್ಪಣೆಯಿತ್ತನು.

೪. ಓ ನಾರದಾ, ಬಳಿಕ ಅಗ್ನಿಯು ಸಾವಿರಗಟ್ಟಲೆಯಾಗಿ ದಾನವರನ್ನು ಸುಟ್ಟನು. ತಾರಕ, ಕಮಲಾಕ್ಷ, ಕಾಲದಂಷ್ಟ್ರ, ಪರಾವಸು ಮತ್ತು ವಿರೋಚನರೆಂಬ ದಾನವರು ಯುದ್ಧವನ್ನು ಬಿಟ್ಟೋಡಿದರು.

ಅಂಭಃ ಸಾಮುದ್ರಮಾವಿಶ್ಯ ಸನ್ನಿವೇಶಮಕುರ್ವತ ।
ಅಶಕ್ಯಾ ಇತಿ ತೇಽಪ್ಯಗ್ನಿಮಾರುತಾಭ್ಯಾಮುಪೇಕ್ಷಿತಾಃ ॥ ೫ ॥

ತತಃ ಪ್ರಭೃತಿ ತೇ ದೇವಾನ್ ಮನುಷ್ಯಾನ್ ಸಭುಜಂಗಮಾನ್ ।
ಸಂಪೀಡ್ಯ ಚ ಮುನೀನ್ ಸರ್ವಾನ್ ಪ್ರವಿಶಂತಿ ಪುನರ್ಜಲಂ ॥ ೬ ॥

ಏವಂ ವರ್ಷಸಹಸ್ರಾಣಿ ವೀರಾಃ ಪಂಚ ಚ ಸಪ್ತ ಚ ।
ಜಲದುರ್ಗಬಲಾದ್ಬ್ರಹ್ಮನ್ ಪೀಡಯಂತಿ ಜಗತ್ತ್ರಯಂ ॥ ೭ ॥

ತತಃ ಪರಮಥೋ ವಹ್ನಿಮಾರುತಾವಮರಾಧಿಪಃ ।
ಆದಿದೇಶ ಚಿರಾದಂಬುನಿಧಿರೇಷ ವಿಶೋಷ್ಯತಾಂ ॥ ೮ ॥

ಯಸ್ಮಾದಸ್ಮದ್ದ್ವಿಷಾಮೇವ ಶರಣಂ ವರುಣಾಲಯಃ ।
ತಸ್ಮಾದ್ಭವದ್ಭ್ಯಾಮದ್ಯೈವ ಕ್ಷಯಮೇಷ ಪ್ರಣೀಯತಾಂ ॥ ೯ ॥

ತಾವೂಚತುಸ್ತತಶ್ಶಕ್ರಮುಭೌ ಶಂಬರಸೂದನಂ ।
ಅಧರ್ಮ ಏಷ ದೇವೇಂದ್ರ ಸಾಗರಸ್ಯ ವಿನಾಶನಂ ॥೧೦॥

---

೫. ಅವರು ಸಮುದ್ರದ ನೀರನ್ನು ಹೊಕ್ಕು ಅಲ್ಲಿ ವಾಸಮಾಡತೊಡಗಿದರು. ಇವರನ್ನು ಜಯಿಸುವುದು ಅಶಕ್ಯವೆಂದು ಅಗ್ನಿಯೂ ವಾಯುವೂ ಸುಮ್ಮನಾದರು.

೬. ಅದು ಮೊದಲುಗೊಂಡು ಅಸುರರು ದೇವತೆಗಳನ್ನೂ, ಮನುಷ್ಯರನ್ನೂ, ಸರ್ಪಗಳನ್ನೂ, ಎಲ್ಲ ಮುನಿಗಳನ್ನೂ ಪೀಡಿಸಿ ಮತ್ತೆ ನೀರೊಳಕ್ಕೆ ಪ್ರವೇಶಿಸುತ್ತಿದ್ದರು.

೭. ಓ ನಾರದಾ, ಹೀಗೆ ಆ ದಾನವವೀರರು ಹನ್ನೆರಡು ಸಾವಿರ ವರ್ಷಗಳ ಕಾಲ ಜಲದುರ್ಗದ ಆಶ್ರಯಬಲದಿಂದ ಮೂರುಲೋಕವನ್ನೂ ಪೀಡಿಸುತ್ತಿದ್ದರು.

೮. ಬಹುಕಾಲ ಕಳೆದ ತರುವಾಯ ದೇವೇಂದ್ರನು ಆ ಸಾಗರವನ್ನು ಬತ್ತಿಸುವಂತೆ ಅಗ್ನಿ ವಾಯುಗಳಿಗೆ ಅಪ್ಪಣೆಯಿತ್ತನು.

೯. "ಈ ಸಾಗರವು ನಮ್ಮ ಶತ್ರುಗಳಿಗೇ ಆಸರೆಯಾಗಿದೆ. ಆದುದರಿಂದ ನೀವು ಈಗಲೇ ಇದನ್ನು ಒಣಗಿಸಿ ಬಿಡಿ."

೧೦. ಅವರಿಬ್ಬರೂ ಬಳಿಕ ಶಂಬರಾಸುರನನ್ನು ಸಂಹರಿಸಿದ ದೇವೇಂದ್ರನಿಗೆ ಹೇಳಿದರು. "ಓ ದೇವೇಂದ್ರಾ, ಸಾಗರವನ್ನು ವಿನಾಶಮಾಡುವ ಈ ಕಾರ್ಯವು ಅಧರ್ಮವು.

ಯಸ್ಮಾಜ್ಜೀವನಿಕಾಯಸ್ಯ ಮಹತಃ ಸಂಕ್ಷಯೋ ಭವೇತ್ ।
ತಸ್ಮಾನ್ನ ಪಾಪಮದ್ಯಾವಾಂ ಕರವಾವ ಪುರಂದರ ॥೧೧॥

ಅಸ್ಯ ಯೋಜನಮಾತ್ರೇಽಪಿ ಜೀವಕೋಟಿಶತಾನಿ ಚ
ನಿವಸಂತಿ ಸುರಶ್ರೇಷ್ಠ ಸ ಕಥಂ ನಾಶಮರ್ಹತಿ ॥೧೨॥

ಏವಮುಕ್ತಸ್ಸುರೇಂದ್ರಸ್ತು ಕೋಪಾತ್ಸಂರಕ್ತಲೋಚನಃ ।
ಉವಾಚೇದಂ ವಚೋ ರೋಷಾನ್ನಿರ್ದಹನ್ನಿವ ಪಾವಕಂ ॥೧೩॥

ನ ಧರ್ಮಾಧರ್ಮಸಂಯೋಗಂ ಪ್ರಾಪ್ನುವಂತ್ಯಮರಾಃ ಕ್ವಚಿತ್ ।
ಭವತೋಸ್ತು ವಿಶೇಷೇಣ ಮಾಹಾತ್ಮ್ಯಂ ಚಾಧಿತಿಷ್ಠತೋಃ ॥೧೪॥

ಮದಾಜ್ಞಾಲಂಘನಂ ಯಸ್ಮಾನ್ಮಾರುತೇನ ಸಮಂ ತ್ವಯಾ ।
ಮುನಿವ್ರತಮಹಿಂಸಾದಿ ಪರಿಗೃಹ್ಯ ತ್ವಯಾ ಕೃತಂ ।
ಧರ್ಮಾರ್ಥಶಾಸ್ತ್ರರಹಿತಂ ಶತ್ರುಂ ಪ್ರತಿ ವಿಭಾವಸೋ ॥೧೫॥

---

೧೧. ಏಕೆಂದರೆ ಬಹು ಸಂಖ್ಯೆಯ ಪ್ರಾಣಿಗಳು ಹಾಳಾಗುವುವು. ಆದುದರಿಂದ, ಎಲೈ ಪುರಂದರನೇ, ನಾವು ಈ ಪಾಪಕಾರ್ಯವನ್ನು ಈಗ ಮಾಡಲಾರೆವು.

೧೨. ಈ ಸಮುದ್ರದ ಒಂದು ಯೋಜನ ವಿಸ್ತಾರದ ಪ್ರದೇಶದಲ್ಲೇ ನೂರಾರು ಕೋಟಿ ಪ್ರಾಣಿಗಳು ವಾಸಿಸುತ್ತಿವೆ. ಓ ಸುರಶ್ರೇಷ್ಠಾ, ಅಂತಹುವನ್ನು ನಾಶಮಾಡುವುದು ಉಚಿತವೆ ? ''

೧೩. ಅಗ್ನಿವಾಯುಗಳು ಇಂತೆನಲು ದೇವೇಂದ್ರನಿಗೆ ಕೋಪ ಬಂದಿತು. ಅವನ ಕಣ್ಣುಗಳು ಕೆಂಪೇರಿದುವು. ಸಿಟ್ಟಿನಿಂದ ಸುಟ್ಟುಬಿಡುವನೋ ಎಂಬಂತೆ ಅವನು ಅಗ್ನಿಗೆ ಹೀಗೆಂದು ಹೇಳಿದನು.

೧೪. '' ದೇವತೆಗಳಿಗೆ ಧರ್ಮಾಧರ್ಮಗಳ ಸಂಬಂಧವೆಂದಿಗೂ ಇಲ್ಲ. ಅದರಲ್ಲೂ ವಿಶೇಷವಾಗಿ ಮಹಿಮೆಯನ್ನು ಪಡೆದಿರುವ ನಿಮ್ಮಿಬ್ಬರಿಗಂತೂ ಅದರ ಸುಳಿವೇ ತೋರದು.

೧೫. ಓ ಪಾವಕಾ, ನೀನು ವಾಯುವಿನೊಡಗೂಡಿ ನನ್ನ ಅಪ್ಪಣೆಯನ್ನು ಮೀರಿದೆ. ಧರ್ಮಶಾಸ್ತ್ರಕ್ಕೂ, ಅರ್ಥಶಾಸ್ತ್ರಕ್ಕೂ ವಿರೋಧವಾಗಿ ನಡೆಯುವ ಶತ್ರುವಿನ ವಿಷಯದಲ್ಲಿ ಮುನಿಜನಗಳಿಗೆ ತಕ್ಕ ಅಹಿಂಸಾದಿ ವ್ರತವನ್ನು ಅನುಸರಿಸಿದೆ.

ತಸ್ಮಾದೇಕೇನ ವಪುಷಾ ಮುನಿರೂಪೇಣ ಮಾನುಷೇ ।
ಮಾರುತೇನ ಸಮಂ ಲೋಕೇ ತವ ಜನ್ಮ ಭವಿಷ್ಯತಿ ॥೧೬॥

ಯದಾ ಚ ಮಾನುಷತ್ವೇಽಪಿ ತ್ವಯಾಽಗಸ್ತ್ಯೇನ ಶೋಷಿತಃ ।
ಭವಿಷ್ಯತ್ಯುದಧಿರ್ವಹ್ನೇ ತದಾ ದೇವತ್ವಮಾಪ್ಸ್ಯಸಿ ॥೧೭॥

ಇತೀಂದ್ರಶಾಪಾತ್ಪತಿತೌ ತತ್ ಕ್ಷಣಾತ್ತೌ ಮಹೀತಲೇ ।
ಅವಾಪ್ತಾವೇಕದೇಹೇನ ಕುಂಭಾಜ್ಜನ್ಮ ತಪೋಧನ ॥೧೮॥

ಮಿತ್ರಾವರುಣಯೋರ್ವೀರ್ಯಾದ್ವಸಿಷ್ಠಸ್ಯಾನುಜೋಽಭವತ್ ।
ಅಗಸ್ತ್ಯ ಇತ್ಯುಗ್ರತಪಾಃ ಸಂಬಭೂವ ಪುನರ್ಮುನಿಃ ॥೧೯॥

॥ ನಾರದ ಉವಾಚ ॥

ಸಂಭೂತಃ ಸ ಕಥಂ ಭ್ರಾತಾ ವಸಿಷ್ಠಸ್ಯಾಭವನ್ಮುನಿಃ ।
ಕಥಂ ಚ ಮಿತ್ರಾವರುಣೌ ಪಿತರಾವಸ್ಯ ತೌ ಸ್ಮೃತೌ ।
ಜನ್ಮ ಕುಂಭಾದಗಸ್ತ್ಯಸ್ಯ ಕಥಂ ಸ್ಯಾತ್ಪುರಸೂದನ ॥೨೦॥

---

೧೬. ಆದುದರಿಂದ ನೀನು ವಾಯುವಿನೊಡಗೂಡಿ ಒಂದೇ ಶರೀರದಿಂದ ಮನುಷ್ಯಜನ್ಮದಲ್ಲಿ ಮುನಿರೂಪದಿಂದ ಹುಟ್ಟುವೆ.

೧೭. ಓ ಅಗ್ನೀ, ಮನುಷ್ಯಜನ್ಮವೆತ್ತಿದಾಗಲೂ ಸಹ, ಅಗಸ್ತ್ಯಮುನಿರೂಪನಾದ ನೀನು ಸಮುದ್ರವನ್ನೊಂದಿಗೆ ಬತ್ತಿಸುವೆಯೋ ಆಗ ದೇವತ್ವವನ್ನು ಪಡೆಯುವೆ."

೧೮. ಇಂದ್ರನು ಹೀಗೆ ಶಾಪಕೊಡಲು ಅವರಿಬ್ಬರೂ ಆ ಗಳಿಗೆಯಲ್ಲೇ ಭೂಮಿಗೆ ಬಿದ್ದರು. ಎಲೈ ನಾರದನೇ, ಒಂದೇ ಶರೀರದಿಂದ ಕುಂಭದಲ್ಲಿ ಹುಟ್ಟಿದರು.

೧೯. ಮಿತ್ರ, ವರುಣ ಇವರಿಬ್ಬರ ವೀರ್ಯದಿಂದ ಅಗಸ್ತ್ಯನೆಂಬ ಮಹಾತಪಸ್ವಿಯು ಕುಂಭದಿಂದ ಜನಿಸಿದನು. ಆತನು ವಸಿಷ್ಠಮುನಿಯ ತಮ್ಮನು.

೨೦. ನಾರದಮುನಿ ಹೇಳಿದನು.—ತ್ರಿಪುರಸಂಹಾರಕನಾದ ಓ ಮಹಾದೇವನೇ, ಆ ಮುನಿಯು ವಸಿಷ್ಠಮಹರ್ಷಿಗೆ ಸೋದರನಾದುದು ಹೇಗೆ? ಮಿತ್ರಾವರುಣರು ಈತನಿಗೆ ಜನಕರಾದುದೆಂತು? ಅಗಸ್ತ್ಯನು ಕುಂಭದಿಂದ ಹುಟ್ಟಿದ ಬಗೆ ಯಾವುದು?

## ಅಧ್ಯಾಯ ೬೧

### ॥ ಈಶ್ವರ ಉವಾಚ ॥

ಪುರಾ ಪುರಾಣಪುರುಷಃ ಕದಾಚಿದ್ಗಂಧಮಾದನೇ ।
ಭೂತ್ವಾ ಧರ್ಮಸುತೋ ವಿಷ್ಣುಶ್ಚಚಾರ ವಿಪುಲಂ ತಪಃ ॥೨೧॥

ತಪಸಾ ತಸ್ಯ ಭೀತೇನ ವಿಘ್ನಾರ್ಥಂ ಪ್ರೇಷಿತಾವುಭೌ ।
ಶಕ್ರೇಣ ಮಾಧವಾನಂಗಾವಪ್ಸರೋಗಣಸಂಯುತೌ ॥೨೨॥

ಯದಾ ನ ಗೀತವಾದ್ಯೇನ ನಾಂಗರಾಗಾದಿನಾ ಹರಿಃ ।
ನ ಕಾಮಮಾಧವಾಭ್ಯಾಂ ಚ ವಿಷಯಾನ್ ಪ್ರತಿ ಚುಕ್ಷುಭೇ ॥೨೩॥

ತದಾ ಕಾಮಮಧುಸ್ತ್ರೀಣಾಂ ವಿಷಾದಮಗಮದ್ಗಣಃ ।
ಸಂಕ್ಷೋಭಾಯ ತತಸ್ತೇಷಾಂ ಸ್ವೋರುದೇಶಾನ್ನರಾಗ್ರಜಃ ।
ನಾರೀಮುತ್ಪಾದಯಾಮಾಸ ತ್ರೈಲೋಕ್ಯಜನಮೋಹಿನೀಂ ॥೨೪॥

ಸಂಕ್ಷುಬ್ಧಾಸ್ತು ತಯಾ ದೇವಾಸ್ತೌ ತು ದೇವವರಾವುಭೌ ।
ಅಪ್ಸರೋಭಿಸ್ಸಮಕ್ಷಂ ಹಿ ದೇವಾನಾಮಬ್ರವೀದ್ಧರಿಃ ॥೨೫॥

---

೨೧. ಈಶ್ವರನು ಹೇಳಿದನು.—ಪೂರ್ವದಲ್ಲಿ ಪುರಾಣಪುರುಷನಾದ ವಿಷ್ಣುವು ಧರ್ಮನ ಪುತ್ರನಾಗಿ ಜನಿಸಿ, ಗಂಧಮಾದನಪರ್ವತದಲ್ಲಿ ಉಗ್ರವಾದ ತಪಸ್ಸನ್ನು ಮಾಡುತ್ತಿದ್ದನು.

೨೨. ಆತನ ತಪಸ್ಸಿಗೆ ಹೆದರಿ ಇಂದ್ರನು ಅದಕ್ಕೆ ವಿಘ್ನಮಾಡಲೆಂದು ವಸಂತನನ್ನೂ ಮನ್ಮಥನನ್ನೂ ಅಪ್ಸರಸ್ತ್ರೀಯರೊಡನೆ ಕಳುಹಿಸಿದನು.

೨೩. ಗಾನ, ವಾದ್ಯ, ಗಂಧಪುಷ್ಪಾದಿ ಭೋಗಸಾಧನಗಳು ಇವುಗಳ ಮೂಲಕ ವಸಂತಮನ್ಮಥರು ವಿಷ್ಣುವಿನ ಮನಸ್ಸನ್ನು ಕಲಕಲು ಬಯಸಿದರು. ಆದರೆ ವಿಷಯಸುಖದ ಕಡೆಗೆ ಅವನ್ನು ಎಳೆಯಲಾರದೆ ಹೋದರು.

೨೪. ಆಗ ಕಾಮನ ಮತ್ತು ವಸಂತನ ಸ್ತ್ರೀಯರೆಲ್ಲರೂ ವಿಷಾದಪಟ್ಟರು. ನರನ ಅಗ್ರಜನಾದ ನಾರಾಯಣನು ಅವರೆಲ್ಲರ ಮನಸ್ಸಿನಲ್ಲಿ ವಿಕಾರವನ್ನು ಹುಟ್ಟಿಸುವುದಕ್ಕಾಗಿ, ತನ್ನ ತೊಡೆಯಿಂದ ಮೂರು ಲೋಕದವರ ಮನವನ್ನೂ ಸೂರೆಗೊಳ್ಳುವ ನಾರಿಯೊಬ್ಬಳನ್ನು ಉತ್ಪಾದನ ಮಾಡಿದನು.

೨೫. ಅವಳನ್ನು ನೋಡಿ ದೇವತೆಗಳು ಸಂಕ್ಷುಬ್ಧರಾದರು. ಸುರಶ್ರೇಷ್ಠರೆನಿಸಿದ ಮಿತ್ರಾವರುಣರಿಬ್ಬರೂ ಬಹಳ ವಿಕಾರವನ್ನು ಪಡೆದರು. ಅಪ್ಸರಸ್ತ್ರೀಯರೆದುರಿನಲ್ಲಿ ದೇವತೆಗಳಿಗೆ ವಿಷ್ಣುವು ಹೀಗೆ ಹೇಳಿದನು.

ಅಪ್ಸರಾ ಇತಿ ಸಾ ನಾಮ್ನಾ ದೇವಾನಾಮಬ್ರವೀದ್ಧರಿಃ ।
ಊರ್ವಶೀತಿ ಚ ನಾಮ್ನೇಯಂ ಲೋಕೇ ಖ್ಯಾತಿಂ ಗಮಿಷ್ಯತಿ ॥೨೬॥

ತತಃ ಕಾಮಯಮಾನೇನ ಮಿತ್ರೇಣಾಹೂಯ ಸೋರ್ವಶೀ ।
ಉಕ್ತಾ ಮಾಂ ರಮಯಸ್ವೇತಿ ಬಾಢಮಿತ್ಯಬ್ರವೀತ್ತು ಸಾ ॥೨೭॥

ಗಚ್ಛಂತೀ ಚಾಂಬರಂ ತದ್ವತ್ಸ್ತೋಕಮಿಂದೀವರೇಕ್ಷಣಾ ।
ವರುಣೇನ ಧೃತಾ ಪಶ್ಚಾದ್ವರುಣಂ ನಾಭ್ಯನಂದತ ॥೨೮॥

ಮಿತ್ರೇಣಾಹಂ ವೃತಾ ಪೂರ್ವಮದ್ಯ ಭಾರ್ಯಾ ನ ತೇ ವಿಭೋ ।
ಉವಾಚ ವರುಣಶ್ಚಿತ್ತಂ ಮಯಿ ಸನ್ಯಸ್ಯ ಗಮ್ಯತಾಂ ॥೨೯॥

ಗತಾಯಾಂ ಬಾಢಮಿತ್ಯುಕ್ತ್ವಾ ಮಿತ್ರಶ್ಶಾಪಮದಾತ್ತದಾ ।
ತಸ್ಯೈ ಮಾನುಷಲೋಕೇ ತ್ವಂ ಗಚ್ಛ ಸೋಮಸುತಾತ್ಮಜಂ ॥೩೦॥

---

೨೬. "ಇವಳನ್ನು ಅಪ್ಸರಸ್ತ್ರೀಯೆಂದರಿಯಿರಿ. ಇವಳು ಊರ್ವಶಿಯೆಂಬ ಹೆಸರಿನಿಂದ ಲೋಕದಲ್ಲಿ ಪ್ರಖ್ಯಾತಳಾಗುವಳು" ಎಂದು ಹರಿಯು ದೇವತೆಗಳಿಗೆ ಹೇಳಿದನು.

೨೭. ಬಳಿಕ ಮಿತ್ರನು ಊರ್ವಶಿಯನ್ನು ಕಾಮಿಸಿ, ಅವಳನ್ನು ಕರೆದು "ನನ್ನನ್ನು ನೀನು ಸುಖಪಡಿಸು" ಎಂದು ಹೇಳಲು, ಅವಳು ಹಾಗೆಯೇ ಆಗಲೆಂದಳು.

೨೮. ನೈದಿಲೆಯಂತೆ ಹೊಳೆಯುವ ಕಣ್ಣಿನ ಆ ಸುಂದರಿಯು ಆಕಾಶದಲ್ಲಿ ಹೋಗುತ್ತಿರಲು, ವರುಣನು ಹಿಂದೆ ಬಂದು ಅವಳನ್ನು ತಡೆದನು. ಅವಳು ಅವನನ್ನು ಮೆಚ್ಚಲಿಲ್ಲ.

೨೯. "ಮಿತ್ರನು ಮೊದಲೇ ನನ್ನನ್ನು ಅಪೇಕ್ಷಿಸಿದ್ದಾನೆ. ಆದುದರಿಂದ, ಪ್ರಭೂ, ನಾನಿಂದು ನಿನಗೆ ಭಾರ್ಯೆಯಾಗಲಾರೆನು" ಎಂದು ಊರ್ವಶಿ ಹೇಳಿದಳು. "ಹಾಗಾದರೆ ನನ್ನಲ್ಲಿ ಮನಸ್ಸಿಟ್ಟು ನೀನು ಹೋಗು" ಎಂದು ವರುಣನು ಉತ್ತರವನ್ನು ಕೊಟ್ಟನು.

೩೦. ಅದಕ್ಕೊಪ್ಪಿಕೊಂಡು ಅವಳು ಮಿತ್ರನ ಬಳಿಗೆ ಹೋದಳು. "ನೀನು ವೇಶ್ಯಾಧರ್ಮವನ್ನು ಅನುಸರಿಸಿದೆ; ಆದುದರಿಂದ ಮನುಷ್ಯಲೋಕಕ್ಕೆ ಹೋಗಿ ಪುರೂರವಸ್ಸನ್ನು ಪತಿಯಾಗಿ ಪಡೆ" ಎಂದು ಅವನು ಶಾಪವನ್ನಿತ್ತನು.

ಭಜಸ್ವೇತಿ ಯತೋ ವೇಶ್ಯಾಧರ್ಮ ಏಷ ತ್ವಯಾ ಕೃತಃ ।
ಜಲಕುಂಭೇ ತತೋ ವೀರ್ಯಂ ಮಿತ್ರೇಣ ವರುಣೇನ ಚ ।
ಪ್ರಕ್ಷಿಪ್ತಮಥ ಸಂಜಾತೌ ದ್ವಾವೇವ ಮುನಿಸತ್ತಮೌ ॥೩೧॥

ನಿಮಿರ್ನಾಮ ಸಹ ಸ್ತ್ರೀಭಿಃ ಪುರಾ ದ್ಯೂತಮದೀವ್ಯತ ।
ತತ್ರಾಂತರೇಽಭ್ಯಾಜಗಾಮ ವಸಿಷ್ಠೋ ಬ್ರಹ್ಮಸಂಭವಃ ॥೩೨॥

ತಸ್ಯ ಪೂಜಾಮಕುರ್ವಂತಂ ಶಶಾಪ ಸ ಮುನಿರ್ನೃಪಂ ।
ವಿದೇಹಸ್ತ್ವಂ ಭವಸ್ವೇತಿ ತತಸ್ತೇನಾಪ್ಯಸೌ ಮುನಿಃ ॥೩೩॥

ಅನ್ಯೋನ್ಯಶಾಪಾಚ್ಚ ತಯೋರ್ವಿಗತೇ ಇವ ಚೇತಸೀ ।
ಜಗ್ಮತುಃ ಶಾಪನಾಶಾಯ ಬ್ರಹ್ಮಾಣಂ ಜಗತಃ ಪತಿಂ ॥೩೪॥

ಅಥ ಬ್ರಹ್ಮಣ ಆದೇಶಾಲ್ಲೋಚನೇಷ್ವವಸನ್ನಿಮಿಃ ।
ನಿಮೇಷಾಃ ಸ್ಮೃಶ್ಚ ಲೋಕಾನಾಂ ತದ್ವಿಶ್ರಾಮಾಯ ನಾರದ ॥೩೫॥

---

೩೧. ತರುವಾಯ ಮಿತ್ರನೂ ವರುಣನೂ ಜಲಕುಂಭದಲ್ಲಿ ತಮ್ಮ ತಮ್ಮ ವೀರ್ಯವನ್ನು ಬಿಟ್ಟರು. ಋಷಿವರ್ಯರಿಬ್ಬರು ಅಲ್ಲಿ ಉತ್ಪನ್ನರಾದರು.

೩೨. ಪೂರ್ವದಲ್ಲಿ ನಿಮಿಯೆಂಬ ರಾಜನು ಸ್ತ್ರೀಯರೊಡನೆ ಜೂಜಾಡುತ್ತಿದ್ದನು. ಬ್ರಹ್ಮಪುತ್ರನಾದ ವಸಿಷ್ಠಮಹರ್ಷಿಯು ಆ ಸಮಯದಲ್ಲಿ ಅಲ್ಲಿಗೆ ಬಂದನು.

೩೩. ರಾಜನು ಮುನಿಗೆ ಸತ್ಕಾರವನ್ನು ಮಾಡಲಿಲ್ಲ. ಅದಕ್ಕಾಗಿ ಮುನಿಯು ಕುಪಿತನಾಗಿ "ನಿನಗೆ ದೇಹವಿಲ್ಲದೆ ಹೋಗಲಿ" ಎಂದು ಶಾಪವಿತ್ತನು. ರಾಜನೂ ಸಹ ಅವನಿಗೆ ಪ್ರತಿಶಾಪವನ್ನು ಕೊಟ್ಟನು.

೩೪. ಪರಸ್ಪರ ಶಾಪದಿಂದ ಅವರಿಬ್ಬರೂ ಅಚೇತನರಂತಾಗಿ ಜಗತ್ಪತಿಯಾದ ಬ್ರಹ್ಮನ ಬಳಿಗೆ ಶಾಪ ಪರಿಹಾರಕ್ಕಾಗಿ ಹೋದರು.

೩೫. ಬಳಿಕ ಬ್ರಹ್ಮನ ಅಪ್ಪಣೆಯಂತೆ ನಿಮಿಚಕ್ರವರ್ತಿಯು ಕಣ್ಣುಗಳಲ್ಲಿ ವಾಸಮಾಡತೊಡಗಿದನು. ಓ ನಾರದಾ, ಅವನ ವಿಶ್ರಾಂತಿಗಾಗಿಯೇ ಪ್ರಾಣಿಗಳಿಗೆ ರೆಪ್ಪೆಗಳು ಉತ್ಪನ್ನವಾದುವು.

**ವಸಿಷ್ಠೋಽಪ್ಯಭವತ್ತಸ್ಮಿಞ್ಜಲಕುಂಭೇ ಚ ಪೂರ್ವವತ್ ।**
**ತತಃ ಶ್ವೇತಶ್ಚತುರ್ಬಾಹುಸ್ಸಾಕ್ಷಸೂತ್ರಕಮಂಡಲುಃ ।**
**ಅಗಸ್ತ್ಯ ಇತಿ ಶಾಂತಾತ್ಮಾ ಬಭೂವ ಋಷಿಸತ್ತಮಃ ॥೩೬॥**

**ಮಲಯಸ್ಯೈಕದೇಶೇ ತು ವೈಖಾನಸವಿಧಾನತಃ ।**
**ಸಭಾರ್ಯಸ್ಸಂವೃತೋ ವಿಪ್ರೈಸ್ತಪಶ್ಚಕ್ರೇ ಸುದುಶ್ಚರಂ ॥೩೭॥**

**ತತಃ ಕಾಲೇನ ಮಹತಾ ತಾರಕಾದತಿಪೀಡಿತಂ ।**
**ಜಗದ್ವೀಕ್ಷ್ಯ ಸ ಕೋಪೇನ ಪೀತವಾನ್ ವರುಣಾಲಯಂ ॥೩೮॥**

**ತತೋಽಸ್ಯ ವರದಾಃ ಸರ್ವೇ ಬಭೂವುಃ ಶಂಕರಾದಯಃ ।**
**ಬ್ರಹ್ಮಾ ವಿಷ್ಣುಶ್ಚ ಭಗವಾನ್ ವರದಾನಾಯ ಜಗ್ಮತುಃ ।**
**ವರಂ ವೃಣೀಷ್ವ ಭದ್ರಂ ತೇ ಯದಭೀಷ್ಟಂ ಚ ವೈ ಮುನೇ ॥೩೯॥**

---

೩೬. ವಸಿಷ್ಠನೂ ಕೂಡ ಆ ಜಲಕುಂಭದಲ್ಲಿ ಸೇರಿ ಮೊದಲಿನಂತೆ ಇದ್ದನು. ಬಳಿಕ ಬಿಳಿಯ ಬಣ್ಣದ, ನಾಲ್ಕು ತೋಳಿನ, ಜಪಸೂತ್ರವನ್ನೂ ಕಮಂಡಲುವನ್ನೂ ಧರಿಸಿದ, ಶಾಂತಾತ್ಮನಾದ ಅಗಸ್ತ್ಯನೆಂಬ ಮಹಾಮುನಿಯು ಹುಟ್ಟಿದನು.

೩೭. ಅವನು ಮಲಯಪರ್ವತದಲ್ಲೊಂದು ಕಡೆ ವಾನಪ್ರಸ್ಥವಿಧಿಯಿಂದ ಪತ್ನೀಸಮೇತನಾಗಿ ಬ್ರಾಹ್ಮಣರೊಡಗೂಡಿ ಅತ್ಯುಗ್ರವಾದ ತಪಸ್ಸನ್ನು ಮಾಡುತ್ತಿದ್ದನು.

೩೮. ಬಹಳ ಕಾಲ ಕಳೆದ ಮೇಲೆ ತಾರಕಾಸುರನಿಂದ ಪ್ರಪಂಚವು ಅತ್ಯಂತ ಪೀಡೆಗೊಳಗಾದುದನ್ನು ಕಂಡು, ಆ ಮುನಿಯು ಬಹಳ ಕೋಪದಿಂದ, ಆ ರಾಕ್ಷಸನಿಗೆ ವಾಸಸ್ಥಾನವಾಗಿದ್ದ ಸಮುದ್ರವನ್ನು ಕುಡಿದನು.

೩೯. ಬಳಿಕ ಶಂಕರ ಮೊದಲಾದವರೆಲ್ಲರೂ ವರವನ್ನು ಅನುಗ್ರಹಿಸುವವರಾದರು. ಬ್ರಹ್ಮನೂ ಷಡ್ಗುಣಪರಿಪೂರ್ಣನಾದ ವಿಷ್ಣುವೂ ಪ್ರಸನ್ನರಾಗಿ ಬಂದು "ಎಲೈ ಮುನಿಯೇ, ನಿನಗೆ ಮಂಗಳವಾಗಲಿ ; ಬೇಕಾದ ವರವನ್ನು ಕೇಳು" ಎಂದರು.

॥ ಅಗಸ್ತ್ಯ ಉವಾಚ ॥

**ಯಾವದ್ಬ್ರಹ್ಮಸಹಸ್ರಾಣಾಂ ಪಂಚವಿಂಶತಿಕೋಟಯಃ ।**
**ವೈಮಾನಿಕೋ ಭವಿಷ್ಯಾಮಿ ದಕ್ಷಿಣಾಪಥವರ್ತ್ಮನಿ ॥೪೦॥**

**ಮದ್ವಿಮಾನೋದಯೇ ಕುರ್ಯಾದ್ಯಃ ಕಶ್ಚಿತ್ಪೂಜನಂ ಮಮ ।**
**ಸ ಸಪ್ತಲೋಕಾಧಿಪತಿಃ ಪರ್ಯಾಯೇಣ ಭವಿಷ್ಯತಿ ॥೪೧॥**

॥ ಈಶ್ವರ ಉವಾಚ ॥

**ಏವಮಸ್ತ್ವಿತಿ ತೇಽಪ್ಯುಕ್ತ್ವಾ ಜಗ್ಮುರ್ದೇವಾ ಯಥಾಗತಂ ।**
**ತಸ್ಮಾದರ್ಘಃ ಪ್ರದಾತವ್ಯೋ ಹ್ಯಗಸ್ತ್ಯಸ್ಯ ಸದಾ ಬುಧೈಃ ॥೪೨॥**

॥ ನಾರದ ಉವಾಚ ॥

**ಕಥಮರ್ಘಪ್ರದಾನಂ ತು ಕರ್ತವ್ಯಂ ತಸ್ಯ ವೈ ವಿಭೋ ।**
**ವಿಧಾನಂ ಯದಗಸ್ತ್ಯಸ್ಯ ಪೂಜನೇ ತದ್ವದಸ್ವ ಮೇ ॥೪೩॥**

---

೪೦. ಅಗಸ್ತ್ಯಮುನಿ ಹೇಳಿದನು.—ಇಪ್ಪತ್ತೈದು ಕೋಟಿ ಸಾವಿರ ಬ್ರಹ್ಮರ ಆಯುಷ್ಕಾಲದ ವರೆಗೂ ನಾನು ದಕ್ಷಿಣಾಪಥಮಾರ್ಗದಲ್ಲಿ ವಿಮಾನ ಸಂಚಾರಿಯಾಗಿ ಇರಬೇಕು.

೪೧. ನನ್ನ ವಿಮಾನವು ಗೋಚರವಾದಾಗ ಯಾವನು ನನ್ನನ್ನು ದರ್ಶನ ಮಾಡಿ ಪೂಜಿಸುವನೋ ಅವನು ಕ್ರಮವಾಗಿ ಏಳು ಲೋಕಗಳ ಅಧಿಪತಿ ಯಾಗುವನು.

೪೨. ಈಶ್ವರನು ಹೇಳಿದನು.—ಹಾಗೆಯೇ ಆಗಲೆಂದು ಹೇಳಿ ದೇವತೆಗಳು ಸ್ವೇಚ್ಛೆಯಿಂದ ಹೊರಟು ಹೋದರು. ಆದುದರಿಂದ ಪ್ರಾಜ್ಞರಾದವರು ಅಗಸ್ತ್ಯನಿಗೆ ಯಾವಾಗಲೂ ಪೂಜೆಯನ್ನು ಸಲ್ಲಿಸಬೇಕು.

೪೩. ನಾರದನು ಹೇಳಿದನು.—ಓ ಪ್ರಭೂ, ಅಗಸ್ತ್ಯನಿಗೆ ಅರ್ಘ್ಯದಾನ ವನ್ನು ಮಾಡುವುದು ಹೇಗೆ? ಆತನ ಪೂಜೆಯ ವಿಧಾನವನ್ನು ನನಗೆ ತಿಳಿಸು.

|| ಈಶ್ವರ ಉವಾಚ ||

ಪ್ರತ್ಯೂಷಸಮಯೇ ವಿದ್ವಾನ್ ಕುರ್ಯಾದಸ್ಯೋದಯೇ ನಿಶಿ ।
ಸ್ನಾನಂ ಶುಕ್ಲತಿಲೈಸ್ತದ್ವಚ್ಛುಕ್ಲಮಾಲ್ಯಾಂಬರೋ ಗೃಹೀ ||೪೪||

ಸ್ಥಾಪಯೇದವ್ರಣಂ ಕುಂಭಂ ಮಾಲ್ಯವಸ್ತ್ರವಿಭೂಷಿತಂ ।
ಪಂಚರತ್ನಸಮಾಯುಕ್ತಂ ಘೃತಪಾತ್ರಸಮನ್ವಿತಂ ||೪೫||

ಅಂಗುಷ್ಠಮಾತ್ರಂ ಪುರುಷಂ ತಥೈವ
ಸೌವರ್ಣಮತ್ಯಾಯುತಬಾಹುದಂಡಂ ।
ಚತುರ್ಮುಖಂ ಕುಂಭಮುಖೇ ನಿಧಾಯ
ಧಾನ್ಯಾನಿ ಸಪ್ತಾಂಬರಸಂಯುತಾನಿ ||೪೬||

ಸಕಾಂಸ್ಯಪಾತ್ರಾಕ್ಷತಶುಕ್ತಿಯುಕ್ತಂ
ಮಂತ್ರೇಣ ದದ್ಯಾದ್ದ್ವಿಜಪುಂಗವಾಯ ।
ಉತ್ಕ್ಷಿಪ್ಯ ಲಂಬೋದರದೀರ್ಘಬಾಹು
ಮನನ್ಯಚೇತಾ ಯಮದಿಙ್ಮುಖಃ ಸ್ಯ ||೪೭||

---

೪೪. ಈಶ್ವರನು ಹೇಳಿದನು.—ರಾತ್ರಿಯಲ್ಲಿ ಅಗಸ್ತ್ಯನು ಉದಿಸಲು, ಶಾಸ್ತ್ರಜ್ಞನಾದ ಗೃಹಸ್ಥನು ಅರುಣೋದಯದ ವೇಳೆಯಲ್ಲಿ ಬಿಳಿಯೆಳ್ಳಿನಿಂದ ಸ್ನಾನವನ್ನು ಮಾಡಿ, ಶುಭ್ರವಸ್ತ್ರವನ್ನು ಧರಿಸಬೇಕು.

೪೫. ಪಂಚರತ್ನಗಳನ್ನೊಳಗೊಂಡ, ತೂತುಬಿರಕುಗಳಿಲ್ಲದ ಕುಂಭವನ್ನು ಘೃತಪಾತ್ರಸಹಿತವಾಗಿ ಸ್ಥಾಪನಮಾಡಿ, ವಸ್ತ್ರಗಳಿಂದಲೂ ಪುಷ್ಪಗಳಿಂದಲೂ ಅಲಂಕರಿಸಬೇಕು.

೪೬. ಅಂಗುಷ್ಠಪ್ರಮಾಣದ, ಬಾಹುಗಳು ದಂಡದಂತೆ ದೀರ್ಘವಾಗಿರುವ, ನಾಲ್ಕು ಮುಖಗಳುಳ್ಳ ಪುರುಷವಿಗ್ರಹವನ್ನೂ, ಸುವರ್ಣದಿಂದ ಮಾಡಿಸಿ, ಕುಂಭದ ಮುಖದಲ್ಲಿ ಧಾನ್ಯಗಳ ಮೇಲೆ ಇರಿಸಿ ಏಳು ವಸ್ತ್ರಗಳಿಂದ ಅಲಂಕರಿಸಬೇಕು.

೪೭. ಕಂಚಿನ ಪಾತ್ರೆಯಲ್ಲಿ ಅಕ್ಷತೆಯನ್ನೂ ಮುತ್ತಿನ ಚಿಪ್ಪನ್ನೂ ಇರಿಸಿಕೊಂಡು, ಅನನ್ಯಚಿತ್ತದಿಂದ ಮಂತ್ರವನ್ನು ಹೇಳುತ್ತಾ, ದಕ್ಷಿಣಾಭಿಮುಖವಾಗಿ ನಿಂತು, ವಿನಾಯಕನ ತೋಳನಂತೆ ದೀರ್ಘವಾದ ತೋಳನ್ನು ಮೇಲಕ್ಕೆ ಎತ್ತಿ ಹಿಂದೆ ಹೇಳಿದ ವಸ್ತುಗಳನ್ನು ಬ್ರಾಹ್ಮಣೋತ್ತಮನಿಗೆ ದಾನಮಾಡಬೇಕು.

ಶ್ವೇತಾಂ ಚ ದದ್ಯಾದ್ಯದಿ ಶಕ್ತಿರಸ್ತಿ
ರೌಪ್ಯೈಃ ಖುರ್ರೈರ್ಹೇಮಮುಖೀಂ ಸವತ್ಸಾಂ ।
ಧೇನುಂ ನರಃ ಕ್ಷೀರವತೀಂ ಪ್ರಣಮ್ಯ
ಸವತ್ಸಘಂಟಾಭರಣಾಂ ದ್ವಿಜಾಯ ॥೪೮॥

ಆಸಪ್ತರಾತ್ರೋದಯಮೇತದಸ್ಯ
ದಾತವ್ಯಮೇತತ್ಸಕಲಂ ನರೇಣ ।
ಯಾವತ್ಸಮಾಃ ಸಪ್ತ ದಶಾಥವಾ ಸ್ಯು
ರಥೋರ್ಧ್ವಮಪ್ಯತ್ರ ವದಂತಿ ಕೇಚಿತ್ ॥೪೯॥

ಕಾಶಪುಷ್ಪಪ್ರತೀಕಾಶ ಅಗ್ನಿಮಾರುತಸಂಭವ ।
ಮಿತ್ರಾವರುಣಯೋಃ ಪುತ್ರ ಕುಂಭಯೋನೇ ನಮೋಽಸ್ತು ತೇ ॥೫೦॥

ವಿಂಧ್ಯವೃದ್ಧಿಕ್ಷಯಕರ ಮೇಘತೋಯವಿಷಾಪಹ ।
ರತ್ನವಲ್ಲಭ ದೇವೇಶ ಲಂಕಾವಾಸಿನ್ನಮೋಽಸ್ತು ತೇ ॥೫೧॥

---

೪೮. ಶಕ್ತಿಯಿದ್ದಲ್ಲಿ ಗೊರಸುಗಳನ್ನು ಬೆಳ್ಳಿಯಿಂದಲೂ, ಮುಖವನ್ನು ಚಿನ್ನದಿಂದಲೂ ಸಿಂಗರಿಸಿ, ಕೊರಳಲ್ಲಿ ಘಂಟೆಗಳು ಘಣಘಣಿಸುತ್ತಿರಲು, ಚೆನ್ನಾಗಿ ಹಾಲುಗರೆವ ಬಿಳಿಯ ಹಸುವನ್ನು ಕರುವಿನೊಡನೆ ಬ್ರಾಹ್ಮಣನಿಗೆ ನಮಸ್ಕರಿಸಿ ದಾನವನ್ನು ಮಾಡಬೇಕು.

೪೯. ಈ ವ್ರತವು ಏಳು ರಾತ್ರಿಗಳು ಕಳೆಯುವವರೆಗೂ ನಡೆಯತಕ್ಕದು. ಅದುವರೆಗೆ ಯಜಮಾನನು ಮೇಲೆ ಹೇಳಿದುವೆಲ್ಲವನ್ನೂ ದಾನಮಾಡಬೇಕು. ಈ ರೀತಿಯಾಗಿ ಏಳು, ಹತ್ತು ಅಥವಾ ಇನ್ನೂ ಹೆಚ್ಚು ವರ್ಷಗಳ ಕಾಲ ಈ ವ್ರತವನ್ನು ನಡೆಸುತ್ತ ಹೋಗಬಹುದೆಂದು ಕೆಲವರು ಹೇಳುತ್ತಾರೆ.

೫೦. "ಕಾಶಪುಷ್ಪವನ್ನು ಹೋಲುವ, ಅಗ್ನಿಮಾರುತರ ಅವತಾರವಾದ, ಮಿತ್ರಾವರುಣರ ಪುತ್ರನಾದ ಎಲೈ ಅಗಸ್ತ್ಯಮಹರ್ಷಿಯೇ, ನಿನಗೆ ನಮಸ್ಕಾರ.

೫೧. ವಿಂಧ್ಯಪರ್ವತವು ಬೆಳೆಯದಂತೆ ಮಾಡಿ, ಮೇಘೋದಕದ ವಿಷವನ್ನು ಕಳೆದು, ರತ್ನಗಳಿಗೆ ಅಧಿಪನಾಗಿ, ದೇವತೆಗಳ ಪ್ರಭುವೆನಿಸಿ, ಲಂಕಾವಾಸಿಯಾದ ಓ ಅಗಸ್ತ್ಯ, ನಿನಗೆ ನಮಸ್ಕಾರ.

**ವಾತಾಪೀ ಭಕ್ಷಿತೋ ಯೇನ ಸಮುದ್ರಃ ಶೋಷಿತಃ ಪುರಾ ।**
**ಲೋಪಾಮುದ್ರಾಪತಿಃ ಶ್ರೀಮಾನ್ಯೋऽಸೌ ತಸ್ಮೈ ನಮೋ ನಮಃ ॥೫೨॥**

**ರಾಜಪುತ್ರಿ ಮಹಾಭಾಗೇ ಋಷಿಪತ್ನಿ ವರಾನನೇ ।**
**ಲೋಪಾಮುದ್ರೇ ನಮಸ್ತುಭ್ಯಮರ್ಘ್ಯೋ ಮೇ ಪ್ರತಿಗೃಹ್ಯತಾಂ ।**
**ಪ್ರತ್ಯಬ್ದಂ ತು ಫಲತ್ಯಾಗಮೇವಂ ಕುರ್ವನ್ನ ಸೀದತಿ ॥೫೩॥**

**ಹೋಮಂ ಕೃತ್ವಾ ತತಃ ಪಶ್ಚಾದ್ವರ್ಜಯೇನ್ಮಾನವಃ ಫಲಂ ।**
**ಅನೇನ ವಿಧಿನಾ ಯಸ್ತು ಪುಮಾನರ್ಘ್ಯಂ ನಿವೇದಯೇತ್ ॥೫೪॥**

**ಇಮಂ ಲೋಕಂ ಸ ಚಾಪ್ನೋತಿ ರೂಪಾರೋಗ್ಯಸಮನ್ವಿತಃ ।**
**ದ್ವಿತೀಯೇನ ಭುವರ್ಲೋಕಂ ಸ್ವರ್ಗಲೋಕಂ ತತಃ ಪರಂ ॥೫೫॥**

**ಸಪ್ತೈವ ಲೋಕಾನಾಪ್ನೋತಿ ಸಪ್ತಾರ್ಘ್ಯಾನ್ಯಃ ಪ್ರಯಚ್ಛತಿ ।**
**ಯಾವದಾಯುಶ್ಚ ಯಃ ಕುರ್ಯಾತ್ಪರಂ ಬ್ರಹ್ಮಾಧಿಗಚ್ಛತಿ ॥೫೬॥**

---

೫೨. ಯಾವನು ಪೂರ್ವದಲ್ಲಿ ವಾತಾಪಿಯನ್ನು ಭಕ್ಷಿಸಿದನೋ, ಸಮುದ್ರವನ್ನು ಶೋಷಿಸಿದನೋ, ಆ ಶ್ರೀಮಂತನಾದ ಲೋಪಾಮುದ್ರಾದೇವಿಯ ಪತಿಯಾದ ಅಗಸ್ತ್ಯಮಹರ್ಷಿಗೆ ನಮಸ್ಕಾರ.

೫೩. ಎಲೌ ರಾಜಪುತ್ರೀ, ಬಹು ಭಾಗ್ಯಸಂಪನ್ನೇ, ಋಷಿಪತ್ನೀ, ಮಂಗಳಮುಖೀ, ಲೋಪಾಮುದ್ರೇ, ನಿನಗೆ ನಮಸ್ಕಾರಮಾಡುವೆನು. ನಾನು ಒಪ್ಪಿಸಿದ ಈ ಪೂಜೋಪಹಾರವನ್ನು ಸ್ವೀಕರಿಸು.'' ಪ್ರತಿವರ್ಷವೂ ಹೀಗೆ ವ್ರತವನ್ನು ಆಚರಿಸಿ ಅದರ ಫಲವನ್ನು ತ್ಯಾಗಮಾಡಬೇಕು. ಎಂದರೆ ಮಾಡಿದ ಕರ್ಮವನ್ನು ಭಗವಂತನಿಗೆ ಅರ್ಪಣಮಾಡಬೇಕು. ಇದರಿಂದ ಕ್ಲೇಶಗಳು ದೂರವಾಗುವುವು.

೫೪-೫೫. ಬಳಿಕ ಹೋಮವನ್ನು ಮಾಡಿ ಕೊನೆಗೆ ಫಲತ್ಯಾಗವನ್ನು ಮಾಡಬೇಕು. ಈ ಕ್ರಮದಲ್ಲಿ ವ್ರತವನ್ನಾಚರಿಸಿ ಅಗಸ್ತ್ಯಮಹರ್ಷಿಗೆ ಅರ್ಘ್ಯವನ್ನು ಕೊಡುವವನು ಈ ಲೋಕದಲ್ಲಿ ಸೌಂದರ್ಯ, ಆರೋಗ್ಯ ಇವುಗಳಿಂದ ಪೂರ್ಣನಾಗಿ ಬಾಳುವನು. ಎರಡನೆಯ ಸಾರಿ ವ್ರತವನ್ನು ಮಾಡಿ ಅರ್ಘ್ಯವನ್ನಿತ್ತರೆ ಭುವರ್ಲೋಕವನ್ನೂ, ಅನಂತರ ಸ್ವರ್ಗಲೋಕವನ್ನೂ ಪಡೆಯುವನು.

೫೬. ಏಳು ಅರ್ಘ್ಯಗಳನ್ನು ಕೊಡುವಾತನಿಗೆ ಏಳು ಲೋಕಗಳೂ ಲಭಿಸುವುವು. ಜೀವಮಾನವಿರುವ ವರೆಗೂ ಯಾವನು ಈ ವ್ರತವನ್ನು ಆಚರಿಸುತ್ತಾನೋ ಅವನಿಗೆ ಪರಬ್ರಹ್ಮಸಾಯುಜ್ಯವು ದೊರೆಯುವುದು.

**ಇಹ ಪಠತಿ ಶೃಣೋತಿ ವಾ ಯ ಏತ**
**ದ್ಯುಗಲಮುನಿಪ್ರಭವಾರ್ಘ್ಯಸಂಪ್ರದಾನಂ ।**
**ಮತಿಮಪಿ ಚ ದದಾತಿ ಸೋಽಪಿ ವಿಷ್ಣೋ**
**ರ್ಭವನಗತಃ ಪರಿಪೂಜ್ಯತೇಽಮರೌಘ್ಯೈಃ** ॥೫೭॥

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇಽಗಸ್ತ್ಯೋತ್ಪತ್ತಿಪೂಜಾವಿಧಾನಂ ನಾಮೈಕಷಷ್ಟಿತಮೋಽಧ್ಯಾಯಃ**

---

೫೭. ಮಿತ್ರಾವರುಣರಿಬ್ಬರಿಂದ ಜನಿಸಿದ ಅಗಸ್ತ್ಯಮುನಿಯ ಉತ್ಪತ್ತಿ ವೃತ್ತಾಂತವನ್ನೂ ಅರ್ಘ್ಯದಾನವಿಧಿಯನ್ನೂ ಓದಲಿ, ಕೇಳಲಿ, ಇಲ್ಲವೇ ಇತರರಿಗೆ ಇದರಲ್ಲಿ ಬುದ್ಧಿ ಹುಟ್ಟುವಂತೆ ಮಾಡಲಿ, ಅಂತಹ ಮನುಷ್ಯನು ವಿಷ್ಣು ಸಾನ್ನಿಧ್ಯ ವನ್ನು ಸೇರಿ ದೇವತೆಗಳಿಂದ ಪೂಜ್ಯತೆಯನ್ನು ಪಡೆಯುವನು.

### ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಅಗಸ್ತ್ಯಮುನಿಯ ಉತ್ಪತ್ತಿಕ್ರಮವನ್ನು ಹೇಳಿದೆ.

ತಾರಕಾದಿದಾನವರು ಸಮುದ್ರದೊಳಗೆ ಸೇರಿಕೊಂಡು ದೇವತೆಗಳಿಗೆ ಬಹಳ ತೊಂದರೆಕೊಡುತ್ತಿದ್ದರು. ಅವರಿಗೆ ಆಶ್ರಯವಾಗಿದ್ದ ಸಮುದ್ರವನ್ನು ಶೋಷಣ ಮಾಡುವಂತೆ ಇಂದ್ರನು ಅಗ್ನಿಗೂ ವಾಯುವಿಗೂ ಆಜ್ಞೆಯಿತ್ತನು. ಆದರಿಂದ ಅನೇಕ ಜಲಚರಗಳು ನಷ್ಟವಾಗುವುವೆಂದೂ, ಅದರಿಂದ ಅದು ಸಾಧುವಲ್ಲವೆಂದೂ ಅವರು ಉತ್ತರವಿತ್ತರು. ಇಂದ್ರನಿಗೆ ಕೋಪಬಂದಿತು. "ಇಬ್ಬರೂ ಮನುಷ್ಯರೂಪ ದಿಂದ ಹುಟ್ಟಿ ಒಂದೇ ದೇಹವನ್ನು ಧರಿಸಿ" ಎಂದು ಅವರಿಗೆ ಶಾಪವಿತ್ತನು. ಊರ್ವ ಶಿಯ ಸೌಂದರ್ಯವನ್ನು ಕಂಡು, ಮೋಹಿತರಾದ ಮಿತ್ರಾವರುಣರಿಬ್ಬರೂ ತಮ್ಮ ವೀರ್ಯವನ್ನು ಜಲಕುಂಭವೊಂದರಲ್ಲಿ ಬಿಟ್ಟರು. ಅದರಿಂದ ಅಗಸ್ತ್ಯಮುನಿಯು ಜನಿಸಿದನು. ಈತನು ಮಹಾ ತಪಸ್ವಿ. ತಾರಕಾಸುರನು ಲೋಕ ಕಂಟಕನಾಗಿರಲು, ಅವನಿಗೆ ಆಶ್ರಯವಾಗಿದ್ದ ಸಮುದ್ರವನ್ನೇ ಇವನು ಪಾನಮಾಡಿದನು. ದಕ್ಷಿಣವು ಈತನಿಗೆ ಪ್ರಿಯವಾದ ದಿಕ್ಕು.

ಕಲಶಸ್ಥಾಪನೆಯನ್ನು ಮಾಡಿ, ಶಾಸ್ತ್ರೋಕ್ತವಾಗಿ ಈ ಮಹರ್ಷಿಯನ್ನು ಪೂಜಿಸಿ ಅರ್ಘ್ಯವನ್ನಿತ್ತರೆ ಸಕಲ ಫಲಗಳೂ ದೊರೆಯುವುವು. ಸಪ್ತಲೋಕಗಳ ಆಧಿಪತ್ಯವೂ ಲಭಿಸುವುದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಅಗಸ್ತ್ಯೋತ್ಪತ್ತಿಪೂಜಾವಿಧಾನವೆಂಬ ಅರವತ್ತೊಂದನೆಯ ಅಧ್ಯಾಯವು ಮುಗಿದುದು.

## ಅಥ ದ್ವಿಷಷ್ಟಿತಮೋಽಧ್ಯಾಯಃ

॥ ಮನುರುವಾಚ ॥

ಸೌಭಾಗ್ಯಾರೋಗ್ಯಫಲದಮಮುತ್ರಾಕ್ಷಯ್ಯಕಾರಕಂ ।
ಭುಕ್ತಿಮುಕ್ತಿಪ್ರದಂ ದೇವ ತನ್ಮೇ ಬ್ರೂಹಿ ಜನಾರ್ದನ ॥ ೧ ॥

॥ ಮತ್ಸ್ಯ ಉವಾಚ ॥

ಯದುಮಾಯಾಃ ಪುರಾ ದೇವ ಉವಾಚ ಪುರಸೂದನಃ ।
ಕೈಲಾಸಶಿಖರಾಸೀನೋ ದೇವ್ಯಾ ಪೃಷ್ಟಸ್ತದಾ ಕಿಲ ॥ ೨ ॥

ಕಥಾಸು ಸಂಪ್ರವೃತ್ತಾಸು ಧರ್ಮ್ಯಾಸು ಲಲಿತಾಸು ಚ ।
ತದಿದಾನೀಂ ಪ್ರವಕ್ಷ್ಯಾಮಿ ಭುಕ್ತಿಮುಕ್ತಿಫಲಪ್ರದಂ ॥ ೩ ॥

॥ ಈಶ್ವರ ಉವಾಚ ॥

ಶೃಣುಷ್ವಾವಹಿತಾ ದೇವಿ ತಥೈವಾನಂತಪುಣ್ಯಕೃತ್ ।
ನರಾಣಾಮಥ ನಾರೀಣಾಮಾರಾಧನಮನುತ್ತಮಂ ॥ ೪ ॥

---

೧. ಮನುಚಕ್ರವರ್ತಿ ಹೇಳಿದನು.—ದೇವ, ಜನಾರ್ದನಾ, ಸೌಭಾಗ್ಯವನ್ನೂ ಆರೋಗ್ಯವನ್ನೂ ಕೊಟ್ಟು, ಪರಲೋಕದಲ್ಲಿ ಅಕ್ಷಯಫಲಪ್ರದವಾಗಿ, ಸ್ವರ್ಗಾದಿಭೋಗವನ್ನೂ ಮೋಕ್ಷಸುಖವನ್ನೂ ಉಂಟುಮಾಡುವ ವ್ರತವಾವುದೋ ಅದನ್ನು ಹೇಳು.

೨-೩. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಪೂರ್ವದಲ್ಲಿ ತ್ರಿಪುರಾಂತಕನಾದ ಪರಮೇಶ್ವರನು ಕೈಲಾಸಶಿಖರದಲ್ಲಿ ಕುಳಿತಿದ್ದನು. ಅವನಿಗೂ ಪಾರ್ವತಿಗೂ ಸುಂದರವೂ ಧರ್ಮಮಯವೂ ಆದ ಕಥೆಗಳ ವಿಷಯದಲ್ಲಿ ಸಂವಾದ ನಡೆಯುತ್ತಿತ್ತು. ಅವಳ ಪ್ರಶ್ನೆಗೆ ಸೌಖ್ಯವನ್ನೂ ಮೋಕ್ಷವನ್ನೂ ಕೊಡುವ ಈ ಮುಂದಿನ ವೃತ್ತಾಂತವನ್ನು ಉತ್ತರವಾಗಿ ಹೇಳಿದನು. ಅದನ್ನೇ ಈಗ ನಿನಗೆ ಹೇಳುವೆನು.

೪. ಈಶ್ವರನು ಹೇಳಿದನು.—ಓ ದೇವೀ, ಗಮನದಿಂದ ಕೇಳು. ಪುರುಷರಿಗೂ ಸ್ತ್ರೀಯರಿಗೂ ಅನಂತಪುಣ್ಯಫಲವನ್ನು ಕೊಡುವ ಅತಿಶ್ರೇಷ್ಠವಾದ ಪೂಜಾವಿಧಾನವನ್ನು ಹೇಳುವೆನು.

**ನಭಸ್ಯೇ ವಾಽಥ ವೈಶಾಖೇ ಪುಣ್ಯಮಾರ್ಗಶಿರಸ್ಯ ಚ ।**
**ಶುಕ್ಲಪಕ್ಷೇ ತೃತೀಯಾಯಾಂ ಸುಸ್ನಾತೋ ಗೌರಸರ್ಷಪೈಃ** ॥ ೫ ॥

**ಗೋರೋಚನಂ ಸಗೋಮೂತ್ರಮುಷ್ಣಂ ಗೋಶಕೃತಂ ತಥಾ ।**
**ದಧಿಚಂದನಸಮ್ಮಿಶ್ರಂ ಲಲಾಟೇ ತಿಲಕಂ ನ್ಯಸೇತ್ ।**
**ಸೌಭಾಗ್ಯಾರೋಗ್ಯದಂ ಯಸ್ಮಾತ್ಸದಾ ಚ ಲಲಿತಾಪ್ರಿಯಂ** ॥ ೬ ॥

**ಪ್ರತಿಪಕ್ಷಂ ತೃತೀಯಾಸು ಪುಮಾನಾಪೀತವಾಸಸೀ ।**
**ಧಾರಯೇದಥ ರಕ್ತಾನಿ ನಾರೀ ಚೇದಥ ಸಂಯುತಾ** ॥ ೭ ॥

**ವಿಧವಾ ಧಾತುರಕ್ತಾನಿ ಕುಮಾರೀ ಶುಕ್ಲವಾಸಸೀ ।**
**ದೇವೀಂ ತು ಪಂಚಗವ್ಯೇನ ತತಃ ಕ್ಷೀರೇಣ ಕೇವಲಂ ।**
**ಸ್ನಾಪಯೇನ್ಮಧುನಾ ತದ್ವತ್ ಪುಷ್ಪಗಂಧೋದಕೇನ ಚ** ॥ ೮ ॥

**ಪೂಜಯೇಚ್ಛುಕ್ಲಪುಷ್ಪೈಶ್ಚ ಫಲೈರ್ನಾನಾವಿಧೈರಪಿ ।**
**ಧಾನ್ಯಕಾಜಾಜಿಲವಣೈರ್ಗುಡಕ್ಷೀರಘೃತಾನ್ವಿತೈಃ** ॥ ೯ ॥

---

೫. ಭಾದ್ರಪದ, ವೈಶಾಖ ಇಲ್ಲವೇ ಪವಿತ್ರವೆನಿಸಿದ ಮಾರ್ಗಶಿರ ಈ ತಿಂಗಳ ಶುಕ್ಲಪಕ್ಷದ ತೃತೀಯೆಯಲ್ಲಿ ಬಿಳೀಸಾಸುವೆಯಿಂದ ಶಾಸ್ತ್ರೋಕ್ತವಾಗಿ ಸ್ನಾನ ಮಾಡಬೇಕು.

೬. ಗೋರೋಚನ, ಗೋಮೂತ್ರ, ಹೊಸದಾದ ಗೋಮಯ ಇವನ್ನು ಮೊಸರು ಮತ್ತು ಶ್ರೀಗಂಧದೊಡನೆ ಬೆರಸಿ ಹಣೆಯಲ್ಲಿ ತಿಲಕವಿಟ್ಟುಕೊಳ್ಳಬೇಕು. ಅದು ಸೌಭಾಗ್ಯವನ್ನೂ ಆರೋಗ್ಯವನ್ನೂ ಕೊಡತಕ್ಕುದು. ಲಲಿತಾದೇವಿಗೆ ಸದಾ ಪ್ರಿಯಕರವಾದುದು.

೭. ಪ್ರತಿಯೊಂದು ಪಕ್ಷದ ತೃತೀಯೆಯ ದಿನ ಪುರುಷನು ಹೊಂಬಣ್ಣದ ಪಂಚೆಗಳನ್ನೂ, ಹೆಂಗಸಾದರೆ ಶುದ್ಧಮನಸ್ಕಳಾಗಿ ಕೆಂಪುಬಟ್ಟೆಗಳನ್ನೂ ಧರಿಸಬೇಕು.

೮. ವಿಧವೆಯು ಕಾವಿಯಲ್ಲಿ ಅದ್ದಿದ ಸೀರೆಯನ್ನೂ, ಕುಮಾರಿಯು ಬಿಳಿಯ ಸೀರೆಯನ್ನೂ ಉಡಬೇಕು. ದೇವಿಗೆ ಪಂಚಗವ್ಯದಿಂದಲೂ ಬಳಿಕ ಶುದ್ಧವಾದ ಹಾಲು, ಜೇನುತುಪ್ಪ, ಗಂಧಪುಷ್ಪೋದಕ ಇವುಗಳಿಂದಲೂ ಅಭಿಷೇಕಮಾಡಬೇಕು.

೯-೧೦. ಬಿಳಿಯ ಹೂಗಳನ್ನು ಧರಿಸಿ ಬಗೆಬಗೆಯ ಹಣ್ಣುಗಳನ್ನು ನೈವೇದ್ಯ ಮಾಡಬೇಕು. ಎಲಾ ಚಾರುಮುಖೀ, ಕೊತ್ತುಂಬರಿಬೀಜ, ಉಪ್ಪು, ಜೀರಿಗೆ ಇವು

**ಶುಕ್ಲಾಕ್ಷತತಿಲೈರರ್ಚಾಂ ತತೋ ದೇವೀಂ ಸದಾರ್ಚಯೇತ್ ।**
**ಪಾದಾದ್ಯಭ್ಯರ್ಚನಂ ಕುರ್ಯಾತ್ಪ್ರತಿಪಕ್ಷಂ ವರಾನನೇ ॥೧೦॥**

**ವರದಾಯೈ ನಮಃ ಪಾದೌ ತಥಾ ಗುಲ್ಫೌ ನಮಃ ಶ್ರಿಯೈ ।**
**ಅಶೋಕಾಯೈ ನಮೋ ಜಂಘೇ ಪಾರ್ವತ್ಯೈ ಜಾನುನೀ ತಥಾ ॥೧೧॥**

**ಊರೂ ಮಂಗಲಕಾರಿಣ್ಯೈ ವಾಮದೇವ್ಯೈ ತಥಾ ಕಟಿಂ ।**
**ಪದ್ಮೋದರಾಯೈ ಜಠರಮುರಃ ಕಾಮಶ್ರಿಯೈ ನಮಃ ॥೧೨॥**

**ಕರೌ ಸೌಭಾಗ್ಯದಾಯಿನ್ಯೈ ಬಾಹೂ ದರಮುಖಶ್ರಿಯೈ ।**
**ಮುಖಂ ದರ್ಪಣವಾಸಿನ್ಯೈ ಸ್ಮರದಾಯೈ ಸ್ಮಿತಂ ನಮಃ ॥೧೩॥**

**ಗೌರ್ಯೈ ನಮಸ್ತಥಾ ನಾಸಾಮುತ್ಪಲಾಯೈ ಚ ಲೋಚನೇ ।**
**ತುಷ್ಟ್ಯೈ ಲಲಾಟಮಲಕಾನ್ಕಾತ್ಯಾಯನ್ಯೈ ಶಿರಸ್ತಥಾ ॥೧೪॥**

---

ಗಳನ್ನು ಬೆಲ್ಲ, ಹಾಲು, ತುಪ್ಪಗಳೊಡನೆ ಬೆರಸಿ ದೇವಿಗೆ ಅರ್ಪಿಸಬೇಕು. ಬಿಳಿಯ ಅಕ್ಷತೆ, ಎಳ್ಳು ಇವುಗಳಿಂದ ಪಾದಾದಿಯಾಗಿ ಪ್ರತಿಯೊಂದು ಪಕ್ಷದಲ್ಲಿಯೂ ಅರ್ಚನೆಯನ್ನು ಮಾಡಬೇಕು.

೧೧. ವರವನ್ನು ಕರುಣಿಸುವಾಕೆಗೆ ನಮಸ್ಕಾರವೆಂದು ಪಾದಗಳನ್ನೂ, ಸಂಪತ್ಸ್ವರೂಪಿಣಿಗೆ ನಮಸ್ಕಾರವೆಂದು ಹಿಮ್ಮಡಿಗಳನ್ನೂ, ಶೋಕರಹಿತೆಗೆ ನಮಸ್ಕಾರವೆಂದು ಮೊಣಕಾಲುಗಳನ್ನೂ, ಪಾರ್ವತಿಗೆ ನಮಸ್ಕಾರವೆಂದು ಮಂಡಿಗಳನ್ನೂ ಅರ್ಚಿಸಬೇಕು.

೧೨. ಮಂಗಲಕಾರಿಣಿಗೆ ನಮಸ್ಕಾರವೆಂದು ತೊಡೆಗಳಲ್ಲಿ, ವಾಮದೇವಿಗೆ ನಮಸ್ಕಾರವೆಂದು ಕಟಿ ಪ್ರದೇಶದಲ್ಲಿ, ಪದ್ಮೋದರೆಗೆ ನಮಸ್ಕಾರವೆಂದು ಜಠರದಲ್ಲಿ, ಕಾಮಶ್ರೀಗೆ ನಮಸ್ಕಾರವೆಂದು ಉದರದಲ್ಲಿ ಪುಷ್ಪಾರ್ಚನೆಯನ್ನು ಸಲ್ಲಿಸಬೇಕು.

೧೩. ಸೌಭಾಗ್ಯಪ್ರದೆಗೆ ನಮಸ್ಕಾರವೆಂದು ಕೈಗಳನ್ನೂ, ಮಂದಹಾಸ ಸಹಿತವಾದ ಮುಖಕಾಂತಿಯುಳ್ಳವಳಿಗೆ ನಮಸ್ಕಾರವೆಂದು ಬಾಹುಗಳನ್ನೂ, ಕನ್ನಡಿಯಲ್ಲಿ ನೆಲೆಸಿರುವಾಕೆಗೆ ನಮಸ್ಕಾರವೆಂದು ಮಂದಹಾಸವನ್ನೂ ಪೂಜಿಸಬೇಕು.

೧೪. ಗೌರಿಗೆ ನಮಸ್ಕಾರವೆಂದು ನಾಸಿಕೆಯನ್ನೂ, ಉತ್ಪಲೆಗೆ ನಮಸ್ಕಾರವೆಂದು ಕಣ್ಣುಗಳನ್ನೂ, ತುಷ್ಟಿಗೆ ನಮಸ್ಕಾರವೆಂದು ಹಣೆಯನ್ನೂ, ಕಾತ್ಯಾಯನಿಗೆ ನಮಸ್ಕಾರವೆಂದು ಮುಂಗುರುಳು ಮತ್ತು ತಲೆಯನ್ನೂ ಅರ್ಚಿಸಬೇಕು.

**ನಮೋ ಗೌರ್ಯೈ ನಮೋ ಧೃತ್ಯೈ ನಮಃ ಕಾಂತ್ಯೈ ನಮಃ ಶ್ರಿಯೈ ।**
**ರಂಭಾಯೈ ಲಲಿತಾಯೈ ಚ ವಾಸುದೇವ್ಯೈ ನಮೋ ನಮಃ ॥೧೫॥**

**ಏವಂ ಸಂಪೂಜ್ಯ ವಿಧಿವದಗ್ರತಃ ಪದ್ಮಮಾಲಿಖೇತ್ ।**
**ಪತ್ರೈರ್ದ್ವಾದಶಭಿರ್ಯುಕ್ತಂ ಕುಂಕುಮೇನ ಸಕರ್ಣಿಕಂ ॥೧೬॥**

**ಪೂರ್ವೇಣ ವಿನ್ಯಸೇದ್ಗೌರೀಮಪರ್ಣಾಂ ಚ ತತಃ ಪರಂ ।**
**ಭವಾನೀಂ ದಕ್ಷಿಣೇ ತದ್ವದ್ರುದ್ರಾಣೀಂ ಚ ತತಃ ಪರಂ ॥೧೭॥**

**ವಿನ್ಯಸೇತ್ಪಶ್ಚಿಮೇ ಸೌಮ್ಯಾಂ ಸದಾ ಮದನವಾಸಿನೀಂ ।**
**ವಾಯವ್ಯೇ ಪಾಟಲಾಮುಗ್ರಾಮುಂತರೇಣ ತತೋಽಪ್ಯಮಾಂ ॥೧೮॥**

**ಮಧ್ಯೇ ಯಥಾಸ್ವಂ ಮಾಂಸಾಂಗಾಂ ಮಂಗಲಾಂ ಕುಮುದಾಂ ಸತೀಂ ।**
**ರುದ್ರಂ ಚ ಮಧ್ಯೇ ಸಂಸ್ಥಾಪ್ಯ ಲಲಿತಾಂ ಕರ್ಣಿಕೋಪರಿ ॥**
**ಕುಸುಮೈರಕ್ಷತೈರ್ವಾಪಿ ನಮಸ್ಕಾರೇಣ ವಿನ್ಯಸೇತ್ ॥೧೯॥**

---

೧೫. ಗೌರಿಗೆ ನಮಸ್ಕಾರ; ಧೃತಿಗೆ ನಮಸ್ಕಾರ; ಕಾಂತಿಗೆ ನಮಸ್ಕಾರ; ಶ್ರೀಗೆ ನಮಸ್ಕಾರ; ಲಲಿತೆಗೆ ನಮಸ್ಕಾರ; ವಾಸುದೇವಿಗೆ ನಮಸ್ಕಾರ ನಮಸ್ಕಾರ.

೧೬. ಶಾಸ್ತ್ರೋಕ್ತವಾಗಿ ಹೀಗೆ ಪೂಜಿಸಿ, ಮುಂಭಾಗದಲ್ಲಿ ಹನ್ನೆರಡು ಎಸಳುಗಳಿಂದಲೂ ಕರ್ಣಿಕೆಯಿಂದಲೂ ಕೂಡಿದ ಪದ್ಮವನ್ನು ಕುಂಕುಮದಿಂದ ಬರೆಯಬೇಕು.

೧೭. ಪೂರ್ವದಿಕ್ಕಿನಲ್ಲಿ ಗೌರಿಯನ್ನೂ, ಆಗ್ನೇಯದಲ್ಲಿ ಅಪರ್ಣೆಯನ್ನೂ, ದಕ್ಷಿಣದಲ್ಲಿ ಭವಾನಿಯನ್ನೂ, ನೈಋತ್ಯದಲ್ಲಿ ರುದ್ರಾಣಿಯನ್ನೂ ವಿನ್ಯಾಸಮಾಡಬೇಕು.

೧೮. ಪಶ್ಚಿಮದಲ್ಲಿ ನಿರಂತರವಾಗಿ ಮದನವಾಸಿನಿಯೆನಿಸಿದ ಸೌಮ್ಯೆಯನ್ನೂ, ವಾಯುವ್ಯದಲ್ಲಿ ಪಾಟಲೆಯನ್ನೂ ಆವಾಹನಮಾಡಬೇಕು.

೧೯. ನಡುವೆ ಉಳಿದಿರುವ ನಾಲ್ಕು ಎಸಳುಗಳ ಮೇಲೆ ಕ್ರಮವಾಗಿ ಮಾಂಸಾಂಗಿ, ಮಂಗಲೆ, ಕುಮುದೆ ಮತ್ತು ಸತಿಯರನ್ನು ಸ್ಥಾಪನಮಾಡಬೇಕು. ಇವೆಲ್ಲಕ್ಕೂ ಮಧ್ಯದಲ್ಲಿ ಕರ್ಣಿಕೆಯ ಮೇಲೆ ರುದ್ರನನ್ನೂ ಲಲಿತೆಯನ್ನೂ ವಿನ್ಯಾಸಮಾಡಬೇಕು. ಹೂಗಳಿಂದಾಗಲಿ ಅಕ್ಷತೆಗಳಿಂದಲಾಗಲಿ ಆವಾಹನಮಾಡಿ ನಮಸ್ಕರಿಸಬೇಕು.

**ಗೀತಮಂಗಲನಿರ್ಘೋಷಾನ್ ಕಾರಯಿತ್ವಾ ಸುವಾಸಿನೀಃ ।**
**ಪೂಜಯೇದ್ರಕ್ತವಾಸೋಭೀ ರಕ್ತಮಾಲ್ಯಾನುಲೇಪನೈಃ ॥**
**ಸಿಂದೂರಂ ಸ್ನಾನಚೂರ್ಣಂ ಚ ತಾಸಾಂ ಶಿರಸಿ ಪಾತಯೇತ್ ॥೨೦॥**

**ಸಿಂದೂರಕುಂಕುಮಸ್ನಾನಮತೀವೇಷ್ಟತಮಂ ಯತಃ ।**
**ತಥೋಪದೇಷ್ಟಾರಮಪಿ ಪೂಜಯೇದ್ಯತ್ನತೋ ಗುರುಂ ॥**
**ನ ಪೂಜ್ಯತೇ ಗುರುರ್ಯತ್ರ ಸರ್ವಾಸ್ತತ್ರಾಫಲಾಃ ಕ್ರಿಯಾಃ ॥೨೧॥**

**ನಭಸ್ಯೇ ಪೂಜಯೇದ್ಗೌರೀಮುತ್ಪಲೈರಸಿತೈಃ ಸದಾ ।**
**ಬಂಧುಜೀವೈರಾಶ್ವಯುಜೇ ಕಾರ್ತಿಕೇ ಶತಪತ್ರಕೈಃ ॥೨೨॥**

**ಜಾತೀಪುಷ್ಪೈರ್ಮಾರ್ಗಶೀರ್ಷೇ ಪೌಷೇ ಪೀತೈಃ ಕುರಂಟಕೈಃ ।**
**ಕುಂದಕುಂಕುಮಪುಷ್ಪೈಸ್ತು ದೇವೀಂ ಮಾಘೇ ತು ಪೂಜಯೇತ್**
**ಸಿಂದುವಾರೇಣ ಜಾತ್ಯಾ ವಾ ಫಾಲ್ಗುನೇಽಪ್ಯರ್ಚಯೇದುಮಾಂ ॥೨೩॥**

---

೨೦. ಗಾನವನ್ನೂ ಮಂಗಲವಾದ್ಯಗಳನ್ನೂ ಮಾಡಿಸಬೇಕು. ಸುಮಂಗಲಿಯರಿಗೆ ಕೆಂಪು ಸೀರೆಗಳನ್ನೂ, ಕೆಂಪುಬಣ್ಣದ ಹೂವನ್ನೂ, ಗಂಧವನ್ನೂ ಕೊಟ್ಟು ಪೂಜಿಸಬೇಕು. ಅವರ ತಲೆಯ ಮೇಲೆ ಸಿಂದೂರವನ್ನೂ ಸ್ನಾನಚೂರ್ಣವನ್ನೂ ಉದುರಿಸಬೇಕು.

೨೧. ಏಕೆಂದರೆ ಸಿಂದೂರ ಚೂರ್ಣದ ಸ್ನಾನವು ದೇವಿಗೆ ಅತಿ ಪ್ರಿಯವಾದುದು. ಅನಂತರ ಪೂಜೆಯನ್ನು ಮಾಡಿಸಿದ ಗುರುವನ್ನು ಅಕ್ಕರೆಯಿಂದ ಅರ್ಚಿಸಬೇಕು. ಗುರುವಿಗೆ ಪೂಜೆಯು ಸಲ್ಲದ ಕಡೆಯಲ್ಲಿ ನಡೆದ ಕರ್ಮಗಳೆಲ್ಲವೂ ವ್ಯರ್ಥವೆನಿಸುವುವು.

೨೨. ಗೌರಿಯನ್ನು ಭಾದ್ರಪದಮಾಸದಲ್ಲಿ ಬಿಳಿಯ ನೈದಿಲೆಗಳಿಂದಲೂ, ಆಶ್ವಯುಜದಲ್ಲಿ ಬಂಧೂಕಪುಷ್ಪಗಳಿಂದಲೂ, ಕಾರ್ತಿಕದಲ್ಲಿ ನೂರೆಸಳಿನ ತಾವರೆಗಳಿಂದಲೂ ಪೂಜಿಸಬೇಕು.

೨೩. ಮಾರ್ಗಶಿರಮಾಸದಲ್ಲಿ ಜಾಜೀ ಹೂಗಳಿಂದಲೂ, ಪುಷ್ಯ ಮಾಸದಲ್ಲಿ ಹೊಂಬಣ್ಣದ ಗೋರಂಟಿ ಹೂವಿನಿಂದಲೂ, ಮಾಘಮಾಸದಲ್ಲಿ ಮೊಲ್ಲೆ ಮತ್ತು ಕೇಸರದ ಹೂಗಳಿಂದಲೂ ಪೂಜಿಸಬೇಕು. ಫಾಲ್ಗುಣಮಾಸದಲ್ಲಿ ಲಕ್ಕಿಯ ಹೂವಿನಿಂದಲೋ, ಜಾಜಿಯ ಹೂವಿನಿಂದಲೋ ಅರ್ಚಿಸಬಹುದು.

**ಚೈತ್ರೇ ತು ಮಲ್ಲಿಕಾಶೋಕೈರ್ವೈಶಾಖೇ ಗಂಧಪಾಟಲೈಃ ।**
**ಜ್ಯೇಷ್ಠೇ ಕಮಲಮಂದಾರೈರಾಷಾಢೇ ಚ ನವಾಂಬುಜೈಃ ।**
**ಕದಂಬೈರಥ ಮಾಲತ್ಯಾ ಶ್ರಾವಣೇ ಪೂಜಯೇತ್ಸದಾ ॥೨೪॥**

**ಗೋಮೂತ್ರಂ ಗೋಮಯಂ ಕ್ಷೀರಂ ದಧಿ ಸರ್ಪಿಃ ಕುಶೋದಕಂ ।**
**ಬಿಲ್ವಪತ್ರಾರ್ಕಪುಷ್ಪಂ ಚ ಯವಾರ್ಗ ಗೋಶೃಂಗವಾರಿ ಚ ॥೨೫॥**

**ಪಂಚಗವ್ಯಂ ಚ ಬಿಲ್ವಂ ಚ ಪ್ರಾಶಯೇತ್ಕ್ರಮಶಸ್ತದಾ ।**
**ಏತದ್ಭಾದ್ರಪದಾದ್ಯಂ ತು ಪ್ರಾಶನಂ ಸಮುದಾಹೃತಂ ॥೨೬॥**

**ಪ್ರತಿಪಕ್ಷಂ ಚ ಮಿಥುನಂ ತೃತೀಯಾಯಾಂ ವರಾನನೇ ।**
**ಪೂಜಯಿತ್ವಾಽರ್ಚಯೇದ್ಭಕ್ತ್ಯಾ ವಸ್ತ್ರಮಾಲ್ಯಾನುಲೇಪನೈಃ ॥೨೭॥**

**ಪುಂಸಃ ಪೀತಾಂಬರೇ ದದ್ಯಾತ್ ಸ್ತ್ರಿಯೈ ಕೌಸುಂಭವಾಸಸೀ ।**
**ನಿಷ್ಪಾವಾಜಾಜಿಲವಣಮಿಕ್ಷುದಂಡಗುಡಾನ್ವಿತಂ ।**
**ತಸ್ಯೈ ದದ್ಯಾತ್ಫಲಂ ಪುಷ್ಪಂ ಸುವರ್ಣೋತ್ಪಲಸಂಯುತಂ ॥೨೮॥**

---

೨೪. ಚೈತ್ರಮಾಸದಲ್ಲಿ ಮಲ್ಲಿಗೆ ಮತ್ತು ಅಶೋಕ, ವೈಶಾಖದಲ್ಲಿ ಗಂಧ ಪಾಟಲ, ಜ್ಯೇಷ್ಠದಲ್ಲಿ ಕಮಲ ಮತ್ತು ಮಂದಾರ, ಆಷಾಢದಲ್ಲಿ ತಾವರೆ, ಶ್ರಾವಣ ದಲ್ಲಿ ಕದಂಬ ಮತ್ತು ಜಾಜಿ ಈ ಪುಷ್ಪಗಳಿಂದ ದೇವಿಯನ್ನು ಅರ್ಚಿಸಬೇಕು.

೨೫-೨೬. ಗೋಮೂತ್ರ, ಗೋಮಯ, ಹಾಲು, ಮೊಸರು, ತುಪ್ಪ, ಕುಶೋ ದಕ, ಬಿಲ್ವಪತ್ರ, ಎಕ್ಕದ ಹೂ, ಗೋಧವೆ, ಗೋಶೃಂಗೋದಕ, ಪಂಚಗವ್ಯ ಮತ್ತು ಬಿಲ್ವಪತ್ರ ಇವನ್ನು ಮೇಲೆ ಹೇಳಿದ ಹನ್ನೆರಡು ತಿಂಗಳಲ್ಲೂ ಕ್ರಮವಾಗಿ ಪ್ರಾಶನ ಮಾಡಬೇಕು. ಭಾದ್ರಪದಮಾಸದಿಂದ ಇದನ್ನು ಪ್ರಾರಂಭಿಸಬೇಕು.

೨೭. ಎಲೌ ಮಂಗಳಾಂಗೀ, ಪ್ರತಿಪಕ್ಷದಲ್ಲಿಯೂ ತೃತೀಯೆಯ ದಿನ ದಂಪತಿಗಳನ್ನು ಪೂಜಿಸಿ ಭಕ್ತಿಯಿಂದ ಗಂಧಪುಷ್ಪವಸ್ತ್ರಾದಿಗಳನ್ನಿತ್ತು ಸತ್ಕರಿಸಬೇಕು.

೨೮. ಪುರುಷನಿಗೆ ಪೀತಾಂಬರಗಳನ್ನೂ ಸ್ತ್ರೀಗೆ ಕೌಸುಂಭವರ್ಣದ ಸೀರೆ ಗಳನ್ನೂ ಜೋಡಿಯಾಗಿ ಕೊಡಬೇಕು. ಅವರೆ, ಜೀರಿಗೆ ಉಪ್ಪು, ಕಬ್ಬಿನಜಲ್ಲೆ, ಬೆಲ್ಲ ಇವುಗಳೊಡನೆ ಚಿನ್ನದಿಂದ ಮಾಡಿದ ನೈದಿಲೆ ಹೂ ಸಹಿತವಾಗಿ ಹೂ ಹಣ್ಣು ಗಳನ್ನೂ ಕೂಡ ಆಕೆಗೆ ಕೊಡಬೇಕು.

**ಯಥಾ ನ ದೇವಿ ದೇವೇಶಸ್ತ್ವಾಂ ಪರಿತ್ಯಜ್ಯ ಗಚ್ಛತಿ ।**
**ತಥಾ ಮಾಮುದ್ಧರಾಶೇಷದುಃಖಸಂಸಾರಸಾಗರಾತ್ ॥೨೯॥**

**ಕುಮುದಾ ವಿಮಲಾನಂತಾ ಭವಾನೀ ಚ ಸುಧಾ ಶಿವಾ ।**
**ಲಲಿತಾ ಕಮಲಾ ಗೌರೀ ಸತೀ ರಂಭಾಥ ಪಾರ್ವತೀ ॥೩೦॥**

**ನಭಸ್ಯಾದಿಷು ಮಾಸೇಷು ಪ್ರೀಯತಾಮಿತ್ಯುದೀರಯೇತ್ ।**
**ವ್ರತಾಂತೇ ಶಯನಂ ದದ್ಯಾತ್ಸುವರ್ಣಕಮಲಾನ್ವಿತಂ ॥೩೧॥**

**ಮಿಥುನಾನಿ ಚತುರ್ವಿಂಶದ್ದಶ ದ್ವೌ ಚ ಸಮರ್ಚಯೇತ್ ।**
**ಅಷ್ಟೌ ಷಡ್ವಾಪ್ಯಥ ಪುನಶ್ಚಾನುಮಾಸಂ ಸಮರ್ಚಯೇತ್ ॥೩೨॥**

**ಪೂರ್ವಂ ದತ್ವಾ ತು ಗುರವೇ ಶೇಷಾನಪ್ಯರ್ಚಯೇದ್ಬುಧಃ ।**
**ಉಕ್ತಾನಂತತೃತೀಯೈಷಾ ಸದಾನಂತಫಲಪ್ರದಾ ॥೩೩॥**

---

೨೯. ಓ ದೇವೀ, ದೇವೇಶನಾದ ಪರಮೇಶ್ವರನು ನಿನ್ನನ್ನು ಬಿಟ್ಟು ಎಲ್ಲೂ ಹೋಗುವುದಿಲ್ಲ. ಹಾಗೆಯೇ ನೀನೂ ನನ್ನನ್ನು ಕೈಬಿಡದೆ ಈ ಸಂಸಾರದುಃಖ ಸಾಗರದಿಂದ ಪಾರುಮಾಡು.

೩೦-೩೧. ಭಾದ್ರಪದ ಮೊದಲಾದ ಹನ್ನೆರಡು ತಿಂಗಳುಗಳಲ್ಲಿಯೂ ಯಥಾಕ್ರಮವಾಗಿ ಕುಮುದಾ, ವಿಮಲಾ, ಅನಂತಾ, ಭವಾನೀ, ಸುಧಾ, ಶಿವಾ, ಲಲಿತಾ, ಕಮಲಾ, ಗೌರೀ, ಸತೀ, ರಂಭಾ ಮತ್ತು ಪಾರ್ವತೀದೇವಿಯರು ಪ್ರೀತರಾಗಲೆಂದು ಅನುಸಂಧಾನಮಾಡಬೇಕು. ವ್ರತವು ಮುಗಿದ ಬಳಿಕ ಸುವರ್ಣಕಮಲಸಹಿತವಾಗಿ ಶಯ್ಯಾದಾನಮಾಡಬೇಕು.

೩೨. ಪ್ರತಿಯೊಂದು ತಿಂಗಳಲ್ಲೂ ಇಪ್ಪತ್ತನಾಲ್ಕು, ಹನ್ನೆರಡು, ಎಂಟು ಅಥವಾ ಆರು ಮಂದಿ ದಂಪತಿಗಳನ್ನು ಪೂಜಿಸಬೇಕು.

೩೩. ಪ್ರಾಜ್ಞನಾದವನು ಮೊದಲು ಗುರುವಿಗೆ ಸತ್ಕಾರವನ್ನು ಮಾಡಿ ಮಿಕ್ಕವರನ್ನು ಬಳಿಕ ಅರ್ಚಿಸಬೇಕು. ಯಾವಾಗಲೂ ಅಪರಿಮಿತಫಲವನ್ನು ಕೊಡತಕ್ಕ ಈ ಅನಂತ ತೃತೀಯಾವ್ರತವನ್ನು ಹೇಳಿದುದಾಯಿತು.

**ಸರ್ವಪಾಪಹರಾಂ ದೇವಿ ಸೌಭಾಗ್ಯಾರೋಗ್ಯವರ್ಧಿನೀಂ ।**
**ನ ಚೈನಾಂ ವಿತ್ತಶಾಠ್ಯೇನ ಕದಾಚಿದಪಿ ಲಂಘಯೇತ್ ।**
**ನರೋ ವಾ ಯದಿ ವಾ ನಾರೀ ವಿತ್ತಶಾಠ್ಯಾತ್ಪತತ್ಯಧಃ ॥೩೪॥**

**ಗರ್ಭಿಣೀ ಸೂತಿಕಾ ನಕ್ತಂ ಕುಮಾರೀ ವಾಥ ರೋಹಿಣೀ ।**
**ಯದ್ಯಶುದ್ಧಾ ತದಾನ್ಯೇನ ಕಾರಯೇತ್ ಪ್ರಯತಾ ಸ್ವಯಂ ॥೩೫॥**

**ಇಮಾಮನಂತಫಲದಾಂ ಯಸ್ತೃತೀಯಾಂ ಸಮಾಚರೇತ್ ।**
**ಕಲ್ಪಕೋಟಿಶತಂ ಸಾಗ್ರಂ ಶಿವಲೋಕೇ ಮಹೀಯತೇ ॥೩೬॥**

**ವಿತ್ತಹೀನೋಽಪಿ ಕುರುತೇ ವರ್ಷತ್ರಯಮುಪೋಷಣೈಃ ।**
**ಪುಷ್ಪಮಂತ್ರವಿಧಾನೇನ ಸೋಽಪಿ ತತ್ಫಲಮಾಪ್ನುಯಾತ್ ॥೩೭॥**

**ನಾರೀ ವಾ ಕುರುತೇ ಯಾ ತು ಕುಮಾರೀ ವಿಧವಾಽಥ ವಾ ।**
**ಸಾಪಿ ತತ್ಫಲಮಾಪ್ನೋತಿ ಗೌರ್ಯನುಗ್ರಹಲಾಲಿತಾ ॥೩೮॥**

---

೩೪. ಓ ದೇವೀ, ಈ ವ್ರತವು ಎಲ್ಲ ಪಾಪಗಳನ್ನೂ ಕಳೆದು ಸೌಭಾಗ್ಯವನ್ನೂ, ಆರೋಗ್ಯವನ್ನೂ ಹೆಚ್ಚಿಸುವುದು. ದ್ರವ್ಯಲೋಭದಿಂದ ಇದರ ನಿಯಮವನ್ನು ಎಂದಿಗೂ ಮೀರಬಾರದು. ಗಂಡಸಾಗಲಿ ಹೆಂಗಸಾಗಲಿ ಜಿಪುಣತನವನ್ನು ಮಾಡಿದರೆ ದುರ್ಗತಿಗಿಳಿಯುವರು.

೩೫. ಶ್ರದ್ಧೆಯಿದ್ದು ತಾವಾಗಿ ವ್ರತವನ್ನಾಚರಿಸಲು ಶುದ್ಧಿಯಿಲ್ಲದ ಬಸುರಿ, ಬಾಣಂತಿ, ಹುಡುಗಿ, ರೋಗಿಷ್ಠೆ ಮುಂತಾದವರು ಇತರರಿಂದ ಮಾಡಿಸಬೇಕು. ಅವರು ಹಗಲು ಉಪವಾಸವಿದ್ದು ರಾತ್ರಿ ಭೋಜನವನ್ನು ಮಾಡಬಹುದು.

೩೬. ಅನಂತಫಲಪ್ರದವಾದ ಈ ತೃತೀಯಾವ್ರತವನ್ನು ಆಚರಿಸುವಾತನು ನೂರು ಶತಕೋಟಿ ಕಲ್ಪಗಳ ಕಾಲ ಪೂರ್ಣವಾಗಿ ಶಿವಲೋಕದಲ್ಲಿ ಮಾನ್ಯನಾಗುವನು.

೩೭. ಬಡವನೇ ಆಗಲಿ, ಉಕ್ತಕಾಲದಲ್ಲಿ ಉಪವಾಸವಿದ್ದು, ಮೂರು ವರ್ಷಗಳ ಕಾಲ ಮಂತ್ರಪೂರ್ವಕವಾಗಿ ಪುಷ್ಪಾರ್ಚನರೂಪದಿಂದಲೇ ಈ ವ್ರತವನ್ನು ಆಚರಿಸಿದರೆ ಮೇಲೆ ಹೇಳಿದ ಫಲವು ಲಭಿಸುವುದು.

೩೮. ನಾರಿ, ಕುಮಾರಿ, ಇಲ್ಲವೇ ವಿಧವೆ ಇವರು ಯಾರೇ ಆಗಲಿ ಈ ವ್ರತಾಚರಣೆಯಿಂದ ಗೌರಿಯ ಅನುಗ್ರಹಕ್ಕೆ ಪಾತ್ರರಾಗಿ ಅದೇ ಫಲವನ್ನು ಪಡೆಯುವರು.

**ಇತಿ ಪಠತಿ ಶೃಣೋತಿ ವಾ ಯ ಇತ್ಥಂ**
**ಗಿರಿತನಯಾವ್ರತಮಿಂದ್ರಲೋಕಸಂಸ್ಥಃ ।**
**ಮತಿಮಪಿ ಚ ದದಾತಿ ಸೋಽಪಿ ದೇವೈ**
**ರಮರವಧೂಜನಕಿನ್ನರೈಶ್ಚ ಪೂಜ್ಯಃ ॥೩೯॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇಽನಂತತೃತೀಯಾವ್ರತಂ ನಾಮ ದ್ವಿಷಷ್ಟಿತಮೋಽಧ್ಯಾಯಃ**

---

೩೯. ಈ ಮೇಲೆ ಹೇಳಿದ ಪಾರ್ವತೀವ್ರತವನ್ನು ಓದುವವನು ಅಥವಾ ಕೇಳುವವನು ಇಂದ್ರಲೋಕವನ್ನೈದುವನು. ಇತರರಿಗೆ ಇದರಲ್ಲಿ ಆಸಕ್ತಿಯನ್ನು ಹುಟ್ಟಿಸುವವನೂ, ಸಹ ದೇವತೆಗಳು, ದೇವತಾಸ್ತ್ರೀಯರು, ಕಿನ್ನರರು ಇವರೆಲ್ಲರಿಂದಲೂ ಮನ್ನಣೆ ಪಡೆಯುವನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಅನಂತ ತೃತೀಯಾವ್ರತ ವಿಧಾನವನ್ನು ಹೇಳಿದೆ.

ಪಾರ್ವತೀದೇವಿಗೆ ಪರಮೇಶ್ವರನು ಉಪದೇಶಿಸಿದ ಮಹಾ ವ್ರತವಿದು. ವೈಶಾಖ, ಶ್ರಾವಣ ಅಥವಾ ಮಾರ್ಗಶಿರಮಾಸದ ಶುಕ್ಲಪಕ್ಷದ ತೃತೀಯೆಯ ದಿನ ಈ ವ್ರತವನ್ನು ಪ್ರಾರಂಭಿಸಬೇಕು. ಹಿಂದೆ ಹೇಳಿದ ವ್ರತಗಳಂತೆಯೇ ಬೇರೆ ಬೇರೆ ಮಂತ್ರಗಳಿಂದ ದೇವಿಯ ಅವಯವಗಳನ್ನು ಅರ್ಚನೆಮಾಡಬೇಕು. ವ್ರತಾನಂತರ ಶಯ್ಯಾದಾನವನ್ನೂ, ಇತರ ದಾನಗಳನ್ನೂ ಮಾಡಬೇಕು. ಇದರಿಂದ ಅನಂತಫಲವು ಲಭಿಸುವುದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಅನಂತ ತೃತೀಯಾವ್ರತವೆಂಬ
ಅರವತ್ತೆರಡನೆಯ ಅಧ್ಯಾಯವು ಮುಗಿದುದು.

## ಅಥ ತ್ರಿಷಷ್ಟಿತಮೋಽಧ್ಯಾಯಃ

॥ ಈಶ್ವರ ಉವಾಚ ॥

ಅಥಾನ್ಯಾಮಪಿ ವಕ್ಷ್ಯಾಮಿ ತೃತೀಯಾಂ ಪಾಪನಾಶಿನೀಂ ।
ರಸಕಲ್ಯಾಣಿನೀಮೇತಾಂ ಪುರಾಕಲ್ಪವಿದೋ ವಿದುಃ ॥ ೧ ॥

ಮಾಘಮಾಸೇ ತು ಸಂಪ್ರಾಪ್ತೇ ತೃತೀಯಾಂ ಶುಕ್ಲಪಕ್ಷತಃ ।
ಪ್ರಾತರ್ಗವ್ಯೇನ ಪಯಸಾ ತಿಲೈಃ ಸ್ನಾನಂ ಸಮಾಚರೇತ್ ॥ ೨ ॥

ಸ್ನಾಪಯೇನ್ಮಧುನಾ ದೇವೀಂ ತಥೈವೇಕ್ಷುರಸೇನ ಚ ।
ದಕ್ಷಿಣಾಂಗಾನಿ ಸಂಪೂಜ್ಯ ತತೋ ವಾಮಾನಿ ಪೂಜಯೇತ್ ॥ ೩ ॥

ಲಲಿತಾಯೈ ನಮೋ ದೇವ್ಯಾಃ ಪಾದೌ ಗುಲ್ಫೌ ತತೋಽರ್ಚಯೇತ್ ।
ಜಂಘಾಂ ಜಾನುಂ ತಥಾ ಶಾಂತ್ಯೈ ತಥೈವೋರುಂ ಶ್ರಿಯೈ ನಮಃ ॥ ೪ ॥

---

೧. ಈಶ್ವರನು ಹೇಳಿದನು.—ದೇವೀ, ಪಾಪನಾಶಕವಾದ ಮತ್ತೊಂದು ತೃತೀಯಾವ್ರತವನ್ನು ಹೇಳುವೆನು. ಪೂರ್ವಕಲ್ಪಗಳ ವೃತ್ತಾಂತವನ್ನು ಅರಿತವರು ಇದನ್ನು ರಸಕಲ್ಯಾಣಿನೀವ್ರತವೆನ್ನುವರು.

೨. ಮಾಘಮಾಸದ ಶುಕ್ಲಪಕ್ಷ ತೃತೀಯೆಯಲ್ಲಿ ಪ್ರಾತಃಕಾಲ ಗೋಕ್ಷೀರ ದಿಂದಲೂ ತಿಲದಿಂದಲೂ ಸ್ನಾನಮಾಡಬೇಕು.

೩. ದೇವಿಯ ಪ್ರತಿಮೆಗೆ ಜೇನುತುಪ್ಪದಿಂದಲೂ, ಕಬ್ಬಿನ ಹಾಲಿನಿಂದಲೂ ಅಭಿಷೇಕಮಾಡಬೇಕು. ಬಲಭಾಗದ ಅಂಗಗಳನ್ನು ಪೂಜಿಸಿ, ತರುವಾಯ ಎಡಭಾಗ ವನ್ನೂ ಅರ್ಚಿಸಬೇಕು.

೪. ಲಲಿತೆಗೆ ನಮಸ್ಕಾರವೆಂದು ದೇವಿಯ ಪಾದಗಳನ್ನೂ, ಬಳಿಕ ಹಿಮ್ಮಡಿ ಗಳನ್ನೂ ಅರ್ಚಿಸಬೇಕು. ಶಾಂತಿಗೆ ನಮಸ್ಕಾರವೆಂದು ಮಂಡಿ ಮೊಣಕಾಲು ಗಳನ್ನೂ, ಶ್ರೀಗೆ ನಮಸ್ಕಾರವೆಂದು ತೊಡೆಯನ್ನೂ ಪೂಜಿಸಬೇಕು.

**ಮದಾಲಸಾಯೈ ತು ಕಟಿಮಮಲಾಯೈ ತಥೋದರಂ ।**
**ಸ್ತನೌ ಮದನವಾಸಿನ್ಯೈ ಕುಮುದಾಯೈ ಚ ಕಂಧರಾಂ ॥ ೫ ॥**

**ಭುಜಂ ಭುಜಾಗ್ರಂ ಮಾಧವ್ಯೈ ಕಮಲಾಯೈ ಮುಖಸ್ಮಿತೇ ।**
**ಭ್ರೂಲಲಾಟೇ ಚ ರುದ್ರಾಣ್ಯೈ ಶಂಕರಾಯೈ ತಥಾಽಲಕಾ ॥ ೬ ॥**

**ಮುಕುಟಂ ವಿಶ್ವವಾಸಿನ್ಯೈ ಶಿರಃ ಕಾಂತ್ಯೈ ತಥಾರ್ಚಯೇತ್ ।**
**ಮದನಾಯೈ ಲಲಾಟಂ ತು ಮೋಹನಾಯೈ ಪುನರ್ಭ್ರುವೌ ॥ ೭ ॥**

**ನೇತ್ರೇ ಚಂದ್ರಾರ್ಧಧಾರಿಣ್ಯೈ ತುಷ್ಟ್ಯೈ ಚ ವದನಂ ಪುನಃ ।**
**ಉತ್ಕಂಠಿನ್ಯೈ ನಮಃ ಕಂಠಮಮೃತಾಯೈ ನಮಃ ಸ್ತನೌ ॥ ೮ ॥**

**ರಂಭಾಯೈ ವಾಮಕುಕ್ಷಿಂ ಚ ವಿಶೋಕಾಯೈ ನಮಃ ಕಟಿಂ ।**
**ಹೃದಯಂ ಮನ್ಮಥಾಧಿಷ್ಠ್ಯೈ ಪಾಟಲಾಯೈ ತಥೋದರಂ ॥ ೯ ॥**

---

೫. ಮದಾಲಸೆಗೆ ನಮಸ್ಕಾರವೆಂದು ಕಟಿದೇಶವಲ್ಲಿ, ಅಮಲೆಗೆ ನಮಸ್ಕಾರವೆಂದು ಉದರದಲ್ಲಿ, ಮದನವಾಸಿನಿಗೆ ನಮಸ್ಕಾರವೆಂದು ಸ್ತನಗಳಲ್ಲಿ, ಕುಮುದೆಗೆ ನಮಸ್ಕಾರವೆಂದು ಕಂಠದಲ್ಲಿ ಪುಷ್ಪಗಳನ್ನು ಸಮರ್ಪಿಸಬೇಕು.

೬. ಮಾಧವಿಗೆ ನಮಿಸಿ ಭುಜವನ್ನೂ ಭುಜಾಗ್ರವನ್ನೂ, ಕಮಲೆಗೆ ನಮಿಸಿ ಮುಖವನ್ನೂ ಮಂದಹಾಸವನ್ನೂ, ರುದ್ರಾಣಿಗೆ ನಮಿಸಿ ಹುಬ್ಬುಗಳನ್ನೂ ಹಣೆಯನ್ನೂ, ಶಂಕರಿಗೆ ನಮಿಸಿ ಮುಂಗುರುಳನ್ನೂ ಪೂಜಿಸಬೇಕು.

೭. ವಿಶ್ವವಾಸಿನಿಗೆ ನಮಸ್ಕಾರವೆಂದು ಶಿರಸ್ಸನ್ನೂ, ಮದನೆಗೆ ನಮಸ್ಕಾರವೆಂದು ಹಣೆಯನ್ನೂ, ಮೋಹನೆಗೆ ನಮಸ್ಕಾರವೆಂದು ಹುಬ್ಬುಗಳನ್ನೂ ಅರ್ಚಿಸಬೇಕು.

೮. ಅರ್ಧಚಂದ್ರಧಾರಿಣಿಯ ನೇತ್ರಗಳನ್ನೂ, ತುಷ್ಟಿಯ ಮುಖವನ್ನೂ, ಉತ್ಕಂಠಿನಿಯ ಕಂಠವನ್ನೂ, ಅಮೃತೆಯ ಸ್ತನಗಳನ್ನೂ ನಮಶ್ಶಬ್ದ ಪೂರ್ವಕವಾಗಿ ಪುಷ್ಪಗಳಿಂದ ಪೂಜಿಸಬೇಕು.

೯. ರಂಭೆಗೆ ನಮಸ್ಕಾರವೆಂದು ಕಿಬ್ಬೊಟ್ಟೆಯ ಎಡಗಡೆಯನ್ನೂ, ಶೋಕರಹಿತೆಗೆ ನಮಸ್ಕಾರವೆಂದು ನಡುವನ್ನೂ, ಮನ್ಮಥವಾಸಿನಿಗೆ ನಮಸ್ಕಾರವೆಂದು ಹೃದಯುವನ್ನೂ, ಪಾಟಲೆಗೆ ನಮಸ್ಕಾರವೆಂದು ಉದರವನ್ನೂ ಅರ್ಚಿಸಬೇಕು.

ಕಟಿಂ ಸುರತವಾಸಿನ್ಯೈ ತಥೋರುಂ ಚಂಪಕಪ್ರಿಯೇ ।
ಜಾನುಜಂಘೇ ನಮೋ ಗೌರ್ಯೈ ಗುಲ್ಫೌ ಗಾಯತ್ರಿಯೈ ನಮಃ ॥೧೦॥

ಧರಾಧರಾಯೈ ಪಾದೌ ತು ವಿಶ್ವಕಾಯೈ ನಮಃ ಶಿರಃ ।
ನಮೋ ಭವಾನ್ಯೈ ಕಾಮಿನ್ಯೈ ಕಾಮದೇವ್ಯೈ ಜಗತ್ಪ್ರಿಯೇ ॥೧೧॥

ಆನಂದಾಯೈ ಸುನಂದಾಯೈ ಸುಭದ್ರಾಯೈ ನಮೋ ನಮಃ ।
ಏವಂ ಸಂಪೂಜ್ಯ ವಿಧಿವದ್ದ್ವಿಜದಾಂಪತ್ಯಮರ್ಚಯೇತ್ ।
ಭೋಜಯಿತ್ವಾನ್ನಪಾನೇನ ಮಧುರೇಣ ವಿಮತ್ಸರಃ ॥೧೨॥

ಜಲಪೂರಿತಂ ತಥಾ ಕುಂಭಂ ಶುಕ್ಲಾಂಬರಯುಗದ್ವಯಂ ।
ದತ್ವಾ ಸುವರ್ಣಕಮಲಂ ಗಂಧಮಾಲ್ಯೈಃ ಸಮರ್ಚಯೇತ್ ॥೧೩॥

ಪ್ರೀಯತಾಮತ್ರ ಕುಮುದಾ ಗೃಹ್ಣೀಯಾಲ್ಲವಣವ್ರತಂ ।
ಅನೇನ ವಿಧಿನಾ ದೇವೀಂ ಮಾಸಿ ಮಾಸಿ ಸದಾಽರ್ಚಯೇತ್ ॥೧೪॥

---

೧೦. ಸುರತವಾಸಿನಿಯ ಕಟಿಪ್ರದೇಶವನ್ನೂ, ಚಂಪಕಪ್ರಿಯೆಯ ತೊಡೆಯನ್ನೂ, ಗೌರಿಯ ಮಂಡಿಮೊಣಕಾಲುಗಳನ್ನೂ, ಗಾಯತ್ರಿಯ ಹಿಮ್ಮಡಿಗಳನ್ನೂ ನಮಸ್ಕರಿಸಿ ಪೂಜಿಸಬೇಕು.

೧೧. ಭೂಮಿಯನ್ನು ಧಾರಣೆಮಾಡಿರುವಾಕೆಗೆ ನಮಸ್ಕಾರವೆಂದು ಪಾದಗಳನ್ನೂ, ಜಗದ್ರೂಪಳಿಗೆ ನಮಸ್ಕಾರವೆಂದು ಶಿರಸ್ಸನ್ನೂ, ಅರ್ಚಿಸಬೇಕು. ಜಗತ್ತಿಗೆಲ್ಲ ಪ್ರಿಯಳೆನಿಸಿದ ಓ ದೇವಿ, ಭವಾನಿಯೂ, ಕಾಮಿನಿಯೂ, ಕಾಮದೇವಿಯೂ ಆದ ನಿನಗೆ ನಮಸ್ಕಾರ.

೧೨. ಆನಂದೆಗೆ, ಸುನಂದೆಗೆ, ಸುಭದ್ರೆಗೆ ನಮಸ್ಕಾರ. ಹೀಗೆ ನಿಯಮದಿಂದ ಪೂಜಿಸಿ ದ್ವಿಜದಂಪತಿಗಳನ್ನೂ ಆರಾಧಿಸಬೇಕು. ಮಧುರವಾದ ಅನ್ನಪಾನಗಳಿಂದ ಮಾತ್ಸರ್ಯವಿಲ್ಲದೆ ಸತ್ಕರಿಸಬೇಕು.

೧೩. ಜಲಪೂರ್ಣವಾದ ಕುಂಭವನ್ನೂ, ಒಂದು ಜೊತೆ ಬಿಳಿಯ ಪಂಚೆಯನ್ನೂ, ಸುವರ್ಣದ ಕಮಲವನ್ನೂ ಕೊಟ್ಟು ಗಂಧಪುಷ್ಪಗಳಿಂದ ಸತ್ಕರಿಸಬೇಕು.

೧೪. ಕುಮುದಾದೇವಿಗೆ ಇದರಿಂದ ಪ್ರೀತಿಯಾಗಲೆಂದು ಹೇಳಿ ಲವಣ ವ್ರತವನ್ನು ಕೈಗೊಳ್ಳಬೇಕು. ತಿಂಗಳು ತಿಂಗಳಲ್ಲೂ ವಿಧಿಯಿಂದ ದೇವಿಯನ್ನು ಸದಾ ಪೂಜಿಸಬೇಕು.

**ಲವಣಂ ವರ್ಜಯೇನ್ಮಾಘೇ ಫಾಲ್ಗುನೇ ಚ ಗುಡಂ ಪುನಃ ।**
**ತೈಲಂ ರಾಜಿಂ ತಥಾ ಚೈತ್ರೇ ವರ್ಜ್ಯಂ ಚ ಮಧು ಮಾಧವೇ ॥೧೫॥**

**ಪಾನಕಂ ಜ್ಯೇಷ್ಠಮಾಸೇ ತು ಆಷಾಢೇ ಚಾಥ ಜೀರಿಕಂ ।**
**ಶ್ರಾವಣೇ ವರ್ಜಯೇತ್ ಕ್ಷೀರಂ ದಧಿ ಭಾದ್ರಪದೇ ತಥಾ ॥೧೬॥**

**ಘೃತಮಾಶ್ವಯುಜೇ ತದ್ವದೂರ್ಜೇ ವರ್ಜ್ಯಂ ಚ ಮಾಕ್ಷಿಕಂ ।**
**ಧಾನ್ಯಕಂ ಮಾರ್ಗಶೀರ್ಷೇ ತು ಪೌಷೇ ವರ್ಜ್ಯಾ ಚ ಶರ್ಕರಾ ॥೧೭॥**

**ವ್ರತಾಂತೇ ಕರಕಂ ಪೂರ್ಣಮೇತೇಷಾಂ ಮಾಸಿ ಮಾಸಿ ಚ ।**
**ದದ್ಯಾದ್ದ್ವಿಕಾಲವೇಲಾಯಾಂ ಪೂರ್ಣಪಾತ್ರೇಣ ಸಂಯುತಂ ॥೧೮॥**

**ಲಡ್ಡುಕಾಞ್ಛ್ವೇತವರ್ಣಾಂಶ್ಚ ಸಂಯಾವಮಥ ಪೂರಿಕಾಃ ।**
**ಘಾರಿಕಾನಪ್ಯಪೂಪಾಂಶ್ಚ ಪಿಷ್ಟಾಪೂಪಾಂಶ್ಚ ಮಂಡಕಾನ್ ॥೧೯॥**

**ಕ್ಷೀರಂ ಶಾಕಂ ಚ ದಧ್ಯನ್ನಮಿಂಡರ್ಯೋऽಶೋಕವರ್ತಿಕಾಃ ।**
**ಮಾಘಾದಿಕ್ರಮಶೋ ದದ್ಯಾದೇತಾನಿ ಕರಕೋಪರಿ ॥೨೦॥**

---

೧೫. ಮಾಘಮಾಸದಲ್ಲಿ ಉಪ್ಪು, ಫಾಲ್ಗುನದಲ್ಲಿ ಬೆಲ್ಲ, ಚೈತ್ರದಲ್ಲಿ ಎಳ್ಳೆಣ್ಣೆ ಮತ್ತು ಕರೀಸಾಸವೆ, ವೈಶಾಖದಲ್ಲಿ ಜೇನುತುಪ್ಪ ಇವನ್ನು ಬಿಡಬೇಕು.

೧೬. ಜ್ಯೇಷ್ಠಮಾಸದಲ್ಲಿ ಪಾನಕವನ್ನೂ, ಆಷಾಢದಲ್ಲಿ ಜೀರಿಗೆಯನ್ನೂ, ಶ್ರಾವಣದಲ್ಲಿ ಹಾಲನ್ನೂ, ಭಾದ್ರಪದದಲ್ಲಿ ಮೊಸರನ್ನೂ ವರ್ಜಿಸಬೇಕು.

೧೭. ಆಶ್ವಯುಜದಲ್ಲಿ ತುಪ್ಪ, ಕಾರ್ತಿಕದಲ್ಲಿ ಜೇನುತುಪ್ಪ, ಮಾರ್ಗಶಿರದಲ್ಲಿ ಕೊತ್ತಂಬರಿಬೀಜ, ಪುಷ್ಯದಲ್ಲಿ, ಸಕ್ಕರೆ ಇವನ್ನು ಸೇವಿಸಬಾರದು.

೧೮. ಪ್ರತಿಯೊಂದು ತಿಂಗಳಲ್ಲೂ ಮಧ್ಯಾಹ್ನದಲ್ಲಿ ಈ ಪದಾರ್ಥಗಳನ್ನು ತುಂಬಿದ ಗಿಂಡಿಯನ್ನು ಉತ್ಸವಕಾಲದಲ್ಲಿ ಕೊಡಬೇಕಾದ ಉಪಹಾರಸಹಿತವಾಗಿ ದಾನಮಾಡಬೇಕು.

೧೯-೨೦. ಬಿಳುಪಾದ ಲಡ್ಡು, ಗೋಧಿಯ ರೊಟ್ಟಿ, ಪೂರಿ, ಗಾರಿಗೆ, ಕಡಬು, ರೊಟ್ಟಿ, ಮಂಡಿಗೆ, ಹಾಲು, ತರಕಾರಿ, ಮೊಸರನ್ನ ಇಡಲಿ, ಪೇಣಿ (ಶಾವಿಗೆ) ಇವುಗಳನ್ನು ಮಾಘಾದಿಕ್ರಮದಿಂದ ಗಿಂಡಿಯ ಮೇಲಿಟ್ಟು ಕೊಡಬೇಕು.

ಕುಮುದಾ ಮಾಧವೀ ಗೌರೀ ರಂಭಾ ಭದ್ರಾ ಜಯಾ ಶಿವಾ ।
ಉಮಾ ರತಿಃ ಸತೀ ತದ್ವನ್ಮಂಗಲಾ ರತಿಲಾಲಸಾ ॥೨೧॥

ಕ್ರಮಾನ್ಮಾಘಾದಿ ಸರ್ವತ್ರ ಪ್ರೀಯತಾಮಿತಿ ಕೀರ್ತಯೇತ್ ।
ಸರ್ವತ್ರ ಪಂಚಗವ್ಯೇನ ಪ್ರಾಶನಂ ಸಮುದಾಹೃತಂ ।
ಉಪವಾಸೀ ಭವೇನ್ನಿತ್ಯಮಶಕ್ತೇ ನಕ್ತಮಿಷ್ಯತೇ ॥೨೨॥

ಪುನರ್ಮಾಘೇ ತು ಸಂಪ್ರಾಪ್ತೇ ಶರ್ಕರಾಂ ಕರಕೋಪರಿ ।
ಕೃತ್ವಾ ತು ಕಾಂಚನೀಂ ಗೌರೀಂ ಪಂಚರತ್ನಸಮನ್ವಿತಾಂ ॥೨೩॥

ಹೈಮೀಮಂಗುಷ್ಠಮಾತ್ರಾಂ ಚ ಸಾಕ್ಷಸೂತ್ರಕಮಂಡಲುಂ ।
ಚತುರ್ಭುಜಾಮಿಂದುಯುತಾಂ ಸಿತನೇತ್ರಪಟಾವೃತಾಂ ॥೨೪॥

ತದ್ವದ್ಗೋಮಿಥುನಂ ಶುಕ್ಲಂ ಸುವರ್ಣಾಸ್ಯಂ ಸಿತಾಂಬರಂ ।
ಸಹಸ್ರಭೋಜನಂ ದದ್ಯಾದ್ಭವಾನೀ ಪ್ರೀಯತಾಮಿತಿ ॥೨೫॥

---

೨೧. ಕುಮುದಾ, ಮಾಧವೀ, ಗೌರೀ, ರಂಭಾ, ಭದ್ರಾ, ಜಯಾ, ಶಿವಾ, ಉಮಾ, ರತಿ, ಸತೀ, ಮಂಗಲಾ, ರತಿಲಾಲಸಾ ಎಂಬ ದೇವಿಯರು ಕ್ರಮವಾಗಿ ಮಾಘ ಮೊದಲಾದ ಹನ್ನೆರಡು ತಿಂಗಳಲ್ಲೂ ಪ್ರೀತರಾಗಲೆಂದು ಹೇಳಬೇಕು.

೨೨. ವ್ರತದಿನಗಳಲ್ಲೆಲ್ಲ ಪಂಚಗವ್ಯವನ್ನು ಪ್ರಾಶನಮಾಡಬೇಕು; ಮತ್ತು ಉಪವಾಸವಿರಬೇಕು. ಅಶಕ್ತರಾದವರು ರಾತ್ರಿ ಭೋಜನವನ್ನು ಮಾಡಬಹುದು.

೨೩-೨೪. ಮತ್ತೊಂದು ಮಾಘಮಾಸ ಬಂದಾಗ ಗಿಂಡಿಯ ಮೇಲೆ ಸಕ್ಕರೆಯನ್ನಿರಿಸಿ, ಪಂಚರತ್ನಗಳಿಂದ ಅಲಂಕೃತವಾದ, ಜಪಸೂತ್ರವನ್ನೂ ಕಮಂಡಲುವನ್ನೂ ಧರಿಸಿದ, ತೆಳ್ಳಗಿರುವ ಬಿಳಿಯ ವಸ್ತ್ರವನ್ನುಟ್ಟ, ನಾಲ್ಕು ತೋಳುಗಳೂ ಚಂದ್ರಕಲೆಯೂ ಮೆರೆಯುವ, ಅಂಗುಷ್ಠಪ್ರಮಾಣದ ಸ್ವರ್ಣಗೌರೀ ವಿಗ್ರಹವನ್ನು ಕರಕಸಹಿತವಾಗಿ ದಾನಮಾಡಬೇಕು.

೨೫. ಹಾಗೆಯೇ ಸುವರ್ಣದಿಂದ ಮುಖವನ್ನು ಅಲಂಕರಿಸಿ, ಶುಭ್ರವಸ್ತ್ರವನ್ನು ಹೊದೆಸಿದ ಬಿಳಿಯ ಹಸುಗಳೆರಡನ್ನು ದಾನವಾಗಿ ಕೊಡಬೇಕು. ಭವಾನೀ ದೇವಿಗೆ ಪ್ರೀತಿಯಾಗಲೆಂದು ಅನುಸಂಧಾನಮಾಡಿ, ಸಾವಿರ ಜನರಿಗೆ ಭೋಜನವನ್ನು ನೀಡಬೇಕು.

**ಅನೇನ ವಿಧಿನಾ ಯಸ್ತು ರಸಕಲ್ಯಾಣಿನೀವ್ರತಂ ।**
**ಕುರ್ಯಾತ್ಸ ಸರ್ವಪಾಪೇಭ್ಯಸ್ತತ್ಕ್ಷಣಾದೇವ ಮುಚ್ಯತೇ ॥೨೬॥**

**ನವಾರ್ಬುದಸಹಸ್ರಂ ತು ನ ದುಃಖೀ ಜಾಯತೇ ನರಃ ।**
**ಸುವರ್ಣಕಮಲಂ ಗೌರಿ ಮಾಸಿ ಮಾಸಿ ದದನ್ನರಃ ।**
**ಅಗ್ನಿಷ್ಟೋಮಸಹಸ್ರಸ್ಯ ಯತ್ಫಲಂ ತದವಾಪ್ನುಯಾತ್ ॥೨೭॥**

**ನಾರೀ ವಾ ಕುರುತೇ ಯಾ ತು ಕುಮಾರೀ ವಾ ವರಾನನೇ ।**
**ವಿಧವಾ ಯಾ ತಥಾ ನಾರೀ ಸಾಪಿ ತತ್ಫಲಮಾಪ್ನುಯಾತ್ ।**
**ಸೌಭಾಗ್ಯಾರೋಗ್ಯಸಂಪನ್ನಾ ಗೌರೀಲೋಕೇ ಮಹೀಯತೇ ॥೨೮॥**

**ಇತಿ ಪಠತಿ ಶೃಣೋತಿ ಶ್ರಾವಯೇದ್ಯಃ ಪ್ರಸಂಗಾತ್**
**ಕಲಿಕಲುಷವಿಮುಕ್ತಃ ಪಾರ್ವತೀಲೋಕಮೇತಿ ।**

---

೨೬. ಈ ವಿಧಿಯಿಂದ ರಸಕಲ್ಯಾಣಿನೀ ವ್ರತವನ್ನು ನೆರವೇರಿಸುವವನು ಕೂಡಲೇ ಸಮಸ್ತಪಾಪಗಳನ್ನೂ **ಕಳೆ**ದುಕೊಳ್ಳುವನು.

೨೭. ಒಂಬತ್ತು ಸಾವಿರ ಅರ್ಬುದವರ್ಷಗಳ ಕಾಲ ಅವನು ದುಃಖದ ಹೆಸರೇ ಇಲ್ಲದೆ ಸುಖವಾಗಿರುವನು. ಓ ಪಾರ್ವತೀ, ಪ್ರತಿಯೊಂದು ತಿಂಗಳಲ್ಲೂ ಚಿನ್ನ ದಿಂದ ಮಾಡಿದ ತಾವರೆಯನ್ನು ದಾನಮಾಡುವಾತನು ಸಾವಿರ ಅಗ್ನಿಷ್ಟೋಮ ಯಾಗಗಳ ಫಲವನ್ನು ಪಡೆಯುವನು.

೨೮. ಎಲೌ ಮಂಗಳಮುಖೀ, ಹೆಂಗಸು, ಹುಡುಗಿ, ಇಲ್ಲವೇ ವಿಧವೆ ಯಾರೇ ಆಗಲಿ ಈ ವ್ರತವನ್ನು ಮಾಡಿದರೆ ಅವರು ಮೇಲೆ ಹೇಳಿದ ಫಲವನ್ನು ಹೊಂದುವರು. ಸೌಭಾಗ್ಯ, ಆರೋಗ್ಯ ಇವುಗಳಿಂದ ಪರಿಪೂರ್ಣರಾಗಿ ಗೌರೀಲೋಕ ವಲ್ಲಿ ಮಾನ್ಯತೆಯನ್ನು ಪಡೆಯುವರು.

೨೯. ಮೇಲೆ ಹೇಳಿದ ಈ ವ್ರತವನ್ನು ಯಾವನು ಓದುವನೋ, ಪ್ರಸಂಗ ವಶದಿಂದ ಕೇಳುವನೋ ಅವನು **ಕಲಿದೋಷ**ದಿಂದ ದೂರನಾಗಿ ಪಾರ್ವತೀ

**ಮತಿಮಪಿ ಚ ನರಾಣಾಂ ಯೋ ದದಾತಿ ಪ್ರಿಯಾರ್ಥಂ**
**ವಿಬುಧಪತಿಜನಾನಾಂ ನಾಯಕಃ ಸ್ಯಾದನೋಘಃ ॥೨೯॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ರಸಕಲ್ಯಾಣಿನೀವ್ರತಂ ನಾಮ**
**ತ್ರಿಷಷ್ಟಿತಮೋಽಧ್ಯಾಯಃ**

---

ಲೋಕವನ್ನೈದುವನು. ಜನರಿಗೆ ಇದರಲ್ಲಿ ಪ್ರಿಯಬುದ್ಧಿಯನ್ನು ಹುಟ್ಟಿಸುವಾತನು ದೇವತೆಗಳಿಗೆ ನಾಯಕನಾಗಿ ಅತಿಶ್ರೇಷ್ಠನೆನಿಸುವನು.

**ಅಧ್ಯಾಯದ ಸಾರಾಂಶ**

ಈ ಅಧ್ಯಾಯದಲ್ಲಿ ರಸಕಲ್ಯಾಣಿನೀ ವ್ರತವನ್ನು ವಿವರಿಸಿದೆ.

ಮಾಘಮಾಸದ ಶುಕ್ಲಪಕ್ಷತೃತೀಯೆಯಲ್ಲಿ ಇದನ್ನು ಪ್ರಾರಂಭಿಸಿ ಪ್ರತಿಯೊಂದು ತಿಂಗಳಲ್ಲೂ ನಡೆಸುತ್ತ ಬರಬೇಕು. ಹಿಂದಿನ ವ್ರತದಂತೆಯೇ ಪಾರ್ವತೀದೇವಿಯನ್ನರ್ಚಿಸಬೇಕು. ಸಂವತ್ಸರಾಂತದಲ್ಲಿ ವ್ರತವು ಸಾಂಗವಾಗಿ ಮುಗಿದ ಮೇಲೆ ಸ್ವರ್ಣಗೌರೀ ಪ್ರತಿಮೆಯನ್ನೂ, ಗೋದಾನವನ್ನೂ ಮಾಡಬೇಕು. ಇದರಿಂದ ಬಹಳ ಶ್ರೇಯಸ್ಸುಂಟು. ಗೌರೀ ಸಾನ್ನಿಧ್ಯವು ಲಭಿಸುವುದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ರಸಕಲ್ಯಾಣಿನೀವ್ರತವೆಂಬ
ಅರವತ್ತಮೂರನೆಯ ಅಧ್ಯಾಯವು ಮುಗಿದುದು.

## ಅಥ ಚತುಃಷಷ್ಟಿತಮೋಽಧ್ಯಾಯಃ

॥ ಈಶ್ವರ ಉವಾಚ ॥

ತಥೈವಾನ್ಯಾಂ ಪ್ರವಕ್ಷ್ಯಾಮಿ ತೃತೀಯಾಂ ಪಾಪನಾಶಿನೀಂ ।
ನಾಮ್ನಾ ಚ ಲೋಕೇ ವಿಖ್ಯಾತಾಮಾರ್ದ್ರಾನಂದಕರೀಮಿಮಾಂ ॥ ೧ ॥

ಯದಾ ಶುಕ್ಲತೃತೀಯಾಯಾಮಾಷಾಢರ್ಕ್ಷಂ ಭವೇತ್ಕ್ವಚಿತ್ ।
ಬ್ರಹ್ಮರ್ಕ್ಷಂ ವಾ ಮೃಗರ್ಕ್ಷಂ ವಾ ಹಸ್ತೋ ಮೂಲಮಥಾಪಿ ವಾ ।
ದರ್ಭಗಂಧೋದಕೈಃ ಸ್ನಾನಂ ತದಾ ಸಮ್ಯಕ್ಸಮಾಚರೇತ್ ॥ ೨ ॥

ಶುಕ್ಲಮಾಲ್ಯಾಂಬರಧರಃ ಶುಕ್ಲಗಂಧಾನುಲೇಪನಃ ।
ಭವಾನೀಮರ್ಚಯೇದ್ಭಕ್ತ್ಯಾ ಶುಕ್ಲಪುಷ್ಪೈಃ ಸುಗಂಧಿಭಿಃ ।
ಮಹಾದೇವೇನ ಸಹಿತಾಮುಪವಿಷ್ಟಾಂ ಮಹಾಸನೇ ॥ ೩ ॥

---

೧ ಈಶ್ವರನು ಹೇಳಿದನು.—ದೇವಿ, ಪಾಪನಾಶಕವಾದ ಮತ್ತೊಂದು ತೃತೀಯಾವ್ರತವನ್ನು ಹೇಳುವೆನು. ಇದು ಲೋಕದಲ್ಲಿ ಆದ್ರಾನಂದಕರಿಯೆಂಬ ಹೆಸರಿನಿಂದ ಪ್ರಖ್ಯಾತವಾಗಿರುವುದು.

೨ ಶುಕ್ಲಪಕ್ಷದ ತೃತೀಯೆಯೊಡನೆ ಪೂರ್ವಾಷಾಢ, ಉತ್ತರಾಷಾಢ, ರೋಹಿಣಿ, ಮೃಗಶೀರ್ಷ, ಹಸ್ತ, ಮೂಲ ಇವುಗಳಲ್ಲಿ ಯಾವುದಾದರೊಂದು ನಕ್ಷತ್ರವು ಕೂಡಿದ ಶುಭದಿನದಲ್ಲಿ ದರ್ಭೋದಕದಿಂದಲೂ ಗಂಧೋದಕದಿಂದಲೂ ಶಾಸ್ತ್ರೋಕ್ತವಾಗಿ ಸ್ನಾನಮಾಡಬೇಕು.

೩. ಶುಭ್ರವಸ್ತ್ರವನ್ನುಟ್ಟು, ಬಿಳಿಯ ಹೂವನ್ನೂ ಗಂಧವನ್ನೂ ಧರಿಸಿಕೊಂಡು, ಮಹಾದೇವನೊಡಗೂಡಿದ ಭವಾನಿಯನ್ನು ದಿವ್ಯಾಸನದಲ್ಲಿ ಬಿಜಯಮಾಡಿಸಿ, ಪರಿಮಳಯುಕ್ತಗಳಾದ ಶುಕ್ಲಪುಷ್ಪಗಳಿಂದ ಭಕ್ತಿಯೊಡನೆ ಅರ್ಚಿಸಬೇಕು.

ವಾಸುದೇವ್ಯೈ ನಮಃ ಪಾದೌ ಶಂಕರಾಯ ನಮೋ ಹರಂ ।
ಜಂಘೇ ಶೋಕವಿನಾಶಿನ್ಯೈ ಆನಂದಾಯ ನಮಃ ಪ್ರಭೋಃ ॥ ೪ ॥

ರಂಭಾಯೈ ಪೂಜಯೇದೂರೂ ಶಿವಾಯ ಚ ಪಿನಾಕಿನಃ ।
ಆದಿತ್ಯೈ ಚ ಕಟಿಂ ದೇವ್ಯಾಃ ಶೂಲಿನಃ ಶೂಲಪಾಣಯೇ ॥ ೫ ॥

ಮಾಧವ್ಯೈ ಚ ತಥಾ ನಾಭಿಮಥ ಶಂಭೋರ್ಭವಾಯ ಚ ।
ಸ್ತನಾವಾನಂದಕಾರಿಣ್ಯೈ ಶಂಕರಸ್ಯೇಂದುಧಾರಿಣೇ ॥ ೬ ॥

ಉತ್ಕಂಠಿನ್ಯೈ ನಮಃ ಕಂಠಂ ನೀಲಕಂಠಾಯ ವೈ ಹರಂ ।
ಕರಾವುತ್ಪಲಧಾರಿಣ್ಯೈ ರುದ್ರಾಯ ಚ ಜಗತ್ಪತೇಃ ।
ಬಾಹೂ ಚ ಪರಿರಂಭಿಣ್ಯೈ ನೃತ್ಯಶೀಲಾಯ ತತ್ಪತೇಃ ॥ ೭ ॥

---

೪. ವಾಸುದೇವಿಗೆ ನಮಸ್ಕಾರ, ಶಂಕರನಿಗೆ ನಮಸ್ಕಾರವೆಂದು ಪಾರ್ವತೀ ಪರಮೇಶ್ವರರ ಪಾದಗಳನ್ನೂ, ಶೋಕವಿನಾಶಿನಿಗೆ ನಮಸ್ಕಾರ, ಆನಂದರೂಪ ನೆನಿಸಿದ ಪ್ರಭುವಿಗೆ ನಮಸ್ಕಾರವೆಂದು ಮೊಣಕಾಲುಗಳನ್ನೂ ಪುಷ್ಪಗಳಿಂದ ಅರ್ಚಿಸಬೇಕು.

೫. ರಂಭೆಗೆ ನಮಸ್ಕಾರವೆಂದು ಪರಮೇಶ್ವರನ ತೊಡೆಗಳನ್ನೂ, ಅದಿತಿಗೆ ನಮಸ್ಕಾರವೆಂದು ಗೌರಿಯ ಮಧ್ಯ ಪ್ರದೇಶವನ್ನೂ, ಶೂಲಪಾಣಿಗೆ ನಮಸ್ಕಾರವೆಂದು ಮಹಾದೇವನ ಮಧ್ಯದೇಶವನ್ನೂ ಪೂಜಿಸಬೇಕು

೬. ಮಾಧವಿಗೆ ನಮಸ್ಕಾರ, ಭವನಿಗೆ ನಮಸ್ಕಾರವೆಂದು ಕ್ರಮವಾಗಿ ಇಬ್ಬರ ನಾಭಿಯನ್ನೂ, ಆನಂದಕಾರಿಣಿಗೆ ನಮಸ್ಕಾರ, ಇಂದುಧರನಿಗೆ ನಮಸ್ಕಾರ ವೆಂದು ಸ್ತನ ಪ್ರದೇಶವನ್ನೂ ಪುಷ್ಪಗಳಿಂದ ಅರ್ಚಿಸಬೇಕು.

೭ ಉತ್ಕಂಠಿನಿಗೆ ನಮಸ್ಕಾರ, ನೀಲಕಂಠನಿಗೆ ನಮಸ್ಕಾರವೆಂದು ಉಮಾ ಮಹೇಶ್ವರರ ಕಂಠವನ್ನೂ, ಉತ್ಪಲಧಾರಿಣಿಗೆ ನಮಸ್ಕಾರ, ರುದ್ರನಿಗೆ ನಮಸ್ಕಾರ ವೆಂದು ಜಗತ್ತಿನ ಮಾತಾಪಿತೃಗಳ ಕರಗಳನ್ನೂ ಪೂಜಿಸಬೇಕು. ಪರಿರಂಭಿಣಿಗೆ ನಮಸ್ಕಾರ, ತಾಂಡವ ನೃತ್ಯಶೀಲನೆನಿಸಿದ ಅವಳ ಪತಿಗೆ ನಮಸ್ಕಾರವೆಂದು ಬಾಹುಗಳನ್ನೂ ಅರ್ಚಿಸಬೇಕು.

ದೇವ್ಯಾ ಮುಖಂ ವಿಲಾಸಿನ್ಯೈ ವೃಷಾಂಕಾಯ ಪುನರ್ವಿಭೋಃ ।
ಸ್ಮಿತಂ ಸಸ್ಮೇರಲೀಲಾಯ್ಯೈ ವಿಶ್ವವಕ್ತ್ರಾಯ ವೈ ವಿಭೋಃ ॥ ೮ ॥
ನೇತ್ರೇ ಮದನವಾಸಿನ್ಯೈ ವಿಶ್ವಧಾಮ್ನೇ ತ್ರಿಶೂಲಿನಃ ।
ಭ್ರುವೌ ನೃತ್ಯಪ್ರಿಯಾಯ್ಯೈ ತು ತಾಂಡವೇಶಾಯ ಶೂಲಿನಃ ॥ ೯ ॥
ದೇವ್ಯಾ ಲಲಾಟಮಿಂದ್ರಾಣ್ಯೈ ಹವ್ಯವಾಹಾಯ ವೈ ವಿಭೋಃ ।
ಸ್ವಾಹಾಯ್ಯೈ ಮುಕುಟಂ ದೇವ್ಯಾ ವಿಭೋರ್ಗಂಗಾಧರಾಯ ವೈ ॥೧೦॥
ವಿಶ್ವಕಾಯೌ ವಿಶ್ವಮುಖೌ ವಿಶ್ವಪಾದಕರೌ ಶಿವೌ ।
ಪ್ರಸನ್ನವದನೌ ವಂದೇ ಪಾರ್ವತೀಪರಮೇಶ್ವರೌ ॥೧೧॥
ಏವಂ ಸಂಪೂಜ್ಯ ವಿಧಿವದಗ್ರತಃ ಶಿವಯೋಃ ಪುನಃ ।
ಪದ್ಮೋತ್ಪಲಾನಿ ರಜಸಾ ನಾನಾವರ್ಣೇನ ಕಾರಯೇತ್ ॥೧೨॥

---

೮. ವಿಲಾಸಿನಿಗೆ ನಮಸ್ಕಾರವೆಂದು ದೇವಿಯ, ವೃಷಭಧ್ವಜನಿಗೆ ನಮಸ್ಕಾರವೆಂದು ಜಗತ್ಪತಿಯ ಮುಖಗಳನ್ನು ಪುಷ್ಪಗಳಿಂದ ಅರ್ಚಿಸಬೇಕು. ಮಂದಹಾಸಿನಿಗೆ ನಮಸ್ಕಾರವೆಂದೂ, ವಿಶ್ವತೋಮುಖನಿಗೆ ನಮಸ್ಕಾರವೆಂದೂ ಪ್ರಾರ್ಥಿಸಿ ಇಬ್ಬರ ಮಂದಹಾಸವನ್ನೂ ಪೂಜಿಸಬೇಕು.

೯. ಮದನವಾಸಿನಿಗೆ ನಮಸ್ಕಾರ, ವಿಶ್ವವ್ಯಾಪಕನಿಗೆ ನಮಸ್ಕಾರ ಎಂದು ಗೌರಿಯ ಮತ್ತು ಶಿವನ ನೇತ್ರಗಳನ್ನು ಅರ್ಚಿಸಬೇಕು. ನೃತ್ಯಪ್ರಿಯಳಿಗೂ ತಾಂಡವೇಶ್ವರನಿಗೂ ನಮಸ್ಕರಿಸಿ ಇಬ್ಬರ ಹುಬ್ಬುಗಳನ್ನೂ ಪೂಜಿಸಬೇಕು.

೧೦ ಇಂದ್ರಾಣಿಗೆ ನಮಸ್ಕಾರ, ಹವ್ಯವಾಹನಿಗೆ ನಮಸ್ಕಾರವೆಂದು ಪಾರ್ವತೀಪರಮೇಶ್ವರರ ಹಣೆಯನ್ನೂ, ಸ್ವಾಹಾದೇವಿಗೆ ನಮಸ್ಕಾರ, ವಿಭುವೆನಿಸಿದ ಗಂಗಾಧರನಿಗೆ ನಮಸ್ಕಾರವೆಂದು ದಿವ್ಯದಂಪತಿಗಳ ಕಿರೀಟಗಳನ್ನೂ ಅರ್ಚಿಸಬೇಕು.

೧೧. ಪ್ರಪಂಚವೆಲ್ಲ ತಮ್ಮ ಶರೀರವೂ, ಮುಖವೂ, ಪಾದಗಳೂ, ಕೈಗಳೂ ಆಗಿರಲು, ಮಂಗಳಕರರೆನಿಸಿ, ಪ್ರಸನ್ನಮುಖರಾಗಿ ಶೋಭಿಸುವ ಪಾರ್ವತೀ ಪರಮೇಶ್ವರರನ್ನು ವಂದಿಸುತ್ತೇನೆ.

೧೨. ಶಾಸ್ತ್ರೋಕ್ತವಾಗಿ ಹೀಗೆ ಪೂಜಿಸಿ, ಉಮಾಮಹೇಶ್ವರರ ಮುಂಭಾಗದಲ್ಲಿ ನಾನಾವರ್ಣದ ಚೂರ್ಣಗಳಿಂದ ತಾವರೆಗಳನ್ನೂ ನೈದಿಲೆಗಳನ್ನೂ ಬರೆಯಬೇಕು.

ಶಂಖಚಕ್ರೇ ಸಕಟಿಕೇ ಸ್ವಸ್ತಿಕಾಂಕುಶಚಾಮರಂ ।
ಯಾವಂತಃ ಪಾಂಸವಸ್ತತ್ರ ರಜಸಃ ಪತಿತಾ ಭುವಿ ।
ತಾವದ್ವರ್ಷಸಹಸ್ರಾಣಿ ಶಿವಲೋಕೇ ಮಹೀಯತೇ ॥೧೩॥

ಚತ್ವಾರಿ ಘೃತಪಾತ್ರಾಣಿ ಸಹಿರಣ್ಯಾನಿ ಶಕ್ತಿತಃ ।
ದತ್ವಾ ದ್ವಿಜಾಯ ಕರಕಮುದಕಾನ್ನಸಮನ್ವಿತಂ ।
ಪ್ರತಿಪಕ್ಷಂ ಚತುರ್ಮಾಸಂ ಯಾವದೇವಂ ಸಮರ್ಚಯೇತ್ ॥೧೪॥

ತತಸ್ತು ಚತುರೋ ಮಾಸಾನ್ ಪೂರ್ವವತ್ಕರಕೋಪರಿ ।
ಚತ್ವಾರಿ ಸಕ್ತುಪಾತ್ರಾಣಿ ತಿಲಪಾತ್ರಾಣ್ಯತಃ ಪರಂ ॥೧೫॥

ಗಂಧೋದಕಂ ಪುಷ್ಪವಾರಿ ಚಂದನಂ ಕುಂಕುಮೋದಕಂ ।
ಅಪಕ್ವಂ ದಧಿ ದುಗ್ಧಂ ಚ ಗೋಶೃಂಗೋದಕಮೇವ ಚ ॥೧೬॥

ಪಿಷ್ಟೋದಕಂ ತಥಾ ವಾರಿ ಕುಷ್ಠಚೂರ್ಣಾನ್ವಿತಂ ಪುನಃ ।
ಉಶೀರಸಲಿಲಂ ತದ್ವದ್ಯವಚೂರ್ಣೋದಕಂ ಪುನಃ ॥೧೭॥

---

೧೩. ಚೂರ್ಣಗಳಿಂದ ಹೀಗೆ ಬರೆಯುವಾಗ ಎಷ್ಟು ಸಂಖ್ಯೆಯ ಧೂಳು ನೆಲದಲ್ಲಿ ಬೀಳುವುದೋ ಅಷ್ಟು ಸಾವಿರ ವರ್ಷಗಳ ಕಾಲ ಶಿವಲೋಕದಲ್ಲಿ ಶಂಖ ಚಕ್ರಗಳು, ಬಳೆಗಳು, ಇವನ್ನು ಧರಿಸಿ, ಅಂಕುಶಚಾಮರಗಳ ಮರ್ಯಾದೆಯಿಂದ ರಾಜಪ್ರಾಸಾದಗಳಲ್ಲಿ ವಾಸಿಸುತ್ತ ಗೌರವಶಾಲಿಯಾಗಿ ಆನಂದಿಸುವನು

೧೪. ಶಕ್ತ್ಯನುಸಾರವಾಗಿ ದಕ್ಷಿಣೆಯೊಡನೆ ತುಪ್ಪತುಂಬಿದ ನಾಲ್ಕುಪಾತ್ರೆಗಳನ್ನು ಗಿಂಡಿಯ ಮೇಲಿಟ್ಟು ಅನ್ನೋದಕ ಸಹಿತನಾಗಿ ದಾನಕೊಡಬೇಕು. ಪ್ರತಿ ಪಕ್ಷದಲ್ಲೂ ಹೀಗೆಯೇ ದಾನಮಾಡುತ್ತ ನಾಲ್ಕು ತಿಂಗಳ ಕಾಲ ಪೂಜೆಯನ್ನು ನಡೆಸಬೇಕು.

೧೫. ಬಳಿಕ ಮೊದಲಿನಂತೆ ಗಿಂಡಿಯ ಮೇಲೆ ಹುರಿಟ್ಟಿನ ನಾಲ್ಕು ಪಾತ್ರೆಗಳನ್ನಿಟ್ಟು ನಾಲ್ಕುತಿಂಗಳೂ, ಆ ತರುವಾಯ ಎಳ್ಳಿನ ಪಾತ್ರೆಗಳು ನಾಲ್ಕನ್ನಿಟ್ಟು ನಾಲ್ಕುತಿಂಗಳೂ ದಾನಮಾಡಬೇಕು.

೧೬-೧೮. ಮಾರ್ಗಶಿರ ಮೊದಲಾದ ಹನ್ನೆರಡು ತಿಂಗಳಲ್ಲಿ ಈ ಮುಂದಿನ ಪದಾರ್ಥಗಳಲ್ಲೊಂದೊಂದನ್ನು ಕ್ರಮವಾಗಿ ಪ್ರಾಶನಮಾಡಬೇಕು. ಗಂಧೋದಕ,

**ತಿಲೋದಕಂ ಚ ಸಂಪ್ರಾಶ್ಯ ಸ್ವಪೇನ್ಮಾರ್ಗಶಿರಾದಿಷು ।**
**ಮಾಸೇಷು ಪಕ್ಷದ್ವಿತಯಂ ಪ್ರಾಶನಂ ಸಮುದಾಹೃತಂ ॥೧೮॥**

**ಸರ್ವತ್ರ ಶುಕ್ಲಪುಷ್ಪಾಣಿ ಪ್ರಶಸ್ತಾನಿ ಸದಾರ್ಚನೇ ।**
**ದಾನಕಾಲೇ ಚ ಸರ್ವತ್ರ ಮಂತ್ರಮೇತದುದೀರಯೇತ್ ॥೧೯॥**

**ಗೌರೀ ಮೇ ಪ್ರೀಯತಾಂ ನಿತ್ಯಮಘನಾಶಾಯ ಮಂಗಲಾ ।**
**ಸೌಭಾಗ್ಯಾಯಾಸ್ತು ಲಲಿತಾ ಭವಾನೀ ಸರ್ವಸಿದ್ಧಯೇ ॥೨೦॥**

**ಸಂವತ್ಸರಾಂತೇ ಲವಣಂ ಗುಡಕುಂಭಂ ಸಮಾಕ್ಷಿಕಂ ।**
**ಚಂದನಂ ನೇತ್ರಪಟ್ಟಂ ಚ ಸಹಿರಣ್ಯಾಂಬುಜೇನ ತು ॥೨೧॥**

**ಉಮಾಮಹೇಶ್ವರಂ ಹೈಮಂ ತದ್ವದಿಕ್ಷುಫಲೈರ್ಯುತಂ ।**
**ಸತೂಲಾವರಣಾಂ ಶಯ್ಯಾಂ ಸವಿಶ್ರಾಮಾಂ ನಿವೇದಯೇತ್ ।**
**ಸಪತ್ನೀಕಾಯ ವಿಪ್ರಾಯ ಗೌರೀ ಮೇ ಪ್ರೀಯತಾಮಿತಿ ॥೨೨॥**

---

ಪುಷ್ಪೋದಕ, ಶ್ರೀಗಂಧ, ಕೇಸರಿತೀರ್ಥ ಹಸಿಯ ಹಾಲಿನ ಮೊಸರು, ಹಾಲು, ಗೋಶೃಂಗತೀರ್ಥ, ಹಿಟ್ಟುಕಲಸಿದ ನೀರು, ಚಂಗಲುಕೋಷ್ಠಚೂರ್ಣದ ನೀರು, ಲಾಮಂಚದ ನೀರು, ಗೋಧಿಯ ಹಿಟ್ಟಿನ ನೀರು, ಎಳ್ಳು ನೀರು ಇವುಗಳನ್ನು ಪ್ರತಿಯೊಂದು ತಿಂಗಳಿನ ಎರಡು ಪಕ್ಷಗಳಲ್ಲಿಯೂ ಸೇವಿಸಬೇಕು.

೧೯. ಎಲ್ಲ ಅರ್ಚನೆಗಳಲ್ಲಿಯೂ ಬಿಳಿಯ ಹೂಗಳೇ ಯಾವಾಗಲೂ ಪ್ರಶಸ್ತವಾದುವು. ದಾನಕೊಡುವಾಗಲೆಲ್ಲ ಈ ಕೆಳಗಿನ ಮಂತ್ರವನ್ನು ಹೇಳಬೇಕು.

೨೦. "ಮಂಗಲಸ್ವರೂಪಿಣಿಯಾದ ಗೌರಿಯು ಪ್ರೀತಳಾಗಿ ನನ್ನ ಪಾಪಗಳನ್ನು ಪರಿಹರಿಸಲಿ. ಲಲಿತಾದೇವಿಯು ಸೌಭಾಗ್ಯವನ್ನು ಕರುಣಿಸಲಿ."

೨೧-೨೨. ಸಂವತ್ಸರದ ಕೊನೆಯಲ್ಲಿ ಉಪ್ಪು, ಬೆಲ್ಲ ತುಂಬಿದ ಪಾತ್ರೆ, ಜೇನುತುಪ್ಪ, ಶ್ರೀಗಂಧ, ನವಿರಾಗಿರುವ ಪಂಚೆ, ಚಿನ್ನದ ತಾವರೆ ಹೂ ಇವೆಲ್ಲವನ್ನೂ ಉಮಾ ಮಹೇಶ್ವರರ ಸುವರ್ಣಪ್ರತಿಮೆಯೊಡನೆ, ಕಬ್ಬು ಮತ್ತು ಹಣ್ಣುಗಳ ಸಮೇತವಾಗಿ ದಾನಮಾಡಬೇಕು. ಅರಳೆಯ ಹಾಸಿಗೆಯನ್ನು ಒರಗುದಿಂಬಿನೊಡನೆ ಪತ್ನೀಸಹಿತನಾದ ಬ್ರಾಹ್ಮಣನಿಗೆ ಕೊಟ್ಟು, ಗೌರೀದೇವಿಯು ತೃಪ್ತಳಾಗಲೆಂದು ಪ್ರಾರ್ಥಿಸಬೇಕು.

**ಆರ್ದ್ರಾನಂದಕರೀ ನಾಮ್ನಾ ತೃತೀಯೈಷಾ ಸನಾತನೀ।**
**ಯಾಮುಪೋಷ್ಯ ನರೋ ಯಾತಿ ಶಂಭೋರ್ಯತ್ಪರಮಂ ಪದಂ ॥೨೩॥**

**ಇಹ ಲೋಕೇ ಸದಾಽಽನಂದಮಾಪ್ನೋತಿ ಧನಸಂಪದಃ।**
**ಆಯುರಾರೋಗ್ಯಸಂಪತ್ತ್ಯಾ ನ ಕಶ್ಚಿಚ್ಛೋಕಮಾಪ್ನುಯಾತ್ ॥೨೪॥**

**ನಾರೀ ವಾ ಕುರುತೇ ಯಾ ತು ಕುಮಾರೀ ವಿಧವಾ ಚ ಯಾ।**
**ಸಾಪಿ ತತ್ಫಲಮಾಪ್ನೋತಿ ದೇವ್ಯನುಗ್ರಹಲಾಲಿತಾ ॥೨೫॥**

**ಪ್ರತಿಪಕ್ಷಮುಪೋಷ್ಯೈವಂ ಮಂತ್ರಾರ್ಚನವಿಧಾನವಿತ್।**
**ರುದ್ರಾಣೀಲೋಕಮಭ್ಯೇತಿ ಪುನರಾವೃತ್ತಿದುರ್ಲಭಂ ॥೨೬॥**

**ಯ ಇದಂ ಶೃಣುಯಾನ್ನಿತ್ಯಂ ಶ್ರಾವಯೇದ್ವಾಪಿ ಮಾನವಃ।**
**ಶಕ್ರಲೋಕೇ ಸ ಗಂಧರ್ವೈಃ ಪೂಜ್ಯತೇಽಪಿ ಯುಗತ್ರಯಂ ॥೨೭॥**

---

೨೩. ಈ ತೃತೀಯಾವ್ರತವು ಸನಾತನವಾದುದು. ಆರ್ದ್ರಾನಂದಕರಿಯೆಂದು ಪ್ರಖ್ಯಾತವಾದುದು. ಈ ದಿನ ಉಪವಾಸಮಾಡಿದಾತನು ಅತಿಶ್ರೇಷ್ಠವಾದ ಶಿವಸಾನ್ನಿಧ್ಯವನ್ನು ಸೇರುವನು.

೨೪. ಇದನ್ನು ನೆರವೇರಿಸಿದ ಪುರುಷನು ಯಾವನೇ ಆಗಲಿ, ಲೋಕದಲ್ಲಿ ಸದಾ ಆನಂದವನ್ನು ಅನುಭವಿಸುವನು. ಧನಸಂಪತ್ತುಗಳನ್ನು ಪಡೆಯುವನು. ಆಯುಸ್ಸು, ಆರೋಗ್ಯ ಮೊದಲಾದ ಬಗೆಬಗೆಯ ಸುಖಭೋಗಗಳನ್ನು ಹೊಂದಿ ಶೋಕವನ್ನೇ ಕಾಣದಿರುವನು.

೨೫. ಹೆಂಗಸು, ಹುಡುಗಿ ಅಥವಾ ವಿಧವೆ ಇವರಾರಾದರೂ ಸರಿಯೆ ಈ ವ್ರತಾಚರಣೆಯಿಂದ ಮೇಲೆ ಹೇಳಿದ ಫಲವನ್ನು ಪಡೆಯುವರು; ದೇವಿಯ ಅನುಗ್ರಹಕ್ಕೆ ಪಾತ್ರರಾಗುವರು.

೨೬. ಹೀಗೆ ಮಂತ್ರಾರ್ಚನ ವಿಧಾನವನ್ನು ಬಲ್ಲವನು ಪ್ರತಿಪಕ್ಷದಲ್ಲೂ ಉಪವಾಸಮಾಡಿ ಪಾರ್ವತೀದೇವಿಯ ಲೋಕವನ್ನು ಸೇರುವನು. ಅವನಿಗೆ ಪುನರಾವೃತ್ತಿಯೇ ಬಾರದು.

೨೭. ಇದನ್ನು ನಿತ್ಯವೂ ಕೇಳುವವನೂ ಇತರರಿಗೆ ಹೇಳುವವನೂ ಇಂದ್ರಲೋಕವನ್ನೈದುವನು. ಮೂರು ಯುಗಗಳ ಕಾಲ ಅಲ್ಲಿ ಗಂಧರ್ವರಿಂದ ಪೂಜೆಯನ್ನು ಕೈಗೊಳ್ಳುವನು.

**ಆನಂದದಾಂ ಸಕಲದುಃಖಹರಾಂ ತೃತೀಯಾಂ**
**ಯಾ ಸ್ತ್ರೀ ಕರೋತ್ಯವಿಧವಾ ವಿಧವಾಽಥ ವಾಽಪಿ ।**
**ಸಾ ಸ್ವೇ ಗೃಹೇ ಸುಖಶತಾನ್ಯನುಭೂಯ ಭೂಯೋ**
**ಗೌರೀಪದಂ ಸದಯಿತಾ ಮುದಿತಾ ಪ್ರಯಾತಿ ॥೨೮॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಆರ್ದ್ರಾನಂದಕರೀ ತೃತೀಯಾವ್ರತಂ ನಾಮ ಚತುಃಷಷ್ಟಿತಮೋಽಧ್ಯಾಯಃ**

---

೨೮. ಆನಂದವನ್ನು ಕೊಟ್ಟು, ಸಕಲದುಃಖವನ್ನು ಕಳೆಯುವ ಈ ತೃತೀಯಾವ್ರತವನ್ನು ಸುಮಂಗಲಿಯೋ, ವಿಧವೆಯೋ ಯಾವ ಹೆಂಗಸು ನಡೆಸಿದರೂ ಅವಳು ತನ್ನ ಮನೆಯಲ್ಲಿ ನೂರಾರು ಬಗೆಯ ಸುಖಗಳನ್ನು ಅನುಭವಿಸಿ, ತನ್ನ ಪ್ರಿಯಜನರೊಡನೆ ಗೌರಿಯ ಸಾನ್ನಿಧ್ಯವನ್ನು ಸೇರಿ ಸಂತೋಷದಿಂದಿರುವಳು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಆರ್ದ್ರಾನಂದಕರಿಯೆಂಬ ತೃತೀಯಾವ್ರತದ ವಿಧಿಯನ್ನು ಹೇಳಿದೆ.

ರೋಹಿಣಿ, ಮೃಗಶಿರ, ಹಸ್ತ ಮೊದಲಾದ ಕೆಲವು ನಕ್ಷತ್ರಗಳೊಡನೆ ಕೂಡಿದ ಶುಕ್ಲಪಕ್ಷದ ತೃತೀಯೆಯ ದಿನ ಈ ವ್ರತವನ್ನು ಪ್ರಾರಂಭಿಸಬೇಕು. ಪಾದಾದಿಕೇಶಾಂತವಾಗಿ ಉಮಾಮಹೇಶ್ವರರನ್ನು ಅರ್ಚಿಸಬೇಕು. ಪ್ರತಿಯೊಂದು ಪಕ್ಷದ ತೃತೀಯೆಯಲ್ಲೂ ಹೀಗೆಯೇ ಮಾಡಿ ವರ್ಷಾಂತದಲ್ಲಿ ಪ್ರತಿಮಾದಾನವೇ ಮೊದಲಾದ ವಿಧವಿಧದಾನಗಳಿಂದ ವ್ರತವನ್ನು ಪೂರ್ಣಗೊಳಿಸಬೇಕು. ಇದು ಸಕಲ ಸುಖಸಂಪತ್ತುಗಳನ್ನೂ ನೀಡಿ ಶಾಶ್ವತವಾಗಿ ಸದ್ಗತಿಯನ್ನು ಕೊಡುವ ಮಹಾವ್ರತವೆನಿಸಿಸಿರುವುದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಆರ್ದ್ರಾನಂದಕರಿ ತೃತೀಯೆಯೆಂಬ
ಅರವತ್ತನಾಲ್ಕನೆಯ ಅಧ್ಯಾಯವು ಮುಗಿದುದು.

# ಅಥ ಪಂಚಷಷ್ಟಿತಮೋಽಧ್ಯಾಯಃ

## ॥ ಈಶ್ವರ ಉವಾಚ ॥

ಅಥಾನ್ಯಾಮಪಿ ವಕ್ಷ್ಯಾಮಿ ತೃತೀಯಾಂ ಸರ್ವಕಾಮದಾಂ ।
ಯಸ್ಯಾಂ ದತ್ತಂ ಹುತಂ ಜಪ್ತಂ ಸರ್ವಂ ಭವತಿ ಚಾಕ್ಷಯಂ ॥ ೧ ॥

ವೈಶಾಖಶುಕ್ಲಪಕ್ಷೇ ತು ತೃತೀಯಾ ಯೈರುಪೋಷಿತಾ ।
ಅಕ್ಷಯಂ ಫಲಮಾಪ್ನೋತಿ ಸರ್ವಸ್ಯ ಸುಕೃತಸ್ಯ ಚ ॥ ೨ ॥

ಸಾ ತಥಾ ಕೃತ್ತಿಕೋಪೇತಾ ವಿಶೇಷೇಣ ಸುಪೂಜಿತಾ ।
ತತ್ರ ದತ್ತಂ ಹುತಂ ಜಪ್ತಂ ಸರ್ವಮಕ್ಷಯಮಶ್ನುತೇ ॥ ೩ ॥

ಅಕ್ಷಯಾ ಸಂತತಿಸ್ತಸ್ಯಾಸ್ತಸ್ಯಾಂ ಸುಕೃತಮಕ್ಷಯಂ ।
ಅಕ್ಷತೈಃ ಪೂಜ್ಯತೇ ವಿಷ್ಣುಸ್ತೇನ ಸಾಪ್ಯಕ್ಷಯಾ ಸ್ಮೃತಾ ।
ಅಕ್ಷತೈಸ್ತು ನರಾಃ ಸ್ನಾತಾ ವಿಷ್ಣೋರ್ದತ್ತ್ವಾ ತಥಾಕ್ಷತಾನ್ ॥ ೪ ॥

---

೧. ಈಶ್ವರನು ಹೇಳಿದನು.—ಸಕಲೇಷ್ಟಾರ್ಥಗಳನ್ನೂ ಕೊಡುವ ಮತ್ತೊಂದು ತೃತೀಯಾವ್ರತವನ್ನು ಹೇಳುವೆನು. ಆ ದಿನದಲ್ಲಿ ಮಾಡಿದ ದಾನ, ಹೋಮ, ಜಪ ಇವೆಲ್ಲ ಅಕ್ಷಯವಾಗುವುವು.

೨. ವೈಶಾಖಮಾಸದ ಶುಕ್ಲಪಕ್ಷತೃತೀಯೆಯ ದಿನ ಉಪವಾಸಮಾಡುವವರ ಸುಕೃತವೆಲ್ಲವೂ ಅಕ್ಷಯಫಲವನ್ನು ಪಡೆಯುವುದು.

೩. ಆ ತೃತೀಯೆಯೊಡನೆ ಕೃತ್ತಿಕಾನಕ್ಷತ್ರವೂ ಸೇರಿದರೆ ಅದು ಮತ್ತಷ್ಟು ಅತಿಶಯವಾದ ಪವಿತ್ರದಿನವೆನಿಸುವುದು. ಅಂದು ದಾನಮಾಡಲಿ, ಹೋಮ ಮಾಡಲಿ, ಜಪಮಾಡಲಿ ಎಲ್ಲಕ್ಕೂ ಅನಂತವಾದ ಫಲವು ಲಭಿಸುವುದು.

೪. ಈ ವ್ರತಾಚರಣೆಯಿಂದ ಸಂತತಿಯು ಅಕ್ಷಯವಾಗಿ ಬೆಳೆಯುವುದು. ಪುಣ್ಯವು ಅಪರಿಮಿತ ಫಲವನ್ನು ಕೊಡುವುದು. ವಿಷ್ಣುವನ್ನು ಅಕ್ಷತೆಗಳಿಂದ ಪೂಜಿಸುವರಾದ ಕಾರಣ ಆ ತೃತೀಯೆಗೆ ಅಕ್ಷಯವೆಂದೇ ಹೆಸರು ಬಂದಿತು. ಜನರು ಅಕ್ಷತೆಗಳನ್ನು ವಿಷ್ಣುವಿಗೆ ಸಮರ್ಪಿಸಿ ತಾವೂ ಅವುಗಳಿಂದ ಸ್ನಾನಮಾಡುವರು.

ವಿಪ್ರೇಷು ದತ್ವಾ ತಾನೇವ ತಥಾ ಸಕ್ತೂನ್ಸುಸಂಸ್ಕೃತಾನ್ ।
ಯಥಾನ್ನಭುಙ್ಮಹಾಭಾಗಃ ಫಲಮಕ್ಷಯ್ಯಮಶ್ನುತೇ ॥ ೫ ॥
ಏಕಾಮಪ್ಯುಕ್ತವತ್ಕೃತ್ವಾ ತೃತೀಯಾಂ ವಿಧಿವನ್ನರಃ ।
ಏತಾಸಾಂ ತು ತೃತೀಯಾನಾಂ ಸರ್ವಾಸಾಂ ಫಲಮಶ್ನುತೇ ॥ ೬ ॥
ತೃತೀಯಾಯಾಂ ಸಮಭ್ಯರ್ಚ್ಯ ಸೋಪವಾಸೋ ಜನಾರ್ದನಂ ।
ರಾಜಸೂಯಫಲಂ ಪ್ರಾಪ್ಯ ಗತಿಮಗ್ರ್ಯಾಂ ಚ ವಿಂದತಿ ॥ ೭ ॥

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇಽಕ್ಷಯ್ಯತೃತೀಯಾವ್ರತಂ ನಾಮ ಪಂಚಷಷ್ಟಿತಮೋಽಧ್ಯಾಯಃ**

---

೫. ಬ್ರಾಹ್ಮಣರಿಗೆ ಅಕ್ಷತೆಗಳನ್ನೂ, ಅಚ್ಚುಕಟ್ಟಾಗಿ ಸಿದ್ಧಗೊಳಿಸಿದ ಹುರಿಟ್ಟನ್ನೂ ಕೊಡಬೇಕು. ಬಳಿಕ ವಿಧಿಯನ್ನನುಸರಿಸಿ ಭೋಜನಮಾಡಿದರೆ ಆ ಮಹಾತ್ಮನು ಅಕ್ಷಯ್ಯಫಲವನ್ನು ಪಡೆಯುವನು.

೬. ಈ ಅಕ್ಷಯ್ಯ ತೃತೀಯಾವ್ರತವೊಂದನ್ನು ವಿಧಿವತ್ತಾಗಿ ಮಾಡಿದರೂ ಸಾಕು; ಮನುಷ್ಯನು ಎಲ್ಲ ಬಗೆಯ ತೃತೀಯಾವ್ರತಗಳ ಫಲವನ್ನೂ ಹೊಂದುವನು.

೭. ತೃತೀಯೆಯ ದಿನ ಉಪವಾಸಮಾಡಿ ಜನಾರ್ದನನನ್ನು ಪೂಜೆಮಾಡಿದರೆ ರಾಜಸೂಯಯಾಗದ ಫಲವುಬರುವುದು. ಉತ್ತಮಗತಿಯೂ ಲಭಿಸುವುದು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಅಕ್ಷಯ್ಯ ತೃತೀಯಾವ್ರತವನ್ನು ವಿವರಿಸಿದೆ.

ವೈಶಾಖಮಾಸದ ಶುಕ್ಲಪಕ್ಷದ ತೃತೀಯೆಯ ದಿನ ಉಪವಾಸಮಾಡಿ ಅಕ್ಷತೆಗಳಿಂದ ವಿಷ್ಣುವನ್ನು ಪೂಜಿಸಬೇಕು. ವ್ರತಾಂತದಲ್ಲಿ ಬ್ರಾಹ್ಮಣರಿಗೆ ಅಕ್ಷತೆಗಳನ್ನೂ ಹುರಿಟ್ಟನ್ನೂ ಕೊಡಬೇಕು. ಇದೊಂದು ವ್ರತವನ್ನು ವಿಧಿಗೆ ತಕ್ಕಂತೆ ಮಾಡಿದರೆ ಸಾಕು. ಎಲ್ಲ ತೃತೀಯಾವ್ರತಗಳ ಫಲವೂ ಬರುವುದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಅಕ್ಷಯ್ಯತೃತೀಯಾವ್ರತವೆಂಬ ಅರವತ್ತೈದನೆಯ ಅಧ್ಯಾಯವು ಮುಗಿದುದು.

## ಅಥ ಷಟ್ಷಷ್ಟಿತಮೋಽಧ್ಯಾಯಃ

|| ಮನುರುವಾಚ ||

ಮಧುರಾ ಭಾರತೀ ಕೇನ ವ್ರತೇನ ಮಧುಸೂದನ ।
ತಥೈವ ಜನಸೌಭಾಗ್ಯಮತಿವಿದ್ಯಾಸು ಕೌಶಲಂ || ೧ ||

ಅಭೇದಶ್ಚಾಪಿ ದಂಪತ್ಯೋಸ್ತಥಾ ಬಂಧುಜನೇನ ಚ ।
ಆಯುಶ್ಚ ವಿಪುಲಂ ಪುಂಸಾಂ ತನ್ಮೇ ಕಥಯ ಮಾಧವ || ೨ ||

|| ಮತ್ಸ್ಯ ಉವಾಚ ||

ಸಮ್ಯಕ್ಪೃಷ್ಟಂ ತ್ವಯಾ ರಾಜಞ್ಛೃಣು ಸಾರಸ್ವತಂ ವ್ರತಂ ।
ಯಸ್ಯ ಸಂಕೀರ್ತನಾದೇವ ತುಷ್ಯತೀಹ ಸರಸ್ವತೀ || ೩ ||

ಯೋ ಮದ್ಭಕ್ತಃ ಪುಮಾರ್ನ್ ಕುರ್ಯಾದೇತದ್ವ್ರತಮನುತ್ತಮಂ ।
ತದ್ವಾಸರಾದೌ ಸಂಪೂಜ್ಯ ವಿಪ್ರಾನೇತಾನ್ಸಮಾಚರೇತ್ || ೪ ||

---

೧-೨. ಮನು ಹೇಳಿದನು.—ಓ ಮಧುಸೂದನಾ, ಇಂಪಾದ ಮಾತು, ಸೌಭಾಗ್ಯ, ಮತಿ, ವಿದ್ಯೆ, ಅತಿಶಯವಾದ ಕೌಶಲ್ಯ, ದಂಪತಿಗಳಲ್ಲಿ ಅಸ್ಖಲಿತವಾದ ಪ್ರೇಮ, ಬಂಧುಜನರ ನಿರತಿಶಯ ವಿಶ್ವಾಸ, ದೀರ್ಘಾಯುಸ್ಸು ಇವೆಲ್ಲವೂ ದೊರಕ ಬೇಕಾದರೆ ಜನರು ಯಾವ ವ್ರತವನ್ನು ಆಚರಿಸಬೇಕು ? ಮಾಧವಾ, ಅದನ್ನು ನನಗೆ ತಿಳಿಸು.

೩. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಎಲೈ ರಾಜನೇ, ಚೆನ್ನಾಗಿ ಕೇಳಿದೆ. ಸಾರಸ್ವತವ್ರತವನ್ನು ಹೇಳುವೆನು ಕೇಳು. ಅದರ ಹೆಸರನ್ನು ಹೇಳಿದ ಮಾತ್ರದಿಂದಲೇ ಸರಸ್ವತೀದೇವಿಯು ಪ್ರೀತಳಾಗುವಳು.

೪. ನನ್ನ ಭಕ್ತನು ಅತ್ಯುತ್ತಮವಾದ ಈ ವ್ರತವನ್ನು ಎಂದು ಆಚರಿಸಲಿಚ್ಛಿ ಸುವನೋ ಅಂದು ಪ್ರಾತಃಕಾಲದಲ್ಲಿ ಬ್ರಾಹ್ಮಣರನ್ನು ಪೂಜಿಸಿ ತರುವಾಯ ಇವನ್ನು ಪ್ರಾರಂಭಿಸಬೇಕು.

ಅಥವಾಽಽದಿತ್ಯವಾರೇಣ ಗ್ರಹತಾರಾಬಲೇನ ಚ ।
ಪಾಯಸಂ ಭೋಜಯೇದ್ವಿಪ್ರಾನ್ ಕೃತ್ವಾ ಬ್ರಾಹ್ಮಣವಾಚನಂ ॥ ೫ ॥

ಶುಕ್ಲವಸ್ತ್ರಾಣಿ ದತ್ವಾ ಚ ಸಹಿರಣ್ಯಾನಿ ಶಕ್ತಿತಃ ।
ಗಾಯತ್ರೀಂ ಪೂಜಯೇದ್ಭಕ್ತ್ಯಾ ಶುಕ್ಲಮಾಲ್ಯಾನುಲೇಪನೈಃ ॥ ೬ ॥

ಯಥಾ ನ ದೇವಿ ಭಗವಾನ್ ಬ್ರಹ್ಮಲೋಕೇ ಪಿತಾಮಹಃ ।
ತ್ವಾಂ ಪರಿತ್ಯಜ್ಯ ಸಂತಿಷ್ಠೇತ್ತಥಾ ಭವ ವರಪ್ರದಾ ॥ ೭ ॥

ವೇದಾಃ ಶಾಸ್ತ್ರಾಣಿ ಸರ್ವಾಣಿ ಗೀತನೃತ್ಯಾದಿಕಂ ಚ ಯತ್ ।
ನ ವಿಹೀನಂ ತ್ವಯಾ ದೇವಿ ತಥಾ ಮೇ ಸಂತು ಸಿದ್ಧಯಃ ॥ ೮ ॥

ಲಕ್ಷ್ಮೀರ್ಮೇಧಾ ಧರಾ ಪುಷ್ಟಿರ್ಗೌರೀ ತುಷ್ಟಿಃ ಪ್ರಭಾ ಮತಿಃ ।
ಏತಾಭಿಃ ಪಾಹಿ ಅಷ್ಟಾಭಿಸ್ತನುಭಿರ್ಮಾಂ ಸರಸ್ವತಿ ॥ ೯ ॥

---

೫. ಅಥವಾ ಶುಭಗ್ರಹಸಹಿತವಾಗಿ ತಾರಾಬಲವು ಅನುಕೂಲವಾಗಿರುವ ಭಾನುವಾರದ ದಿನ ಬ್ರಾಹ್ಮಣರಿಗೆ ಪಾಯಸದ ಭೋಜನವನ್ನು ಮಾಡಿಸಿ ಅವರಿಂದ ಅನುಗ್ರಹವನ್ನು ಪಡೆಯಬೇಕು.

೬. ಅವರಿಗೆ ಬಿಳಿಯ ಪಂಚೆಗಳನ್ನೂ ತನ್ನ ಶಕ್ತಿಗೆ ತಕ್ಕಂತೆ ದಕ್ಷಿಣೆಯನ್ನೂ ಕೊಟ್ಟು, ತಾನು ಶುಭವಸ್ತ್ರವನ್ನುಟ್ಟು, ಬಿಳಿಯ ಹೂವನ್ನೂ, ಗಂಧವನ್ನೂ ಸಮರ್ಪಿಸಿ ಭಕ್ತಿಯಿಂದ ಗಾಯತ್ರಿಯನ್ನು ಪೂಜಿಸಬೇಕು.

೭. "ಓ ದೇವೀ, ಬ್ರಹ್ಮದೇವನು ನಿನ್ನನ್ನು ಬಿಟ್ಟು ತನ್ನ ಲೋಕದಲ್ಲಿರಲಾರನು. ಹಾಗೆಯೇ ನೀನೂ ನಿನ್ನ ಭಕ್ತನಾದ ನನ್ನನ್ನು ಕೈ ಬಿಡದೆ ವರವನ್ನು ಕರುಣಿಸು.

೮. ವೇದಗಳು, ಎಲ್ಲ ಬಗೆಯ ಶಾಸ್ತ್ರಗಳು ಮತ್ತು ಗೀತನೃತ್ಯಾದಿಕಲೆಗಳು ನಿನ್ನನುಳಿದು ಜೀವಿಸಲಾರವು. ಓ ದೇವಿ, ಹೀಗೆಯೇ ನನ್ನ ಮನೋರಥ ಸಿದ್ಧಿಗಳು ನನ್ನನ್ನು ಬಿಡದಿರಲಿ.

೯. ಎಲೌ ಸರಸ್ವತೀ, ಲಕ್ಷ್ಮಿ, ಮೇಧೆ, ಧರೆ, ಪುಷ್ಟಿ, ಗೌರಿ, ತುಷ್ಟಿ, ಪ್ರಭೆ, ಮತಿ ಈ ಎಂಟೂ ನಿನ್ನ ಶರೀರಗಳು. ಇವುಗಳ ಮೂಲಕ ನನ್ನನ್ನು ಸಲಹು."

**ಏವಂ ಸಂಪೂಜ್ಯ ಗಾಯತ್ರೀಂ ವೀಣಾಕ್ಷಮಣಿಧಾರಿಣೀಂ ।**
**ಶುಕ್ಲಪುಷ್ಪಾಕ್ಷತೈರ್ಭಕ್ತ್ಯಾ ಸಕಮಂಡಲುಪುಸ್ತಕಾಂ ।**
**ಮೌನವ್ರತೇನ ಭುಂಜೀತ ಸಾಯಂ ಪ್ರಾತಸ್ತು ಧರ್ಮವಿತ್ ॥೧೦॥**

**ಪಂಚಮ್ಯಾಂ ಪ್ರತಿಪಕ್ಷಂ ಚ ಪೂಜಯೇದ್ಬ್ರಹ್ಮವಾಸಿನೀಂ ।**
**ತಥೈವ ತಂಡುಲಪ್ರಸ್ಥಂ ಘೃತಪಾತ್ರೇಣ ಸಂಯುತಂ ।**
**ಕ್ಷೀರಂ ದದ್ಯಾದ್ಧಿರಣ್ಯಂ ಚ ಗಾಯತ್ರೀ ಪ್ರೀಯತಾಮಿತಿ ॥೧೧॥**

**ಸಂಧ್ಯಾಯಾಂ ಚ ತಥಾ ಮೌನಮೇತತ್ಕುರ್ವನ್ ಸಮಾಚರೇತ್ ।**
**ನಾಂತರಾ ಭೋಜನಂ ಕುರ್ಯಾದ್ಯಾವನ್ಮಾಸಾಸ್ತ್ರಯೋದಶ ॥೧೨॥**

**ಸಮಾಪ್ತೇ ತು ವ್ರತೇ ಕುರ್ಯಾದ್ಭೋಜನಂ ಶುಕ್ಲತಂಡುಲೈಃ ।**
**ಪೂರ್ವಂ ಸವಸ್ತ್ರಯುಗ್ಮಂ ಚ ದದ್ಯಾದ್ವಿಪ್ರಾಯ ಭೋಜನಂ ॥೧೩॥**

---

೧೦. ವೀಣೆ, ಜಪಸರ ಕಮಂಡಲು, ಪುಸ್ತಕ ಈ ನಾಲ್ಕನ್ನೂ ಧರಿಸಿರುವ ಗಾಯತ್ರಿಯನ್ನು ಬಳಿಕ ಬಿಳಿಯ ಹೂಗಳಿಂದಲೂ, ಅಕ್ಷತೆಗಳಿಂದಲೂ ಭಕ್ತಿಯೊಡನೆ ಪೂಜಿಸಬೇಕು. ಧರ್ಮಜ್ಞನಾದ ವ್ರತಾಚಾರಿಯು ಹಗಲೂ ರಾತ್ರಿಯೂ ಮೌನ ದಿಂದ ಭೋಜನಮಾಡಬೇಕು.

೧೧. ಪ್ರತಿಯೊಂದು ಪಕ್ಷದ ಪಂಚಮಿಯಲ್ಲೂ, ವೇದಗಳ ಅಧಿಷ್ಠಾತ್ರಿ ಯಾದ ಸರಸ್ವತಿಯನ್ನು ಪೂಜಿಸಬೇಕು. ಎರಡು ಬಳ್ಳ ಅಕ್ಕಿ, ತುಪ್ಪದ ಪಾತ್ರೆ, ಹಾಲು, ಹಿರಣ್ಯ ಇವೆಲ್ಲವನ್ನೂ ದಾನಮಾಡಿ "ಗಾಯತ್ರಿಯು ಪ್ರೀತಳಾಗಲಿ" ಎಂದು ಅನುಸಂಧಾನಮಾಡಬೇಕು.

೧೨. ಈ ವ್ರತವನ್ನು ನಡೆಸುವಾತನು ಸಂಧ್ಯಾಕಾಲದಲ್ಲಿ ಮೌನವನ್ನವಲಂಬಿ ಸಬೇಕು. ಹದಿಮೂರು ತಿಂಗಳ ಕಾಲ ಹಗಲು ಮತ್ತು ರಾತ್ರಿಯೂಟಗಳ ಹೊರತು ಮಧ್ಯಕಾಲದಲ್ಲಿ ಮತ್ತೆ ಭೋಜನಮಾಡಬಾರದು.

೧೩. ವ್ರತವು ಸಮಾಪ್ತವಾದಾಗ ಬಿಳಿಯಕ್ಕಿಯ ಅನ್ನವನ್ನು ಭುಂಜಿಸಬೇಕು. ಅದಕ್ಕೆ ಮೊದಲು ಬ್ರಾಹ್ಮಣನಿಗೆ ವಸ್ತ್ರಯುಗ್ಮವನ್ನಿತ್ತು ಭೋಜನ ಮಾಡಿಸಬೇಕು.

**ದೇವ್ಯಾ ವಿತಾನಂ ಘಂಟಾಂ ಚ ಸಿತನೇತ್ರೇ ಪಯಸ್ವಿನೀಂ ।**
**ಚಂದನಂ ವಸ್ತ್ರಯುಗ್ಮಂ ಚ ದದ್ಯಾಚ್ಚ ಶಿಖರಂ ಪುನಃ ॥೧೪॥**

**ತಥೋಪದೇಷ್ಟಾರಮಪಿ ಭಕ್ತ್ಯಾ ಸಂಪೂಜಯೇದ್ಗುರುಂ ।**
**ವಿತ್ತಶಾಠ್ಯೇನ ರಹಿತೋ ವಸ್ತ್ರಮಾಲ್ಯಾನುಲೇಪನೈಃ ॥೧೫॥**

**ಅನೇನ ವಿಧಿನಾ ಯಸ್ತು ಕುರ್ಯಾತ್ಸಾರಸ್ವತಂ ವ್ರತಂ ।**
**ವಿದ್ಯಾವಾನರ್ಥಸಂಯುಕ್ತೋ ರಕ್ತಕಂಠಶ್ಚ ಜಾಯತೇ ॥೧೬॥**

**ಸರಸ್ವತ್ಯಾಃ ಪ್ರಸಾದೇನ ಬ್ರಹ್ಮಲೋಕೇ ಮಹೀಯತೇ ।**
**ನಾರೀ ವಾ ಕುರುತೇ ಯಾ ತು ಸಾಪಿ ತತ್ಫಲಗಾಮಿನೀ ।**
**ಬ್ರಹ್ಮಲೋಕೇ ವಸೇದ್ರಾಜನ್ ಯಾವತ್ಕಲ್ಪಾಯುತತ್ರಯಂ ॥೧೭॥**

**ಸಾರಸ್ವತಂ ವ್ರತಂ ಯಸ್ತು ಶೃಣುಯಾದಪಿ ಯಃ ಪಠೇತ್**
**ವಿದ್ಯಾಧರಪುರೇ ಸೋಽಪಿ ವಸೇತ್ಕಲ್ಪಾಯುತತ್ರಯಂ ॥೧೮॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸಾರಸ್ವತವ್ರತಂ ನಾಮ ಷಟ್ಷಷ್ಟಿತಮೋಽಧ್ಯಾಯಃ**

---

೧೪. ದೇವಿಯ ಮೇಲ್ಗಟ್ಟಿನ ಬಟ್ಟೆ, ಘಂಟೆ, ಶುಭ್ರವಸ್ತ್ರಗಳು, ಹಸು, ಚಂದನ, ಒಂದು ಜೊತೆ ವಸ್ತ್ರ, ಮಂಟಪದ ಕಲಶ ಇವುಗಳನ್ನೂ ದಾನಮಾಡಬೇಕು.

೧೫. ವ್ರತವನ್ನುಪದೇಶಿಸಿದ ಗುರುವನ್ನೂ ಸಹ ಭಕ್ತಿಯಿಂದ ಸತ್ಕರಿಸಬೇಕು. ಆತನಿಗೆ ಗಂಧಪುಷ್ಪವಸ್ತ್ರಾದಿಗಳನ್ನು ಕೊಡಬೇಕು. ಜಿಪುಣತನ ಮಾಡಬಾರದು.

೧೬. ಈ ಕ್ರಮದಿಂದ ಸಾರಸ್ವತವ್ರತವನ್ನು ನಡೆಸುವಾತನು ವಿದ್ಯಾವಂತನೂ ಧನಿಕನೂ ಆಗುವನು. ಆತನ ವಾಣಿಯೂ ಮಧುರವಾಗುವುದು.

೧೭. ಸರಸ್ವತಿಯ ಅನುಗ್ರಹದಿಂದ ಬ್ರಹ್ಮಲೋಕದಲ್ಲಿ ಅವನು ಪೂಜ್ಯನಾಗುವನು. ಇದನ್ನು ಸ್ತ್ರೀಯು ಆಚರಿಸಿದರೂ ಈ ಫಲವನ್ನೇ ಪಡೆಯುವಳು. ಓ ರಾಜಾ, ಮೂವತ್ತು ಸಾವಿರ ಕಲ್ಪಗಳ ಕಾಲ ಆಕೆಯು ಬ್ರಹ್ಮಲೋಕದಲ್ಲಿ ನೆಲೆಸುವಳು.

೧೮. ಈ ಸಾರಸ್ವತವ್ರತವನ್ನು ಯಾವನು ಕೇಳುವನೋ, ಅಥವಾ ಓದುವನೋ ಅವನೂ ಸಹ ಮೂವತ್ತು ಸಾವಿರ ಕಲ್ಪಗಳ ಕಾಲ ವಿದ್ಯಾಧರ ನಗರದಲ್ಲಿ ವಾಸಿಸುವನು.

# ಅಧ್ಯಾಯ ೬೬

## ಅಧ್ಯಾಯದ ಸಾರಾಂಶ

ಸಾರಸ್ವತವ್ರತವನ್ನು ಈ ಅಧ್ಯಾಯದಲ್ಲಿ ವಿವರಿಸಿದೆ.

ಶುಭಗ್ರಹನಕ್ಷತ್ರಗಳಿಂದ ಕೂಡಿದ ಭಾನುವಾರ ಪ್ರಾತಃಕಾಲದಲ್ಲಿ ಪರಿಶುದ್ಧನಾಗಿ ಬ್ರಾಹ್ಮಣರನ್ನು ಸತ್ಕರಿಸಿ ಈ ವ್ರತವನ್ನು ಆರಂಭಿಸಬೇಕು. ಪ್ರತಿಯೊಂದು ಪಕ್ಷದ ಪಂಚಮಿಯಲ್ಲಿಯೂ ವೇದಾಭಿಮಾನಿ ದೇವತೆಯಾದ ಗಾಯತ್ರಿಯನ್ನು ಪೂಜಿಸುತ್ತ, ಹದಿಮೂರು ತಿಂಗಳ ಕಾಲ ಭೋಜನನಿಯಮದಿಂದ ಕೂಡಿ ವ್ರತವನ್ನು ಸಾಂಗವಾಗಿ ನಡೆಸಬೇಕು. ಬಳಿಕ ಶಕ್ತ್ಯನುಸಾರವಾಗಿ ಬ್ರಾಹ್ಮಣರಿಗೆ ದಾನದಕ್ಷಿಣೆಗಳನ್ನು ಕೊಡಬೇಕು. ಸರಸ್ವತೀದೇವಿಯ ಅನುಗ್ರಹದಿಂದ ವಿದ್ಯಾಧನಸಂಪತ್ತುಗಳು ಲಭಿಸುವುವು. ಸದ್ಗತಿಯು ಕೈಗೂಡುವುದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಸಾರಸ್ವತವ್ರತವೆಂಬ ಅರವತ್ತಾರನೆಯ
ಅಧ್ಯಾಯವು ಮುಗಿದುದು.



# ಅಥ ಸಪ್ತಷಷ್ಟಿತಮೋಽಧ್ಯಾಯಃ

|| ಮನುರುವಾಚ ||

ಚಂದ್ರಾದಿತ್ಯೋಪರಾಗೇ ತು ಯತ್ಸ್ನಾನಮಭಿಧೀಯತೇ |
ತದಹಂ ಶ್ರೋತುಮಿಚ್ಛಾಮಿ ದ್ರವ್ಯಮಂತ್ರವಿಧಾನತಃ || ೧ ||

|| ಮತ್ಸ್ಯ ಉವಾಚ ||

ಯಸ್ಯ ರಾಶಿಂ ಸಮಾಸಾದ್ಯ ಭವೇದ್ಗ್ರಹಣಸಂಭವಃ |
ತಸ್ಯ ಸ್ನಾನಂ ಪ್ರವಕ್ಷ್ಯಾಮಿ ಮಂತ್ರೌಷಧವಿಧಾನತಃ || ೨ ||

ಚಂದ್ರೋಪರಾಗಂ ಸಂಪ್ರಾಪ್ಯ ಕೃತ್ವಾ ಬ್ರಾಹ್ಮಣವಾಚನಂ |
ಸಂಪೂಜ್ಯ ಚತುರೋ ವಿಪ್ರಾಞ್ಛುಕ್ಲಮಾಲ್ಯಾನುಲೇಪನೈಃ || ೩ ||

ಪೂರ್ವಮೇವೋಪರಾಗಸ್ಯ ಸಮಾಸಾದ್ಯೌಷಧಾದಿಕಂ |
ಸ್ಥಾಪಯೇಚ್ಚತುರಃ ಕುಂಭಾನವ್ರಣಾನ್ಸಾಗರಾನಿತಿ || ೪ ||

---

೧. ಮನುಚಕ್ರವರ್ತಿ ಹೇಳಿದನು.—ಚಂದ್ರಸೂರ್ಯರ ಗ್ರಹಣಕಾಲದಲ್ಲಿ ಮಾಡಬೇಕಾದ ಸ್ನಾನವಿಧಿಯು ಹೇಗೆ? ಅದರಲ್ಲಿ ವಿನಿಯೋಗಿಸಬೇಕಾದ ದ್ರವ್ಯವ ಮತ್ತು ಮಂತ್ರಗಳ ವಿಧಾನವೇನು? ಇವೆಲ್ಲವನ್ನೂ ಕೇಳಲಿಚ್ಛಿಸುತ್ತೇನೆ.

೨. ಮತ್ಸ್ಯರೂಪನಾದ ಭಗವಂತನು ಹೇಳಿದನು—ಯಾವನ ಜನ್ಮರಾಶಿಯಲ್ಲಿ ಸೂರ್ಯಚಂದ್ರರ ಗ್ರಹಣವೊದಗುವುದೋ ಅವನು ಮಂತ್ರೌಷಧ ವಿಧಾನಗಳಿಂದ ಸ್ನಾನವನ್ನು ಮಾಡಬೇಕು. ಅದರ ಕ್ರಮವನ್ನು ಹೇಳುತ್ತೇನೆ ಕೇಳು.

೩. ಚಂದ್ರಗ್ರಹಣ ಬಂದಾಗ ನಾಲ್ವರು ಬ್ರಾಹ್ಮಣರನ್ನು ಶುಕ್ಲವರ್ಣದ ಗಂಧಪುಷ್ಪಗಳಿಂದ ಅರ್ಚಿಸಿ ಅವರ ಅನುಗ್ರಹವನ್ನು ಪಡೆಯಬೇಕು.

೪. ಗ್ರಹಣಕಾಲಕ್ಕೆ ಮುಂಚಿತವಾಗಿಯೇ ಮೂಲಿಕೆ ಮೊದಲಾದ ಸಾಮಗ್ರಿಗಳನ್ನು ಸಿದ್ಧಪಡಿಸಿಕೊಂಡಿರಬೇಕು. ಅಚ್ಛಿದ್ರಗಳಾದ ನಾಲ್ಕು ಕುಂಭಗಳನ್ನು ಚತುಸ್ಸಾಗರಗಳೆಂಬ ಭಾವನೆಯಿಂದ ಸ್ಥಾಪನಮಾಡಬೇಕು.

**ಗಜಾಶ್ವರಥ್ಯಾವಲ್ಮೀಕಸಂಗಮಾದ್ಧ್ರದಗೋಕುಲಾತ್ ।**
**ರಾಜದ್ವಾರಪ್ರದೇಶಾಚ್ಚ ಮೃದಮಾನೀಯ ಚಾಕ್ಷಿಪೇತ್ ॥ ೫ ॥**

**ಪಂಚಗವ್ಯಂ ಚ ಕುಂಭೇಷು ಶುದ್ಧಮುಕ್ತಾಫಲಾನಿ ಚ ।**
**ರೋಚನಾಂ ಪದ್ಮಶಂಖೌ ಚ ಪಂಚರತ್ನಸಮನ್ವಿತಂ ॥ ೬ ॥**

**ಸ್ಫಟಿಕಂ ಚಂದನಂ ಶ್ವೇತಂ ತೀರ್ಥವಾರಿ ಸಸರ್ಷಪಂ ।**
**ರಾಜದಂತಂ ಸಕುಮುದಂ ತಥೈವೋಶೀರಗುಗ್ಗುಲಂ ।**
**ಏತತ್ಸರ್ವಂ ವಿನಿಕ್ಷಿಪ್ಯ ಕುಂಭೇಷ್ವಾವಾಹಯೇತ್ಸುರಾನ್ ॥ ೭ ॥**

**ಸರ್ವೇ ಸಮುದ್ರಾಃ ಸರಿತಸ್ತೀರ್ಥಾನಿ ಜಲದಾ ನದಾಃ ।**
**ಆಯಾಂತು ಯಜಮಾನಸ್ಯ ದುರಿತಕ್ಷಯಕಾರಕಾಃ ॥ ೮ ॥**

**ಯೋಽಸೌ ವಜ್ರಧರೋ ದೇವ ಆದಿತ್ಯಾನಾಂ ಪ್ರಭುರ್ಮತಃ ।**
**ಸಹಸ್ರನಯನಶ್ಚೇಂದ್ರೋ ಗ್ರಹಪೀಡಾಂ ವ್ಯಪೋಹತು ॥ ೯ ॥**

---

೫. ಆನೆ ಕುದುರೆಗಳು ಸಂಚರಿಸುವ ರಸ್ತೆ, ಹುತ್ತ, ನದೀಸಂಗಮ, ಮಡು, ದನದ ಕೊಟ್ಟಿಗೆ, ರಾಜದ್ವಾರ ಈ ಸ್ಥಳಗಳಿಂದ ಮಣ್ಣನ್ನು ತಂದು ಆ ಕುಂಭಗಳಲ್ಲಿ ಹಾಕಬೇಕು.

೬-೭. ಪಂಚಗವ್ಯ, ಒಳ್ಳೆಯ ಮುತ್ತುಗಳು, ಗೋರೋಚನ, ಪದ್ಮ, ಶಂಖ, ಪಂಚರತ್ನಗಳು, ಸ್ಫಟಿಕ, ಬಿಳಿಯಗಂಧ, ಪುಣ್ಯತೀರ್ಥೋದಕ, ಸಾಸವೆ, ಆನೆಯ ದಂತ, ನೈದಿಲೆ, ಲಾಮಂಚ, ಗುಗ್ಗುಲ ಇವೆಲ್ಲವನ್ನೂ ಅವುಗಳಲ್ಲಿಟ್ಟು ದೇವತೆಗಳನ್ನು ಆವಾಹನಮಾಡಬೇಕು.

೮. ಯಜಮಾನನ ಪಾಪಗಳನ್ನು ಕಳೆಯಬಲ್ಲ ಸಮುದ್ರಗಳು, ನದಿಗಳು, ಪುಣ್ಯತೀರ್ಥಗಳು, ಮೋಡಗಳು, ಹೊಳೆಗಳು ಇವೆಲ್ಲವೂ ಬಂದು ಈ ಕುಂಭಗಳಲ್ಲಿ ನೆಲಸಲಿ.

೯. ವಜ್ರಾಯುಧಧಾರಿಯೂ, ದೇವತೆಗಳ ಅಧಿಪತಿಯೂ, ಸಹಸ್ರನೇತ್ರನೂ, ಪೂಜ್ಯನೂ ಆದ ಇಂದ್ರನು ಗ್ರಹಣದಿಂದ ಬಂದ ಪೀಡೆಯನ್ನು ಪರಿಹರಿಸಲಿ.

ಮುಖಂ ಯಸ್ಸರ್ವದೇವಾನಾಂ ಸಪ್ತಾರ್ಚಿರಮಿತದ್ಯುತಿಃ ।
ಚಂದ್ರೋಪರಾಗಸಂಭೂತಾಮಗ್ನಿಃ ಪೀಡಾಂ ವ್ಯಪೋಹತು ||೧೦||

ಯಃ ಕರ್ಮಸಾಕ್ಷೀ ಭೂತಾನಾಂ ಧರ್ಮೋ ಮಹಿಷವಾಹನಃ ।
ಯಮಶ್ಚಂದ್ರೋಪರಾಗೋತ್ಥಾಂ ಮಮ ಪೀಡಾಂ ವ್ಯಪೋಹತು ||೧೧||

ರಕ್ಷೋಗಣಾಧಿಪಃ ಸಾಕ್ಷಾತ್ಪ್ರಲಯಾನಲಸನ್ನಿಭಃ ।
ಖಡ್ಗವ್ಯಗ್ರೋಽತಿಭೀಮಶ್ಚ ರಕ್ಷಃ ಪೀಡಾಂ ವ್ಯಪೋಹತು ||೧೨||

ನಾಗಪಾಶಧರೋ ದೇವಃ ಸಾಕ್ಷಾನ್ಮಕರವಾಹನಃ ।
ಸ ಜಲಾಧಿಪತಿಶ್ಚಂದ್ರಗ್ರಹಪೀಡಾಂ ವ್ಯಪೋಹತು ||೧೩||

ಪ್ರಾಣರೂಪೇಣ ಯೋ ಲೋಕಾನ್ಯಾತಿ ಕೃಷ್ಣಮೃಗಪ್ರಿಯಃ ।
ವಾಯುಶ್ಚಂದ್ರೋಪರಾಗೋತ್ಥಾಂ ಪೀಡಾಮತ್ರ ವ್ಯಪೋಹತು ||೧೪||

---

೧೦. ಸರ್ವದೇವತೆಗಳ ಮುಖವೆನಿಸಿ, ಏಳು ಬಗೆಯ ಕಾಂತಿಗಳಿಂದ ಕೂಡಿ, ಅಮಿತ ತೇಜೋವಂತನಾದ ಅಗ್ನಿಯು ಗ್ರಹಣದಿಂದೊದಗಿದ ಅನಿಷ್ಟವನ್ನು ಕಳೆಯಲಿ.

೧೧. ಪ್ರಾಣಿಗಳ ಕರ್ಮಗಳಿಗೆ ಸಾಕ್ಷಿಯೆನಿಸಿ ಮಹಿಷವಾಹನನಾದ ಯಮ ಧರ್ಮರಾಜನು ಚಂದ್ರಗ್ರಹಣದಿಂದ ನನಗುಂಟಾದ ಕೇಡನ್ನು ಪರಿಹರಿಸಲಿ.

೧೨. ರಾಕ್ಷಸಗಣಾಧಿಪತಿಯೂ, ಪ್ರಲಯಾಗ್ನಿ ಸದೃಶನೂ, ಖಡ್ಗಾಸಕ್ತನೂ, ಖಡ್ಗಧಾರಿಯೂ, ಅತಿಭಯಂಕರನೂ, ಆದ ನೈಋತಿಯು ಅನಿಷ್ಟವನ್ನು ದೂರ ಮಾಡಲಿ.

೧೩. ನಾಗಪಾಶವನ್ನು ಧರಿಸಿ, ಮಕರವಾಹನನಾಗಿ, ಜಲಾಧಿಪತಿಯೆನಿಸಿದ ವರುಣದೇವನು ಚಂದ್ರೋಪರಾಗದ ಉಪದ್ರವವನ್ನು ಪರಿಹಾರಮಾಡಲಿ.

೧೪. ವಾಹನವಾದ ಕೃಷ್ಣಮೃಗಕ್ಕೆ ಪ್ರಿಯನೆನಿಸಿ, ಪ್ರಾಣಿಗಳ ಪ್ರಾಣರೂಪದಿಂದ ಲೋಕಗಳಲ್ಲಿ ಸಂಚರಿಸುತ್ತಿರುವ ವಾಯುವು ಈ ದಿನದಲ್ಲಿ ಚಂದ್ರಗ್ರಹಣದಿಂದುಂಟಾದ ಪೀಡೆಯನ್ನು ಕಳೆಯಲಿ.

ಯೋಽಸೌ ಧನಪತಿರ್ದೇವಃ ಖಡ್ಗಶೂಲಗದಾಧರಃ ।
ಚಂದ್ರೋಪರಾಗಕಲುಷಂ ಧನದೋ ಮೇ ವ್ಯಪೋಹತು ॥೧೫॥

ಯೋಽಸಾವಿಂದುಧರೋ ದೇವಃ ಪಿನಾಕೀ ವೃಷವಾಹನಃ ।
ಚಂದ್ರೋಪರಾಗಜಾಂ ಪೀಡಾಂ ವಿನಾಶಯತು ಶಂಕರಃ ॥೧೬॥

ತ್ರೈಲೋಕ್ಯೇ ಯಾನಿ ಭೂತಾನಿ ಸ್ಥಾವರಾಣಿ ಚರಾಣಿ ಚ ।
ಬ್ರಹ್ಮವಿಷ್ಣ್ವರ್ಕಯುಕ್ತಾನಿ ತಾನಿ ಪಾಪಂ ದಹಂತು ವೈ ॥೧೭॥

ಏವಮಾಮಂತ್ರ್ಯ ತೈಃ ಕುಂಭೈರಭಿಷಿಕ್ತೋ ಗುಣಾನ್ವಿತೈಃ ।
ಋಗ್ಯಜುಸ್ಸಾಮಮಂತ್ರೈಶ್ಚ ಶುಕ್ಲಮಾಲ್ಯಾನುಲೇಪನೈಃ ।
ಪೂಜಯೇದ್ವಸ್ತ್ರಗೋದಾನೈರ್ಬ್ರಾಹ್ಮಣಾನಿಷ್ಟದೇವತಾಃ ॥೧೮॥

ಏತಾನೇವ ತತೋ ಮಂತ್ರಾನ್ವಿಲಿಖ್ಯ ಕರಕಾನ್ವಿತಾನ್ ।
ವಸ್ತ್ರಖಂಡೇಽಥವಾ ಪದ್ಮೇ ಪಂಚರತ್ನಸಮನ್ವಿತಾನ್ ॥೧೯॥

೧೫. ಧನಾಧಿಪತಿಯೂ, ಖಡ್ಗಶೂಲ ಗದಾಧರನೂ ಆದ ಪೂಜ್ಯನಾದ ಕುಬೇರನು ಚಂದ್ರೋಪರಾಗದಿಂದ ನನಗೆ ಉಂಟಾದ ದೋಷವನ್ನು ತೊಲಗಿಸಲಿ.

೧೬. ಚಂದ್ರನ ಕಲೆಯನ್ನು ಶಿರಸ್ಸಿನಲ್ಲಿ ಮುಡಿದು, ಪಿನಾಕವೆಂಬ ಬಿಲ್ಲನ್ನು ಕೈಯಲ್ಲಿ ಹಿಡಿದು, ವೃಷಭವಾಹನನಾದ ಮಹಾದೇವನು ಚಂದ್ರಗ್ರಹಣದ ಅನಿಷ್ಟವನ್ನು ದೂರಮಾಡಲಿ.

೧೭. ಬ್ರಹ್ಮ ವಿಷ್ಣು ಸೂರ್ಯ ವಿಶಿಷ್ಟಗಳಾದ ಮೂರು ಲೋಕದ ಚರಾಚರ ಪ್ರಾಣಿಗಳೆಲ್ಲವೂ ನನ್ನ ಪಾಪವನ್ನು ಧ್ವಂಸಮಾಡಲಿ.

೧೮. ಹೀಗೆ ದೇವತೆಗಳೆಲ್ಲರನ್ನೂ ಆವಾಹನಮಾಡಿ, ಪ್ರಖ್ಯಾತಗಳಾದ ಋಗ್ಯಜುಸ್ಸಾಮಗಳೆಂಬ ಮಂತ್ರಗಳನ್ನು ಜಪಿಸುತ್ತ ಕುಂಭೋದಕದಿಂದ ಸ್ನಾನ ಮಾಡಬೇಕು. ಶುಕ್ಲವಸ್ತ್ರಗಳಿಂದಲೂ, ಗಂಧಪುಷ್ಪಗಳಿಂದಲೂ, ವಸ್ತ್ರಗೋದಾನಗಳಿಂದಲೂ, ಬ್ರಾಹ್ಮಣರನ್ನೂ ಇಷ್ಟದೇವತೆಗಳನ್ನೂ ಅರ್ಚಿಸಬೇಕು.

೧೯-೨೦. ಬ್ರಾಹ್ಮಣರು ಬಟ್ಟೆಯ ತುಂಡಿನಲ್ಲಿ ಇಲ್ಲವೇ ತಾವರೆಯ ದಳದ ಮೇಲೆ ಈ ಮಂತ್ರಗಳನ್ನು ಬರೆದು, ಪಂಚರತ್ನಸಹಿತವಾದ ಗಿಂಡಿಯೊಡನೆ ಯಜ

**ಯಜಮಾನಸ್ಯ ಶಿರಸಿ ನಿದಧ್ಯುಸ್ತೇ ದ್ವಿಜೋತ್ತಮಾಃ।**
**ತತೋಽತಿವಾಹಯೇದ್ವೇಲಾಮುಪರಾಗಾನುಗಾಮಿನೀಂ ॥೨೦॥**

**ಪ್ರಾಙ್ಮುಖಃ ಪೂಜಯಿತ್ವಾ ತು ನಮಸ್ಯನ್ನಿಷ್ಟದೇವತಾಂ।**
**ಚಂದ್ರಗ್ರಹೇ ವಿನಿರ್ವೃತ್ತೇ ಕೃತಗೋದಾನಮಂಗಲಃ।**
**ಕೃತಸ್ನಾನಾಯ ತಂ ಪಟ್ಟಂ ಬ್ರಾಹ್ಮಣಾಯ ನಿವೇದಯೇತ್ ॥೨೧॥**

**ಅನೇನ ವಿಧಿನಾ ಯಸ್ತು ಗ್ರಹಸ್ನಾನಂ ಸಮಾಚರೇತ್।**
**ನ ತಸ್ಯ ಗ್ರಹಪೀಡಾ ಸ್ಯಾನ್ನ ಚ ಬಂಧುಜನಕ್ಷಯಃ ॥೨೨॥**

**ಪರಮಾಂ ಸಿದ್ಧಿಮಾಪ್ನೋತಿ ಪುನರಾವೃತ್ತಿದುರ್ಲಭಾಂ।**
**ಸೂರ್ಯಗ್ರಹೇ ಸೂರ್ಯನಾಮ ಸದಾ ಮಂತ್ರೇಷು ಕೀರ್ತಯೇತ್ ॥೨೩॥**

**ಅಧಿಕಾಃ ಪದ್ಮರಾಗಾಃ ಸ್ಯುಃ ಕಪಿಲಾಂ ಚ ಸುಶೋಭನಾಂ।**
**ಪ್ರಯಚ್ಛೇದ್ವಿತ್ತಸಂಪನ್ನಶ್ಚಂದ್ರಸೂರ್ಯೋಪರಾಗಯೋಃ ॥೨೪॥**

---

ಮಾನನ ಶಿರಸ್ಸಿನಲ್ಲಿಡುವರು. ಗ್ರಹಣಕಾಲವು ಮುಗಿಯುವವರೆಗೂ ಅವನು ಆ ಪಟ್ಟಿಯನ್ನು ಹಾಗೆಯೇ ಧರಿಸಿರಬೇಕು.

೨೧. ಚಂದ್ರಗ್ರಹಣವು ಮುಗಿದ ಮೇಲೆ ಪೂರ್ವಾಭಿಮುಖನಾಗಿ, ಇಷ್ಟ ದೇವತೆಗೆ ನಮಸ್ಕಾರವನ್ನೂ ಪೂಜೆಯನ್ನೂ ಮಾಡಿ, ಗೋದಾನಮಂಗಲವನ್ನು ನೆರವೇರಿಸಿ, ಬಳಿಕ ಸ್ನಾನದಿಂದ ಪರಿಶುದ್ಧನಾಗಿರುವ ಬ್ರಾಹ್ಮಣನಿಗೆ ಮಂತ್ರಗಳನ್ನು ಬರೆದಿರುವ ಆ ಬಟ್ಟೆಯ ಪಟ್ಟಿಯನ್ನು ದಾನವಾಗಿ ಕೊಡಬೇಕು.

೨೨. ಈ ನಿಯಮವನ್ನನುಸರಿಸಿ ಗ್ರಹಣಸ್ನಾನಮಾಡುವಾತನಿಗೆ ಗ್ರಹಣ ಪೀಡೆ ಬಾರದು ; ಬಂಧುಜನರ ಹಾನಿ ಒದಗದು.

೨೩. ಅವನು ಪುನರಾವೃತ್ತಿರಹಿತವಾದ ಉತ್ತಮಗತಿಯನ್ನೈದುವನು. ಸೂರ್ಯಗ್ರಹಣದಲ್ಲಿ ಸೂರ್ಯನಾಮಾಂಕಿತವಾದ ಮಂತ್ರಗಳನ್ನು ಕೀರ್ತಿಸಬೇಕು.

೨೪. ಈ ವಿಧಿಯನ್ನು ಆಚರಿಸಿದವನಿಗೆ ಪದ್ಮರಾಗಮಣಿಗಳು ಅಧಿಕವಾಗಿ ಲಭಿಸುವುವು. ಧನವಂತನು ಚಂದ್ರಸೂರ್ಯಗ್ರಹಣಗಳಲ್ಲಿ ಸಲಕ್ಷಣವಾದ ಹಸುವನ್ನೂ ದಾನಮಾಡಬೇಕು.

**ಯ ಇದಂ ಶೃಣುಯಾನ್ನಿತ್ಯಂ ಶ್ರಾವಯೇದ್ವಾಪಿ ಮಾನವಃ ।**
**ಸರ್ವಪಾಪವಿನಿರ್ಮುಕ್ತಃ ಶಕ್ರಲೋಕೇ ಮಹೀಯತೇ ॥೨೫॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಚಂದ್ರಾದಿತ್ಯೋಪರಾಗಸ್ನಾನ ವಿಧಿರ್ನಾಮ ಸಪ್ತಷಷ್ಟಿತಮೋಽಧ್ಯಾಯಃ**

---

೨೫. ಈ ಗ್ರಹಣಸ್ನಾನ ವಿಧಾನವನ್ನು ನಿತ್ಯವೂ ಕೇಳುವ ಮತ್ತು ಹೇಳುವ ಮನುಷ್ಯನು ಸರ್ವಪಾಪಗಳನ್ನೂ ಕಳೆದುಕೊಂಡು ಇಂದ್ರಲೋಕದಲ್ಲಿ ಮಾನ್ಯ ನೆನಿಸುವನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಗ್ರಹಣ ಸ್ನಾನವಿಧಿಯನ್ನು ತಿಳಿಸಿದೆ.

ಯಾರ ಜನ್ಮರಾಶಿಯಲ್ಲಿ ಚಂದ್ರಸೂರ್ಯರ ಗ್ರಹಣವಾಗುವುದೋ ಅವರು ಈ ವಿಧಿಯನ್ನಾಚರಿಸಬೇಕು. ನಾಲ್ಕು ಕುಂಭಗಳನ್ನು ಸ್ಥಾಪನಮಾಡಿ, ಅವುಗಳಲ್ಲಿ ಮುತ್ತು, ಗೋರೋಚನ ಮೊದಲಾದ ದ್ರವ್ಯಗಳನ್ನೂ, ಪುಣ್ಯತೀರ್ಥೋದಕವನ್ನೂ ಹಾಕಿ, ಚತುಸ್ಸಾಗರಗಳನ್ನೂ, ದೇವತೆಗಳನ್ನೂ, ದಿಕ್ಪಾಲಕರನ್ನೂ ಆವಾಹನಮಾಡ ಬೇಕು. ಬಳಿಕ ಬ್ರಾಹ್ಮಣರು ಕುಂಭ ತೀರ್ಥವನ್ನು ಯಜಮಾನನ ಶಿರಸ್ಸಿನಲ್ಲಿ ಪ್ರೋಕ್ಷಿಸುವರು. ಅಷ್ಟದಿಕ್ಪಾಲಕರ ಪ್ರಾರ್ಥನಾ ಮಂತ್ರಗಳನ್ನು ವಸ್ತ್ರಪಟ್ಟಿಕೆಯಲ್ಲಿ ಬರೆದು ಗ್ರಹಣದ ವೇಳೆಯಲ್ಲಿ ತನ್ನ ತಲೆಗೆ ಕಟ್ಟಿಕೊಂಡಿದ್ದು, ಗ್ರಹಣವು ಬಿಟ್ಟ ತರುವಾಯ ಯಜಮಾನನು ಅದನ್ನು ದಾನಮಾಡಬೇಕು. ಶಕ್ತಿಯಿದ್ದರೆ ಗೋದಾನ ವನ್ನೂ ಮಾಡಬಹುದು. ಈ ವಿಧಿಯನ್ನನುಸರಿಸಿ ಗ್ರಹಣ ಸ್ನಾನಮಾಡಿದರೆ ಸಕಲ ಪೀಡೆಗಳೂ, ಪಾಪಗಳೂ ಹೋಗಿ ಇಂದ್ರಲೋಕದಲ್ಲಿ ವಾಸವು ಲಭಿಸುವುದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಚಂದ್ರಸೂರ್ಯಗ್ರಹಣಸ್ನಾನವಿಧಿಯೆಂಬ ಅರವತ್ತೇಳನೆಯ ಅಧ್ಯಾಯವು ಮುಗಿದುದು.

# ಅಥಾಷ್ಟಷಷ್ಟಿತಮೋಽಧ್ಯಾಯಃ

॥ ನಾರದ ಉವಾಚ ॥

ಕಿಮುದ್ವೇಗಾದ್ಭುತೇ ಕೃತ್ಯಮಲಕ್ಷ್ಮ್ಯಾಃ ಕೇನ ಹನ್ಯತೇ ।
ಮೃತವತ್ಸಾಭಿಷೇಕಾದಿಕಾರ್ಯೇಷು ಚ ಕಿಮಿಷ್ಯತೇ ॥ ೧ ॥

ಪುರಾ ಕೃತಾನಿ ಪಾಪಾನಿ ಫಲಂತ್ಯಸ್ಮಿಂಸ್ತಪೋಧನ ।
ರೋಗದೌರ್ಗತ್ಯರೂಪೇಣ ತಥೈವೇಷ್ಟವಧೇನ ಚ ॥ ೨ ॥

ತದ್ವಿಘಾತಾಯ ವಕ್ಷ್ಯಾಮಿ ಸದಾ ಕಲ್ಯಾಣಕಾರಕಂ ।
ಸಪ್ತಮೀಸ್ನಪನಂ ನಾಮ ಜನಪೀಡಾವಿನಾಶನಂ ॥ ೩ ॥

ಬಾಲಾನಾಂ ಮರಣಂ ಯತ್ರ ಕ್ಷೀರಪಾಣಾಂ ಪ್ರದೃಶ್ಯತೇ ।
ತದ್ವದ್ವೃದ್ಧಾತುರಾಣಾಂ ಚ ಯೌವನೇ ಚಾಪಿ ವರ್ತತಾಂ ॥ ೪ ॥

---

೧. ನಾರದಮುನಿ ಹೇಳಿದನು.—ಗಾಬರಿ, ಆಶ್ಚರ್ಯ ಮುಂತಾದುವುಗಳಿಂದ ಮನೋವಿಕಾರವಾದಾಗ ಮಾಡಬೇಕಾದುದೇನು? ಅಮಂಗಲವು ಪರಿಹಾರವಾಗುವುದೆಂತು? ಯಾವ ಸ್ತ್ರೀಯ ಮಕ್ಕಳು ಶೈಶವದಲ್ಲೇ ಸಾಯುವುವೋ ಅವಳಿಗೂ, ಅವಳ ಮಗುವಿಗೂ ಮಾಡಬೇಕಾದ ಪ್ರೋಕ್ಷಣಾದಿಕಾರ್ಯಗಳು ಯಾವುವು?

೨. ಭಗವಂತನು ಹೇಳಿದನು.—ಎಲೈ ತಪಸ್ವಿಯಾದ ನಾರದನೇ, ಹಿಂದಿನ ಜನ್ಮದಲ್ಲಿ ಮಾಡಿದ ಪಾಪಗಳು ರೋಗ, ಬಡತನ, ಬಂಧುಜನರ ಮರಣ ಮೊದಲಾದ ರೂಪಗಳಿಂದ ಈ ಜನ್ಮದಲ್ಲಿ ಫಲಕೊಡುತ್ತವೆ.

೩. ಆ ದೋಷಪರಿಹಾರಕ್ಕಾಗಿ ಸಪ್ತಮೀಸ್ನಪನವೆಂಬ ವ್ರತವನ್ನು ಹೇಳುವೆನು. ಅದು ಶುಭವನ್ನು ಉಂಟುಮಾಡುವುದು; ಪೀಡೆಯನ್ನು ಕಳೆಯುವುದು.

೪-೫. ಹಾಲುಕುಡಿಯುವ ಮಕ್ಕಳ, ಮುದುಕರ, ರೋಗಿಗಳ ಮತ್ತು ಯುವಕರ ಮೃತ್ಯುಭೀತಿಯ ಪರಿಹಾರಕ್ಕಾಗಿ ಶಾಂತಿಯನ್ನು ನಡೆಸಿ, ಮಕ್ಕಳನ್ನು

**ಶಾಂತಯೇ ತತ್ರ ವಕ್ಷ್ಯಾಮಿ ನ್ಮೃತವತ್ಸಾಭಿಷೇಚನಂ |**
**ಏತದೇವಾದ್ಭುತೋದ್ವೇಗಚಿತ್ತಭ್ರಮವಿನಾಶನಂ || ೫ ||**

**ಭವಿಷ್ಯತಿ ಚ ವಾರಾಹೋ ಯತ್ರ ಕಲ್ಪಸ್ತಪೋಧನ |**
**ವೈವಸ್ವತಶ್ಚ ತತ್ರಾಪಿ ಯದಾ ತು ಮನುರುತ್ತಮಃ || ೬ ||**

**ಭವಿಷ್ಯತಿ ಚ ತತ್ರೈವ ಪಂಚವಿಂಶತಿಮಂ ಯದಾ |**
**ಕೃತಂ ನಾಮ ಯುಗಂ ತತ್ರ ಹೈಹಯಾನ್ವಯವರ್ಧನಃ |**
**ಭವಿತಾ ನೃಪತಿರ್ವೀರಃ ಕೃತವೀರ್ಯಃ ಪ್ರತಾಪವಾನ್ || ೭ ||**

**ಸ ಸಪ್ತದ್ವೀಪಮಖಿಲಂ ಪಾಲಯಿಷ್ಯತಿ ಭೂತಲಂ |**
**ಯಾವದ್ವರ್ಷಸಹಸ್ರಾಣಿ ಸಪ್ತಸಪ್ತತಿನಾರದ || ೮ ||**

**ಜಾತಮಾತ್ರಂ ಚ ತಸ್ಯಾಪಿ ಯಾವತ್ಪುತ್ರಶತಂ ತಥಾ |**
**ಚ್ಯವನಸ್ಯ ತು ಶಾಪೇನ ವಿನಾಶಮುಪಯಾಸ್ಯತಿ || ೯ ||**

---

ಕಳೆದುಕೊಳ್ಳುವ ತಾಯಿಗೆ ಮಂತ್ರೋದಕದಿಂದ ಅಭಿಷೇಚನಮಾಡಬೇಕು. ಆ ಕ್ರಮವನ್ನು ಹೇಳುವೆನು. ಆಶ್ಚರ್ಯ, ಆವೇಶ, ಚಿತ್ತಭ್ರಮ ಮುಂತಾದವುಗಳಿಂದ ಆದ ಮನೋವಿಕಾರವನ್ನು ಪರಿಹರಿಸಲು ಇದೇ ವಿಧಿಯನ್ನನುಸರಿಸಬೇಕು.

೬-೭. ಎಲೈ ನಾರದಮಹರ್ಷಿಯೇ, ಮುಂದೆ ಬರಲಿರುವ ವಾರಾಹಕಲ್ಪದಲ್ಲಿ ಶ್ರೇಷ್ಠವಾದ ವೈವಸ್ವತ ಮನ್ವಂತರವು ಪ್ರಾಪ್ತವಾಗುವುದು. ಅದರಲ್ಲಿ ಇಪ್ಪತ್ತೈದನೆಯ ಕೃತಯುಗವು ಬಂದಾಗ ಹೈಹಯವಂಶೋತ್ಪನ್ನನೂ, ಪ್ರತಾಪಶಾಲಿಯೂ, ವೀರನೂ ಆದ ಕೃತವೀರ್ಯನೆಂಬ ರಾಜನು ಜನಿಸುವನು.

೮. ಅವನು ಜಂಬೂಪ್ಲಕ್ಷಾದಿ ಸಪ್ತದ್ವೀಪಸಹಿತವಾದ ಭೂಮಂಡಲವನ್ನೆಲ್ಲ ಆಳುವನು. ಓ ನಾರದಾ, ಎಪ್ಪತ್ತೇಳು ಸಾವಿರ ವರ್ಷಗಳ ವರೆಗೆ ಆತನ ಆಧಿಪತ್ಯವು ನಡೆಯುವುದು.

೯. ಅವನಿಗೆ ಒಂದು ನೂರು ಜನ ಪುತ್ರರು ಜನಿಸುವರು. ಚ್ಯವನ ಮಹರ್ಷಿಯ ಶಾಪದಿಂದ ಅವರೆಲ್ಲರೂ ಹುಟ್ಟಿದ ಕೂಡಲೇ ಮೃತರಾಗುವರು.

ಸಹಸ್ರಬಾಹುಶ್ಚ ಯದಾ ಭವಿತಾ ತಸ್ಯ ವೈ ಸುತಃ ।
ಕುರಂಗನಯನಃ ಶ್ರೀಮಾನ್ಸಂವೃತೋ ನೃಪಲಕ್ಷಣೈಃ ॥೧೦॥

ಕೃತವೀರ್ಯಸ್ತದಾರಾಧ್ಯ ಸಹಸ್ರಾಂಶುಂ ದಿವಾಕರಂ ।
ಉಪವಾಸೈರ್ವ್ರತೈರ್ದಿವ್ಯೈರ್ವೇದಸೂಕ್ತೈಶ್ಚ ನಾರದ ।
ಪುತ್ರಸ್ಯ ಜೀವನಾಯಾಲಮೇತತ್ಸ್ನಾನಮವಾಪ್ಸ್ಯತಿ ॥೧೧॥

ಕೃತವೀರ್ಯೇಣ ವೈ ಪೃಷ್ಟ ಇದಂ ವಕ್ಷ್ಯತಿ ಭಾಸ್ಕರಃ ।
ಅಶೇಷದುಷ್ಟಶಮನಂ ಸದಾ ಕಲ್ಮಷನಾಶನಂ ॥೧೨॥

॥ ಸೂರ್ಯ ಉವಾಚ ॥

ಅಲಂ ಕ್ಲೇಶೇನ ಮಹತಾ ಪುತ್ರಸ್ತವ ನರಾಧಿಪ ।
ಭವಿಷ್ಯತಿ ಚಿರಂಜೀವೀ ಕಿಂತು ಕಲ್ಮಷನಾಶನಂ ।
ಸಪ್ತಮೀಸ್ನಪನಂ ವಕ್ಷ್ಯೇ ಸರ್ವಲೋಕಹಿತಾಯ ವೈ ॥೧೩॥

೧೦ ಜಿಂಕೆಯ ಕಣ್ಣುಗಳಂತೆ ಕಣ್ಣುಗಳು, ಸಾವಿರ ತೋಳುಗಳು, ರಾಜ ಲಕ್ಷಣಗಳು ಇವೆಲ್ಲವೂ ಕೂಡಿದ ಸಂಪದ್ಯುಕ್ತನಾದ ಮಗನೊಬ್ಬನು ಆತನಿಗೆ ಹುಟ್ಟುವನು.

೧೧. ಆಗ ಕೃತವೀರ್ಯನು ಸಹಸ್ರಕಿರಣನಾದ ಸೂರ್ಯದೇವನನ್ನು ಉಪವಾಸಗಳಿಂದಲೂ, ಶ್ರೇಷ್ಠವಾದ ವ್ರತಗಳಿಂದಲೂ, ವೇದಸೂಕ್ತಗಳಿಂದಲೂ ಆರಾಧಿಸುವನು. ಎಲೈ ನಾರದಮಹರ್ಷಿಯೇ, ಮಗನ ಜೀವವನ್ನುಳಿಸುವ ಈ ಸಪ್ತಮೀ ಸ್ನಾನವೆಂಬ ವ್ರತದ ವಿಧಿಯನ್ನು ಅವನಿಂದ ಅರಿಯುವನು.

೧೨. ಕೃತವೀರ್ಯನು ಪ್ರಶ್ನೆಮಾಡಲು ಸಕಲ ದೋಷಗಳನ್ನೂ ತೊಲಗಿಸಿ, ಯಾವಾಗಲೂ ಪಾಪನಾಶಕವೆನಿಸಿರುವ ಈ ವ್ರತವನ್ನು ಸೂರ್ಯನು ಹೇಳುವನು

೧೩. ಸೂರ್ಯನು ಹೇಳಿದನು.—ಎಲೈ ರಾಜನೇ, ಬಹಳ ಶ್ರಮಪಟ್ಟಿದ್ದೀಯೆ; ಇನ್ನು ಸಾಕು. ನಿನ್ನ ಮಗನು ಚಿರಂಜೀವಿಯಾಗುವನು. ಆದರೆ ನೀನು ಸಪ್ತಮೀ ಸ್ನಪನವೆಂಬ ವ್ರತವನ್ನು ಆಚರಿಸಬೇಕು. ಸರ್ವಲೋಕದ ಹಿತಕ್ಕಾಗಿ ಅದನ್ನು ಹೇಳುವೆನು ಕೇಳು.

ಜಾತಸ್ಯ ಮೃತವತ್ಸಾಯಾಃ ಸಪ್ತಮೇ ಮಾಸಿ ನಾರದ ।
ಅಥವಾ ಶುಕ್ಲಸಪ್ತಮ್ಯಾಮೇತತ್ಸರ್ವಂ ಪ್ರಶಸ್ಯತೇ ॥೧೪॥

ಗ್ರಹತಾರಾಬಲಂ ಲಬ್ಧ್ವಾ ಕೃತ್ವಾ ಬ್ರಾಹ್ಮಣವಾಚನಂ ।
ಬಾಲಸ್ಯ ಜನ್ಮನಕ್ಷತ್ರಂ ವರ್ಜಯೇತ್ತಾಂ ತಿಥಿಂ ಬುಧಃ ।
ತದ್ವದ್ವೃದ್ಧಾತುರಾಣಾಂ ಚ ಕೃತ್ಯಂ ಸ್ಯಾದಿತರೇಷು ಚ ॥೧೫॥

ಗೋಮಯೇನಾನುಲಿಪ್ತಾಯಾಂ ಭೂಮಾವೇಕಾಗ್ನಿವತ್ತದಾ ।
ತಂಡುಲೈ ರಕ್ತಶಾಲೀಯೈಶ್ಚರುಂ ಗೋಕ್ಷೀರಸಂಯುತಂ ।
ನಿರ್ವಪೇತ್ಸೂರ್ಯರುದ್ರಾಭ್ಯಾಂ ತನ್ಮಂತ್ರಾಭ್ಯಾಂ ವಿಧಾನತಃ ॥೧೬॥

ಕೀರ್ತಯೇತ್ಸೂರ್ಯದೇವತ್ಯಂ ಸಪ್ತರ್ಚಂ ಚ ಘೃತಾಹುತೀಃ ।
ಜುಹುಯಾದ್ರುದ್ರಸೂಕ್ತೇನ ತದ್ವದ್ರುದ್ರಾಯ ನಾರದ ॥೧೭॥

---

೧೪. ಓ ನಾರದಾ, ಹಿಂದಿನ ಮಕ್ಕಳನ್ನೆಲ್ಲ ಕಳೆದುಕೊಂಡ ತಾಯಿಗೆ ಪುನಃ ಮಗುವು ಹುಟ್ಟಿದಾಗ ಅದರ ಏಳನೆಯ ತಿಂಗಳು ಅಥವಾ ಶುಕ್ಲಪಕ್ಷದ ಸಪ್ತಮೀ ತಿಥಿಯು ಈ ವ್ರತಕ್ಕೆ ಪ್ರಶಸ್ತವಾದುದು.

೧೫. ಶುಭಗ್ರಹಸಹಿತವಾಗಿ ತಾರಾಬಲವು ಸರಿಯಾಗಿರುವ ದಿನ ಬ್ರಾಹ್ಮಣಾನುಗ್ರಹವನ್ನು ಪಡೆದು, ಶಾಂತಿಕರ್ಮವನ್ನು ಪ್ರಾರಂಭಿಸಬೇಕು. ಶಾಸ್ತ್ರಜ್ಞನಾದವನು ಯಾರಿಗಾಗಿ ಶಾಂತಿಯು ನಡೆಯುತ್ತದೆಯೋ ಆ ಬಾಲಕನ, ವೃದ್ಧನ, ಅಥವಾ ರೋಗಿಯ ಜನ್ಮನಕ್ಷತ್ರವನ್ನೂ ತಿಥಿಯನ್ನೂ ಈ ಕಾರ್ಯದಲ್ಲಿ ಬಿಡಬೇಕು. ಹೀಗೆಯೇ ಇತರರ ವಿಷಯದಲ್ಲೂ ಈ ನಿಯಮವು ಗಮನಾರ್ಹವಾದುದು.

೧೬. ಗೋಮಯದಿಂದ ಸಾರಿಸಿದ ನೆಲದಲ್ಲಿ ಏಕಾಗ್ನಿಯನ್ನು ಸ್ಥಾಪಿಸಿ, ಕೆಂಪುಬಣ್ಣದ ಅಕ್ಕಿಯ ಚರುವನ್ನು ಸೂರ್ಯನಿಗೂ, ರುದ್ರನಿಗೂ ಆಯಾಮಂತ್ರಗಳಿಂದ ಶಾಸ್ತ್ರನಿಯಮಾನುಸಾರವಾಗಿ ಹೋಮಮಾಡಬೇಕು.

೧೭. ಸೂರ್ಯದೇವತಾಕವಾದ ಏಳು ಋಕ್ಕುಗಳನ್ನು ಉಚ್ಚರಿಸಿ ಘೃತಾಹುತಿಗಳನ್ನು ಸೂರ್ಯನಿಗೆ ಕೊಡಬೇಕು. ಎಲೈ ನಾರದಾ, ಹಾಗೆಯೇ ರುದ್ರಸೂಕ್ತದಿಂದ ರುದ್ರನಿಗೂ ಆಹುತಿಗಳನ್ನು ಅರ್ಪಿಸಬೇಕು.

ಹೋತವ್ಯಾಃ ಸಮಿಧಶ್ಚಾತ್ರ ತಥೈವಾರ್ಕಪಲಾಶಯೋಃ ।
ಯವಕೃಷ್ಣತಿಲೈರ್ಹೋಮಃ ಕರ್ತವ್ಯೋಽಷ್ಟಶತಂ ಪುನಃ ॥೧೮॥

ವ್ಯಾಹೃತೀಭಿಸ್ತಥಾಜ್ಯೇನ ತಥೈವಾಷ್ಟಶತಂ ಪುನಃ ।
ಹುತ್ವಾ ಸ್ನಾನಂ ಚ ಕರ್ತವ್ಯಂ ಮಂಗಲಜ್ಞೇನ ಧೀಮತಾ ॥೧೯॥

ವಿಪ್ರೇಣ ವೇದವಿದುಷಾ ವಿಧಿವದ್ದರ್ಭಪಾಣಿನಾ
ಸ್ಥಾಪಯಿತ್ವಾ ತು ಚತುರಃ ಕುಂಭಾನ್ ಕೋಣೇಷು ಶೋಭನಾನ್ ॥೨೦॥

ಪಂಚಮಂ ಚ ಪುನರ್ಮಧ್ಯೇ ದಧ್ಯಕ್ಷತ ವಿಭೂಷಿತಂ ।
ಸ್ಥಾಪಯೇದವ್ರಣಂ ಕುಂಭಂ ಸಪ್ತರ್ಚೇನಾಭಿಮಂತ್ರಿತಂ
ಸೌರೇಣ ತೀರ್ಥತೋಯೇನ ಪೂರ್ಣಂ ರತ್ನಸಮನ್ವಿತಂ । ॥೨೧॥

ಸರ್ವಾನ್ ಸರ್ವೌಷಧೈರ್ಯುಕ್ತಾನ್ ಪಂಚಗವ್ಯಸಮನ್ವಿತಾನ್ ।
ಪಂಚರತ್ನಫಲೈರ್ಯುಕ್ತಾನ್ ವಾಸೋಭಿಃ ಪರಿವೇಷ್ಟಯೇತ್ ॥೨೨॥

---

೧೮. ಎಕ್ಕದ ಮತ್ತು ಮುತ್ತುಗದ ಸಮಿತ್ತುಗಳಿಂದಲೂ, ಕರಿಯೆಳ್ಳಿನಿಂದಲೂ ನೂರೆಂಟು ಸಾರಿ ಹೋಮಮಾಡಬೇಕು.

೧೯. ಹೀಗೆಯೇ ವ್ಯಾಹೃತಿ ಮಂತ್ರಗಳಿಂದ ನೂರೆಂಟು ಆಜ್ಯಾಹುತಿಗಳನ್ನು ಮಾಡಿ, ಮಂಗಲಜ್ಞನೂ ಶಾಸ್ತ್ರಜ್ಞನೂ ಆದ ಯಜಮಾನನು ಸ್ನಾನವನ್ನು ಮಾಡಬೇಕು.

೨೦. ವೇದಜ್ಞಾನಿಯೂ, ದರ್ಭಹಸ್ತನೂ ಆದ ಬ್ರಾಹ್ಮಣನಿಂದ ನಾಲ್ಕು ಮೂಲೆಗಳಲ್ಲೂ ಮಂಗಳಕರವಾದ ನಾಲ್ಕು ಕುಂಭಗಳನ್ನು ಸ್ಥಾಪನಮಾಡಿಸಬೇಕು.

೨೧. ಛಿದ್ರಾದಿರಹಿತವಾದ ಐದನೆಯ ಕುಂಭವನ್ನು ಮಧ್ಯದಲ್ಲಿ ಸ್ಥಾಪಿಸಿ ಮೊಸರು ಅಕ್ಷತೆಗಳಿಂದ ಅಲಂಕರಿಸಬೇಕು. ಸೂರ್ಯದೇವತಾಕವಾದ ಏಳು ಮಂತ್ರಗಳಿಂದ ಅಭಿಮಂತ್ರಿಸಿ, ಸೌರಮಂತ್ರದಿಂದ ತೀರ್ಥೋದಕವನ್ನು ತುಂಬಿ ಅದರಲ್ಲಿ ರತ್ನವನ್ನು ಹಾಕಬೇಕು.

೨೨. ಎಲ್ಲ ಕುಂಭಗಳಿಗೂ ಮೂಲಿಕೆಗಳನ್ನೂ, ಪಂಚಗವ್ಯವನ್ನೂ, ಪಂಚರತ್ನಗಳನ್ನೂ ಹಾಕಿ, ವಸ್ತ್ರಗಳನ್ನು ಧರಿಸಬೇಕು. ಒಂದೊಂದಕ್ಕೂ ಫಲಗಳನ್ನು ಇಡಬೇಕು.

ಗಜಾಶ್ವರಥ್ಯಾವಲ್ಮೀಕಾತ್ಸಂಗಮಾದ್ಧ್ರದಗೋಕುಲಾತ್ ।
ಸಂಶುದ್ಧಾಂ ಮೃದಮಾನೀಯ ಸರ್ವೇಷ್ವೇವ ವಿನಿಕ್ಷಿಪೇತ್ ||೨೩||

ಚತುರ್ಷ್ವಪಿ ಚ ಕುಂಭೇಷು ರತ್ನಗರ್ಭೇಷು ಮಧ್ಯಮಂ ।
ಗೃಹೀತ್ವಾ ಬ್ರಾಹ್ಮಣಸ್ತತ್ರ ಸೌರಮಂತ್ರಾನುದೀರಯೇತ್ ||೨೪||

ನಾರೀಭಿಸ್ಸಪ್ತಸಂಖ್ಯಾಭಿರವ್ಯಂಗಾಂಗೀಭಿರತ್ರ ಚ ।
ಪೂಜಿತಾಭಿರ್ಯಥಾಶಕ್ತ್ಯಾ ಮಾಲ್ಯವಸ್ತ್ರವಿಭೂಷಣೈಃ ।
ಸವಿಪ್ರಾಭಿಶ್ಚ ಕರ್ತವ್ಯಂ ಮೃತವತ್ಸಾಭಿಷೇಚನಂ ||೨೫||

ದೀರ್ಘಾಯುರಸ್ತು ಬಾಲೋಽಯಂ ಜೀವತ್ಪುತ್ರಾ ಚ ಭಾಮಿನೀ ।
ಆದಿತ್ಯಶ್ಚಂದ್ರಮಾಃ ಸಾರ್ಧಂ ಗ್ರಹನಕ್ಷತ್ರಮಂಡಲೈಃ ||೨೬||

ಸಶಕ್ರಾ ಲೋಕಪಾಲಾ ವೈ ಬ್ರಹ್ಮವಿಷ್ಣುಮಹೇಶ್ವರಾಃ ।
ತೇ ತೇ ಚಾನ್ಯೇ ಚ ದೇವೌಘಾಃ ಸದಾ ಪಾಂತು ಕುಮಾರಕಂ ||೨೭||

---

೨೩. ಆನೆಕುದುರೆಗಳು ತಿರುಗುವ ರಾಜಮಾರ್ಗ, ಹುತ್ತ, ನದೀಸಂಗಮ, ಮಡು, ಗೋಕುಲ ಈ ಪ್ರದೇಶಗಳಿಂದ ಶುದ್ಧವಾದ ಮಣ್ಣನ್ನು ತಂದು ಅವುಗಳಲ್ಲೆಲ್ಲ ಹಾಕಬೇಕು.

೨೪. ನಾಲ್ಕು ಮೂಲೆಯ ಕುಂಭಗಳಲ್ಲೂ ರತ್ನವನ್ನಿರಿಸಿದ ಬಳಿಕ, ಬ್ರಾಹ್ಮಣನು ಮಧ್ಯದಲ್ಲಿರುವ ಕುಂಭವನ್ನೆತ್ತಿಕೊಂಡು ಸೌರಮಂತ್ರಗಳನ್ನು ಜಪಿಸಬೇಕು.

೨೫. ಶರೀರದ ಅಂಗಗಳಾವುವೂ ಊನವಿಲ್ಲದ ಏಳು ಜನ ಸ್ತ್ರೀಯರೂ ಬ್ರಾಹ್ಮಣರೂ ಗಂಧಪುಷ್ಪವಸ್ತ್ರಾದಿಗಳಿಂದ ಸತ್ಕೃತರಾಗಿ, ಮಕ್ಕಳನ್ನು ಕಳೆದುಕೊಂಡ ಆ ತಾಯಿಗೆ ಕುಂಭೋದಕದಿಂದ ಪ್ರೋಕ್ಷಿಸುವರು.

೨೬–೨೭. "ಈ ಬಾಲಕನು ದೀರ್ಘಾಯುವಾಗಲಿ. ಈ ನಾರಿಯೂ ಸಹ ಬದುಕಿರುವ ಮಕ್ಕಳ ತಾಯಿಯೆನಿಸಲಿ. ಸೂರ್ಯನೂ, ಚಂದ್ರನೂ, ಗ್ರಹಗಳೂ, ನಕ್ಷತ್ರಗಳೂ, ಇಂದ್ರಾದಿ ದಿಕ್ಪಾಲಕರೂ, ಬ್ರಹ್ಮವಿಷ್ಣುಮಹೇಶ್ವರರೂ, ಇನ್ನೂ ಉಳಿದ ಆಯಾ ದೇವಗಣಗಳೂ ಯಾವಾಗಲೂ ಈ ಕುಮಾರನನ್ನು ರಕ್ಷಿಸಲಿ.

ಮಿತ್ರಃ ಶನಿರ್ವಾ ಹುತಭುಗ್ಯೇ ಚ ಬಾಲಗ್ರಹಾಃ ಕ್ವಚಿತ್ ।
ಪೀಡಾಂ ಕುರ್ವಂತು ಬಾಲಸ್ಯ ಮಾ ಮಾತುರ್ಜನಕಸ್ಯ ವೈ ॥೨೮॥

ತತಃ ಶುಕ್ಲಾಂಬರಧರಾ ಕುಮಾರಪತಿಸಂಯುತಾ ।
ಸಪ್ತಕಂ ಪೂಜಯೇದ್ಭಕ್ತ್ಯಾ ಸ್ತ್ರೀಣಾಮಥ ಗುರುಂ ಪುನಃ ॥೨೯॥

ಕಾಂಚನೀಂ ಚ ತತಃ ಕುರ್ಯಾತ್ತಾಮ್ರಪಾತ್ರೋಪರಿ ಸ್ಥಿತಾಂ ।
ಪ್ರತಿಮಾಂ ಧರ್ಮರಾಜಸ್ಯ ಗುರವೇ ವಿನಿವೇದಯೇತ್ ॥೩೦॥

ವಸ್ತ್ರಕಾಂಚನರತ್ನೌಘೈರ್ಭಕ್ಷ್ಯೈಃ ಸಘೃತಪಾಯಸೈಃ ।
ಪೂಜಯೇದ್ಬ್ರಾಹ್ಮಣಾಂಸ್ತದ್ವದ್ವಿತ್ತಶಾಠ್ಯವಿವರ್ಜಿತಃ ॥೩೧॥

ಭುಕ್ತ್ವಾ ಚ ಗುರುಣಾ ಚೇಯಮುಚ್ಚಾರ್ಯಾ ಮಂತ್ರಸಂತತಿಃ ।
ದೀರ್ಘಾಯುರಸ್ತು ಬಾಲೋಽಯಂ ಯಾವದ್ವರ್ಷಶತಂ ಸುಖೀ ॥೩೨॥

---

೨೮. ಸೂರ್ಯ, ಶನಿ, ಅಗ್ನಿ ಅಥವಾ ಇನ್ನು ಬೇರೆ ಬಾಲಗ್ರಹಗಳು ಈ ಕುಮಾರನಿಗೂ ಇವನ ತಾಯಿತಂದೆಗಳಿಗೂ ಯಾವ ಪೀಡೆಯನ್ನೂ ಮಾಡದಿರಲಿ.''

೨೯. ಬಳಿಕ ತಾಯಿಯು ಶುಕ್ಲಾಂಬರವನ್ನುಟ್ಟು, ಮಗುವಿನೊಡನೆಯೂ ಪತಿಯೊಡನೆಯೂ ಕೂಡಿ, ಏಳು ಜನ ಮುತ್ತೈದೆಯರನ್ನೂ ಗುರುವನ್ನೂ ಪೂಜಿಸಬೇಕು.

೩೦. ಬಳಿಕ ಧರ್ಮರಾಜನ ಚಿನ್ನದ ಪ್ರತಿಮೆಯನ್ನು ತಾಮ್ರದ ಪಾತ್ರೆಯ ಮೇಲಿರಿಸಿ ಗುರುವಿಗೆ ದಾನಮಾಡಬೇಕು.

೩೧. ಬ್ರಾಹ್ಮಣರಿಗೆ ಬಗೆಬಗೆಯ ಭಕ್ಷ್ಯಗಳಿಂದಲೂ ಘೃತಪಾಯಸಗಳಿಂದಲೂ ಕೂಡಿದ ಭೋಜನವನ್ನು ಮಾಡಿಸಿ ಸುವರ್ಣ, ವಸ್ತ್ರ ಮತ್ತು ರತ್ನಗಳನ್ನು ಧಾರಾಳವಾಗಿ ದಾನಮಾಡಬೇಕು.

೩೨. ಭೋಜನಾನಂತರ ಗುರುವು ಈ ಮುಂದಿನ ಮಂತ್ರವಾಕ್ಯಗಳನ್ನು ಹೇಳುವನು. ''ಈ ಹುಡುಗನು ದೀರ್ಘಾಯುವಾಗಲಿ ; ನೂರು ವರ್ಷಗಳ ಕಾಲ ಸುಖವಾಗಿ ಬಾಳಲಿ.

**ಯತ್ಕಿಂಚಿದಸ್ಯ ದುರಿತಂ ತತ್ಕ್ಷಿಪ್ತಂ ಬಡಬಾನಲೇ ।**
**ಬ್ರಹ್ಮಾ ರುದ್ರೋ ವಸುಃ ಸ್ಕಂದೋ ವಿಷ್ಣುಃ ಶಕ್ರೋ ಹುತಾಶನಃ ॥೩೩॥**

**ರಕ್ಷಂತು ಸರ್ವೇ ದುಷ್ಟೇಭ್ಯೋ ವರದಾಃ ಸಂತು ಸರ್ವದಾ ।**
**ಏವಮಾದೀನಿ ವಾಕ್ಯಾನಿ ವದಂತಂ ಪೂಜಯೇದ್ಗುರುಂ ॥೩೪॥**

**ಶಕ್ತಿತಃ ಕಪಿಲಾಂ ದದ್ಯಾತ್ಪ್ರಣಮ್ಯ ಚ ವಿಸರ್ಜಯೇತ್ ।**
**ಚರುಂ ಚ ಪುತ್ರಸಹಿತಾ ಪ್ರಣಮ್ಯ ರವಿಶಂಕರೌ ॥ ॥೩೫॥**

**ಹುತಶೇಷಂ ತದಾಽಶ್ನೀಯಾದಾದಿತ್ಯಾಯ ನಮೋಽಸ್ತ್ವಿತಿ ।**
**ಇದಮೇವಾದ್ಭುತೋದ್ವೇಗದುಸ್ಸ್ವಪ್ನೇಷು ಪ್ರಶಸ್ಯತೇ ॥೩೬॥**

**ಕರ್ತುರ್ಜನ್ಮದಿನರ್ಕ್ಷಂ ಚ ತ್ಯಕ್ತ್ವಾ ಸಂಪೂಜಯೇತ್ಸದಾ ।**
**ಶಾಂತ್ಯರ್ಥಂ ಶುಕ್ಲಸಪ್ತಮ್ಯಾಮೇತತ್ಕುರ್ವನ್ನ ಸೀದತಿ ॥೩೭॥**

**ಸದಾನೇನ ವಿಧಾನೇನ ದೀರ್ಘಾಯುರಭವನ್ನರಃ ।**
**ಸಂವತ್ಸರಾಣಾಮಯುತಂ ಶಶಾಸ ಪೃಥಿವೀಮಿಮಾಂ ॥೩೮॥**

---

೩೩-೩೪. ಇವನ ಪಾಪವೇನಾದರೂ ಇದ್ದರೆ ಅದು ಬಡಬಾಗ್ನಿಯಲ್ಲಿ ಬಿದ್ದು ಬೆಂದುಹೋಗಲಿ. ಬ್ರಹ್ಮ, ರುದ್ರ, ವಸು, ಷಣ್ಮುಖ, ವಿಷ್ಣು, ಇಂದ್ರ ಅಗ್ನಿ ಇವರೆಲ್ಲರೂ ದುಷ್ಟರಿಂದ ಬಾಧೆ ಬರದಂತೆ ಇವನನ್ನು ಸದಾ ಸಂರಕ್ಷಿಸಿ ವರಗಳನ್ನೀಯಲಿ'' ಇತ್ಯಾದಿ ವಾಕ್ಯಗಳನ್ನುಚ್ಚರಿಸುವ ಗುರುವನ್ನು ಸತ್ಕರಿಸಬೇಕು.

೩೫-೩೬. ಶಕ್ತಿಗೆ ತಕ್ಕಂತೆ ಗೋವನ್ನೂ ದಾನಮಾಡಿ ನಮಸ್ಕಾರಪೂರ್ವಕವಾಗಿ ಗುರುವನ್ನು ಬೀಳ್ಕೊಡಬೇಕು. ಸೂರ್ಯನನ್ನೂ ಶಂಕರನನ್ನೂ ನಮಿಸಿ, ಆದಿತ್ಯನಿಗೆ ನಮಸ್ಕಾರವೆಂದು ಹೇಳಿ, ಹೋಮಮಾಡಿ, ಉಳಿದ ಚರುವನ್ನು ಮಗನೊಡನೆ ಭುಂಜಿಸಬೇಕು. ಅತ್ಯಾಶ್ಚರ್ಯ, ಉದ್ವೇಗ, ದುಃಸ್ವಪ್ನ ಇವು ಆದಾಗಲೂ ಇದೇ ಶಾಂತಿ ಕರ್ಮವನ್ನು ನೆರವೇರಿಸುವುದೊಳ್ಳೆಯದು.

೩೭. ಯಜಮಾನನ ಜನ್ಮದಿನವನ್ನೂ ಜನ್ಮನಕ್ಷತ್ರವನ್ನೂ ಬಿಟ್ಟು ಉಳಿದ ದಿವಸಗಳಲ್ಲಿ ಈ ಕರ್ಮವನ್ನು ನಡೆಸಬೇಕು. ಶುಕ್ಲಪಕ್ಷದ ಸಪ್ತಮಿಯ ದಿನ ಶಾಂತಿಗಾಗಿ ಈ ಕರ್ಮವನ್ನು ಮಾಡತಕ್ಕವನಿಗೆಂದಿಗೂ ಹಾನಿಯಿಲ್ಲ.

೩೮. ಅನವರತವೂ ಈ ಶಾಂತಿಕರ್ಮವಿಧಾನದಿಂದ ಕಾರ್ತವೀರ್ಯಾರ್ಜುನನು ದೀರ್ಘಾಯುವಾದನು. ಹತ್ತು ಸಾವಿರ ವರ್ಷಗಳ ಕಾಲ ಈ ಭೂಮಿಯನ್ನು ಆಳಿದನು.

**ಪುಣ್ಯಂ ಪವಿತ್ರಮಾಯುಷ್ಯಂ ಸಪ್ತಮೀಸ್ನಪನಂ ರವಿಃ ।**
**ಕಥಯಿತ್ವಾ ದ್ವಿಜಶ್ರೇಷ್ಠ ತತ್ರೈವಾಂತರಧೀಯತ ॥೩೯॥**

**ಏತತ್ಸರ್ವಂ ಸಮಾಖ್ಯಾತಂ ಸಪ್ತಮೀಸ್ನಾನಮುತ್ತಮಂ ।**
**ಸರ್ವದುಷ್ಟೋಪಶಮನಂ ಬಾಲಾನಾಂ ಪರಮಂ ಹಿತಂ ॥೪೦॥**

**ಆರೋಗ್ಯಂ ಭಾಸ್ಕರಾದಿಚ್ಛೇದ್ಧನಮಿಚ್ಛೇದ್ಧುತಾಶನಾತ್ ।**
**ಈಶ್ವರಾಜ್ಜ್ಞಾನಮನ್ವಿಚ್ಛೇನ್ಮೋಕ್ಷಮಿಚ್ಛೇಜ್ಜನಾರ್ದನಾತ್ ॥೪೧॥**

**ಏತನ್ಮಹಾಪಾತಕನಾಶನಂ ಸ್ಯಾತ್**
**ಪರಂ ಹಿತಂ ಬಾಲವಿವರ್ಧನಂ ಚ ।**
**ಶೃಣೋತಿ ಯಶ್ಚೈನಮನನ್ಯಚೇತಾ**
**ಸ್ತಸ್ಯಾಪಿ ಸಿದ್ಧಿಂ ಮುನಯೋ ವದಂತಿ ॥೪೨॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸಪ್ತಮೀವ್ರತಂ ನಾಮಾಷ್ಟಷಷ್ಟಿತಮೋಽಧ್ಯಾಯಃ**

---

೩೯. ಎಲೈ ದ್ವಿಜೋತ್ತಮನಾದ ನಾರದಮುನಿಯೇ, ಪುಣ್ಯವೂ, ಪವಿತ್ರವೂ ಆಯುರ್ವರ್ಧಕವೂ ಆದ ಈ ಸಪ್ತಮೀಸ್ನಪನವೆಂಬ ಶಾಂತಿ ವಿಧಿಯನ್ನು ಹೇಳಿ, ಸೂರ್ಯದೇವನು ಅಲ್ಲೇ ಅದೃಶ್ಯನಾದನು.

೪೦. ಉತ್ತಮವಾದ ಸಪ್ತಮೀಸ್ನಾನವಿಧಾನವನ್ನು ಈ ಎಲ್ಲ ವಿವರಗಳೊಡನೆ ಹೇಳಿದೆನು. ಇದು ಸಕಲ ದೋಷಗಳನ್ನೂ ಪರಿಹರಿಸುವುದು. ಮಕ್ಕಳಿಗೆ ಅತ್ಯಂತ ಹಿತಕರವಾದದು.

೪೧. ಆರೋಗ್ಯವನ್ನು ಸೂರ್ಯನಿಂದಲೂ, ಧನವನ್ನೂ ಅಗ್ನಿಯಿಂದಲೂ, ಜ್ಞಾನವನ್ನು ಈಶ್ವರನಿಂದಲೂ, ಮೋಕ್ಷವನ್ನು ವಿಷ್ಣುವಿನಿಂದಲೂ ಬಯಸಬೇಕು.

೪೨. ಈ ವ್ರತವು ಮಹಾಪಾತಕನಾಶಕವಾದದು. ಪರಮಹಿತಕರವೂ ಬಾಲಕರ ಅಭಿವೃದ್ಧಿಗೆ ಸಾಧನವೂ ಆದುದು. ಇದನ್ನು ಏಕಾಗ್ರಚಿತ್ತದಿಂದ ಕೇಳುವಾತನಿಗೂ ಸಹ ಸಿದ್ಧಿಯುಂಟೆಂದು ಮುನಿಗಳು ಹೇಳುತ್ತಾರೆ.

ಅಧ್ಯಾಯ ೬೮

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಸಪ್ತಮೀಸ್ನಪನವೆಂಬ ಶಾಂತಿಕರ್ಮ ವಿಧಾನವನ್ನು ವಿವರಿಸಿದೆ.

ಹಾಲುಕುಡಿಯುವ ಮಕ್ಕಳ, ಯುವಕರ ಮತ್ತು ಇತರರ ಆಯುರ್ವೃದ್ಧಿಗಾಗಿ ಈ ಶಾಂತಿಕರ್ಮವನ್ನು ಮಾಡಬೇಕು. ಶುಕ್ಲಪಕ್ಷದ ಸಪ್ತಮಿಯಲ್ಲಿ ನಡೆಸಬೇಕಾದ ವಿಧಾನವಿದು. ಸೂರ್ಯನನ್ನೂ ರುದ್ರನನ್ನೂ ಉದ್ದೇಶಿಸಿ ಚರುಹೋಮ, ಆಜ್ಯಹೋಮ ಸಮಿದ್ಧೋಮ ಮತ್ತು ತಿಲಹೋಮಗಳನ್ನು ಮಾಡಬೇಕು. ಬಳಿಕ ಕುಂಭಗಳನ್ನು ಸ್ಥಾಪಿಸಿ, ಸೂರ್ಯದೇವತಾಕವಾದ ಮಂತ್ರಗಳನ್ನು ಜಪಿಸಿ, ಬ್ರಾಹ್ಮಣರೂ ಸುವಾಸಿನಿಯರೂ ಮಗುವನ್ನೂ ತಾಯಿಯನ್ನೂ ಕುಂಭೋದಕಗಳಿಂದ ಪ್ರೋಕ್ಷಿಸುವರು. ತಾಯಿಯು ದಾನದಕ್ಷಿಣೆಗಳಿಂದ ಬ್ರಾಹ್ಮಣರನ್ನೂ ಸ್ತ್ರೀಯರನ್ನೂ ಸತ್ಕರಿಸಿ, ಹೋಮಶೇಷದ ಚರುವನ್ನು ತಾನೂ ತನ್ನ ಮಗನೂ ಭುಂಜಿಸಬೇಕು. ಈ ಶಾಂತಿಕರ್ಮದಿಂದ ದೀರ್ಘಾಯುಸ್ಸು ಲಭಿಸುವುದು. ಸಕಲ ವಿಧವಾದ ಅನಿಷ್ಟಗಳೂ ತೊಲಗುವುವು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಸಪ್ತಮೀವ್ರತವೆಂಬ ಅರವತ್ತೆಂಟನೆಯ ಅಧ್ಯಾಯವು ಮುಗಿದುದು.

## ಅಥ ಏಕೋನ ಸಪ್ತತಿತಮೋಽಧ್ಯಾಯಃ

॥ ಮತ್ಸ್ಯ ಉವಾಚ ॥

ಪುರಾ ರಥಂತರೇ ಕಲ್ಪೇ ಪರಿಪೃಷ್ಟೋ ಮಹಾತ್ಮನಾ ।
ಮಂದರಸ್ಥೋ ಮಹಾದೇವಃ ಪಿನಾಕೀ ಬ್ರಹ್ಮಣಾ ಸ್ವಯಂ ॥ ೧ ॥

॥ ಬ್ರಹ್ಮೋವಾಚ ॥

ಕಥಮಾರೋಗ್ಯಮೈಶ್ವರ್ಯಮನಂತಮಮರೇಶ್ವರ ।
ಸ್ವಲ್ಪೇನ ತಪಸಾ ದೇವ ಭವೇನ್ಮೋಕ್ಷೋಽಥವಾ ನೃಣಾಂ ॥ ೨ ॥

ಕಿಮಜ್ಞಾತಂ ಮಹಾದೇವ ತ್ವತ್ಪ್ರಸಾದಾದಧೋಕ್ಷಜ ।
ಸ್ವಲ್ಪಕೇನಾಥ ತಪಸಾ ಮಹತ್ಫಲಮಿಹೋಚ್ಯತಾಂ ॥ ೩ ॥

॥ ಮತ್ಸ್ಯ ಉವಾಚ ॥

ಏವಂ ಪೃಷ್ಟಃ ಸ ವಿಶ್ವಾತ್ಮಾ ಬ್ರಹ್ಮಣಾ ಲೋಕಭಾವನಃ ।
ಉಮಾಪತಿರುವಾಚೇದಂ ಮನಸಃ ಪ್ರೀತಿಕಾರಕಂ ॥ ೪ ॥

---

೧. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಹಿಂದೆ ರಥಂತರ ಕಲ್ಪದಲ್ಲಿ ಪಿನಾಕಧನುರ್ಧಾರಿಯಾದ ಮಹಾದೇವನು ಮಂದರ ಪರ್ವತದಲ್ಲಿರಲು, ಮಹಾತ್ಮನಾದ ಸಾಕ್ಷಾಚ್ಚತುರ್ಮುಖನು ಅವನನ್ನು ಪ್ರಶ್ನಿಸಿದನು.

೨. ಬ್ರಹ್ಮನು ಹೇಳಿದನು.—ಎಲೈ ದೇವೇಶ್ವರನೇ, ಸ್ವಲ್ಪ ತಪಸ್ಸಿನಿಂದಲೇ ಅಪರಿಮಿತವಾದ ಆರೋಗ್ಯ, ಐಶ್ವರ್ಯ, ಮೋಕ್ಷ ಇವೆಲ್ಲವೂ ಮನುಷ್ಯರಿಗೆ ದೊರಕುವುದು ಹೇಗೆ?

೩. ಅತೀಂದ್ರಿಯ ಜ್ಞಾನಿಯಾದ ಎಲೈ ಮಹಾದೇವನೇ, ನಿನ್ನ ಅನುಗ್ರಹವೊಂದು ಬಂದರೆ ಯಾವ ವಿಷಯವು ತಾನೆ ಗೊತ್ತಾಗದೆ ಹೋದೀತು? ಸ್ವಲ್ಪ ತಪಸ್ಸಿನಿಂದಲೇ ಅಧಿಕ ಫಲವನ್ನು ಪಡೆವ ಬಗೆ ಹೇಗೆ? ಹೇಳು.

೪. ಮತ್ಸ್ಯರೂಪಿಯಾದ ಭಗವಂತನು ಹೇಳಿದನು.—ಬ್ರಹ್ಮನು ಹೀಗೆ ಪ್ರಶ್ನೆಮಾಡಲು, ಲೋಕಕರ್ತನೂ, ವಿಶ್ವವ್ಯಾಪಕನೂ ಆದ ಪಾರ್ವತೀವಲ್ಲಭನು ಮನಸ್ಸಿಗೆ ಪ್ರೀತಿಯನ್ನು ಕೊಡುವ ಈ ವಿಚಾರವನ್ನು ಅವನಿಗೆ ಹೇಳಿದನು.

॥ ಈಶ್ವರ ಉವಾಚ ॥

ಅಸ್ಮಾದ್ರಥಂತರಾತ್ಕಲ್ಪಾತ್ತ್ರಯೋವಿಂಶಾತ್ಪುನರ್ಯದಾ ।
ವಾರಾಹೋ ಭವಿತಾ ಕಲ್ಪಸ್ತಸ್ಯ ಮನ್ವಂತರೇ ಶುಭೇ ॥ ೫ ॥

ವೈವಸ್ವತಾಖ್ಯೇ ಸಂಜಾತೇ ಸಪ್ತಮೇ ಸಪ್ತಲೋಕಕೃತ್ ।
ದ್ವಾಪರಾಖ್ಯಂ ಯುಗಂ ತದ್ವದಷ್ಟಾವಿಂಶತಿಮಂ ಜಗುಃ ॥ ೬ ॥

ತಸ್ಯಾಂತೇ ಸ ಮಹಾದೇವೋ ವಾಸುದೇವೋ ಜನಾರ್ದನಃ ।
ಭಾರಾವತರಣಾರ್ಥಾಯ ತ್ರಿಧಾ ವಿಷ್ಣುರ್ಭವಿಷ್ಯತಿ ॥ ೭ ॥

ದ್ವೈಪಾಯನಋಷಿಸ್ತದ್ವದ್ರೌಹಿಣೇಯೋಽಥ ಕೇಶವಃ ।
ಕಂಸಾದಿದರ್ಪಮಥನಃ ಕೇಶವಃ ಕ್ಲೇಶನಾಶನಃ ॥ ೮ ॥

ಪುರೀಂ ದ್ವಾರವತೀಂ ನಾಮ ಸಾಂಪ್ರತಂ ಯಾ ಕುಶಸ್ಥಲೀ ।
ದಿವ್ಯಾನುಭಾವಸಂಯುಕ್ತಾಮಧಿವಾಸಾಯ ಶಾರ್ಙ್ಗಿಣಃ ।
ತ್ವಷ್ಟಾ ಮಮಾಜ್ಞಯಾ ತದ್ವತ್ಕರಿಷ್ಯತಿ ಜಗತ್ಪತೇಃ ॥ ೯ ॥

---

೫-೬. ಈಶ್ವರನು ಹೇಳಿದನು.—ಈಗ ನಡೆಯುತ್ತಿರುವ ಇಪ್ಪತ್ತಮೂರನೆಯ ರಥಂತರ ಕಲ್ಪದ ತರುವಾಯ ವಾರಾಹ ಕಲ್ಪವು ಬರುವುದು. ಅದರಲ್ಲಿ ಮಂಗಲಮಯವೂ, ಏಳನೆಯದೂ ಆದ ವೈವಸ್ವತ ಮನ್ವಂತರದ ಇಪ್ಪತ್ತೆಂಟನೆಯ ದ್ವಾಪರಯುಗವು ಸಪ್ತಲೋಕಗಳಿಗೂ ಕ್ಷೇಮಕಾರಿಯೆನಿಸುವುದು.

೭. ಏಕೆಂದರೆ ಆ ಯುಗದ ಕೊನೆಯ ಭಾಗದಲ್ಲಿ ದೇವೋತ್ತಮನೂ, ಸರ್ವವ್ಯಾಪಕನೂ, ಜನ್ಮಾತೀತನೂ ಆದ ಮಹಾವಿಷ್ಣುವು ಭೂಭಾರವನ್ನು ಇಳಿಸುವುದಕ್ಕಾಗಿ ಮೂರು ರೂಪದಿಂದ ಅವತರಿಸುವನು.

೮. ಕೃಷ್ಣದ್ವೈಪಾಯನ ಮುನಿ, ರೋಹಿಣೀದೇವಿಯ ಪುತ್ರನಾದ ಬಲರಾಮ, ಕಂಸ ಚಾಣೂರಾದಿದುಷ್ಟರ ದರ್ಪವನ್ನಡಗಿಸಿ ಲೋಕದ ಕ್ಲೇಶವನ್ನು ಪರಿಹರಿಸಿದ ಕೃಷ್ಣ ಈ ಮೂವರೂ ಆ ಮಹಾಪುರುಷನ ಅವತಾರವೆನಿಸುವರು.

೯. ಜಗತ್ಪತಿಯಾದ ವಾಸುದೇವನ ವಾಸಕ್ಕಾಗಿ ನನ್ನ ಅಪ್ಪಣೆಯಂತೆ ವಿಶ್ವಕರ್ಮನು ಮಹಾವೈಭವದಿಂದ ಕೂಡಿದ ದ್ವಾರಾವತಿಯೆಂಬ ಪ್ರಸಿದ್ಧವಾದ ನಗರವನ್ನು ನಿರ್ಮಿಸುವನು. ಈಗ ನಾವು ಕುಶಸ್ಥಲಿಯೆಂದು ಹೇಳುತ್ತಿರುವ ಪಟ್ಟಣವೇ ಮುಂದೆ ಆ ಮಹಾನಗರವಾಗುವುದು.

ತಸ್ಯಾಂ ಕದಾಚಿದಾಸೀನಃ ಸಭಾಯಾಮಮಿತದ್ಯುತಿಃ ।
ಭಾರ್ಯಾಭಿರ್ವೃಷ್ಣಿಭಿಶ್ಚೈವ ಭೂಭೃದ್ಭಿರ್ಭೂರಿದಕ್ಷಿಣೈಃ ॥೧೦॥
ಕುರುಭಿರ್ದೇವಗಂಧರ್ವೈರಭಿತಃ ಕೈಟಭಾರ್ದನಃ ।
ಪ್ರವೃತ್ತಾಸು ಪುರಾಣೇಷು ಧರ್ಮಸಂಬಂಧಿನೀಷು ಚ ॥೧೧॥
ಕಥಾಂತೇ ಭೀಮಸೇನೇನ ಪರಿಪೃಷ್ಟಃ ಪ್ರತಾಪವಾನ್ ।
ತ್ವಯಾ ಪೃಷ್ಟಸ್ಯ ಧರ್ಮಸ್ಯ ರಹಸ್ಯಸ್ಯಾಸ್ಯ ಭೇದಕೃತ್ ॥೧೨॥
ಭವಿತಾ ಸ ತದಾ ಬ್ರಹ್ಮನ್ ಕರ್ತಾ ಚೈವ ವೃಕೋದರಃ ।
ಪ್ರವರ್ತಕೋಽಸ್ಯ ಧರ್ಮಸ್ಯ ಪಾಂಡುಪುತ್ರೋ ಮಹಾಬಲಃ ॥೧೩॥
ಯಸ್ಯ ತೀಕ್ಷ್ಣೋ ವೃಕೋ ನಾಮ ಜಠರೇ ಹವ್ಯವಾಹನಃ ।
ಮಯಾ ದತ್ತಃ ಸ ಧರ್ಮಾತ್ಮಾ ತೇನ ಚಾಸೌ ವೃಕೋದರಃ ॥೧೪॥
ಮತಿಮಾನ್ಮಾನಶೀಲಶ್ಚ ನಾಗಾಯುತಬಲೋ ಮಹಾನ್ ।
ಭವಿಷ್ಯತ್ಯಜರಃ ಶ್ರೀಮಾನ್ ಕಂದರ್ಪ ಇವ ರೂಪವಾನ್ ॥೧೫॥

---

೧೦-೧೧. ಆ ಪಟ್ಟಣದಲ್ಲಿ ಅತಿ ತೇಜಸ್ವಿಯಾದ ವಾಸುದೇವನು ಸಭೆಯಲ್ಲೊಂದು ದಿನ ಸುಖಾಸೀನನಾಗಿರುವನು. ಅವನ ಮಹಿಷಿಯರೂ, ಯಾದವರೂ ಬಹು ಸಮರ್ಥರಾದ ರಾಜರೂ, ಕೌರವರೂ, ದೇವತೆಗಳೂ, ಗಂಧರ್ವರೂ ಸುತ್ತಲೂ ಕುಳಿತಿರುವರು. ಆಗ ಧರ್ಮಸಂಬಂಧವಾದ ಪುರಾಣ ವೃತ್ತಾಂತಗಳು ನಡೆಯುತ್ತಿರುವುವು.

೧೨-೧೩. ಕಥಾವಸಾನದಲ್ಲಿ ಭೀಮಸೇನನು ಪ್ರತಾಪಶಾಲಿಯಾದ ಶ್ರೀಕೃಷ್ಣನನ್ನು ಪ್ರಶ್ನಿಸುವನು. ಎಲೈ ನಾರದಮಹರ್ಷಿಯೇ, ನೀನು ಕೇಳಿದ ಧರ್ಮದ ಮರ್ಮವನ್ನು ಆಗ ಆ ಪರಮಾತ್ಮನು ಬಿಡಿಸುವನು. ಪಾಂಡು ಪುತ್ರನೂ ಮಹಾಬಲಿಷ್ಠನೂ ಆದ ಭೀಮಸೇನನು ಈ ಮಹಾವ್ರತದ ಪ್ರವರ್ತಕನೆನಿಸುವನು.

೧೪. ನನ್ನ ವರಪ್ರಸಾದದಿಂದ ಆತನ ಜಠರದಲ್ಲಿ ಅತಿತೀಕ್ಷ್ಣವಾದ ವೃಕವೆಂಬ ಅಗ್ನಿಯು ನೆಲೆಸಿರುವುದು. ಆದುದರಿಂದ ಆ ಮಹಾತ್ಮನಾದ ಭೀಮಸೇನನಿಗೆ ವೃಕೋದರನೆಂಬ ಹೆಸರು ಬರುವುದು.

೧೫. ಆತನು ಬುದ್ಧಿಶಾಲಿ, ಮಾನದಲ್ಲಿ ವೃಷ್ಟಿಯುಳ್ಳವನು, ಹತ್ತು ಸಾವಿರ ಆನೆಗಳ ಬಲವುಳ್ಳವನು. ಮಹಾತ್ಮನು, ಭಾಗ್ಯಶಾಲಿ ಮತ್ತು ಮನ್ಮಥನಂತೆ ರೂಪವಂತನು.

**ಧಾರ್ಮಿಕಸ್ಯಾಸ್ಯ ಶಕ್ತಸ್ಯ ತೀವ್ರಾಗ್ನಿತ್ವಾದುಪೋಷಣೇ ।**
**ಇದಂ ವ್ರತಮಶೇಷಾಣಾಂ ವ್ರತಾನಾಮಧಿಕಂ ಯತಃ** ॥೧೬॥

**ಕಥಯಿಷ್ಯತಿ ವಿಶ್ವಾತ್ಮಾ ವಾಸುದೇವೋ ಜಗದ್ಗುರುಃ ।**
**ಅಶೇಷಯಜ್ಞಫಲದಮಶೇಷಾಘವಿನಾಶನಂ** ॥೧೭॥

**ಅಶೇಷದುಷ್ಟಶಮನಮಶೇಷಸುರಪೂಜಿತಂ ।**
**ಪವಿತ್ರಾಣಾಂ ಪವಿತ್ರಂ ಚ ಮಂಗಲಾನಾಂ ಚ ಮಂಗಲಂ**
**ಭವಿಷ್ಯಂ ಚ ಭವಿಷ್ಯಾಣಾಂ ಪುರಾಣಾನಾಂ ಪುರಾತನಂ** ॥೧೮॥

**॥ ವಾಸುದೇವ ಉವಾಚ ॥**

**ಯದ್ಯಷ್ಟಮೀಚತುರ್ದಶ್ಯೋರ್ದ್ವಾದಶೀಷ್ವಥ ಭಾರತ ।**
**ಅನ್ಯೇಷ್ವಪಿ ದಿನರ್ಕ್ಷೇಷು ನ ಶಕ್ತಸ್ತ್ವಮುಪೋಷಿತುಂ** ॥೧೯॥

**ತತಃ ಪುಣ್ಯಾಂ ತಿಥಿಮಿಮಾಂ ಸರ್ವಪಾಪಪ್ರಣಾಶಿನೀಂ ।**
**ಉಪೋಷ್ಯ ವಿಧಿನಾನೇನ ಗಚ್ಛ ವಿಷ್ಣೋಃ ಪರಂ ಪದಂ** ॥೨೦॥

---

೧೬. ಭೀಮನು ಧಾರ್ಮಿಕನೇನೋ ನಿಜ. ಆದರೂ ಜಠರಾಗ್ನಿಯು ಅತಿ ತೀಕ್ಷ್ಣವಾದುದರಿಂದ ಆತನು ಉಪವಾಸವಿರಲಾರನು. ಆದಕಾರಣ ಅಂಥವನು ಮಾಡಿದ ಈ ವ್ರತವು ಮಿಕ್ಕೆಲ್ಲ ವ್ರತಗಳಿಗಿಂತಲೂ ಉತ್ತಮವೆನಿಸುವುದು.

೧೭-೧೮. ವಿಶ್ವಾತ್ಮನೂ ಜಗದ್ಗುರುವೂ ಆದ ವಾಸುದೇವನು ಭೀಮಸೇನನಿಗೆ ಒಂದು ವ್ರತವನ್ನು ಉಪದೇಶಿಸುವನು. ಅದು ಸಕಲ ಯಜ್ಞಗಳ ಫಲವನ್ನೂ ಕೊಡುವುದು. ಸಮಸ್ತ ಪಾಪಗಳನ್ನೂ ಪರಿಹರಿಸುವುದು. ಸರ್ವದೋಷಗಳನ್ನೂ ನಿವಾರಿಸುವುದು. ಎಲ್ಲ ದೇವತೆಗಳಿಂದಲೂ ಮನ್ನಣೆ ಪಡೆಯುವುದು. ಪವಿತ್ರವಾದುದೆಲ್ಲಕ್ಕಿಂತಲೂ ಪವಿತ್ರವೂ, ಮಂಗಲವಾದುದೆಲ್ಲಕ್ಕಿಂತಲೂ ಮಂಗಲವೂ ಆಗುವುದು. ಅದು ಹಿಂದಿದ್ದುದೆಲ್ಲಕ್ಕಿಂತಲೂ ಹಿಂದಿನದು. ಮುಂದೆ ಬರತಕ್ಕುದೆಲ್ಲಕ್ಕಿಂತಲೂ ಮುಂದಿನದು.

೧೯-೨೦. ವಾಸುದೇವನು ಹೇಳಿದನು.—ಅಷ್ಟಮಿ, ಚತುರ್ದಶಿ, ದ್ವಾದಶಿ ಮೊದಲಾದ ಪುಣ್ಯತಿಥಿಗಳಲ್ಲಿ ನಿನ್ನಿಂದ ಉಪವಾಸವಿರಲು ಸಾಧ್ಯವಿಲ್ಲದಿದ್ದರೆ, ಎಲೈ ಭೀಮಸೇನನೇ, ಸರ್ವಪಾಪಪರಿಹಾರಕವಾದ ಇದೊಂದು ಪುಣ್ಯ ತಿಥಿಯಲ್ಲಾದರೂ ಈ ಮುಂದಿನ ವಿಧಿಯಿಂದ ಉಪವಾಸಮಾಡು. ನಿನಗೆ ವಿಷ್ಣುವಿನ ಪರಮಪದವು ಲಭಿಸುವುದು.

ಮಾಘಮಾಸಸ್ಯ ದಶಮೀ ಯದಾ ಶುಕ್ಲಾ ಭವೇತ್ತದಾ ।
ಘೃತೇನಾಭ್ಯಂಜನಂ ಕೃತ್ವಾ ತಿಲೈಃ ಸ್ನಾನಂ ಸಮಾಚರೇತ್ ॥೨೧॥

ತಥೈವ ವಿಷ್ಣುಮಭ್ಯರ್ಚ್ಯ ನಮೋ ನಾರಾಯಣೇತಿ ಚ ।
ಕೃಷ್ಣಾಯ ಪಾದೌ ಸಂಪೂಜ್ಯ ಶಿರಃ ಸರ್ವಾತ್ಮನೇ ನಮಃ ॥೨೨॥

ವೈಕುಂಠಾಯೇತಿ ವೈ ಕಂಠಮುರಃ ಶ್ರೀವತ್ಸಧಾರಿಣೇ ।
ಶಂಖಿನೇ ಚಕ್ರಿಣೇ ತದ್ವದ್ಗದಿನೇ ವರದಾಯ ವೈ
ಸರ್ವೇ ನಾರಾಯಣಸ್ಯೈವಂ ಸಂಪೂಜ್ಯಾ ಬಾಹವಃ ಕ್ರಮಾತ್ ॥೨೩॥

ದಾಮೋದರಾಯೇತ್ಯುದರಂ ಮೇಢ್ರಂ ಪಂಚಶರಾಯ ವೈ ।
ಊರೂ ಸೌಭಾಗ್ಯನಾಥಾಯ ಜಾನುನೀ ಭೂತಧಾರಿಣೇ ॥೨೪॥

ನಮೋ ನೀಲಾಯ ವೈ ಜಂಘೇ ಪಾದೌ ವಿಶ್ವಸೃಜೇ ನಮಃ ।
ನಮೋ ದೇವ್ಯೈ ನಮಃ ಶಾಂತ್ಯೈ ನಮೋ ಲಕ್ಷ್ಮ್ಯೈ ನಮಃ ಶ್ರಿಯೈ ॥೨೫॥

---

೨೧. ಮಾಘಮಾಸದ ಶುಕ್ಲಪಕ್ಷದಲ್ಲಿ ದಶಮಿಯ ದಿನ ತುಪ್ಪದಿಂದ ಅಭ್ಯಂಜನಮಾಡಿ ತಿಲಸ್ನಾನವನ್ನು ಸಗಬೇಕು.

೨೨. "ನಮೋನಾರಾಯಣ" ಎಂಬ ಮಂತ್ರದಿಂದ ವಿಷ್ಣುವನ್ನು ಪೂಜಿಸಬೇಕು. ಕೃಷ್ಣನಿಗೆ ನಮಸ್ಕಾರವೆಂದು ಪಾದಗಳನ್ನೂ, ಸರ್ವಾತ್ಮನಿಗೆ ನಮಸ್ಕಾರವೆಂದು ಶಿರಸ್ಸನ್ನೂ ಅರ್ಚಿಸಬೇಕು.

೨೩. ವೈಕುಂಠನಿಗೆ ನಮಸ್ಕಾರವೆಂದು ಕಂಠಪ್ರದೇಶವನ್ನೂ, ಶ್ರೀವತ್ಸವೆಂಬ ಚಿಹ್ನವನ್ನು ಧರಿಸಿದಾತನಿಗೆ ನಮಸ್ಕಾರವೆಂದು ಉರಸ್ಸನ್ನೂ ಅರ್ಚನೆಮಾಡಬೇಕು. ಶಂಖಚಕ್ರಗದಾಧಾರಿಗೆ ನಮಸ್ಕಾರ, ವರವನ್ನು ಕರುಣಿಸುವಾತನಿಗೆ ನಮಸ್ಕಾರ ಎಂದು ನಾರಾಯಣನ ನಾಲ್ಕು ತೋಳುಗಳನ್ನೂ ಕ್ರಮವಾಗಿ ಪೂಜಿಸಬೇಕು.

೨೪. ದಾಮೋದರನಿಗೆ ನಮಸ್ಕಾರವೆಂದು ಉದರವನ್ನೂ, ಪಂಚಶರನಿಗೆ ನಮಸ್ಕಾರವೆಂದು ತೊಡೆಗಳನ್ನೂ, ಸರ್ವಭೂತಗಳನ್ನೂ ಧರಿಸಿರುವವನಿಗೆ ನಮಸ್ಕಾರವೆಂದು ಮೊಣಕಾಲುಗಳನ್ನೂ ಅರ್ಚಿಸಬೇಕು.

೨೫. ನೀಲವರ್ಣನಿಗೆ ನಮಸ್ಕಾರವೆಂದು ಮೊಣಕಾಲುಗಳನ್ನೂ ವಿಶ್ವಕರ್ತನಿಗೆ ನಮಸ್ಕಾರವೆಂದು ಪಾದಗಳನ್ನೂ ಪೂಜಿಸಬೇಕು. ದೇವಿಗೆ ನಮಸ್ಕಾರ, ಶಾಂತಿಗೆ ನಮಸ್ಕಾರ, ಲಕ್ಷ್ಮಿಗೆ ನಮಸ್ಕಾರ, ಶ್ರೀಗೆ ನಮಸ್ಕಾರ.

**ನಮಃ ಪುಷ್ಟ್ಯೈ ನಮಸ್ತುಷ್ಟ್ಯೈ ಧೃಷ್ಟ್ಯೈ ಹೃಷ್ಟ್ಯೈ ನಮೋ ನಮಃ ।**
**ನಮೋ ವಿಹಂಗನಾಥಾಯ ವಾಯುವೇಗಾಯ ಪಕ್ಷಿಣೇ ।**
**ವಿಷಪ್ರಮಥನಾಯೇತಿ ಗರುಡಂ ಚಾಭಿಪೂಜಯೇತ್ ॥೨೬॥**

**ಏವಂ ಸಂಪೂಜ್ಯ ಗೋವಿಂದಮುಮಾಪತಿವಿನಾಯಕೌ ।**
**ಗಂಧೈರ್ಮಾಲ್ಯೈಸ್ತಥಾ ಧೂಪೈರ್ಭಕ್ಷ್ಯೈರ್ನಾನಾವಿಧೈರಪಿ ॥೨೭॥**

**ಗವ್ಯೇನ ಪಯಸಾ ಸಿದ್ಧಾಂ ಕೃಸರಾಮಥ ವಾಗ್ಯತಃ ।**
**ಸರ್ಪಿಷಾ ಸಹ ಭುಕ್ತ್ವಾ ಚ ಗತ್ವಾ ಶತಪದಂ ಬುಧಃ ॥೨೮॥**

**ನ್ಯಗ್ರೋಧಂ ದಂತಕಾಷ್ಠಮಥವಾ ಖಾದಿರಂ ಬುಧಃ ।**
**ಗೃಹೀತ್ವಾ ಧಾವಯೇದ್ದಂತಾನಾಚಾಂತಃ ಪ್ರಾಗುದಙ್ಮುಖಃ ॥೨೯॥**

**ಸೂರ್ಯಾಸ್ತಮಯಾನಂತರನಿಂ ಕೃತ್ವಾ ಸಂಧ್ಯಾಮಸ್ತಮಿತೇ ರವೌ ।**
**ನಮೋ ನಾರಾಯಣಾಯೇತಿ ತ್ವಾಮಹಂ ಶರಣಂ ಗತಃ ॥೩೦॥**

---

೨೬. ಪಕ್ಷಿರಾಜನಿಗೆ ನಮಸ್ಕಾರ; ವಾಯುವೇಗನಿಗೆ ನಮಸ್ಕಾರ; ಪಕ್ಷಿಗೆ ನಮಸ್ಕಾರ; ವಿಷಧ್ವಂಸನಿಗೆ ನಮಸ್ಕಾರ ಎಂದು ಗರುಡನನ್ನು ನಿತ್ಯವೂ ಪೂಜಿಸಬೇಕು.

೨೭. ಹೀಗೆ ವಿಷ್ಣು, ಈಶ್ವರ ಮತ್ತು ವಿನಾಯಕರನ್ನು ಗಂಧಪುಷ್ಪ ಧೂಪಗಳಿಂದಲೂ, ಬಗೆಬಗೆಯ ಭಕ್ಷ್ಯಗಳಿಂದಲೂ ಪೂಜಿಸಬೇಕು.

೨೮. ಹಸುವಿನ ಹಾಲಿನಿಂದ ಮಾಡಿದ ಕೃಸರವನ್ನು (ಕಿಚ್ಚಡಿ) ತುಪ್ಪದೊಡನೆ ಮೌನದಿಂದ ಭುಂಜಿಸಿ ಒಳಿಕ ನೂರು ಹೆಜ್ಜೆಗಳ ದೂರ ನಡೆಯಬೇಕು.

೨೯. ಪೂರ್ವಕ್ಕೆ ಅಥವಾ ಉತ್ತರಕ್ಕೆ ಅಭಿಮುಖವಾಗಿ ಕುಳಿತು, ಆಚಮನ ಮಾಡಿ ಆಲದ ಕಡ್ಡಿಯಿಂದಲೋ ಕಗ್ಗಲಿಯ ಕಡ್ಡಿಯಿಂದಲೋ ಹಲ್ಲುಜ್ಜಬೇಕು.

೩೦. ಸೂರ್ಯಾಸ್ತಮಯಾನಂತರ ಸಂಧ್ಯಾವಂದನೆಯನ್ನು ಮಾಡಿ "ನನ್ನ ಬಾಳುವೆ ನನಗೋಸ್ಕರವಲ್ಲ. ನಾನು ಸ್ವತಂತ್ರನಲ್ಲ; ಶ್ರೀಮನ್ನಾರಾಯಣನ ಶೇಷಭೂತ. ಓ ನಾರಾಯಣಾ, ನಿನ್ನನ್ನು ಮರೆಹೊಕ್ಕಿರುವೆನು" ಎಂದು ಅನುಸಂಧಾನ ಮಾಡಬೇಕು.

ಏಕಾದಶ್ಯಾಂ ನಿರಾಹಾರಃ ಸಮಭ್ಯರ್ಚ್ಯ ಚ ಕೇಶವಂ ।
ರಾತ್ರಿಂ ಚ ಸಕಲಾಂ ಸ್ಥಿತ್ವಾ ಸ್ನಾನಂ ಚ ಪಯಸಾ ತಥಾ ॥೩೧॥
ಸರ್ಪಿಷಾ ಚಾಪಿ ದಹನಂ ಹುತ್ವಾ ಬ್ರಾಹ್ಮಣಪುಂಗವೈಃ ।
ಸಹೈವ ಪುಂಡರೀಕಾಕ್ಷ ದ್ವಾದಶ್ಯಾಂ ಕ್ಷೀರಭೋಜನಂ ॥೩೨॥
ಕರಿಷ್ಯಾಮಿ ಯತಾತ್ಮಾಹಂ ನಿರ್ವಿಘ್ನೇನಾಸ್ತು ತಚ್ಚ ಮೇ ।
ಏವಮುಕ್ತ್ವಾ ಸ್ವಪೇದ್ಭೂಮಾವಿತಿಹಾಸಕಥಾಂ ಪುನಃ ॥೩೩॥
ಶ್ರುತ್ವಾ ಪ್ರಭಾತೇ ಸಂಜಾತೇ ನದೀಂ ಗತ್ವಾ ವಿಶಾಂ ಪತೇ ।
ಸ್ನಾನಂ ಕೃತ್ವಾ ಮೃದಾ ತದ್ವತ್ಪಾಷಂಡಾನಭಿವರ್ಜಯೇತ್ ॥೩೪॥
ಉಪಾಸ್ಯ ಸಂಧ್ಯಾಂ ವಿಧಿವತ್ಕೃತ್ವಾ ಚ ಪಿತೃತರ್ಪಣಂ ।
ಪ್ರಣಮ್ಯ ಚ ಹೃಷೀಕೇಶಂ ಸಪ್ತಲೋಕೈಕಮೀಶ್ವರಂ ॥೩೫॥
ಗೃಹಸ್ಯ ಪುರತೋ ಭಕ್ತ್ಯಾ ಮಂಡಪಂ ಕಾರಯೇದ್ಬುಧಃ ।
ದಶಹಸ್ತಮಥಾಷ್ಟೌ ವಾ ಕರಾನ್ ಕುರ್ಯಾದ್ವಿಶಾಂ ಪತೇ ॥೩೬॥

---

೩೧-೩೨. ಏಕಾದಶಿಯಲ್ಲಿ ನಿರಾಹಾರನಾಗಿ, ಕೇಶವನನ್ನು ಪೂಜಿಸಿ, ರಾತ್ರಿಯಲ್ಲಿ ಜಾಗರಣೆಮಾಡಿ ದ್ವಾದಶಿಯ ದಿನ ಪ್ರಾತಃಸ್ನಾನವಾದ ಬಳಿಕ ಹಾಲು ತುಪ್ಪಗಳಿಂದ ಅಗ್ನಿಯಲ್ಲಿ ಹೋಮವನ್ನು ಮಾಡಿ, ಜಿತೇಂದ್ರಿಯನಾಗಿ, ಬ್ರಾಹ್ಮಣರೊಡನೆ ಕ್ಷೀರಭೋಜನವನ್ನು ಮಾಡುವೆನು. ಈ ನನ್ನ ವ್ರತವು ನಿರ್ವಿಘ್ನವಾಗಿ ನೆರವೇರಲಿ."

೩೩. ಎಲೈ ರಾಜಾ, ಹೀಗೆ ಹೇಳಿ ಇತಿಹಾಸ ಪುರಾಣಾದಿ ಕಥೆಗಳನ್ನು ಕೇಳುತ್ತ ಬರಿಯ ನೆಲದ ಮೇಲೆ ಮಲಗಬೇಕು. ಬೆಳಗಾಗಲು ನದಿಗೆ ಹೋಗಿ ಮೃತ್ತಿನಿಂದ ಸ್ನಾನಮಾಡಿ ನಾಸ್ತಿಕರ ಸಂಸರ್ಗವಿಲ್ಲದಂತಿರಬೇಕು.

೩೫. ಶಾಸ್ತ್ರೋಕ್ತವಾಗಿ ಪ್ರಾತಸ್ಸಂಧ್ಯಾವಂದನವನ್ನೂ ಪಿತೃತರ್ಪಣವನ್ನೂ ಮಾಡಿ, ಮನೆಗೆ ಬಂದು ಸಪ್ತಲೋಕೇಶ್ವರನಾದ ನಾರಾಯಣನನ್ನು ನಮಸ್ಕರಿಸಬೇಕು.

೩೬. ಎಲೈ ಭೀಮಸೇನನೇ, ಜ್ಞಾನಿಯಾದ ಯಜಮಾನನು ಮನೆಯ ಮುಂದುಗಡೆ ಯಾಗಮಂಟಪವನ್ನು ರಚಿಸಬೇಕು. ಅದು ಹತ್ತು ಅಥವಾ ಎಂಟು ಮೊಳ ಅಗಲತೆಯುಳ್ಳದ್ದಾಗಿರಬೇಕು.

**ಚತುರ್ಹಸ್ತಾಂ ಶುಭಾಂ ಕುರ್ಯಾದ್ವೇದೀಮರಿನಿಷೂದನ।**
**ಚತುರ್ಹಸ್ತಪ್ರಮಾಣಂ ಚ ವಿನ್ಯಸೇತ್ತತ್ರ ತೋರಣಂ ॥೩೭॥**

**ಆರೋಪ್ಯ ಕಲಶಂ ತತ್ರ ದಿಕ್ಪಾಲಾನ್ ಪೂಜಯೇತ್ತತಃ।**
**ಛಿದ್ರೇಣ ಜಲಸಂಪೂರ್ಣಮಥ ಕೃಷ್ಣಾಜಿನಸ್ಥಿತಃ।**
**ತಸ್ಯ ಧಾರಾಂ ಚ ಶಿರಸಾ ಧಾರಯೇತ್ಸಕಲಾಂ ನಿಶಾಂ ॥೩೮॥**

**ತಥೈವ ವಿಷ್ಣೋಶ್ಶಿರಸಿ ಕ್ಷೀರಧಾರಾಂ ಪ್ರಪಾತಯೇತ್।**
**ಅರತ್ನಿಮಾತ್ರಂ ಕುಂಡಂ ಚ ಕುರ್ಯಾತ್ತತ್ರ ತ್ರಿಮೇಖಲಂ ॥೩೯॥**

**ಯೋನಿವಕ್ತ್ರಂ ಚ ತತ್ ಕೃತ್ವಾ ಬ್ರಾಹ್ಮಣೈರ್ಯವಸರ್ಪಿಷೀ।**
**ತಿಲಾಂಶ್ಚ ವಿಷ್ಣುದೇವತ್ಯೈರ್ಮಂತ್ರೈರೇಕಾಗ್ನಿವತ್ತದಾ ॥೪೦॥**

---

೩೭. ಶತ್ರುನಾಶಕನಾದ ಎಲೈ ಭೂಪಾಲನೇ, ನಾಲ್ಕು ಮೊಳದಳತೆಯ ವೇದಿಕೆಯನ್ನು ನಿರ್ಮಿಸಿ, ಅದೇ ಪ್ರಮಾಣದ ತೋರಣವನ್ನು ಕಟ್ಟಬೇಕು.

೩೮. ಸಚ್ಛಿದ್ರವಾದ ಪೂರ್ಣಕಲಶವನ್ನು ಮೇಲೆತ್ತಿಕಟ್ಟಿ, ದಿಕ್ಪಾಲಕರನ್ನು ಆವಾಹಿಸಿ ಪೂಜಿಸಬೇಕು. ಆ ಜಲಧಾರೆಯು ತನ್ನ ತಲೆಯ ಮೇಲೆ ಬೀಳುತ್ತಿರುವಂತೆ ಅದರ ಅಡಿಯಲ್ಲಿ ರಾತ್ರಿಯೆಲ್ಲ ಕೃಷ್ಣಾಜಿನದ ಮೇಲೆ ಕುಳಿತಿರಬೇಕು.

೩೯. ಹಾಗೆಯೇ ವಿಷ್ಣುಮೂರ್ತಿಯ ಶಿರಸ್ಸಿನ ಮೇಲೆ ಕ್ಷೀರಧಾರೆ ಬೀಳುತ್ತಿರುವಂತೆ ಸರಂಧ್ರವಾದ ಕ್ಷೀರಪಾತ್ರೆಯನ್ನು ಕಟ್ಟಿರಬೇಕು. ಗುದ್ದು ಮೊಳದಳತೆಯ ಅಗ್ನಿಕುಂಡವನ್ನು ರಚಿಸಿ ಅದಕ್ಕೆ ಮೂರು ಮೇಖಲೆಗಳನ್ನು (ಸುತ್ತುಗಟ್ಟುಗಳನ್ನು) ನಿರ್ಮಿಸಬೇಕು.

೪೦. ಅಗ್ನಿಕುಂಡಕ್ಕೆ ಯೋನಿಮುಖವನ್ನು (ಹೋಮಮಾಡುವಾಗ ನೆಲದ ಮೇಲೆ ಚೆಲ್ಲುವ ತುಪ್ಪವು ಕುಂಡಕ್ಕೆ ಹರಿದುಹೋಗುವಂತೆ ರಚಿಸಿರುವ ಒಂದು ಬಗೆಯ ಬಚ್ಚಲು) ರಚಿಸಿ, ಏಕಾಗ್ನಿಯನ್ನು ಸ್ಥಾಪಿಸಿ, ಬ್ರಾಹ್ಮಣರಿಂದ ವಿಷ್ಣುದೇವತಾಕಗಳಾದ ಮಂತ್ರಗಳೊಡನೆ ಗೋಧವೆ, ತುಪ್ಪ ಮತ್ತು ಶಿಲಗಳ ಹೋಮವನ್ನು ಮಾಡಿಸಬೇಕು.

ಹುತ್ವಾ ಚ ವೈಷ್ಣವಂ ಸಮ್ಯಕ್ಚರುಂ ಗೋಕ್ಷೀರಸಂಯುತಂ ।
ನಿಷ್ಪಾವಾರ್ಧಪ್ರಮಾಣಾಂ ವೈ ಧಾರಾಮಾಜ್ಯಸ್ಯ ಪಾತಯೇತ್ ॥೪೧॥

ಜಲಕುಂಭಾನ್ಮಹಾವೀರ್ಯ ಸ್ಥಾಪಯಿತ್ವಾ ತ್ರಯೋದಶ ।
ಭಕ್ಷ್ಯೈರ್ನಾನಾವಿಧೈರ್ಯುಕ್ತಾನ್ಸಿತವಸ್ತ್ರೈರಲಂಕೃತಾನ್ ॥೪೨॥

ಯುಕ್ತಾನೌದುಂಬರೈಃ ಪಾತ್ರೈಃ ಪಂಚರತ್ನಸಮನ್ವಿತಾನ್ ।
ಚತುರ್ಭಿರ್ಬಹ್ವೃಚೈರ್ಹೋಮಸ್ತತ್ರ ಕಾರ್ಯ ಉದಙ್ಮುಖೈಃ ॥೪೩॥

ರುದ್ರಜಾಪಶ್ಚತುರ್ಭಿಶ್ಚ ಯಜುರ್ವೇದಪರಾಯಣೈಃ ।
ವೈಷ್ಣವಾನಿ ತು ಸಾಮಾನಿ ಚತುರಃ ಸಾಮವೇದಿನಃ ।
ಅರಿಷ್ಟವರ್ಗಸಹಿತಾನ್ಯಭಿತಃ ಪರಿಪಾಠಯೇತ್ ॥೪೪॥

ಏವಂ ದ್ವಾದಶ ತಾನ್ ವಿಪ್ರಾನ್ವಸ್ತ್ರಮಾಲ್ಯಾನುಲೇಪನೈಃ ।
ಪೂಜಯೇದಂಗುಲೀಯೈಶ್ಚ ಕಟಕೈರ್ಹೇಮಸೂತ್ರಕೈಃ ॥೪೫॥

---

೪೧. ಗೋಕ್ಷೀರಸಹಿತವಾದ ಚರುವನ್ನು ಮಹಾವಿಷ್ಣುವಿಗೆ ಹೋಮ ಮಾಡಿ ತರುವಾಯ ಆಜ್ಯಹೋಮವನ್ನು ನಡೆಸಬೇಕು. ಆಜ್ಯಧಾರೆಯ ಪ್ರಮಾಣವು ಅವರೆಕಾಳಿನಲ್ಲಿ ಅರ್ಧದಷ್ಟು ಇರಬೇಕು.

೪೨. ಮಹಾವೀರನಾದ ಎಲೈ ಭೀಮಸೇ, ಹದಿಮೂರು ಜಲಕುಂಭಗಳನ್ನು ಸ್ಥಾಪಿಸಿ, ಅವುಗಳಲ್ಲಿ ಪಂಚರತ್ನಗಳನ್ನು ಹಾಕಿ ಶುಭ್ರವಸ್ತ್ರಗಳಿಂದ ಅಲಂಕರಿಸಬೇಕು. ಬಗೆಬಗೆಯ ಭಕ್ಷ್ಯಗಳೂ ಅತ್ತಿಯ ಮರದ ಪಾತ್ರೆಗಳೂ ಕುಂಭಗಳೊಡನೆ ಇರಬೇಕು.

೪೩-೪೪. ನಾಲ್ವರು ಋಗ್ವೇದಿಗಳು ಉತ್ತರಾಭಿಮುಖರಾಗಿ ಹೋಮ ಮಾಡುವರು. ಯಜುರ್ವೇದ ಪಾರಂಗತರಾದ ನಾಲ್ವರು ರುದ್ರಮಂತ್ರಗಳನ್ನು ಜಪಿಸುವರು. ವಿಷ್ಣು ದೇವತಾಕಗಳಾದ ಸಾಮಮಂತ್ರಗಳನ್ನು ಉಳಿದ ನಾಲ್ವರು ಗಾನಮಾಡುವರು. ಇವುಗಳ ಜೊತೆಗೆ ಅರಿಷ್ಟವರ್ಗವನ್ನೂ ಸಹ ಪಠಿಸಬೇಕು.

೪೫. ಈ ಹನ್ನೆರಡು ಜನ ಬ್ರಾಹ್ಮಣರಿಗೂ ಗಂಧ ಪುಷ್ಪಗಳು, ಉಂಗುರಗಳು, ಬಳೆಗಳು, ಚಿನ್ನದ ಉಡಿದಾರಗಳು, ವಸ್ತ್ರಗಳು, ಹಾಸಿಗೆಗಳು ಇವುಗಳನು ಧಾರಾಳವಾಗಿ ಇತ್ತು ಸತ್ಕರಿಸಬೇಕು.

ವಾಸೋಭಿಃ ಶಯನೀಯೈಶ್ಚ ವಿತ್ತಶಾಠ್ಯವಿವರ್ಜಿತಃ ।
ಏವಂ ಕ್ಷಪಾತಿವಾಹ್ಯಾ ಚ ಗೀತಮಂಗಲನಿಸ್ಸ್ವನೈಃ ॥೪೬॥

ಉಪಾಧ್ಯಾಯಸ್ಯ ಚ ಪುನರ್ದ್ವಿಗುಣಂ ಸರ್ವಮೇವ ತು ।
ತತಃ ಪ್ರಭಾತೇ ವಿಮಲೇ ಸಮುತ್ಥಾಯ ತ್ರಯೋದಶ ॥೪೭॥

ಗಾ ವೈ ದದ್ಯಾತ್ಕುರುಶ್ರೇಷ್ಠ ಸೌವರ್ಣಮುಖಸಂಯುತಾಃ ।
ಪಯಸ್ವಿನೀಃ ಶೀಲವತೀಃ ಕಾಂಸ್ಯದೋಹಸಮನ್ವಿತಾಃ ॥೪೮॥

ರೌಪ್ಯಖುರಾಃ ಸುವಸ್ತ್ರಾಶ್ಚ ಚಂದನೇನಾಭಿಷೇಚಿತಾಃ ।
ತಾಸ್ತು ತೇಷಾಂ ತತೋ ಭಕ್ತ್ಯಾ ಭಕ್ಷ್ಯಭೋಜ್ಯಾನ್ನತರ್ಪಿತಾನ್ ॥೪೯॥

ಕೃತ್ವಾ ವೈ ಬ್ರಾಹ್ಮಣಾನ್ ಸರ್ವಾನನ್ನೈರ್ನಾನಾವಿಧೈಸ್ತಥಾ ।
ಭುಕ್ತ್ವಾ ಚಾಕ್ಷಾರಲವಣಮಾತ್ಮನಾ ಚ ವಿಸರ್ಜಯೇತ್ ॥೫೦॥

---

೪೬. ಹೀಗೆ ಮಂಗಲವಾದ್ಯಗಳೂ ಗೀತಗಳೂ ಇಂಪಾಗಿ ನಡೆಯುತ್ತಿರಲು ರಾತ್ರಿಯನ್ನು ಕಳೆಯಬೇಕು. ಆಚಾರ್ಯನಿಗಾದರೋ ಮಿಕ್ಕವರಿಗಿಂತ ಎಲ್ಲವನ್ನೂ ಎರಡರಷ್ಟು ಕೊಡಬೇಕು.

೪೭-೪೮. ಓ ಕುರುಸತ್ತಮಾ, ಪ್ರಾತಃಕಾಲವಾದ ಬಳಿಕ ಸುವರ್ಣದ ಮುಖಾಭರಣಗಳಿಂದ ಅಲಂಕೃತವಾದ, ಸಾಧುಸ್ವಭಾವದ, ಚೆನ್ನಾಗಿ ಹಾಲುಕೊಡುವ ಹದಿಮೂರು ಹಸುಗಳನ್ನು ಹಾಲು ಕರೆಯುವ ಕಂಚಿನ ಪಾತ್ರೆಗಳ ಸಹಿತವಾಗಿ ದಾನ ಮಾಡಬೇಕು. ಚಂದನೋದಕದಿಂದ ಅವುಗಳಿಗೆ ಮಜ್ಜನಮಾಡಿಸಿ, ಒಳ್ಳೆಯ ವಸ್ತ್ರಗಳನ್ನು ಹೊದಿಸಿ, ಗೊರಸುಗಳಿಗೆ ಒಳ್ಳೆಯ ತೊಡಿಗೆಗಳನ್ನಿಟ್ಟಿರಬೇಕು.

೪೯-೫೦. ಆ ಬ್ರಾಹ್ಮಣರೆಲ್ಲರನ್ನೂ ಬಗೆಬಗೆಯ ಭಕ್ಷ್ಯ, ಭೋಜ್ಯ, ಅನ್ನ ಇವುಗಳಿಂದ ವಿಶೇಷವಾಗಿ ತೃಪ್ತಿಪಡಿಸಿ, ತಾನೂ ಉಪ್ಪುಕಾರಗಳನ್ನುಳಿದು ಭೋಜನ ಮಾಡಿ ಅವರನ್ನು ಬೀಳುಕೊಡಬೇಕು.

ಅನುಗಮ್ಯ ಪದಾನ್ಯಷ್ಟೌ ಪುತ್ರಭಾರ್ಯಾಸಮನ್ವಿತಃ।
ಪ್ರೀಯತಾಮತ್ರ ದೇವೇಶಃ ಕೇಶವಃ ಕ್ಲೇಶನಾಶನಃ ॥೫೧॥

ಶಿವಸ್ಯ ಹೃದಯೇ ವಿಷ್ಣುರ್ವಿಷ್ಣೋಶ್ಚ ಹೃದಯೇ ಶಿವಃ।
ಯಥಾಂತರಂ ನ ಪಶ್ಯಾಮಿ ತಥಾ ಮೇ ಸ್ವಸ್ತಿ ಚಾಽಽಯುಷಃ ॥೫೨॥

ಏವಮುಚ್ಚಾರ್ಯ ತಾನ್ ಕುಂಭಾನ್ಗಾಶ್ಚೈವ ಶಯನಾನಿ ಚ।
ವಾಸಾಂಸಿ ಚೈವ ಸರ್ವೇಷಾಂ ಗೃಹಾಣಿ ಪ್ರಾಪಯೇದ್ಬುಧಃ ॥೫೩॥

ಅಭಾವೇ ಬಹುಶಯ್ಯಾನಾಮೇಕಾಮಪಿ ಸುಸಂಸ್ಕೃತಾಂ।
ಶಯ್ಯಾಂ ದದ್ಯಾದ್ದ್ವಿಜಾತೇಶ್ಚ ಸರ್ವೋಪಸ್ಕರಸಂಯುತಾಂ ॥೫೪॥

ಇತಿಹಾಸಪುರಾಣಾನಿ ವಾಚಯಿತ್ವಾಽತಿವಾಹಯೇತ್।
ತದ್ದಿನಂ ನರಶಾರ್ದೂಲ ಯ ಇಚ್ಛೇದ್ವಿಪುಲಾಂ ಶ್ರಿಯಂ ॥೫೫॥

೫೧-೫೨. ಪತ್ನೀ ಪುತ್ರರೊಡಗೂಡಿ ಅವರೊಡನೆ ಎಂಟು ಹೆಜ್ಜೆಗಳ ದೂರ ಹೋಗಬೇಕು. "ಕ್ಲೇಶನಾಶಕನೂ ದೇವೇಶನೂ ಆದ ಕೇಶವನು ನಾನೆಸಗಿದ ಈ ಕರ್ಮದಿಂದ ಪ್ರೀತನಾಗಲಿ. ಶಿವನ ಹೃದಯದಲ್ಲಿ ವಿಷ್ಣುವೂ, ವಿಷ್ಣುವಿನ ಹೃದಯದಲ್ಲಿ ಶಿವನೂ ನೆಲೆಸಿರುವರು. ಇವರಿಬ್ಬರಿಗೂ ಯಾವ ಭೇದವನ್ನೂ ನಾನರಿಯೆನು. ನನಗೆ ಮಂಗಲವಾಗಲಿ. ಆಯುಸ್ಸು ಹೆಚ್ಚಲಿ."

೫೩. ಹೀಗೆ ಹೇಳಿ ಆ ಕುಂಭಗಳನ್ನೂ, ಹಸುಗಳನ್ನೂ, ಶಯನಗಳನ್ನೂ, ವಸ್ತ್ರಗಳನ್ನೂ ಎಲ್ಲರ ಮನೆಗಳಿಗೂ ಕಳುಹಿಸಿಕೊಡಬೇಕು.

೫೪. ಹಾಸಿಗೆಗಳು ಹೆಚ್ಚಾಗಿಲ್ಲದಿದ್ದರೆ ಸುಸಜ್ಜಿತವಾದುದೊಂದನ್ನಾದರೂ ಸಕಲ ಪರಿಕರಸಹಿತವಾಗಿ ಬ್ರಾಹ್ಮಣನಿಗೆ ದಾನ ಮಾಡಬೇಕು.

೫೫. ಓ ನರೋತ್ತಮನೇ, ಸಂಪತ್ಕಾಮನಾದವನು ಇತಿಹಾಸಪುರಾಣಗಳನ್ನು ಪಾರಾಯಣಮಾಡಿಸುತ್ತ ಆ ದಿನವನ್ನೂ ಕಳೆಯಬೇಕು.

**ತಸ್ಮಾತ್ತ್ವಂ ಸತ್ತ್ವಮಾಲಂಬ್ಯ ಭೀಮಸೇನ ವಿಮತ್ಸರಃ ।**
**ಕುರು ವ್ರತಮಿದಂ ಸಮ್ಯಕ್ಸ್ನೇಹಾತ್ತವ ಮಯೇರಿತಂ ॥೩೬॥**

**ತ್ವಯಾ ಕೃತಮಿದಂ ವೀರ ತ್ವನ್ನಾಮಾಖ್ಯಂ ಭವಿಷ್ಯತಿ ।**
**ಸಾ ಭೀಮದ್ವಾದಶೀ ಹ್ಯೇಷಾ ಸರ್ವಪಾಪಹರಾ ಶುಭಾ ।**
**ಯಾ ತು ಕಲ್ಯಾಣಿನೀ ನಾಮ ಪುರಾ ಕಲ್ಪೇಷು ಪಠ್ಯತೇ ॥೩೭॥**

**ತ್ವಮಾದಿಕರ್ತಾ ಭವ ಸೌಕರೇಽಸ್ಮಿನ್**
**ಕಲ್ಪೇ ಮಹಾವೀರವರಪ್ರಧಾನ ।**
**ಯಸ್ಯಾಃ ಸ್ಮರನ್ ಕೀರ್ತನಮಪ್ಯಶೇಷಂ**
**ವಿನಷ್ಟಪಾಪಸ್ತ್ರಿದಶಾಧಿಪಃ ಸ್ಯಾತ್ ॥೩೮॥**

**ಕೃತ್ವಾ ಚ ಯಾಮಪ್ಸರಸಾಮಧೀಶಾ**
**ವೇಶ್ಯಾ ಕೃತಾ ಹ್ಯನ್ಯಭವಾಂತರೇಷು ।**
**ಆಭೀರಕನ್ಯಾಽತಿಕುತೂಹಲೇನ**
**ಸೈವೋರ್ವಶೀ ಸಂಪ್ರತಿ ನಾಕಪೃಷ್ಠೇ ॥೩೯॥**

---

೩೬. ಎಲೈ ಭೀಮಸೇನನೆ, ಆದುದರಿಂದ ನೀನು ಸತ್ತ್ವಗುಣವನ್ನವಲಂಬಿಸಿ, ವಿಮತ್ಸರನಾಗಿ, ಸ್ನೇಹದಿಂದ ನಿನಗೆ ನಾನು ಹೇಳಿದ ಈ ವ್ರತವನ್ನು ಮಾಡು.

೩೭. ಓ ವೀರಾ, ನೀನು ಆಚರಿಸುವ ಈ ವ್ರತವು ನಿನ್ನ ಹೆಸರಿನಿಂದಲೇ ಪ್ರಖ್ಯಾತವಾಗುವುದು. ಇದೇ ಸರ್ವಪಾಪಹರವೂ ಶುಭವೂ ಆದ ಭೀಮದ್ವಾದಶಿ ಎಂಬುದು. ಹಿಂದಿನ ಕಲ್ಪಗಳಲ್ಲಿ ಇದನ್ನು ಕಲ್ಯಾಣಿನೀವ್ರತವೆಂದು ಹೇಳುತ್ತಿದ್ದರು.

೩೮. ಎಲೈ ವೀರಾಗ್ರೇಸರನೇ, ಈ ಶ್ವೇತವರಾಹಕಲ್ಪದಲ್ಲಿ ಈ ವ್ರತವನ್ನು ನೀನೇ ಮೊದಲು ಆಚರಿಸತಕ್ಕವನಾಗು. ಈ ವಿಧಾನವನ್ನು ಸಾಂಗವಾಗಿ ಸ್ಮರಿಸಿದರೂ ಸಾಕು. ಅಂತಹವನು ಪಾಪಗಳನ್ನೆಲ್ಲ ಕಳೆದುಕೊಂಡು ಅಮರೇಂದ್ರನಾಗುವನು.

೩೯. ಗೊಲ್ಲರ ಮಗಳೊಬ್ಬಳು ಬಹಳ ಶ್ರದ್ಧೆಯಿಂದ ಈ ವ್ರತವನ್ನು ಮಾಡಿ ಪುನರ್ಜನ್ಮದಲ್ಲಿ ಅಪ್ಸರಸ್ತ್ರೀಯರ ಒಡತಿಯಾಗಿ ದೇವವೇಶ್ಯೆಯೆನಿಸಿದಳು. ಓ ಭೀಮಾ, ಅವಳೇ ಈಗ ಊರ್ವಶಿಯಾಗಿ ಸ್ವರ್ಗದಲ್ಲಿ ಮೆರೆಯುತ್ತಿರುವಳು.

**ಜಾತಾऽಥವಾ ವೈಶ್ಯಕುಲೋದ್ಭವಾಪಿ**
**ಪುಲೋಮಕನ್ಯಾ ಪುರುಹೂತಪತ್ನೀ।**
**ತತ್ರಾಪಿ ತಸ್ಯಾಃ ಪರಿಚಾರಿಕೇಯಂ**
**ಮಮ ಪ್ರಿಯಾ ಸಂಪ್ರತಿ ಸತ್ಯಭಾಮಾ** ॥೬೦॥

**ಸ್ನಾತಃ ಪುರಾ ಮಂಡಲಮೇಷ ತದ್ವ**
**ತ್ತೇಜೋಮಯಂ ವೇದಶರೀರಮಾಪ।**
**ಅಸ್ಯಾಂ ಚ ಕಲ್ಯಾಣತಿಥೌ ವಿವಸ್ವಾ**
**ಸಹಸ್ರಧಾರೇಣ ಸಹಸ್ರರಶ್ಮಿಃ** ॥೬೧॥

**ಇದಮೇವ ಕೃತಂ ಮಹೇಂದ್ರಮುಖ್ಯೈ**
**ರ್ವಸುಭಿರ್ದೇವಸುರಾರಿಭಿಸ್ತಥಾ ತು।**
**ಫಲಮಸ್ಯ ನ ಶಕ್ಯತೇऽಭಿವಕ್ತುಂ**
**ಯದಿ ಜಿಹ್ವಾಯುತಕೋಟಯೋ ಮುಖೇ ಸ್ಯುಃ** ॥೬೨॥

---

೬೦. ಅಲ್ಲದೆ ಹಿಂದೆ ವೈಶ್ಯಕುಲದಲ್ಲಿ ಹುಟ್ಟಿದವಳಾದರೂ ಈ ವ್ರತಾಚರಣೆಯ ಫಲವಾಗಿ ಪುಲೋಮಪುತ್ರಿಯು ಇಂದ್ರನ ಪತ್ನಿಯಾದಳು. ಈಗ ನನ್ನ ಪ್ರಿಯಪತ್ನಿಯಾಗಿರುವ ಸತ್ಯಭಾಮೆಯೂ ಸಹ ಹಿಂದಿನ ಜನ್ಮದಲ್ಲಿ ಆ ವೈಶ್ಯ ಪುತ್ರಿಯ ಪರಿಚಾರಿಕೆಯಾಗಿದ್ದಳು.

೬೧. ಈ ಸೂರ್ಯನು ಹಿಂದೆ ಮಂಗಳಕರವಾದ ಈ ದ್ವಾದಶೀ ತಿಥಿಯಲ್ಲಿ ಸಹಸ್ರಧಾರಾ ಪಾತ್ರೆಯಿಂದ ಸ್ನಾನಮಾಡಿದನು. ಅದರ ಫಲವಾಗಿ ತೇಜೋಮಂಡಲವನ್ನೂ ವೇದ ಶರೀರವನ್ನೂ ಪಡೆದನು.

೬೨. ಮಹೇಂದ್ರನೇ ಮೊದಲಾದ ದಿಕ್ಪಾಲಕರು, ವಸುಗಳು, ದೇವತೆಗಳು, ರಾಕ್ಷಸರು ಇವರೆಲ್ಲರೂ ಇದೇ ವ್ರತವನ್ನು ಮಾಡಿದರು. ಬಾಯಿಯಲ್ಲಿ ಹತ್ತು ಸಾವಿರ ಕೋಟಿ ನಾಲಗೆಗಳಿದ್ದರೂ ಇದರ ಫಲವನ್ನು ಹೇಳಲು ಸಾಧ್ಯವಿಲ್ಲ.

ಕಲಿಕಲುಷವಿದಾರಿಣೀಮನಂತಾ
ಮಿತಿ ಕಥಯಿಷ್ಯತಿ ಯಾದವೇಂದ್ರಸೂನುಃ ।
ಅಪಿ ನರಕಗತಾರ್ ಪಿತೄನಶೇಷಾ
ನಲಮುದ್ಧರ್ತುಮಿಹೈವ ಯಃ ಕರೋತಿ ॥೬೩॥

ಯ ಇದಮಘವಿದಾರಣಂ ಶೃಣೋತಿ ಭಕ್ತ್ಯಾ
ಪರಿಪಠತೀಹ ಪರೋಪಕಾರಹೇತೋಃ ।
ವ್ರತಮಿಹ ವಿಹಿತಂ ಪರಂ ನರೇಂದ್ರ
ಪ್ರಪತತಿ ನೈವ ಸ ಸಂಸೃತೇರ್ಹಿ ಮಧ್ಯೇ ॥೬೪॥

ಕಲ್ಯಾಣಿನೀ ನಾಮ ಪುರಾ ಬಭೂವ
ಯಾ ದ್ವಾದಶೀ ಮಾಘದಿನೇಷು ಪೂಜ್ಯಾ ।
ಸಾ ಪಾಂಡುಪುತ್ರೇಣ ಕೃತಾ ಭವಿಷ್ಯ
ತ್ಯನಂತಪುಣ್ಯಾಽನಘ ಭೀಮಪೂರ್ವಾ ॥೬೫॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಭೀಮದ್ವಾದಶೀವ್ರತಂ
ನಾಮೈಕೋನಸಪ್ತತಿತಮೋಽಧ್ಯಾಯಃ

೬೩. ಯಾದವೇಂದ್ರನ ಪುತ್ರನಾದ ಶ್ರೀಕೃಷ್ಣಪರಮಾತ್ಮನು ಕಲಿದೋಷ ಪರಿಹಾರಕವೂ ಅನಂತವೂ ಆದ ಈ ವ್ರತವನ್ನು ಹಿಂದೆ ಹೇಳಿದ ಕ್ರಮದಲ್ಲಿ ವಿವರಿಸುವನು. ಇದನ್ನು ನಡೆಸುವವನು ನರಕವಲ್ಲಿ ಬಿದ್ದ ಪಿತೃಗಳೆಲ್ಲರನ್ನೂ ಕೂಡ ಉದ್ಧಾರಮಾಡಬಲ್ಲನು.

೬೪. ಎಲೈ ರಾಜನೇ, ಪಾಪನಾಶಕವಾದ ಈ ಉತ್ತಮವ್ರತವನ್ನು ಭಕ್ತಿಯಿಂದ ಯಾವನು ಕೇಳುತ್ತಾನೋ, ಅಥವಾ ಪರೋಪಕಾರಕ್ಕಾಗಿ ಓದುತ್ತಾನೋ ಆತನು ಮರಳಿ ಸಂಸಾರದ ಮಧ್ಯದಲ್ಲಿ ಬೀಳುವುದಿಲ್ಲ. ಇದು ನಿಜ.

೬೫. ಎಲೈ ನಿರ್ಮಲನೇ, ಈ ಮಾಘಶುಕ್ಲ ದ್ವಾದಶೀ ವ್ರತಕ್ಕೆ ಹಿಂದೆ ಕಲ್ಯಾಣಿನಿಯೆಂಬ ಪೂಜ್ಯವಾದ ಹೆಸರಿತ್ತು. ಪಾಂಡು ಪುತ್ರನಾದ ಭೀಮಸೇನನು ಅದನ್ನು ನಡೆಸಿದ ತರುವಾಯ ಆ ತಿಥಿಗೆ ಅನಂತ ಪುಣ್ಯಪ್ರದವಾದ ಭೀಮದ್ವಾದಶಿ ಯೆಂಬ ಪ್ರಖ್ಯಾತಿ ಬರುವುದು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಭೀಮದ್ವಾದಶೀ ವ್ರತದ ವಿಧಿಯನ್ನು ಹೇಳಿದೆ.

ಮಾಘಶುಕ್ಲ ದಶಮಿಯ ದಿನ ಘೃತಾಭ್ಯಂಜನವನ್ನೂ, ತಿಲಸ್ನಾನವನ್ನೂ ಮಾಡಿ ವಿಷ್ಣುವನ್ನು ಪೂಜಿಸಬೇಕು. ಏಕಾದಶಿಯಲ್ಲಿ ನಿರಾಹಾರನಾಗಿ ಇತಿಹಾಸ ಪುರಾಣಗಳನ್ನು ಕೇಳುತ್ತ ರಾತ್ರಿಯನ್ನು ಕಳೆಯಬೇಕು. ಮಾರನೆಯ ದಿನ ಕಲಶ ಸ್ಥಾಪನಪೂರ್ವಕವಾಗಿ ವ್ರತವನ್ನು ನಡೆಸಬೇಕು. ಬ್ರಾಹ್ಮಣರಿಗೆ ಕಾರ್ಪಣ್ಯವಿಲ್ಲದೆ ವಸ್ತ್ರಹಿರಣ್ಯಾದಿ ಸಕಲ ದಾನಗಳನ್ನೂ ಕೊಡಬೇಕು. ಶ್ರೀಕೃಷ್ಣಪರಮಾತ್ಮನ ಅಪ್ಪಣೆಯಂತೆ ಮೊತ್ತಮೊದಲು ಭೀಮಸೇನನು ಈ ವ್ರತವನ್ನಾಚರಿಸಿದ ಕಾರಣ ಇದಕ್ಕೆ ಭೀಮದ್ವಾದಶಿಯೆಂಬ ಹೆಸರು ಬಂದಿತು. ಹಿಂದಿನ ಕಲ್ಪಗಳಲ್ಲಿ ಇದಕ್ಕೆ ಕಲ್ಯಾಣಿನೀವ್ರತವೆಂಬ ಪ್ರಸಿದ್ಧಿಯಿತ್ತು. ಇದು ಅನಂತ ಫಲಪ್ರದವಾದುದು. ಶಚಿ, ಸತ್ಯಭಾಮೆ, ಊರ್ವಶಿ ಮುಂತಾದವರೆಲ್ಲರೂ ಶ್ರೇಷ್ಠತೆಯನ್ನು ಪಡೆದುದು ಈ ವ್ರತದ ಆಚರಣೆಯಿಂದ. ಸೂರ್ಯನು ತೇಜೋಮಂಡಲವನ್ನೂ, ವೇದಮಯವಾದ ಶರೀರವನ್ನೂ ಇದರಿಂದಲೇ ಸಂಪಾದಿಸಿದನು. ಈ ವ್ರತವನ್ನು ಮಾಡಿದವನು ಮತ್ತೆ ಸಂಸಾರದ ಗೊಂದಲಕ್ಕೆ ಬೀಳುವುದಿಲ್ಲ. ದುರ್ಗತಿಗಿಳಿದ ಅವನ ಪಿತೃಗಳೆಲ್ಲರೂ ಸದ್ಗತಿಯನ್ನು ಐದುವರು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಭೀಮದ್ವಾದಶೀವ್ರತವೆಂಬ
ಅರವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

## ಅಥ ಸಪ್ತತಿತಮೋಽಧ್ಯಾಯಃ

॥ ಬ್ರಹ್ಮೋವಾಚ ॥

ವರ್ಣಾಶ್ರಮಾಣಾಂ ಪ್ರಭವಃ ಪುರಾಣೇಷು ಮಯಾ ಶ್ರುತಃ ।
ಸದಾಚಾರಸ್ಯ ಭಗವನ್ ಧರ್ಮಶಾಸ್ತ್ರವಿನಿಶ್ಚಯಃ ।
ಪಣ್ಯಸ್ತ್ರೀಣಾಂ ಸದಾಚಾರಂ ಶ್ರೋತುಮಿಚ್ಛಾಮಿ ತತ್ತ್ವತಃ ॥ ೧ ॥

॥ ಈಶ್ವರ ಉವಾಚ ॥

ತಸ್ಮಿನ್ನೇವ ಯುಗೇ ಬ್ರಹ್ಮನ್ಸಹಸ್ರಾಣಿ ತು ಷೋಡಶ ।
ವಾಸುದೇವಸ್ಯ ನಾರೀಣಾಂ ಭವಿಷ್ಯಂತ್ಯಂಬುಜೋದ್ಭವ ॥ ೨ ॥

ತಾಭಿರ್ವಸಂತಸಮಯೇ ಕೋಕಿಲಾಲಿಕುಲಾಕುಲೇ ।
ಪುಷ್ಪಿತೇ ಪವನೋತ್ಫುಲ್ಲಕಲ್ಹಾರಸರಸಸ್ತಟೇ ॥ ೩ ॥

ನಿರ್ಭರಾಪಾನಗೋಷ್ಠೀಷು ಪ್ರಸಕ್ತಾಭಿರಲಂಕೃತಃ ।
ಕುರಂಗನಯನಃ ಶ್ರೀಮಾನ್ ಮಾಲತೀಕೃತಶೇಖರಃ ॥ ೪ ॥

---

೧. ಬ್ರಹ್ಮನು ಹೇಳಿದನು.—ವರ್ಣಾಶ್ರಮಗಳ ಉತ್ಪತ್ತಿ ವಿಚಾರವನ್ನು ಪುರಾಣಗಳಲ್ಲಿ ಕೇಳಿದ್ದೇನೆ. ಎಲೈ ಪೂಜ್ಯನೇ, ಧರ್ಮಶಾಸ್ತ್ರಗಳಲ್ಲಿ ವರ್ಣಿಸಿರುವಂತೆ ಸದಾಚಾರವಾವುದೆಂದೂ ತಿಳಿದಿದ್ದೇನೆ. ವೇಶ್ಯಾಸ್ತ್ರೀಯರ ಸದ್ಧರ್ಮವನ್ನು ಯಥಾವತ್ತಾಗಿ ನಿನ್ನಿಂದ ಕೇಳಲು ಬಯಸುತ್ತೇನೆ.

೨. ಈಶ್ವರನು ಹೇಳಿದನು.—ಎಲೈ ಬ್ರಹ್ಮನೇ, ಅದೇ ದ್ವಾಪರಯುಗದಲ್ಲಿ ವಸುದೇವನ ಪುತ್ರನಾದ ಶ್ರೀಕೃಷ್ಣನಿಗೆ ಹದಿನಾರು ಸಾವಿರ ಜನ ಪತ್ನಿಯರಾಗುವರು.

೩-೬. ವಸಂತರ್ತುವಿನಲ್ಲೊಮ್ಮೆ ಕೋಗಿಲೆಗಳೂ ದುಂಬಿಗಳೂ ಇಂಪಾಗಿ ಕೂಗುತ್ತಿರುವುವು. ವನದಲ್ಲಿ ಹೂಗಳು ಅರಳಿರುವುವು. ಜಲಾಶಯಗಳಲ್ಲಿ ತಾವರೆಗಳು ಮಂದಮಾರುತದಿಂದ ಬಿರಿದಿರುವುವು. ಆಗ ಸರೋವರದ ತೀರದಲ್ಲಿ ಆ ಸ್ತ್ರೀಯರು ಸ್ವೇಚ್ಛೆಯಿಂದ ಮಧುಪಾನಾಸಕ್ತರಾಗಿರುವರು. ಅದೇ ವೇಳೆಯಲ್ಲಿ ಅರಿಪುರಾಂತಕನಾದ ಸಾಂಬನು ಜಿಂಕೆಯ ಕಣ್ಣುಗಳಂತೆ ಕಣ್ಣುಗಳು **ಹೊಳೆ**

ಗರ್ಚ್ಛೇ ಸಮೀಪಮಾರ್ಗೇಣ ಸಾಂಬಃ ಪರಪುರಂಜಯಃ ।
ಸಾಕ್ಷಾತ್ಕಂದರ್ಪರೂಪೇಣ ಸರ್ವಾಭರಣಭೂಷಿತಃ ॥ ೫ ॥

ಅನಂಗಶರತಪ್ತಾಭಿಃ ಸಾಭಿಲಾಷಮವೇಕ್ಷಿತಃ ।
ಪ್ರವೃದ್ಧೋ ಮನ್ಮಥಸ್ತಾಸಾಂ ಭವಿಷ್ಯತಿ ಯದಾತ್ಮನಿ ॥ ೬ ॥

ತದಾವೇಕ್ಷ್ಯ ಜಗನ್ನಾಥಃ ಸರ್ವತೋ ಜ್ಞಾನಚಕ್ಷುಷಾ ।
ಶಾಪಂ ವಕ್ಷ್ಯತಿ ತಾಸ್ಸರ್ವಾ ವೋ ಹರಿಷ್ಯಂತಿ ದಸ್ಯವಃ ।
ಮತ್ಪರೋಕ್ಷಂ ಯತಃ ಕಾಮಲೌಲ್ಯಾದೀದೃಗ್ವಿಧಂ ಕೃತಂ ॥ ೭ ॥

ತತಃ ಪ್ರಸಾದಿತೋ ದೇವ ಇದಂ ವಕ್ಷ್ಯತಿ ಶಾರ್ಙ್ಗಭೃತ್ ।
ತಾಭಿಃ ಶಾಪಾಭಿತಪ್ತಾಭಿರ್ಭಗವಾನ್ಭೂತಭಾವನಃ ॥ ೮ ॥

ಉತ್ತಾರಭೂತಂ ದಾಸತ್ವೇ ಸಮುದ್ರಾದ್ಬ್ರಾಹ್ಮಣಪ್ರಿಯಃ ।
ಉಪದೇಕ್ಷ್ಯತ್ಯನಂತಾತ್ಮಾ ಭಾವಿಕಲ್ಯಾಣಕಾರಕಂ ॥ ೯ ॥

---

ಯುತ್ತಿರಲು, ಮಾಲತೀಮಾಲೆಯನ್ನು ಮುಡಿದು, ಸರ್ವಾಭರಣಗಳನ್ನೂ ತೊಟ್ಟು, ಪ್ರೈಪೆತ್ತು ಬಂದ ಕಂದರ್ಪದೇವನೋ ಎಂಬಂತೆ ಸಮೀಪದ ಮಾರ್ಗದಲ್ಲಿ ಹೋಗುತ್ತಿರುವನು. ಆ ನಾರಿಯರು ಅವನನ್ನು ಅಕ್ಕರೆಯಿಂದ ನೋಡಿ ಅನಂಗಶರಪೀಡಿತರಾಗುವರು. ಅವರ ಮನಸ್ಸಿನಲ್ಲಿ ಕಾಮಾಸಕ್ತಿಯು ಅಧಿಕವಾಗುವುದು.

೭. ಜಗತ್ಸ್ವಾಮಿಯಾದ ಕೃಷ್ಣಪರಮಾತ್ಮನು ತನ್ನ ಜ್ಞಾನದೃಷ್ಟಿಯಿಂದ ಅದನ್ನರಿಯುವನು. "ನಾನು ಎದುರಿನಲ್ಲಿಲ್ಲದಿರುವಾಗ ನೀವು ಕಾಮಾಸಕ್ತಿಯಿಂದ ಹೀಗೆ ಮಾಡಿದಿರಿ. ಆದುದರಿಂದ ನಿಮ್ಮೆಲ್ಲರನ್ನೂ ಕಳ್ಳರು ಅಪಹರಿಸುವರು" ಎಂದು ಶಾಪವನ್ನು ಕೊಡುವನು.

೮. ಶಾಪಪೀಡಿತರಾದ ಆ ನಾರಿಯರು ಬೇಡಿಕೊಳ್ಳಲು, ಜಗತ್ಕರ್ತನಾದ ಪರಮಾತ್ಮನು ಸಮಾಧಾನಗೊಂಡು ಇಂತೆಂದು ಹೇಳುವನು.

೯. ಅನಂತರೂಪಿಯೂ, ಬ್ರಾಹ್ಮಣಪ್ರಿಯನೂ ಆದ ವಾಸುದೇವನು ದಾಸ್ಯದಲ್ಲಿಯೂ ಆತ್ಮೋಜ್ಜೀವನಕ್ಕೆ ಸಹಕಾರಿಯಾದ, ಮುಂದೆ ಮಂಗಳವನ್ನು ಕೊಡುವ ಉಪಾಯವನ್ನು ಸಮುದ್ರಮಧ್ಯದಿಂದ ಅವರಿಗೆ ಉಪದೇಶಿಸುವನು.

ಭವತೀನಾಮೃಷಿರ್ದಾಲ್ಭ್ಯೋ ಯದ್ವ್ರತಂ ಕಥಯಿಷ್ಯತಿ ।
ತದೇವೋತ್ತಾರಣಾಯಾಲಂ ದಾಸತ್ವೇಽಪಿ ಭವಿಷ್ಯತಿ ।
ಇತ್ಯುಕ್ತ್ವಾ ತಾಃ ಪರಿಷ್ವಜ್ಯ ಗತೋ ದ್ವಾರವತೀಶ್ವರಃ ॥೧೦॥

ತತಃ ಕಾಲೇನ ಮಹತಾ ಭಾರಾವತರಣೇ ಕೃತೇ ।
ನಿವೃತ್ತೇ ಮೌಸಲೇ ತದ್ವತ್ಕೇಶವೇ ದಿವಮಾಗತೇ ॥೧೧॥

ಶೂನ್ಯೇ ಯದುಕುಲೇ ಸರ್ವೈಶ್ಚೋರೈರಪಿ ಜಿತೇಽರ್ಜುನೇ ।
ಹೃತಾಸು ಕೃಷ್ಣಪತ್ನೀಷು ದಾಸಭೋಗ್ಯಾಸು ಚಾಂಬುಧೌ ॥೧೨॥

ತಿಷ್ಠಂತೀಷು ಚ ದೌರ್ಗತ್ಯಸಂತಪ್ತಾಸು ಚತುರ್ಮುಖ ।
ಆಗಮಿಷ್ಯತಿ ಯೋಗಾತ್ಮಾ ದಾಲ್ಭ್ಯೋ ನಾಮ ಮಹಾತಪಾಃ ॥೧೩॥

ತಾಸ್ತಮರ್ಘ್ಯೇಣ ಸಂಪೂಜ್ಯ ಪ್ರಣಿಪತ್ಯ ಪುನಃ ಪುನಃ ।
ಲಾಲಪ್ಯಮಾನಾ ಬಹುಶೋ ಬಾಷ್ಪಪರ್ಯಾಕುಲೇಕ್ಷಣಾಃ ॥೧೪॥

---

೧೦. "ದಾಲ್ಭ್ಯಮಹರ್ಷಿಯು ನಿಮಗೆ ಹೇಳುವ ವ್ರತವು ದಾಸ್ಯಭಾವದಲ್ಲಿದ್ದರೂ ನಿಮ್ಮನ್ನು ಸದ್ಗತಿಗೊಯ್ಯುವುದು." ಹೀಗೆ ಹೇಳಿ, ಅವರನ್ನಾಲಿಂಗಿಸಿ ಕೃಷ್ಣನು ಹೊರಟುಹೋಗುವನು.

೧೧. ಬಳಿಕ ಎಷ್ಟೋ ಕಾಲವು ಕಳೆದುಹೋಗುವುದು. ಭಗವಂತನು ಅವತರಿಸಿ ಭೂಭಾರವನ್ನಿಳಿಸುವನು. ಯಾದವರ ವಿನಾಶಕಾರಣವಾದ ಮುಸಲ ವೃತ್ತಾಂತವೂ ನಡೆದುಹೋಗುವುದು. ಕೃಷ್ಣನು ಸ್ವರ್ಗವನ್ನು ಸೇರುವನು.

೧೨-೧೩. ಯದುವಂಶವು ಬರಿದಾಗುವುದು. ಅರ್ಜುನನನ್ನು ಕಳ್ಳರು ಸೋಲಿಸಿ ಕೃಷ್ಣನ ಪತ್ನಿಯರನ್ನಪಹರಿಸುವರು. ಆ ರಮಣಿಯರು ಚೋರರ ದಾಸಿಯರಾಗಿ, ಸಮುದ್ರತಟದಲ್ಲಿ ಕುಳಿತು ತಮ್ಮ ದುರ್ಗತಿಗಾಗಿ ಸಂತಪ್ತರಾಗುವರು. ಆಗ, ಓ ಚತುರ್ಮುಖಾ, ಯೋಗಸಿದ್ಧನಾದ ದಾಲ್ಭ್ಯನೆಂಬ ಮಹಾತಪಸ್ವಿಯು ಅಲ್ಲಿಗೆ ಬರುವನು.

೧೪. ಆಕೆಯರು ಅವನನ್ನು ಅರ್ಘ್ಯದಿಂದ ಸತ್ಕರಿಸಿ, ಮತ್ತೆ ಮತ್ತೆ ನಮಸ್ಕಾರಮಾಡಿ, ಕಣ್ಣುಗಳಲ್ಲಿ ನೀರು ಹರಿಯುತ್ತಿರಲು ಬಹುವಾಗಿ ಗೋಳಿಡುವರು.

ಸ್ಮರಂತ್ಯೋ ವಿಪುಲಾನ್ ಭೋಗಾನ್ ದಿವ್ಯಮಾಲ್ಯಾನುಲೇಪನಂ ।
ಭರ್ತಾರಂ ಜಗತಾಮೀಶಮನಂತಮಪರಾಜಿತಂ ॥೧೫॥

ದಿವ್ಯಾನುಭಾವಾಂ ಚ ಪುರೀಂ ನಾನಾರತ್ನಗೃಹಾಣಿ ಚ ।
ದ್ವಾರಕಾವಾಸಿನಃ ಸರ್ವಾನ್ ದೇವರೂಪಾನ್ ಕುಮಾರಕಾನ್ ।
ಪ್ರಶ್ನಮೇವಂ ಕರಿಷ್ಯಂತಿ ಮುನೇರಭಿಮುಖಂ ಸ್ಥಿತಾಃ ॥೧೬॥

॥ ಸ್ತ್ರಿಯ ಊಚುಃ ॥

ದಸ್ಯುಭಿರ್ಭಗವನ್ ಸರ್ವಾಃ ಪರಿಭುಕ್ತಾ ವಯಂ ಬಲಾತ್ ।
ಸ್ವಧರ್ಮಚ್ಯವನೇऽಸ್ಮಾಕಮಸ್ಮಿನ್ನಃ ಶರಣಂ ಭವ ॥೧೭॥

ಆದಿಷ್ಟೋऽಸಿ ಪುರಾ ಬ್ರಹ್ಮನ್ ಕೇಶವೇನ ಚ ಧೀಮತಾ ।
ಕಸ್ಮಾದೀಶೇನ ಸಂಯೋಗಂ ಪ್ರಾಪ್ಯ ವೇಶ್ಯಾತ್ವಮಾಗತಾಃ ॥೧೮॥

---

೧೫. ಹಿಂದೆ ತಾವು ಅನುಭವಿಸಿದ ಬಗೆ ಬಗೆಯ ಭೋಗಗಳನ್ನೂ, ಸ್ವರ್ಗೀಯವಾದ ಗಂಧ ಪುಷ್ಪಗಳನ್ನೂ, ಅನಂತನೂ, ಅಪರಾಜಿತನೂ, ಜಗದೀಶ್ವರನೂ ಆದ ತಮ್ಮ ಪತಿಯನ್ನೂ ಸ್ಮರಿಸಿಕೊಳ್ಳುವರು.

೧೬. ಮಹಾ ಮಹಿಮೆಯಿಂದ ಕೂಡಿದ ದ್ವಾರಾವತೀನಗರವೂ, ಬಗೆ ಬಗೆಯ ರತ್ನಖಚಿತವಾದ ಉಪ್ಪರಿಗೆಗಳೂ, ರೂಪದಲ್ಲಿ ದೇವತೆಗಳಿಗೆ ಸಮಾನರಾದ ಪುರನಿವಾಸಿಗಳೂ ಮತ್ತು ತಮ್ಮ ಕುಮಾರಕರೂ ಅವರ ನೆನಪಿಗೆ ಬರುವರು. ಬಳಿಕ ಆ ತಪಸ್ವಿಯ ಮುಂದೆ ನಿಂತು ಅವರು ಹೀಗೆ ಪ್ರಶ್ನೆಮಾಡುವರು.

೧೭. ಸ್ತ್ರೀಯರು ಹೇಳಿದರು.—"ಎಲೈ ಪೂಜ್ಯನೇ, ನಮ್ಮೆಲ್ಲರನ್ನೂ ಚೋರರು ಬಲಾತ್ಕಾರದಿಂದ ಉಪಭೋಗಿಸಿದರು. ನಾವೀಗ ಸ್ವಧರ್ಮದಿಂದ ಭ್ರಷ್ಟರಾದೆವು. ಈ ಸಂಕಟಕಾಲದಲ್ಲಿ ನೀನು ನಮಗೆ ರಕ್ಷಕನಾಗು.

೧೮. ಎಲೈ ಬ್ರಾಹ್ಮಣೋತ್ತಮನೇ, ಸರ್ವಜ್ಞನಾದ ಕೇಶವನು ನಿನಗೆ ಹಿಂದೆಯೇ ಅಪ್ಪಣೆಮಾಡಿರುವನು. ಸಾಕ್ಷಾದ್ಭಗವಂತನ ಸಮಾಗಮವನ್ನು ಪಡೆದಿದ್ದ ನಮಗೆ ಈ ವೇಶ್ಯಾತ್ವವು ಬರಲು ಕಾರಣವೇನು?

ವೇಶ್ಯಾನಾಮಪಿ ಯೋ ಧರ್ಮಸ್ತಂ ನೋ ಬ್ರೂಹಿ ತಪೋಧನ ।
ಕಥಯಿಷ್ಯತ್ಯತಸ್ತಾಸಾಂ ಸ ದಾಲ್ಭ್ಯಶ್ಚೈಕಿತಾಯನಃ ॥೧೯॥

॥ ದಾಲ್ಭ್ಯ ಉವಾಚ ॥

ಜಲಕ್ರೀಡಾವಿಹಾರೇಷು ಪುರಾ ಸರಸಿ ಮಾನಸೇ ।
ಭವತೀನಾಂ ಚ ಸರ್ವಾಸಾಂ ನಾರದೋಽಭ್ಯಾಶಮಾಗತಃ ॥೨೦॥

ಹುತಾಶನಸುತಾಃ ಸರ್ವಾ ಭವಂತ್ಯೋಽಪ್ಸರಸಃ ಪುರಾ ।
ಅಪ್ರಣಮ್ಯಾವಲೇಪೇನ ಪರಿಪೃಷ್ಟಃ ಸ ಯೋಗವಿತ್ ।
ಕಥಂ ನಾರಾಯಣೋಽಸ್ಮಾಕಂ ಭರ್ತಾ ಸ್ಯಾದಿತ್ಯುಪಾದಿಶ ॥೨೧॥

ತಸ್ಮಾದ್ವರಪ್ರದಾನಂ ವಃ ಶಾಪಶ್ಚಾಯಮಭೂತ್ಪುರಾ ।
ಶಯ್ಯಾದ್ವಯಪ್ರದಾನೇನ ಮಧುಮಾಧವಮಾಸಯೋಃ ॥೨೨॥

ಸುವರ್ಣೋಪಸ್ಕರೋತ್ಸರ್ಗಾದ್ದ್ವಾದಶ್ಯಾಂ ಶುಕ್ಲಪಕ್ಷತಃ ।
ಭರ್ತಾ ನಾರಾಯಣೋ ನೂನಂ ಭವಿಷ್ಯತ್ಯನ್ಯಜನ್ಮನಿ ॥೨೩॥

೧೯. ಓ ತಪೋಧನಾ, ವೇಶ್ಯೆಯರ ಧರ್ಮವಾದರೂ ಏನು? ಅದನು ನಮಗೆ ತಿಳಿಸು" ಬಳಿಕ ದಾಲ್ಭ್ಯಮಹರ್ಷಿಯು ಏಕಾಗ್ರಚಿತ್ತನಾಗಿ ಅವರಿಗೆ ಹೇಳುವನು.

೨೦. ದಾಲ್ಭ್ಯಮುನಿ ಹೇಳಿದನು.— ಹಿಂದೆ ಮಾನಸ ಸರೋವರದಲ್ಲಿ ನೀವೆಲ್ಲರೂ ನೀರಾಟವಾಡುತ್ತಿದ್ದಿರಿ. ಆಗ ನಾರದಮಹರ್ಷಿಯು ನಿಮ್ಮ ಬಳಿಗೆ ಬಂದನು.

೨೧. ಅಂದು ನೀವೆಲ್ಲರೂ ಅಗ್ನಿಯ ಕನ್ಯೆಯರೂ ಅಪ್ಸರಸ್ತ್ರೀಯರೂ ಆಗಿದ್ದಿರಿ. ಆ ಗರ್ವದಿಂದ ಆ ಮಹಾಮುನಿಗೆ ನಮಸ್ಕಾರಮಾಡದೆ "ನಾರಾಯಣನು ನಮಗೆ ಪತಿಯಾಗುವ ವಿಧಾನವೆಂತು? ಹೇಳಿಕೊಡು" ಎಂದು ಅವನನ್ನು ಕೇಳಿದಿರಿ. ಆದುದರಿಂದ ಆ ಮಹರ್ಷಿಯು ನಿಮಗೆ ವರವನ್ನೂ ಶಾಪವನ್ನೂ ಕೊಟ್ಟನು.

೨೨-೨೩. "ಚೈತ್ರ ವೈಶಾಖ ಮಾಸಗಳ ಶುಕ್ಲಪಕ್ಷದ್ವಾದಶಿಯಲ್ಲಿ ಶಯನಗಳೆರಡನ್ನೂ, ಸುವರ್ಣವನ್ನೂ, ಇನ್ನೂ ಉಳಿದ ಭೋಗವಸ್ತುಗಳನ್ನೂ ದಾನಮಾಡಿರಿ. ಮುಂದಿನ ಜನ್ಮದಲ್ಲಿ ನಿಮಗೆ ನಾರಾಯಣನು ನಿಜವಾಗಿ ಪತಿಯಾಗುವನು.

ಯದಕೃತ್ವಾ ಪ್ರಣಾಮಂ ಮೇ ರೂಪಸೌಭಾಗ್ಯಮತ್ಸರಾತ್ ।
ಪರಿಪೃಷ್ಟೋಽಸ್ಮಿ ತೇನಾಶು ವಿಯೋಗೋ ವೋ ಭವಿಷ್ಯತಿ ।
ಚೋರೈರಪಹೃತಾಃ ಸರ್ವಾ ವೇಶ್ಯಾಭಾವಮವಾಪ್ಸ್ಯಥ ||೨೪||

ಏವಂ ನಾರದಶಾಪೇನ ಕೇಶವಸ್ಯ ಚ ಧೀಮತಃ ।
ವೇಶ್ಯಾತ್ವಮಾಗತಾಃ ಸರ್ವಾ ಭವಂತ್ಯಃ ಕಾಮಮೋಹಿತಾಃ ।
ಇದಾನೀಮಪಿ ಯದ್ವಕ್ಷ್ಯೇ ತಚ್ಛೃಣುಧ್ವಂ ವರಾಂಗನಾಃ ||೨೫||

ಪುರಾ ದೇವಾಸುರೇ ಯುದ್ಧೇ ಹತೇಷು ಶತಶಃ ಸುರೈಃ ।
ದಾನವಾಸುರದೈತ್ಯೇಷು ರಾಕ್ಷಸೇಷು ತತಸ್ತತಃ ||೨೬||

ತೇಷಾಂ ವ್ರಾತಸಹಸ್ರಾಣಿ ಶತಾನ್ಯಪಿ ಚ ಯೋಷಿತಾಂ ।
ಪರಿಣೀತಾನಿ ಯಾನಿ ಸ್ಯುರ್ಬಲಾದ್ಭುಕ್ತಾನಿ ಯಾನಿ ವೈ ।
ತಾನಿ ಸರ್ವಾಣಿ ದೇವೇಶಃ ಪ್ರೋವಾಚ ವದತಾಂ ವರಃ ||೨೭||

---

೨೪. ರೂಪ ಸೌಭಾಗ್ಯಗಳ ಗರ್ವದಿಂದ ನನಗೆ ನಮಸ್ಕಾರವನ್ನು ಮಾಡದೆ ಪ್ರಶ್ನೆಮಾಡಿದ ಕಾರಣ ನಿಮಗೆ ಶೀಘ್ರವಾಗಿಯೇ ಆತನ ವಿಯೋಗವೂ ಆಗುವುದು. ನೀವೆಲ್ಲರೂ ಚೋರರಿಂದ ಅಪಹೃತರಾಗುವಿರಿ ; ವೇಶ್ಯಾಭಾವವನ್ನು ಪಡೆಯುವಿರಿ.”

೨೫. ಹೀಗೆ ಕಾಮಮೋಹಿತರಾದ ನೀವೆಲ್ಲರೂ ನಾರದನ ಮತ್ತು ಸರ್ವಜ್ಞನಾದ ಕೃಷ್ಣಪರಮಾತ್ಮನ ಶಾಪದಿಂದ ವೇಶ್ಯಾಭಾವವನ್ನೈದಿದಿರಿ. ಎಲೌ ನಾರೀಮಣಿಯರೇ, ಈಗಲೂ ಕೂಡ ನಾನು ಹೇಳುವುದನ್ನು ಕೇಳಿರಿ.

೨೬. ದಾಲ್ಭ್ಯಮುನಿ ಹೇಳಿದನು.—ಹಿಂದೆ ದೇವತೆಗಳಿಗೂ ದಾನವರಿಗೂ ನಡೆದ ಯುದ್ಧದಲ್ಲಿ ದಾನವರು, ಅಸುರರು, ದೈತ್ಯರು, ಮತ್ತು ರಾಕ್ಷಸರು ನೂರುಗಟ್ಟಲೆಯಾಗಿ ಸುರರಿಂದ ಹತರಾದರು.

೨೭. ಆ ದಾನವಾದಿಗಳು ಬಲಾತ್ಕಾರದಿಂದ ಮದುವೆಯಾಗಿದ್ದ ಮತ್ತು ಉಪಭೋಗಿಸಿದ್ದ ಲಕ್ಷಗಟ್ಟಲೆಯ ಹೆಂಗಸರಿಗೆ ಚತುರವಚನನಾದ ದೇವೇಂದ್ರನು ಹೇಳಿದನು.

ಅಧ್ಯಾಯ ೭೦

॥ ಇಂದ್ರ ಉವಾಚ ॥

ವೇಶ್ಯಾಧರ್ಮೇಣ ವರ್ತಧ್ವಮಧುನಾ ನೃಪಮಂದಿರೇ ।
ಭಕ್ತಿಯುಕ್ತ್ಯಾ ವರಾರೋಹಾಸ್ತಥಾ ದೇವಕುಲೇಷು ಚ ॥೨೮॥

ರಾಜಾನಃ ಸ್ವಾಮಿನಸ್ತುಲ್ಯಾಃ ಸುತಾ ವಾಽಪಿ ಚ ತತ್ಸಮಾಃ ।
ಭವಿಷ್ಯತಿ ಚ ಸೌಭಾಗ್ಯಂ ಸರ್ವಾಸಾಮಪಿ ಶಕ್ತಿತಃ ॥೨೯॥

ಯಃ ಕಶ್ಚಿಚ್ಛುಲ್ಕಮಾದಾಯ ಗೃಹಮೇಷ್ಯತಿ ವಃ ಸದಾ ।
ನಿಧನೇನೋಪಚಾರ್ಯೋ ವಃ ಸ ತದಾಽನ್ಯತ್ರ ದಾಂಭಿಕಾತ್ ॥೩೦॥

ದೇವತಾನಾಂ ಪಿತೄಣಾಂ ಚ ಪುಣ್ಯಾಹೇ ಸಮುಪಸ್ಥಿತೇ ।
ಗೋಭೂಹಿರಣ್ಯಧಾನ್ಯಾನಿ ಪ್ರದೇಯಾನಿ ಸ್ವಶಕ್ತಿತಃ ।
ಬ್ರಾಹ್ಮಣಾನಾಂ ವರಾರೋಹಾಃ ಕಾರ್ಯಾಣಿ ವಚನಾನಿ ಚ ॥೩೧॥

ಯಚ್ಚಾಪ್ಯನ್ಯದ್ವ್ರತಂ ಸಮ್ಯಗುಪದೇಕ್ಷ್ಯಾಮ್ಯಹಂ ತತಃ ।
ಅವಿಚಾರೇಣ ಸರ್ವಾಭಿರನುಷ್ಠೇಯಂ ಚ ತತ್ಪುನಃ ॥೩೨॥

---

೨೮. ಇಂದ್ರನು ಹೇಳಿದನು.—ಎಲೌ ನಾರೀಮಣಿಗಳೇ, ನೀವು ಈಗ ಅರಮನೆಯಲ್ಲೂ ದೇವಾಲಯಗಳಲ್ಲೂ ಭಕ್ತಿಯಿಂದ ವೇಶ್ಯಾಧರ್ಮವನ್ನನುಸರಿಸುತ್ತ ನಡೆಯಿರಿ.

೨೯. ದೊರೆಗಳು ಪತಿಗೆ ಸಮಾನರು. ಅವರ ಮಕ್ಕಳಾದರೂ ಹಾಗಯೇ ಸರಿ. ಅವರನ್ನು ಶಕ್ತ್ಯನುಸಾರವಾಗಿ ಸೇವಿಸುವುದರಿಂದ ನಿಮ್ಮೆಲ್ಲರಿಗೂ ಸೌಭಾಗ್ಯವು ಲಭಿಸುವುದು.

೩೦. ನಿಮಗೆ ಕೊಡಬೇಕಾದ ದ್ರವ್ಯವನ್ನು ತೆಗೆದುಕೊಂಡು ನಿಮ್ಮ ಮನೆಗೆ ಬರುವಾತನನ್ನು, ಅವನು ವಂಚಕನಲ್ಲದೆ ಸರಳಸ್ವಭಾವದವನಾಗಿದ್ದರೆ, ನಿಮ್ಮ ಪ್ರಾಣಗಳನ್ನಾದರೂ ತೊರೆದು ಉಪಚರಿಸಿರಿ.

೩೧. ಎಲೌ ಸುಂದರಿಯರೇ, ದೇವತೆಗಳ ಇಲ್ಲವೇ ಪಿತೃಗಳ ಪುಣ್ಯದಿನವು ಬಂದಾಗ ನಿಮ್ಮ ಶಕ್ತಿಗೆ ತಕ್ಕಂತೆ ಬ್ರಾಹ್ಮಣರಿಗೆ ಗೋದಾನ, ಭೂದಾನ, ಹಿರಣ್ಯದಾನ ಮುಂತಾದುವುಗಳನ್ನು ಮಾಡಿರಿ. ಅವರ ಆಜ್ಞಾವಚನಗಳನ್ನು ಪಾಲಿಸಿರಿ.

೩೨. ನಾನು ನಿಮಗೆ ಮತ್ತೊಂದು ವ್ರತವನ್ನು ಉಪದೇಶಿಸುವೆನು. ಅದನ್ನು ಎಲ್ಲರೂ ಸಂಶಯಪಡದೆ ನಿಶ್ಚಲಭಕ್ತಿಯಿಂದ ನಡೆಸಬೇಕು.

ಸಂಸಾರೋತ್ತಾರಣಾಯಾಲಮೇತದ್ವ್ರತವಿದೋ ವಿದುಃ ।
ಯದಾ ಸೂರ್ಯದಿನೇ ಹಸ್ತಃ ಪುಷ್ಯೋ ಯಾಥ ಪುನರ್ವಸುಃ ||೩೩||

ಭವೇತ್ಸರ್ವೌಷಧೀಸ್ನಾನಂ ಸಮ್ಯಙ್ನಾರೀ ಸಮಾಚರೇತ್ ।
ತದಾ ಪಂಚಶರಸ್ಯಾಪಿ ಸಂನಿಧಾತೃತ್ವಮೇಷ್ಯತಿ ।
ಅರ್ಚಯೇತ್ಪುಂಡರೀಕಾಕ್ಷಮನಂಗಸ್ಯಾನುಕೀರ್ತನೈಃ ||೩೪||

ಕಾಮಾಯ ಪಾದೌ ಸಂಪೂಜ್ಯ ಜಂಘೇ ವೈ ಮೋಹಕಾರಿಣೇ ।
ಮೇಢ್ರಂ ಕಂದರ್ಪನಿಧಯೇ ಕಟಿಂ ಪ್ರೀತಿಮತೇ ನಮಃ ||೩೫||

ನಾಭಿಂ ಸೌಖ್ಯಸಮುದ್ರಾಯ ವಾಮಾಯ ಚ ತಥೋದರಂ ।
ಹೃದಯಂ ಹೃದಯೇಶಾಯ ಸ್ತನಾವಾಹ್ಲಾದಕಾರಿಣೇ ||೩೬||

---

೩೩. ಇದು ಸಂಸಾರದಿಂದ ಪಾರುಮಾಡತಕ್ಕ ಮಹಾವ್ರತವೆಂದು ವ್ರತ ವಿಧಾನವನ್ನು ಬಲ್ಲವರು ಹೇಳುತ್ತಾರೆ. ಹಸ್ತ, ಪುಷ್ಯ ಇಲ್ಲವೇ ಪುನರ್ವಸೂ ನಕ್ಷತ್ರಗಳೊಡಗೂಡಿದ ಭಾನುವಾರದ ದಿನ ಈ ವ್ರತವನ್ನು ಆಚರಿಸಬೇಕೆನ್ನುವ ಸ್ತ್ರೀಯು ಸಕಲ ವಿಧವಾದ ಔಷಧಿಗಳಿಂದಲೂ ಸ್ನಾನವನ್ನು ಮಾಡಬೇಕು.

೩೪. ಆಗ ಮನ್ಮಥನ ವಿಗ್ರಹವನ್ನು ಅರ್ಚಿಸಿ ಆತನ ಸಾನ್ನಿಧ್ಯವನ್ನೂ ಸಂಪಾದಿಸಬೇಕು. ಅನಂಗನ ದಿವ್ಯನಾಮಗಳನ್ನು ಕೀರ್ತಿಸುತ್ತ ಪುಂಡರೀಕಾಕ್ಷನನ್ನು ಅರ್ಚಿಸಬೇಕು.

೩೫. ಕಾಮನಿಗೆ ನಮಸ್ಕಾರವೆಂದು ಪಾದಗಳನ್ನೂ, ಮೋಹಕಾರಿಗೆ ನಮಸ್ಕಾರವೆಂದು ಮೊಣಕಾಲುಗಳನ್ನೂ, ಕಂದರ್ಪನಿಗೆ ನಮಸ್ಕಾರವೆಂದು ಮೇಢ್ರವನ್ನೂ, ಪ್ರೀತಿವಂತನಿಗೆ ನಮಸ್ಕಾರವೆಂಮು ಮಧ್ಯಭಾಗವನ್ನೂ ಅರ್ಚಿಸಬೇಕು.

೩೬. ಸುಖಕ್ಕೆ ಸಮುದ್ರದಂತಿರುವವನಿಗೆ ನಮಸ್ಕಾರವೆಂಧು ನಾಭಿಯನ್ನೂ, ಸುಂದರನಿಗೆ ನಮಸ್ಕಾರವೆಂದು ಉದರವನ್ನೂ, ಹೃದಯೇಶನಿಗೆ ನಮಸ್ಕಾರವೆಂದು ಹೃದಯವನ್ನೂ, ಆಹ್ಲಾದಕಾರಿಗೆ ನಮಸ್ಕಾರವೆಂದು ಸ್ತನಪ್ರದೇಶವನ್ನೂ ಪೂಜಿಸಬೇಕು.

ಉತ್ಕಂಠಾಯೇತಿ ವೈ ಕಂಠಮಾಸ್ಯಮಾನಂದಕಾರಿಣೇ ।
ವಾಮಾಂಗಂ ಪುಷ್ಪಚಾಪಾಯ ಪುಷ್ಪಬಾಣಾಯ ದಕ್ಷಿಣಂ ॥೩೭॥

ಮಾನಸಾಯೇತಿ ವೈ ಮೌಲಿಂ ವಿಲೋಲಾಯೇತಿ ಮೂರ್ಧಜಂ ।
ಸರ್ವಾತ್ಮನೇ ಚ ಸರ್ವಾಂಗಂ ದೇವದೇವಸ್ಯ ಪೂಜಯೇತ್ ॥೩೮॥

ನಮಃ ಶಿವಾಯ ಶಾಂತಾಯ ಪಾಶಾಂಕುಶಧರಾಯ ಚ ।
ಗದಿನೇ ಪೀತವಸ್ತ್ರಾಯ ಶಂಖಚಕ್ರಧರಾಯ ಚ ॥೩೯॥

ನಮೋ ನಾರಾಯಣಾಯೇತಿ ಕಾಮದೇವಾತ್ಮನೇ ನಮಃ ।
ಸರ್ವಶಾಂತ್ಯೈ ನಮಃ ಪ್ರೀತ್ಯೈ ನಮೋ ರತ್ಯೈ ಶ್ರಿಯೈ ನಮಃ ॥೪೦॥

ನಮಃ ಪುಷ್ಟ್ಯೈ ನಮಸ್ತುಷ್ಟ್ಯೈ ನಮಃ ಸರ್ವಾರ್ಥಸಂಪದೇ ।
ಏವಂ ಸಂಪೂಜ್ಯ ದೇವೇಶಮನಂಗಾತ್ಮಕಮೀಶ್ವರಂ ।
ಗಂಧೈರ್ಮಾಲ್ಯೈಸ್ತಥಾ ಧೂಪೈರ್ನೈವೇದ್ಯೇನ ಚ ಕಾಮಿನೀ ॥೪೧॥

---

೩೭. ಉತ್ಕಂಠನಿಗೆ ನಮಸ್ಕಾರವೆಂದು ಕಂಠವನ್ನೂ, ಆನಂದಕಾರಿಗೆ ನಮಸ್ಕಾರವೆಂದು ಮುಖವನ್ನೂ, ಪುಷ್ಪಚಾಪನಿಗೆ ನಮಸ್ಕಾರವೆಂದು ಎಡಪಾರ್ಶ್ವವನ್ನೂ, ಪುಷ್ಪಬಾಣನಿಗೆ ನಮಸ್ಕಾರವೆಂದು ಬಲಭಾಗವನ್ನೂ ಅರ್ಚಿಸಬೇಕು.

೩೮. ಮನಸ್ಸಿನಲ್ಲಿ ಜನಿಸಿದಾತನಿಗೆ ನಮಸ್ಕಾರವೆಂದು ಕಿರೀಟವನ್ನೂ, ವಿಲೋಲನಿಗೆ ನಮಸ್ಕಾರವೆಂದು ಕೇಶಗಳನ್ನೂ, ಸರ್ವಾತ್ಮನಿಗೆ ನಮಸ್ಕಾರವೆಂದು ದೇವಾಧಿದೇವನ ಸರ್ವಾಂಗವನ್ನೂ ಪೂಜಿಸಬೇಕು.

೩೯. ಮಂಗಲಕಾರಿಗೆ, ಶಾಂತನಿಗೆ, ಪಾಶಾಂಕುಶಧರನಿಗೆ, ಗದಾಧಾರಿಗೆ, ಪೀತಾಂಬರನಿಗೆ, ಶಂಖಚಕ್ರಧರನಿಗೆ ನಮಸ್ಕಾರ.

೪೦. ನಾರಾಯಣನಿಗೆ ನಮಸ್ಕಾರ; ಕಾಮದೇವಸ್ವರೂಪನಿಗೆ ನಮಸ್ಕಾರ; ಶಾಂತಿಗೆ ನಮಸ್ಕಾರ; ಪ್ರೀತಿಗೆ ನಮಸ್ಕಾರ; ರತಿಗೆ ನಮಸ್ಕಾರ; ಶ್ರೀಗೆ ನಮಸ್ಕಾರ.

೪೧. ಪುಷ್ಟಿಗೆ ನಮಸ್ಕಾರ; ತುಷ್ಟಿಗೆ ನಮಸ್ಕಾರ; ಸರ್ವಾರ್ಥಸಂಪತ್ಸ್ವರೂಪಳಿಗೆ ನಮಸ್ಕಾರ ಎಂದು ಮನ್ಮಥರೂಪನಾದ ಸರ್ವೇಶ್ವರನನ್ನು ಪುಷ್ಪಗಳಿಂದ ಅರ್ಚಿಸಿ, ಶ್ರದ್ಧಾಯುಕ್ತಳಾದ ಕಾಮಿನಿಯು ಗಂಧಪುಷ್ಪ ಧೂಪನೈವೇದ್ಯಗಳಿಂದ ಪೂಜಿಸಬೇಕು.

ತತ ಆಹೂಯ ಧರ್ಮಜ್ಞಂ ಬ್ರಾಹ್ಮಣಂ ವೇದಪಾರಗಂ ।
ಅವ್ಯಂಗಾವಯವಂ ಪೂಜ್ಯ ಗಂಧಪುಷ್ಪಾರ್ಚನಾದಿಭಿಃ ॥೪೨॥

ಶಾಲೇಯತಂಡುಲಪ್ರಸ್ಥಂ ಘೃತಪಾತ್ರೇಣ ಸಂಯುತಂ ।
ತಸ್ಮೈ ವಿಪ್ರಾಯ ಸಂದದ್ಯಾನ್ಮಾಧವಃ ಪ್ರೀಯತಾಮಿತಿ ॥೪೩॥

ಯಥೇಷ್ಟಾಹಾರಭುಕ್ತಂ ವೈ ತಮೇವ ದ್ವಿಜಸತ್ತಮಂ ।
ರತ್ಯರ್ಥಂ ಕಾಮದೇವೋಽಯಮಿತಿ ಚೇತಸಿ ಧಾರಯೇತ್ ॥೪೪॥

ಯದ್ಯದಿಚ್ಛತಿ ವಿಪ್ರೇಂದ್ರಸ್ತತ್ತತ್ಕುರ್ಯಾದ್ವಿಲಾಸಿನೀ ।
ಸರ್ವಭಾವೇನ ಚಾಽಽತ್ಮಾನಮರ್ಪಯೇತ್ಸ್ಮಿತಭಾಷಿಣೀ ॥೪೫॥

ಏವಮಾದಿತ್ಯವಾರೇಣ ಸರ್ವಮೇತತ್ಸಮಾಚರೇತ್ ।
ತಂಡುಲಪ್ರಸ್ಥದಾನಂ ಚ ಯಾವನ್ಮಾಸಾಸ್ತ್ರಯೋದಶ ॥೪೬॥

---

೪೨. ಬಳಿಕ ಧರ್ಮಜ್ಞನೂ, ವೇದಪಾರಂಗತನೂ, ಅಂಗವೈಕಲ್ಯವಿಲ್ಲದವನೂ ಆದ ಬ್ರಾಹ್ಮಣನನ್ನು ಕರೆದು ಗಂಧಪುಷ್ಪಾರ್ಚನಾದಿಗಳಿಂದ ಸತ್ಕರಿಸಬೇಕು.

೪೩. ತುಪ್ಪದ ಪಾತ್ರೆಯೊಡನೆ ಒಂದು ಬಳ್ಳ ಅಕ್ಕಿಯನ್ನು "ಮಾಧವನು ಪ್ರೀತನಾಗಲಿ" ಎಂದು ಹೇಳಿ ಆ ಬ್ರಾಹ್ಮಣನಿಗೆ ಕೊಡಬೇಕು.

೪೪. ಅಷ್ಟೇ ಅಲ್ಲದೆ ಅವನ ಇಷ್ಟಾನುಸಾರವಾಗಿ ಭೋಜನಮಾಡಿಸಿ "ರತಿಗೋಸ್ಕರವಾಗಿ ಬಂದಿರುವ ಕಾಮದೇವನೇ ಈತನೆಂದು ಮನಸ್ಸಿನಲ್ಲಿ ಅನುಸಂಧಾನಮಾಡಬೇಕು.

೪೫. ಬ್ರಾಹ್ಮಣೋತ್ತಮನು ಅಪೇಕ್ಷಿಸಿದುದನ್ನೆಲ್ಲ ಆ ವಿಲಾಸಿನಿಯು ನಡೆಸಿ ಕೊಡಬೇಕು. ಮುಗುಳುನಗೆಯೊಡನೆ ಮಾತನಾಡುತ್ತ, ಅನನ್ಯಮನಸ್ಸಿನಿಂದ ತನ್ನನ್ನು ಆತನಿಗೆ ಅರ್ಪಿಸಬೇಕು.

೪೬. ಭಾನುವಾರದಲ್ಲಿ ತೊಡಗಿ ಹದಿಮೂರು ತಿಂಗಳ ಕಾಲ ಇದೆಲ್ಲವನ್ನೂ ನಡೆಸಬೇಕು. ಒಂದು ಬಳ್ಳ ಅಕ್ಕಿಯನ್ನೂ ಸಹ ದಾನಮಾಡುತ್ತಲಿರಬೇಕು.

ತತಸ್ತ್ರಯೋದಶೇ ಮಾಸಿ ಸಂಪ್ರಾಪ್ತೇ ತಸ್ಯ ಭಾಮಿನೀ ।
ವಿಪ್ರಸ್ಯೋಪಸ್ಕರೈರ್ಯುಕ್ತಾಂ ಶಯ್ಯಾಂ ದದ್ಯಾದ್ವಿಲಕ್ಷಣಾಂ ॥೪೭॥
ಸೋಪಧಾನಕವಿಶ್ರಾಮಾಂ ಸಾಸ್ತರಾವರಣಾಂ ಶುಭಾಂ ।
ಪ್ರದೀಪೋಪಾನಹಚ್ಛತ್ರಪಾದುಕಾಸನಸಂಯುತಾಂ ॥೪೮॥
ಸಪತ್ನೀಕಮಲಂಕೃತ್ಯ ಹೇಮಸೂತ್ರಾಂಗುಲೀಯಕೈಃ ।
ಸೂಕ್ಷ್ಮವಸ್ತ್ರೈಃ ಸಕಟಕೈರ್ಧೂಪಮಾಲ್ಯಾನುಲೇಪನೈಃ ॥೪೯॥
ಕಾಮದೇವಂ ಸಪತ್ನೀಕಂ ಗುಡಕುಂಭೋಪರಿ ಸ್ಥಿತಂ ।
ತಾಮ್ರಪಾತ್ರಾಸನಗತಂ ಹೈಮನೇತ್ರಪಟಾವೃತಂ ॥೫೦॥
ಸಕಾಂಸ್ಯಭಾಜನೋಪೇತಮಿಕ್ಷುದಂಡಸಮನ್ವಿತಂ ।
ದದ್ಯಾದೇತೇನ ಮಂತ್ರೇಣ ತಥೈಕಾಂ ಗಾಂ ಪಯಸ್ವಿನೀಂ ॥೫೧॥
ಯಥಾಂತರಂ ನ ಪಶ್ಯಾಮಿ ಕಾಮಕೇಶವಯೋಃ ಸದಾ ।
ತಥೈವ ಸರ್ವಕಾಮಾಪ್ತಿರಸ್ತು ವಿಷ್ಣೋ ಸದಾ ಮಮ ॥೫೨॥

---

೪೭-೪೮. ಬಳಿಕ ಹದಿಮೂರನೆಯ ತಿಂಗಳಲ್ಲಿ ತಲೆದಿಂಬು, ಒರಗುದಿಂಬು, ಮಗ್ಗುಲು ಹಾಸಿಗೆ, ದುಬಟಿ ಮುಂತಾದುವುಗಳೊಡಗೂಡಿದ ಶ್ರೇಷ್ಠವಾದ ಹಾಸಿಗೆಯನ್ನು ಸಕಲ ಸಾಮಗ್ರಿಗಳೊಡನೆ ಆ ಬ್ರಾಹ್ಮಣನಿಗೆ ದಾನಮಾಡಬೇಕು. ದೀಪ, ಪಾದರಕ್ಷೆ, ಕೊಡೆ, ಪಾದುಕೆ, ಆಸನ ಇವನ್ನೂ ಸಹ ಅದರೊಡನೆ ಕೊಡಬೇಕು.

೪೯. ಪತ್ನೀಸಹಿತನಾದ ಆತನನ್ನು ಚಿನ್ನದ ಉಡಿದಾರ, ಉಂಗುರ, ಉತ್ತಮವಾದ ವಸ್ತ್ರಗಳು, ಬಳೆಗಳು ಇವುಗಳಿಂದ ಅಲಂಕರಿಸಿ, ಗಂಧಪುಷ್ಪಧೂಪಗಳಿಂದ ಪೂಜಿಸಬೇಕು.

೫೦-೫೧. ತಾಮ್ರದ ತಟ್ಟೆಯಲ್ಲಿ ಬೆಲ್ಲವನ್ನು ತುಂಬಿದ ಕುಂಭವನ್ನಿರಿಸಿ, ಅದರ ಮೇಲೆ ಪತ್ನೀಸಹಿತನಾದ ಕಾಮದೇವನ ಮೂರ್ತಿಯನ್ನು ಜರತಾರಿವಸ್ತ್ರವನ್ನುಡಿಸಿ ಕುಳ್ಳಿರಿಸಬೇಕು. ಕಂಚಿನ ಪಾತ್ರೆಯನ್ನೂ, ಕಬ್ಬಿನ ಜಲ್ಲೆಯನ್ನೂ ಪ್ರತಿಮೆಯ ಕೈಗೆ ಕೊಡಬೇಕು. ಈ ವಿಗ್ರಹವನ್ನೂ ಹಾಲುಕರೆಯುವ ಹಸುವನ್ನೂ ಮುಂದಿನ ಮಂತ್ರದಿಂದ ದಾನಮಾಡಬೇಕು.

೫೨. ''ಮನ್ಮಥನಿಗೂ ವಿಷ್ಣುವಿಗೂ ಯಾವ ಬಗೆಯ ವ್ಯತ್ಯಾಸವನ್ನೂ ನಾನರಿಯೆನು. ಎಲೈ ವಿಷ್ಣುವೇ, ನನಗೆ ಯಾವಾಗಲೂ ಸಕಲೇಷ್ಟಾರ್ಥಗಳೂ ಸಿದ್ಧಿಸಲಿ.

ಯಥಾ ನ ಕಮಲಾ ದೇಹಾತ್ಪ್ರಯಾತಿ ತವ ಕೇಶವ ।
ತಥಾ ಮಮಾಪಿ ದೇವೇಶ ಶರೀರಂ ಸ್ವೀಕುರು ಪ್ರಭೋ ॥೫೩॥

ತಥಾ ಚ ಕಾಂಚನಂ ದೇವಂ ಪ್ರತಿಗೃಹ್ಯ ದ್ವಿಜೋತ್ತಮಃ ।
ಕ ಇದಂ ಕಸ್ಮಾ‌ದ್ದಾದಿತಿ ವೈದಿಕಂ ಮಂತ್ರಮೀರಯೇತ್ ॥೫೪॥

ತತಃ ಪ್ರದಕ್ಷಿಣೀಕೃತ್ಯ ವಿಸರ್ಜ್ಯ ದ್ವಿಜಪುಂಗವಂ ।
ಶಯ್ಯಾಸನಾದಿಕಂ ಸರ್ವಂ ಬ್ರಾಹ್ಮಣಸ್ಯ ಗೃಹಂ ನಯೇತ್ ॥೫೫॥

ತತಃ ಪ್ರಭೃತಿ ಯೋ ವಿಪ್ರೋ ರತ್ಯರ್ಥಂ ಗೃಹಮಾಗತಃ ।
ಸ ಮಾನ್ಯಃ ಸೂರ್ಯವಾರೇ ಚ ಸ ಸಂಪೂಜ್ಯೋ ಭವೇತ್ತದಾ ॥೫೬॥

ಏವಂ ತ್ರಯೋದಶಂ ಯಾವನ್ಮಾಸಮೇವಂ ದ್ವಿಜೋತ್ತಮಾನ್ ।
ತರ್ಪಯೇತ ಯಥಾಕಾಮಂ ಪ್ರೋಷಿತೇಽನ್ಯಂ ಸಮಾಚರೇತ್ ॥೫೭॥

ತದನುಜ್ಞಯಾ ರೂಪವಾನ್ಯೋ ಯಾವದಭ್ಯಾಗತೋ ಭವೇತ್ ।
ಆತ್ಮನೋಽಪಿ ಯಥಾವಿಘ್ನಂ ಗರ್ಭಭೂತಿಕರಂ ಪ್ರಿಯಂ ॥೫೮॥

---

೫೩. ಓ ಕೇಶವಾ, ಲಕ್ಷ್ಮಿಯು ನಿನ್ನ ಶರೀರವನ್ನು ಬಿಟ್ಟು ಕದಲುವುದಿಲ್ಲ. ಹಾಗೆಯೇ, ಪ್ರಭೂ, ದೇವೇಶಾ, ನನ್ನ ಶರೀರವನ್ನೂ ನಿನ್ನದೆಂದು ಸ್ವೀಕರಿಸಿ ನನ್ನ ಕೈ ಬಿಡದಿರು.''

೫೪. ಬ್ರಾಹ್ಮಣೋತ್ತಮನೂ ಸಹ ಕಾಮದೇವನ ಸುವರ್ಣವಿಗ್ರಹವನ್ನು ತೆಗೆದುಕೊಂಡು '' ಕ ಇದಂ ಕಸ್ಮಾ‌ದ್ದಾತ್ '' ಎಂಬ ವೇದಮಂತ್ರವನ್ನುಚ್ಚರಿಸ ಬೇಕು.

೫೫. ಬಳಿಕ ಪ್ರದಕ್ಷಿಣೆ ಮಾಡಿ ಬ್ರಾಹ್ಮಣ ಪುಂಗವನನ್ನು ಬೀಳ್ಕೊಟ್ಟು, ಶಯ್ಯಾಸನಾದಿಗಳೆಲ್ಲವನ್ನೂ ಆತನ ಮನೆಗೆ ಕಳುಹಿಸಿಕೊಡಬೇಕು.

೫೬. ಆ ಬಳಿಕ ರತಿಗಾಗಿ ಮನೆಗೆ ಬರತಕ್ಕ ಬ್ರಾಹ್ಮಣನನ್ನು ಗೌರವಿಸ ಬೇಕು. ಭಾನುವಾರದ ದಿನ ಆತನನ್ನು ಪೂಜಿಸಬೇಕು.

೫೭-೫೮. ಹೀಗೆ ಹದಿಮೂರನೆಯ ತಿಂಗಳ ವರೆಗೂ ಬ್ರಾಹ್ಮಣೋತ್ತಮರನ್ನು ಅವರ ಇಷ್ಟಾನುಸಾರವಾಗಿ ತೃಪ್ತಿಪಡಿಸಬೇಕು. ಪ್ರಿಯನು ಪರಸ್ಥಳಕ್ಕೆ ಪ್ರಯಾಣ ಮಾಡಿದರೆ ಅವನ ಅಪ್ಪಣೆಯಂತೆ ಅವನು ಬರುವ ವರಗೆ, ಅಥವಾ ತಾನು ಗರ್ಭ ಧರಿಸುವ ವರೆಗೆ ರೂಪವಂತನಾದ ಮತ್ತೊಬ್ಬನನ್ನು ಸೇವಿಸಬೇಕು.

ದೈವಂ ವಾ ಮಾನುಷಂ ವಾ ಸ್ಯಾದನುರಾಗೇಣ ವಾ ತತಃ ।
ಸಾ ವಾರಾನಷ್ಟಪಂಚಾಶದ್ಯಥಾಶಕ್ತಿ ಸಮಾಚರೇತ್ ॥೫೯॥

ಏತದ್ಧಿ ಕಥಿತಂ ಸಮ್ಯಗ್ವ್ರತೀನಾಂ ವಿಶೇಷತಃ ।
ಅಧರ್ಮೋಽಯಂ ತತೋ ನ ಸ್ಯಾದ್ವೇಶ್ಯಾನಾಮಿಹ ಸರ್ವದಾ ॥೬೦॥

ಪುರುಹೂತೇನ ಯತ್ಪ್ರೋಕ್ತಂ ದಾನವೀಷು ಪುರಾ ಮಯಾ ।
ತದಿದಂ ಸಾಂಪ್ರತಂ ಸರ್ವಂ ಭವತೀಷ್ವಪಿ ಯುಜ್ಯತೇ ॥೬೧॥

ಸರ್ವಪಾಪಪ್ರಶಮನಮನಂತಫಲದಾಯಕಂ ।
ಕಲ್ಯಾಣೀನಾಂ ಚ ಕಥಿತಂ ತತ್ಕುರುಧ್ವಂ ವರಾನನಾಃ ॥೬೨॥

ಕರೋತಿ ಯಾಽಶೇಷಮಖಂಡಮೇತತ್
ಕಲ್ಯಾಣಿನೀ ಮಾಧವಲೋಕಸಂಸ್ಥಾ ।
ಸಾ ಪೂಜಿತಾ ದೇವಗಣೈರಶೇಷೈ
ರಾನಂದಕೃತ್ಸ್ಥಾನಮುಪೈತಿ ವಿಷ್ಣೋಃ ॥೬೩॥

---

೫೯. ವೇಶ್ಯಾಸ್ತ್ರೀಯು ಪ್ರಿಯನ ಅಪ್ಪಣೆಯಂತೆ ಸೇವಿಸುವ ಪುರುಷನು ದೇವಾಂಶಸಂಭೂತನೋ ಮನುಷ್ಯನೋ ಆಗಿರಬಹುದು. ಹೀಗೆ ಅವಳು ಐವತ್ತೆಂಟು ವಾರಗಳ ಕಾಲ ತನ್ನ ಶಕ್ತ್ಯನುಸಾರವಾಗಿ ಮೇಲಿನ ವ್ರತವನು ನಡೆಸಬೇಕು.

೬೦. ನಿಮಗೆ ಈ ವ್ರತವನ್ನು ಸಾಂಗವಾಗಿ ವಿವರಿಸಿ ಹೇಳಿದ್ದೇನೆ. ಇದನ್ನು ಆಚರಿಸಿದ ಬಳಿಕ ವೇಶ್ಯೆಯರಿಗೆ ಅಧರ್ಮವು ಯಾವಾಗಲೂ ಬಾರದು.

೬೧. ಹಿಂದೆ ದಾನವ ಸ್ತ್ರೀಯರಿಗೆ ದೇವೇಂದ್ರನು ಹೇಳಿದ ಧರ್ಮವನ್ನೇ ನಾನೂ ನಿಮಗೆ ಹೇಳಿದೆನು. ಅದೆಲ್ಲ ನಿಮಗೂ ಒಪ್ಪುತ್ತದೆ.

೬೨. ಎಲೌ ಸುಂದರಿಯರೇ, ಸಕಲ ಪಾಪವನ್ನೂ ಕಳೆದು, ಅನಂತಫಲ ವನ್ನು ಕೊಡುವ ಈ ವ್ರತವನ್ನು ಮಂಗಳ ರೂಪಿಣಿಯರಾದ ನಿಮಗೆ ಹೇಳಿರುವೆನು. ಇದನ್ನು ಮಾಡಿರಿ.

೬೩. ಮಂಗಳಾಂಗಿಯಾದ ಯಾವಾಕೆಯು ಈ ವ್ರತವನ್ನು ಅಖಂಡವಾಗಿ ನಡೆಸುವಳೋ ಅವಳು ಮಾಧವನ ಲೋಕದಲ್ಲಿ ವಾಸಿಸುವಳು. ದೇವವರ್ಗದವ ರೆಲ್ಲರೂ ಆಕೆಯನ್ನು ಪೂಜಿಸುವರು. ಅವಳು ವಿಷ್ಣುವಿನ ಪರಮಾನಂದಪ್ರದವಾದ ಸ್ಥಾನವನ್ನು ಸೇರುವಳು.

**॥ ಶ್ರೀ ಭಗವಾನುವಾಚ ॥**

**ತಪೋಧನಃ ಸೋಽಪ್ಯಭಿಧಾಯ ಚೈವಂ**
**ತದಾ ಚ ತಾಸಾಂ ವ್ರತಮಂಗನಾನಾಂ ।**
**ಸ್ವಸ್ಥಾನಮೇಷ್ಯತ್ಯನು ತಾಃ ಸಮಸ್ತ**
**ವ್ರತಂ ಕರಿಷ್ಯಂತಿ ಚ ದೇವಯೋನೇ ॥೬೪॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇಽನಂಗದಾನವ್ರತಂ ನಾಮ ಸಪ್ತತಿತಮೋಽಧ್ಯಾಯಃ**

---

೬೪. ಭಗವಂತನು ಹೇಳಿದನು.—ಎಲೈ ಬ್ರಹ್ಮನೇ, ದಾಲ್ಭ್ಯಮಹರ್ಷಿಯು ಆ ಗೋಪಾಂಗನೆಯರಿಗೆ ವ್ರತವನ್ನು ಹೀಗೆ ಉಪದೇಶಿಸಿ ತನ್ನ ಸ್ಥಳಕ್ಕೆ ತೆರಳುವನು. ತರುವಾಯ ಅವರೂ ಸಹ ಆ ವ್ರತವನ್ನು ಸಾಂಗವಾಗಿ ನೆರವೇರಿಸುವರು.

## ಅಧ್ಯಾಯದ ಸಾರಾಂಶ

ಅನಂಗದಾನವ್ರತವನ್ನು ಈ ಅಧ್ಯಾಯದಲ್ಲಿ ವಿವರಿಸಿದೆ.

ವೇಶ್ಯಾಸ್ತ್ರೀಯರು ಅನುಸರಿಸಬೇಕಾದ ಸದ್ಧರ್ಮವನ್ನು ದಾಲ್ಭ್ಯಮಹರ್ಷಿಯು ಶ್ರೀಕೃಷ್ಣನ ಅವತಾರವು ಸಮಾಪ್ತಿಯಾದ ತರುವಾಯ ಆತನ ಪತ್ನಿಯರಿಗೆ ತಿಳಿಸುವನು. ಮನೆಗೆ ಬಂದು ಶುಲ್ಕವನ್ನು ಕೊಟ್ಟಾತನನ್ನು ವೇಶ್ಯೆಯು ತನ್ನ ಪ್ರಾಣಾಧಿಕನೆಂದು ತಿಳಿದು ಭಕ್ತಿಯಿಂದ ಸೇವಿಸಬೇಕು. ಹಸ್ತ, ಪುಷ್ಯ ಅಥವಾ ಪುನರ್ವಸೂ ನಕ್ಷತ್ರದೊಡಗೂಡಿದ ಭಾನುವಾರದ ದಿನ ಸಕಲ ಮೂಲಿಕೆಗಳಿಂದಲೂ ಸ್ನಾನಮಾಡಿ, ಮನ್ಮಥನ ದಿವ್ಯನಾಮಗಳಿಂದ ವಿಷ್ಣುವಿನ ಪ್ರತ್ಯಂಗವನ್ನೂ ಅರ್ಚಿಸಬೇಕು. ಬಳಿಕ ಧರ್ಮಜ್ಞನೂ ರೂಪವಂತನೂ ಆದ ಬ್ರಾಹ್ಮಣನನ್ನು ಕರೆದು ದಾನ ದಕ್ಷಿಣೆಗಳಿಂದ ಸತ್ಕರಿಸಬೇಕು. ಹೀಗೆ ಹದಿಮೂರು ತಿಂಗಳ ಕಾಲ ಭಾನುವಾರಗಳಲ್ಲಿ ಈ ವ್ರತವನ್ನು ಆಚರಿಸಬೇಕು. ಇದರಿಂದ ವೇಶ್ಯಾಧರ್ಮದಲ್ಲಿರುವ ಸ್ತ್ರೀಯರಿಗೆ ಸದ್ಗತಿ ದೊರಕುವುದು ; ಯಾವ ದೋಷವೂ ಘಟಿಸದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಅನಂಗದಾನವ್ರತವೆಂಬ ಎಪ್ಪತ್ತನೆಯ ಅಧ್ಯಾಯವು ಮುಗಿದುದು.

# ಅಥ ಏಕಸಪ್ತತಿತಮೋಽಧ್ಯಾಯಃ

॥ ಬ್ರಹ್ಮೋವಾಚ ॥

ಮೋಹಾದ್ವಾಪಿ ಮದಾದ್ವಾಪಿ ಯಃ ಪರಸ್ತ್ರೀಂ ಸಮಾಶ್ರಯೇತ್ ।
ತಸ್ಯಾಪಿ ನಿಷ್ಕೃತಿಂ ದೇವ ವದ ಸರ್ವಕೃಪಾಕರ ॥ ೧ ॥

ಭಗವನ್ ಪುರುಷಸ್ಯೇಹ ಸ್ತ್ರಿಯಾಶ್ಚ ವಿರಹಾದಿಕಂ ।
ಶೋಕವ್ಯಾಧಿಭಯಂ ದುಃಖಂ ನ ಭವೇದ್ಯೇನ ತದ್ವದ ॥ ೨ ॥

॥ ಶ್ರೀಭಗವಾನುವಾಚ ॥

ಶ್ರಾವಣಸ್ಯ ದ್ವಿತೀಯಾಯಾಂ ಕೃಷ್ಣಾಯಾಂ ಮಧುಸೂದನಃ ।
ಕ್ಷೀರಾರ್ಣವೇ ಸಪತ್ನೀಕಃ ಸದಾ ವಸತಿ ಕೇಶವಃ ॥ ೩ ॥

ತಸ್ಯಾಂ ಸಂಪೂಜ್ಯ ಗೋವಿಂದಂ ಸರ್ವಾನ್ ಕಾಮಾನ್ ಸಮಶ್ನುತೇ
ಗೋಭೂಹಿರಣ್ಯದಾನಾದಿ ಸಪ್ತಕಲ್ಪಶತಾನುಗಂ ॥ ೪ ॥

---

೧. ಬ್ರಹ್ಮನು ಹೇಳಿದನು.—ಎಲ್ಲರಲ್ಲೂ ದಯೆತೋರುವ ಓ ದೇವಾ, ಮೋಹದಿಂದಲೋ ಮದದಿಂದಲೋ ಪರಸ್ತ್ರೀಸಮಾಗಮವನ್ನು ಮಾಡತಕ್ಕವನಿಗೆ ಪ್ರಾಯಶ್ಚಿತ್ತವಾವುದು ?

೨. ಎಲೈ ಭಗವಂತಾ, ಪುರುಷನಿಗಾಗಲಿ ಸ್ತ್ರೀಗಾಗಲಿ ವಿರಹ, ಶೋಕ, ಭಯ, ದುಃಖ ಇವು ಆಗದಿರಬೇಕಾದರೆ ಮಾಡಬೇಕಾದದು ಏನು ? ಹೇಳು.

೩. ಭಗವಂತನು ಹೇಳಿದನು.—ಶ್ರಾವಣಮಾಸದ ಕೃಷ್ಣಪಕ್ಷ ದ್ವಿತೀಯೆಯ ದಿನ ಶ್ರೀಮನ್ನಾರಾಯಣನು ಪತ್ನೀಸಮೇತನಾಗಿ ಕ್ಷೀರಸಮುದ್ರದಲ್ಲಿ ತಪ್ಪದೆ ವಾಸಿಸುತ್ತಾನೆ.

೪. ಆ ತಿಥಿಯಲ್ಲಿ ಗೋವಿಂದನನ್ನು ಆರಾಧಿಸಿದರೆ ಸಕಲೇಷ್ಟಾರ್ಥಗಳೂ ಸಿದ್ಧಿಸುತ್ತವೆ. ಗೋದಾನ, ಹಿರಣ್ಯದಾನ ಮುಂತಾದುವುಗಳಿಂದ ಬರುವ ಪುಣ್ಯವು ಏಳು ನೂರು ಕಲ್ಪಗಳ ಕಾಲ ಅನುಸರಿಸಿ ಬಂದು ಫಲವನ್ನು ಕೊಡುವುದು.

ಅಶೂನ್ಯಶಯನಂ ನಾಮ ದ್ವಿತೀಯಾ ಸಂಪ್ರಕೀರ್ತಿತಾ ।
ತಸ್ಯಾಂ ಸಂಪೂಜಯೇದ್ವಿಷ್ಣುಮೇಭಿರ್ಮಂತ್ರೈರ್ವಿಧಾನತಃ ॥ ೫ ॥

ಶ್ರೀವತ್ಸಧಾರಿಞ್ಛ್ರೀಕಾಂತ ಶ್ರೀಧಾಮಞ್ಛ್ರೀಪತೇಽವ್ಯಯ ।
ಗಾರ್ಹಸ್ಥ್ಯಂ ಮಾ ಪ್ರಣಾಶಂ ಮೇ ಯಾತು ಧರ್ಮಾರ್ಥಕಾಮದಂ ॥ ೬ ॥

ಅಗ್ನಯೋ ಮಾ ಪ್ರಣಶ್ಯಂತು ದೇವತಾಃ ಪುರುಷೋತ್ತಮ ।
ಪಿತರೋ ಮಾ ಪ್ರಣಶ್ಯಂತು ಮಾಸ್ತು ದಾಂಪತ್ಯಭೇದನಂ ॥ ೭ ॥

ಲಕ್ಷ್ಮ್ಯಾ ವಿಯುಜ್ಯತೇ ದೇವ ನ ಕದಾಚಿದ್ಯಥಾ ಭವಾನ್ ।
ತಥಾ ಕಲತ್ರಸಂಬಂಧೋ ದೇವ ಮಾ ಮೇ ವಿಯುಜ್ಯತಾಂ ॥ ೮ ॥

ಲಕ್ಷ್ಮ್ಯಾ ನ ಶೂನ್ಯೋ ವರದ ಶಯ್ಯಾಂ ತ್ವಂ ಶಯನಂ ಗತಃ ।
ಶಯ್ಯಾ ಮಮಾಪ್ಯಶೂನ್ಯಾಸ್ತು ತಥೈವ ಮಧುಸೂದನ ॥ ೯ ॥

---

೫. ಮೇಲೆ ಹೇಳಿದ ದ್ವಿತೀಯೆಗೆ ಅಶೂನ್ಯಶಯನವೆಂಬ ಪ್ರಸಿದ್ಧಿಯುಂಟು. ಆ ದಿನದಲ್ಲಿ ವಿಷ್ಣುವನ್ನು ಈ ಮುಂದಿನ ಮಂತ್ರಗಳಿಂದ ಶಾಸ್ತ್ರೋಕ್ತವಾಗಿ ಪೂಜಿಸಬೇಕು.

೬. ಶ್ರೀವತ್ಸಧಾರಿಯೇ, ಶ್ರೀಕಾಂತನೇ, ಶ್ರೀನಿವಾಸನೇ, ಶ್ರೀಪತಿಯೇ, ಅವ್ಯಯನೇ, ಧರ್ಮಾರ್ಥಕಾಮಗಳನ್ನುಂಟುಮಾಡುವ ಗೃಹಸ್ಥಾಶ್ರಮವು ನನಗೆ ತಪ್ಪದಿರಲಿ.

೭. ಓಪಾಸನಾದ್ಯಗ್ನಿಗಳು ನನ್ನಿಂದ ದೂರಸರಿಯದಿರಲಿ. ಓ ಪುರುಷೋತ್ತಮಾ, ದೇವತೆಗಳೂ, ಪಿತೃಗಳೂ ನನ್ನನ್ನು ಕೈಬಿಡದಿರಲಿ; ನಮ್ಮ ದಾಂಪತ್ಯದಲ್ಲಿ ಛಿದ್ರ ಬಾರದಿರಲಿ.

೮. ಎಲೈ ದೇವಾ, ನೀನು ಲಕ್ಷ್ಮಿಯನ್ನೆಂದಿಗೂ ಅಗಲದಿರುವೆ. ಹಾಗೆಯೇ ನಾನೂ ಸಹ ನನ್ನ ಪತ್ನಿಯನ್ನು ತೊರೆಯದಿರುವಂತೆ ಅನುಗ್ರಹಿಸು.

೯. ವರದಾ, ಓ ಮಧುಸೂದನಾ, ನೀನು ಪವಡಿಸಿರುವ ಹಾಸಿಗೆಯು ಲಕ್ಷ್ಮಿಯಿಲ್ಲದೆ ಎಂದಿಗೂ ಬರಿದಾಗಿರದು. ನನ್ನ ಹಾಸಿಗೆಯೂ ಕೂಡ ಹಾಗೆಯೇ ಶೂನ್ಯವಾಗದಿರಲಿ.

ಗೀತವಾದಿತ್ರನಿರ್ಘೋಷಂ ದೇವದೇವಸ್ಯ ಕೀರ್ತಯೇತ್ ।
ಘಂಟಾ ಭವೇದಶಕ್ತಸ್ಯ ಸರ್ವವಾದ್ಯಮಯೀ ಯತಃ ॥೧೦॥

ಏವಂ ಸಂಪೂಜ್ಯ ಗೋವಿಂದಮಶ್ನೀಯಾತ್ತೈಲವರ್ಜಿತಂ ।
ನಕ್ತಮಕ್ಷಾರಲವಣಂ ಯಾವತ್ತತ್ಸ್ಯಾಚ್ಚತುಷ್ಟಯಂ ॥೧೧॥

ತತಃ ಪ್ರಭಾತೇ ಸಂಜಾತೇ ಲಕ್ಷ್ಮೀಪತಿಸಮನ್ವಿತಾಂ ।
ದೀಪಾನ್ನಭಾಜನೈರ್ಯುಕ್ತಾಂ ಶಯ್ಯಾಂ ದದ್ಯಾದ್ವಿಲಕ್ಷಣಾಂ ॥೧೨॥

ಪಾದುಕೋಪಾನಹಚ್ಛತ್ರಚಾಮರಾಸನಸಂಯುತಾಂ ।
ಅಭೀಷ್ಟೋಪಸ್ಕರೈರ್ಯುಕ್ತಾಂ ಶುಕ್ಲಪುಷ್ಪಾಂಬರಾವೃತಾಂ ॥೧೩॥

ಸೋಪಧಾನಕವಿಶ್ರಾಮಾಂ ಫಲೈರ್ನಾನಾವಿಧೈರ್ಯುತಾಂ ।
ತಥಾಽಽಭರಣಧಾನ್ಯೈಶ್ಚ ಯಥಾಶಕ್ತ್ಯಾ ಸಮನ್ವಿತಾಂ ॥೧೪॥

---

೧೦. ದೇವದೇವನಿಗೆ ಪ್ರೀತಿಯಾಗುವಂತೆ ಗಾನವನ್ನೂ ಮಂಗಲವಾದ್ಯವನ್ನೂ ಮಾಡಿಸಬೇಕು. ಇಷ್ಟಕ್ಕೆ ಶಕ್ತಿಯಿಲ್ಲದಿದ್ದರೆ ಘಂಟೆಯನ್ನು ಬಾರಿಸಬೇಕು. ಏಕೆಂದರೆ ಅದು ಸಕಲವಾದ್ಯಮಯವೆನಿಸಿರುವುದು.

೧೧. ಈ ರೀತಿಯಲ್ಲಿ ಗೋವಿಂದನನ್ನು ಆರಾಧಿಸಿ, ರಾತ್ರಿಯಲ್ಲಿ ಎಣ್ಣೆ, ಉಪ್ಪು, ಕಾರಗಳನ್ನು ಬಿಟ್ಟು ಭೋಜನಮಾಡಬೇಕು. ನಾಲ್ಕು ವ್ರತಗಳನ್ನು ಹೀಗೆ ನಡೆಸಬೇಕು.

೧೨. ಪ್ರಾತಃಕಾಲವಾದ ತರುವಾಯ ಲಕ್ಷ್ಮೀಪತಿಯ ವಿಗ್ರಹಸಹಿತವಾಗಿ ಉತ್ತಮವಾದ ಹಾಸಿಗೆಯನ್ನು ದೀಪ ಮತ್ತು ಅನ್ನಪಾತ್ರೆಗಳೊಡನೆ ದಾನಮಾಡಬೇಕು.

೧೩-೧೪. ಪಾದುಕೆ, ಪಾದರಕ್ಷೆ, ಚಾಮರ, ಆಸನ ಮತ್ತು ಮನಸ್ಸಿಗೆ ತೋರಿದ ಇತರ ಗೃಹೋಪಯುಕ್ತ ಸಾಮಗ್ರಿಗಳು, ಇವೆಲ್ಲವೂ ಈ ಸಂದರ್ಭದಲ್ಲಿ ಕೊಡಬೇಕಾದ ವಸ್ತುಗಳು. ಹಾಸಿಗೆಯನ್ನು ಬಿಳಿಯ ಹೂವಿನಿಂದ ಅಲಂಕರಿಸಿ, ಶುಭ್ರವಸ್ತ್ರವನ್ನು ಹಾಸಿ, ಒರಗುದಿಂಬು ತಲೆದಿಂಬುಗಳಿಂದ ಅಚ್ಚುಕಟ್ಟುಮಾಡಿರಬೇಕು. ಬಗೆಬಗೆಯ ಹಣ್ಣುಗಳು, ಆಭರಣಗಳು, ಧಾನ್ಯಗಳು ಇವುಗಳನ್ನೂ ಶಕ್ತಿಗೆ ತಕ್ಕಂತೆ ದಾನಮಾಡಬೇಕು.

**ಅವ್ಯಂಗಾಂಗಾಯ ವಿಪ್ರಾಯ ವೈಷ್ಣವಾಯ ಕುಟುಂಬಿನೇ ।**
**ದಾತವ್ಯಾ ವೇದವಿದುಷೇ ಭಾವೇನಾಪತಿತಾಯ ಚ ॥೧೫॥**

**ತತ್ರೋಪವಿಶ್ಯ ದಾಂಪತ್ಯಮಲಂಕೃತ್ಯ ವಿಧಾನತಃ ।**
**ಪತ್ನ್ಯಾಸ್ತು ಭಾಜನಂ ದದ್ಯಾದ್ಭಕ್ಷ್ಯಭೋಜ್ಯಸಮನ್ವಿತಂ ॥೧೬॥**

**ಬ್ರಾಹ್ಮಣಸ್ಯಾಪಿ ಸೌವರ್ಣೀಮುಪಸ್ಕರಸಮನ್ವಿತಾಂ ।**
**ಪ್ರತಿಮಾಂ ದೇವದೇವಸ್ಯ ಸೋದಕುಂಭಾಂ ನಿವೇದಯೇತ್ ॥೧೭॥**

**ಏವಂ ಯಸ್ತು ಪುಮಾನ್ ಕುರ್ಯಾದಶೂನ್ಯಶಯನಂ ಹರೇಃ ।**
**ವಿತ್ತಶಾಠ್ಯೇನ ರಹಿತೋ ನಾರಾಯಣಪರಾಯಣಃ ।**
**ನ ತಸ್ಯ ಪತ್ನ್ಯಾ ವಿರಹಃ ಕದಾಚಿದಪಿ ಜಾಯತೇ ॥೧೮॥**

**ನಾರೀ ವಾ ವಿಧವಾ ಬ್ರಹ್ಮನ್ಯಾವಚ್ಚಂದ್ರಾರ್ಕತಾರಕಂ ।**
**ನ ವಿರೂಪೌ ನ ಶೋಕಾರ್ತೌ ದಂಪತೀ ಭವತಃ ಕ್ವಚಿತ್ ॥೧೯॥**

---

೧೫. ಅಂಗಹೀನನಲ್ಲದವನೂ, ಕುಟುಂಬಿಯೂ, ವೇದಜ್ಞನೂ ತನ್ನ ಮನಸ್ಸಿಗೆ ಒಪ್ಪತಕ್ಕವನೂ, ವಿಷ್ಣುಭಕ್ತನೂ ಆದ ಬ್ರಾಹ್ಮಣನಿಗೆ ಅದನ್ನು ದಾನಮಾಡಬೇಕು.

೧೬. ದಂಪತಿಗಳನ್ನು ಹಾಸಿಗೆಯ ಮೇಲೆ ಕುಳ್ಳಿರಿಸಿ, ವಿಧ್ಯುಕ್ತವಾಗಿ ಗಂಧಾದಿಗಳಿಂದ ಅಲಂಕರಿಸಬೇಕು. ತರುವಾಯ ಭಕ್ಷ್ಯಭೋಜ್ಯಸಮೇತವಾದ ಪಾತ್ರೆಯನ್ನು ಪತ್ನಿಗೆ ಕೊಡಬೇಕು.

೧೭. ದೇವದೇವನ ಚಿನ್ನದ ಪ್ರತಿಮೆಯನ್ನು ಜಲಕುಂಭಸಹಿತವಾಗಿ ಸಂಬಾರಪದಾರ್ಥಗಳೊಡನೆ ಬ್ರಾಹ್ಮಣನಿಗೆ ದಾನಮಾಡಬೇಕು.

೧೮. ಈ ರೀತಿಯಾಗಿ ಕಾರ್ಪಣ್ಯಬುದ್ಧಿಯಿಲ್ಲದೆ ನಾರಾಯಣನಲ್ಲಿ ಅನನ್ಯ ಭಕ್ತಿಯನ್ನಿಟ್ಟು, ಅವನ ಪ್ರೀತಿಗಾಗಿ ಅಶೂನ್ಯಶಯನವ್ರತವನ್ನು ಆಚರಿಸುವ ಮನುಷ್ಯನಿಗೆ ಪತ್ನಿಯ ವಿಯೋಗವು ಎಂದಿಗೂ ಒದಗದು.

೧೯. ಓ ಚತುರ್ಮುಖಾ, ಹೆಂಗಸಿಗಾದರೋ ಚಂದ್ರಸೂರ್ಯ ನಕ್ಷತ್ರಗಳಿರುವ ವರೆಗೂ ಸೌಮಂಗಲ್ಯಸುಖವು ಲಭಿಸುವುದು. ದಂಪತಿಗಳಲ್ಲಿ ವೈರೂಪ್ಯ, ಶೋಕ, ಪೀಡೆ ಇವುಗಳು ಯಾವುವೂ ಬಾರವು.

**ನ ಪುತ್ರಪಶುರತ್ನಾನಿ ಕ್ಷಯಂ ಯಾಂತಿ ಪಿತಾಮಹ ।**
**ಸಪ್ತ ಕಲ್ಪಸಹಸ್ರಾಣಿ ಸಪ್ತ ಕಲ್ಪಶತಾನಿ ಚ ।**
**ಕುರ್ವನ್ನಶೂನ್ಯಶಯನಂ ವಿಷ್ಣುಲೋಕೇ ಮಹೀಯತೇ ॥೨೦॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇಽಶೂನ್ಯಶಯನವ್ರತಂ ನಾಮೈಕಸಪ್ತತಿತಮೋಽಧ್ಯಾಯಃ**

---

೨೦. ಪುತ್ರರ, ಪಶುಗಳ ಮತ್ತು ರತ್ನಗಳ ಸಂಪತ್ತಿಗೆ ಎಂದೂ ಕೊರತೆ ಬಾರದು. ಅಶೂನ್ಯಶಯನ ವ್ರತವನ್ನು ಆಚರಿಸಿದವನು ಏಳುಸಾವಿರದ ಏಳುನೂರು ಕಲ್ಪಗಳ ಕಾಲ ವಿಷ್ಣುಲೋಕದಲ್ಲಿ ಮನ್ನಣೆಯನ್ನು ಪಡೆಯುವನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಅಶೂನ್ಯಶಯನ ವ್ರತದ ವಿಧಿಯನ್ನು ಹೇಳಿದೆ.

ಶ್ರಾವಣಮಾಸದ ಕೃಷ್ಣಪಕ್ಷ ದ್ವಿತೀಯೆಯ ದಿನ ವಿಷ್ಣುವನ್ನು ಕಲ್ಪೋಕ್ತ ವಿಧಾನದಿಂದ ಆರಾಧಿಸಿ, ಮಾರನೆಯ ದಿನ ಪ್ರಾತಃಕಾಲದಲ್ಲಿ ಶಯ್ಯಾದಾನ, ಪ್ರತಿಮಾದಾನ ಮುಂತಾದುವುಗಳನ್ನು ಮಾಡಬೇಕು. ಈ ವ್ರತದ ಆಚರಣೆಯಿಂದ ದಂಪತಿಗಳಲ್ಲಿ ಅನುರಾಗವೂ ಸೌಖ್ಯವೂ ಹೆಚ್ಚಿ ಸದ್ಗತಿಯು ಲಭಿಸುವುದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಅಶೂನ್ಯಶಯನವ್ರತವೆಂಬ
ಎಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.

## ಅಥ ದ್ವಿಸಪ್ತತಿತಮೋಽಧ್ಯಾಯಃ

॥ ಈಶ್ವರ ಉವಾಚ ॥

ಶೃಣು ಚಾನ್ಯದ್ಭವಿಷ್ಯಂ ಯದ್ರೂಪಸಂಪದ್ವಿಧಾಯಕಂ ।
ಭವಿಷ್ಯತಿ ಯುಗೇ ತಸ್ಮಿನ್ ದ್ವಾಪರಾಂತೇ ಪಿತಾಮಹ
ಪಿಪ್ಪಲಾದಸ್ಯ ಸಂವಾದೋ ಯುಧಿಷ್ಠಿರಪುರಸ್ಸರೈಃ ॥ ೧ ॥

ವಸಂತಂ ನೈಮಿಷಾರಣ್ಯೇ ಪಿಪ್ಪಲಾದಂ ಮಹಾಮುನಿಂ ।
ಅಭಿಗಮ್ಯ ತದಾ ಚೈನಂ ಪ್ರಶ್ನಮೇಕಂ ಕರಿಷ್ಯತಿ ।
ಯುಧಿಷ್ಠಿರೋ ಧರ್ಮಪುತ್ರೋ ಧರ್ಮಯುಕ್ತಸ್ತಪೋಧನಂ ॥ ೨ ॥

॥ ಯುಧಿಷ್ಠಿರ ಉವಾಚ ॥

ಕಥಮಾರೋಗ್ಯಮೈಶ್ವರ್ಯಂ ಮತಿರ್ಧರ್ಮೇ ಗತಿಸ್ತಥಾ ।
ಅವ್ಯಂಗತಾ ಶಿವೇ ಭಕ್ತಿರ್ವೈಷ್ಣವೋ ವಾ ಭವೇತ್ಕಥಂ ॥ ೩ ॥

---

೧. ಈಶ್ವರನು ಹೇಳಿದನು.—ಎಲೈ ಬ್ರಹ್ಮನೇ, ರೂಪವನ್ನೂ ಸಂಪತ್ತನ್ನೂ ಕೊಡುವ ಮತ್ತೊಂದು ವ್ರತವು ಮುಂದೆ ಆಚರಿಸಲ್ಪಡುವುದು. ಅದನ್ನು ಹೇಳುವೆನು ಕೇಳು. ಅದೇ ದ್ವಾಪರಯುಗದ ಕೊನೆಯಲ್ಲಿ ಪಿಪ್ಪಲಾದನೆಂಬ ಮಹರ್ಷಿಗೂ ಧರ್ಮರಾಜಾದಿಗಳಿಗೂ ಸಂವಾದವು ನಡೆಯುವುದು.

೨. ಧರ್ಮನಿರತನೂ, ಧರ್ಮಪುತ್ರನೂ ಆದ ಯುಧಿಷ್ಠಿರನು ನೈಮಿಶಾರಣ್ಯದಲ್ಲಿ ವಾಸಿಸುತ್ತಿರುವ ಮಹಾತಪಸ್ವಿಯಾದ ಪಿಪ್ಪಲಾದನೆಂಬ ಮಹರ್ಷಿಯ ಬಳಿಗೆ ಹೋಗಿ ಪ್ರಶ್ನೆಯೊಂದನ್ನು ಕೇಳುವನು.

೩. ಆರೋಗ್ಯ, ಐಶ್ವರ್ಯ, ಧರ್ಮಬುದ್ಧಿ, ಸದ್ಗತಿ, ಅಂಗದಲ್ಲಿ ಅವೈಕಲ್ಯ, ಶಿವನಲ್ಲಿ ಭಕ್ತಿ ಇವು ದೊರಕುವುದೆಂತು ? ವಿಷ್ಣುಭಕ್ತನಾಗಬೇಕಾದರೆ ಮಾಡಬೇಕಾದುದೇನು ?

|| ಈಶ್ವರ ಉವಾಚ ||

**ತಸ್ಯೋತ್ತರಮಿದಂ ಬ್ರಹ್ಮನ್ ಪಿಪ್ಪಲಾದಸ್ಯ ಧೀಮತಃ |**
**ಶೃಣುಷ್ವ ಯದ್ವಕ್ಷ್ಯತಿ ವೈ ಧರ್ಮಪುತ್ರಾಯ ಧಾರ್ಮಿಕಃ || ೪ ||**

|| ಪಿಪ್ಪಲಾದ ಉವಾಚ ||

**ಸಾಧು ಪೃಷ್ಟಂ ತ್ವಯಾ ಭದ್ರ ಇದಾನೀಂ ಕಥಯಾಮಿ ತೇ |**
**ಅಂಗಾರವ್ರತಮಿತ್ಯೇತತ್ಸ ವಕ್ಷ್ಯತಿ ಮಹೀಪತೇಃ || ೫ ||**

**ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಂ |**
**ವಿರೋಚನಸ್ಯ ಸಂವಾದಂ ಭಾರ್ಗವಸ್ಯ ಚ ಧೀಮತಃ || ೬ ||**

**ಪ್ರಹ್ಲಾದಸ್ಯ ಸುತಂ ದೃಷ್ಟ್ವಾ ದ್ವಿರಷ್ಟಪರಿವತ್ಸರಂ |**
**ರೂಪೇಣಾಽಪ್ರತಿಮಂ ಕಾಂತ್ಯಾ ಸೋಽಹಸದ್ಭೃಗುನಂದನಃ || ೭ ||**

**ಸಾಧು ಸಾಧು ಮಹಾಬಾಹೋ ವಿರೋಚನ ಶಿವಂ ತವ |**
**ತತ್ತಥಾ ಹಸಿತಂ ತಸ್ಯ ಪಪ್ರಚ್ಛ ಸುರಸೂದನಃ || ೮ ||**

---

೪. ಈಶ್ವರನು ಹೇಳಿದನು.—ಓ ಬ್ರಹ್ಮಾ, ಧರ್ಮನಿರತನೂ ಪ್ರಜ್ಞಾಶಾಲಿಯೂ ಆದ ಪಿಪ್ಪಲಾದನು ಯುಧಿಷ್ಠಿರನಿಗೆ ಹೇಳುವ ಈ ಉತ್ತರವನ್ನು ಕೇಳು.

೫. ಪಿಪ್ಪಲಾದಮುನಿಯು ಹೇಳಿದನು.—ಎಲೈ ಮಂಗಳಸ್ವರೂಪನೇ, ನೀನು ಚೆನ್ನಾಗಿ ಕೇಳಿದೆ. ನಿನಗೆ ಅಂಗಾರವ್ರತವೆಂಬುದನ್ನು ಹೇಳುತ್ತೇನೆ ಎಂದು ಧರ್ಮರಾಜನಿಗೆ ಆ ಮುನಿಯು ಉತ್ತರ ಕೊಡುವನು.

೬. ವಿರೋಚನನಿಗೂ ಮೇಧಾವಿಯಾದ ಶುಕ್ರಾಚಾರ್ಯನಿಗೂ ನಡೆದ ಸಂವಾದ ರೂಪವಾದ ಈ ಪುರಾತನ ವೃತ್ತಾಂತವನ್ನು ಈ ಸಂದರ್ಭದಲ್ಲಿ ಹೇಳುತ್ತಾರೆ.

೭. ರೂಪದಲ್ಲೂ ಕಾಂತಿಯಲ್ಲೂ ಅಸಮಾನನಾದ, ಹದಿನಾರು ವರ್ಷ ವಯಸ್ಸಿನ, ಪ್ರಹ್ಲಾದ ಪುತ್ರನಾದ ವಿರೋಚನನನ್ನು ಕಂಡು ಶುಕ್ರಾಚಾರ್ಯನು ಒಮ್ಮೆ ನಕ್ಕನು.

೮. "ಮಹಾ ಶೂರನಾದ ಓ ವಿರೋಚನಾ, ಸರಿ ಸರಿ; ನಿನಗೆ ಮಂಗಳವಾಗಲಿ" ಎನಲು, ದೇವತೆಗಳ ಶತ್ರುವಾದ ವಿರೋಚನನು ಶುಕ್ರಾಚಾರ್ಯನು ನಕ್ಕುದಕ್ಕೆ ಕಾರಣವನ್ನು ಕೇಳಿದನು.

ಬ್ರಹ್ಮರ್ಷೇ ಕಿಮರ್ಥಮೇತತ್ತೇ ಹಾಸ್ಯಮಾಕಸ್ಮಿಕಂ ಕೃತಂ ।
ಸಾಧು ಸಾಧ್ವಿತಿ ಮಾಮೇವಮುಕ್ತವಾಂಸ್ತ್ವಂ ವದಸ್ವ ಮೇ ॥ ೯ ॥
ತಮೇವಂ ವಾದಿನಂ ಶುಕ್ರ ಉವಾಚ ವದತಾಂ ವರಃ ।
ವಿಸ್ಮಯಾದ್ವ್ರತಮಾಹಾತ್ಮ್ಯಾದ್ಧಾಸ್ಯಮೇತತ್ಕೃತಂ ಮಯಾ ॥೧೦॥
ಪುರಾ ದಕ್ಷವಿನಾಶಾಯ ಕುಪಿತಸ್ಯ ತು ಶೂಲಿನಃ ।
ಅಥ ತದ್ಭೀಮವಕ್ತ್ರಸ್ಯ ಸ್ವೇದಬಿಂದುರ್ಲಲಾಟಜಃ ॥೧೧॥
ಭಿತ್ವಾ ಸ ಸಪ್ತ ಪಾತಾಲಾನ್ಯದಹತ್ಸಪ್ತ ಸಾಗರಾನ್ ।
ಅನೇಕವಕ್ತ್ರನಯನೋ ಜ್ವಲಜ್ಜ್ವಲನಭೀಷಣಃ ॥೧೨॥
ವೀರಭದ್ರ ಇತಿ ಖ್ಯಾತಃ ಕರಪಾದಾಯುತೈರ್ವೃತಃ ।
ಕೃತ್ವಾಽಸೌ ಯಜ್ಞಮಥನಂ ಪುನರ್ಭೂತಲಸಂಭವಃ ।
ತ್ರಿಜಗನ್ನಿರ್ದಹನ್ ಭೂಯಃ ಶಿವೇನ ವಿನಿವಾರಿತಃ ॥೧೪॥

---

೯. "ಬ್ರಾಹ್ಮಣೋತ್ತಮಾ, ಇದ್ದಕ್ಕಿದ್ದಂತೆ ನೀನು ನಕ್ಕುದೇತಕ್ಕೆ ? ನನ್ನನ್ನು ನೋಡಿ ಸರಿಸರಿಯೆಂದು ಹೇಳಿದೆ. ಇದರ ಕಾರಣವನ್ನು ತಿಳಿಸು."

೧೦. ಇಂತು ಕೇಳಿದ ವಿರೋಚನನಿಗೆ ಮಾತುಗಾರನಾದ ಶುಕ್ರಾಚಾರ್ಯನು ಉತ್ತರ ಹೇಳಿದನು. ಆ ವ್ರತದ ಅತ್ಯದ್ಭುತವಾದ ಮಹಿಮೆಯನ್ನು ಕಂಡು ನಾನು ನಕ್ಕೆನು.

೧೧. ಹಿಂದೆ ದಕ್ಷಬ್ರಹ್ಮನನ್ನು ನಾಶಮಾಡಬೇಕೆಂದು ಈಶ್ವರನು ಸಿಟ್ಟುಗೊಂಡನು. ಅವನ ಮುಖವು ಭಯಂಕರವಾಯಿತು. ಹಣೆಯಲ್ಲಿ ಬೆವರಿನ ಹನಿ ಮೂಡಿತು.

೧೨-೧೪. ಅದು ಅತಲವಿತಲಾದಿ ಪಾತಾಲಲೋಕಗಳೆಲ್ಲವನ್ನೂ ಭೇದಿಸಿ, ಸಪ್ತಸಾಗರಗಳನ್ನೂ ದಹಿಸಿತು. ಆಗ ಲೆಕ್ಕವಿಲ್ಲದಷ್ಟು ಮುಖಗಳು, ಕಣ್ಣುಗಳು, ಹತ್ತಾರುಸಾವಿರ ಕೈಕಾಲುಗಳು ಇವುಗಳಿಂದ ಕೂಡಿ, ಉರಿಯುವ ಬೆಂಕಿಯಂತೆ ಭಯಂಕರನಾದ ವೀರಭದ್ರನೆಂಬವನು ನೆಲದಿಂದ ಹುಟ್ಟಿಬಂದನು. ಅವನು ದಕ್ಷಬ್ರಹ್ಮನ ಯಜ್ಞವನ್ನು ಧ್ವಂಸಮಾಡಿ, ಮೂರು ಲೋಕಗಳನ್ನೂ ಸುಡತೊಡಗಲು ಶಿವನು ಅವನನ್ನು ತಡೆದನು.

ಕೃತಂ ತ್ವಯಾ ವೀರಭದ್ರ ದಕ್ಷಯಜ್ಞವಿನಾಶನಂ।
ಇದಾನೀಮಲಮೇತೇನ ಲೋಕದಾಹೇನ ಕರ್ಮಣಾ ॥೧೪॥

ಶಾಂತಿಪ್ರದಾತಾ ಸರ್ವೇಷಾಂ ಗ್ರಹಾಣಾಂ ಪ್ರಥಮೋ ಭವ।
ಪ್ರೇಕ್ಷಿಷ್ಯಂತೇ ಜನಾಃ ಪೂಜಾಂ ಕರಿಷ್ಯಂತಿ ವರಾನ್ಮಮ ॥೧೫॥

ಅಂಗಾರಕ ಇತಿ ಖ್ಯಾತಿಂ ಗಮಿಷ್ಯಸಿ ಧರಾತ್ಮಜ।
ದೇವಲೋಕೇಽದ್ವಿತೀಯಂ ಚ ತವ ರೂಪಂ ಭವಿಷ್ಯತಿ ॥೧೬॥

ಯೇ ಚ ತ್ವಾಂ ಪೂಜಯಿಷ್ಯಂತಿ ಚತುರ್ಥ್ಯಾಂ ತ್ವದ್ದಿನೇ ನರಾಃ।
ರೂಪಮಾರೋಗ್ಯಮೈಶ್ವರ್ಯಂ ತೇಷ್ವನಂತಂ ಭವಿಷ್ಯತಿ ॥೧೭॥

ಏವಮುಕ್ತಸ್ತದಾ ಶಾಂತಿಮಗಮತ್ಕಾಮರೂಪಧೃಕ್।
ಸಂಜಾತಸ್ತತ್‌ಕ್ಷಣಾದ್ರಾಜನ್ ಗ್ರಹತ್ವಮಗಮತ್ಪುನಃ ॥೧೮॥

ಸ ಕದಾಚಿದ್ಭವಾಂಸ್ತಸ್ಯ ಪೂಜಾರ್ಘ್ಯಾದಿಕಮುತ್ತಮಂ।
ದೃಷ್ಟವಾನ್ ಕ್ರಿಯಮಾಣಂ ಚ ಶೂದ್ರೇಣ ಚ ವ್ಯವಸ್ಥಿತಃ ॥೧೯॥

---

೧೪. "ಓ ವೀರಭದ್ರಾ, ನೀನು ದಕ್ಷಬ್ರಹ್ಮನ ಯಜ್ಞವನ್ನು ನಾಶಪಡಿಸಿದೆ. ಅದು ಸಾಕು. ಈಗ ಲೋಕವನ್ನು ಸುಡಲು ತೊಡಗಿರುವೆ; ಇದನ್ನು ನಿಲ್ಲಿಸು.

೧೫. ಎಲ್ಲ ಗ್ರಹಗಳಿಗೂ ಮೊದಲನೆಯವನೆನಿಸು. ಶಾಂತಿಪ್ರದನಾಗು. ನನ್ನ ವರದಿಂದ ನೀನು ಜನರ ಕಣ್ಣಿಗೆ ಕಾಣಿಸಿಕೊಳ್ಳುವೆ. ಅವರು ನಿನ್ನನ್ನು ಪೂಜೆ ಮಾಡುವರು.

೧೬. ಎಲೈ ಭೂಮಿ ಪುತ್ರನೇ, ನೀನು ಅಂಗಾರಕನೆಂಬ ಪ್ರಖ್ಯಾತಿಯನ್ನು ಪಡೆಯುವೆ. ದೇವಲೋಕದಲ್ಲಿ ನಿನ್ನ ರೂಪವು ಅದ್ವಿತೀಯವೆನಿಸುವುದು.

೧೭. ನಿನ್ನ ದಿನವಾದ ಚತುರ್ಥಿಯಲ್ಲಿ ಯಾರು ನಿನ್ನನ್ನು ಪೂಜಿಸುತ್ತಾರೋ ಅವರಿಗೆ ರೂಪ, ಆರೋಗ್ಯ, ಐಶ್ವರ್ಯಗಳು ಅಪರಿಮಿತವಾಗುವುವು."

೧೮. ರಾಜಾ, ಈಶ್ವರನು ಹೀಗೆ ಹೇಳಲು ವೀರಭದ್ರನು ಶಾಂತನಾಗಿ, ಸೌಮ್ಯರೂಪವನ್ನು ಧರಿಸಿ ಕೂಡಲೇ ಗ್ರಹರೂಪವನ್ನು ತಾಳಿದನು.

೧೯. ಒಂದಾನೊಂದು ದಿನ ಆತನಿಗೆ ಶೂದ್ರನೊಬ್ಬನು ಭಕ್ತಿಯೊಡನೆ ಪೂಜೆಯನ್ನು ಮಾಡಿ, ಅರ್ಘ್ಯಾದಿಗಳನ್ನು ಒಪ್ಪಿಸುತ್ತಿರಲು ಅದನ್ನು ನೀನು ನೋಡಿದೆ.

ತೇನ ತ್ವಂ ರೂಪವಾಞ್ಜಾತಃ ಸುರಶತ್ರುಕುಲೋದ್ವಹ ।
ವಿವಿಧಾ ಚ ರುಚಿರ್ಜಾತಾ ಯಸ್ಮಾತ್ತವ ವಿದೂರಗಾ ॥೨೦॥

ವಿರೋಚನ ಇತಿ ಪ್ರಾಹುಸ್ತಸ್ಮಾತ್ತ್ವಾಂ ದೇವದಾನವಾಃ ।
ಶೂದ್ರೇಣ ಕ್ರಿಯಮಾಣಸ್ಯ ವ್ರತಸ್ಯ ತವ ದರ್ಶನಾತ್ ।
ಈದೃಶೀಂ ರೂಪಸಂಪತ್ತಿಂ ದೃಷ್ಟ್ವಾ ವಿಸ್ಮಿತವಾನಹಂ ॥೨೧॥

ಸಾಧು ಸಾಧ್ವಿತಿ ತೇನೋಕ್ತಮಹೋ ಮಾಹಾತ್ಮ್ಯಮುತ್ತಮಂ ।
ಪಶ್ಯತೋಽಪಿ ಭವೇದ್ರೂಪಮೈಶ್ವರ್ಯಂ ಕಿಮು ಕುರ್ವತಃ ॥೨೨॥

ಯಸ್ಮಾಚ್ಚ ಭಕ್ತ್ಯಾ ಧರಣೀಸುತಸ್ಯ
  ವಿನಿಂದ್ಯಮಾನೇನ ಗವಾದಿದಾನಂ ।
ಆಲೋಕಿತಂ ತೇನ ಸುರಾರಿಗರ್ಭೇ
  ಸಂಭೂತಿರೇಷಾ ತವ ದೈತ್ಯ ಜಾತಾ ॥೨೩॥

---

೨೦-೨೧. ಎಲೈ ದಾನವ ಕುಲಶ್ರೇಷ್ಠನೇ, ಅದರಿಂದ ನೀನು ರೂಪವಂತನಾದೆ. ಬಹಳ ದೂರದ ವರೆಗೆ ವ್ಯಾಪಿಸುವ ಬಗೆಬಗೆಯ ಕಾಂತಿಯು ನಿನ್ನಲ್ಲಿ ಹುಟ್ಟಿತಾದ ಕಾರಣ ನಿನ್ನನ್ನು ದೇವತೆಗಳೂ ದಾನವರೂ ವಿರೋಚನನೆನ್ನುವರು. ಶೂದ್ರನು ಮಾಡಿದ ವ್ರತವನ್ನು ನೋಡಿದ ಮಾತ್ರದಿಂದಲೇ ನಿನಗೆ ಇಂತಹ ರೂಪ ಸಂಪತ್ತಿ ಬಂದುದನ್ನು ಕಂಡು ನಾನು ಆಶ್ಚರ್ಯಪಟ್ಟೆನು.

೨೨. "ಸರಿ ಸರಿ" ಎಂದು ಹೇಳಿದುದು ಅದಕ್ಕಾಗಿಯೇ. ಓಹೋ! ನೋಡಿದವನಿಗೂ ಕೂಡ ಈ ರೂಪವೂ ಐಶ್ವರ್ಯವೂ ದೊರೆತ ಮೇಲೆ ಮಾಡಿದವನಿಗೆ ಇನ್ನೆಷ್ಟೆಂದು ಹೇಳಬೇಕು?

೨೩. ಓ ವಿರೋಚನಾ, ಅಂಗಾರಕನನ್ನು ಉದ್ದೇಶಿಸಿ ಭಕ್ತಿಯಿಂದ ಶೂದ್ರನು ಮಾಡಿದ ಗೋದಾನಾದಿಗಳನ್ನು ನೀನು ನೋಡಿದೆ. ಅದರ ಫಲವಾಗಿ ಈಗ ದಾನವರಾಜನ ಗರ್ಭದಲ್ಲಿ ಜನಿಸಿದೆ.

ಅಧ್ಯಾಯ ೭೨

|| ಈಶ್ವರ ಉವಾಚ ||

ಅಥ ತದ್ವಚನಂ ಶ್ರುತ್ವಾ ಭಾರ್ಗವಸ್ಯ ಮಹಾತ್ಮನಃ ।
ಪ್ರಹ್ಲಾದನಂದನೋ ವೀರಃ ಪುನಃ ಪಪ್ರಚ್ಛ ವಿಸ್ಮಿತಃ ||೨೪||

|| ವಿರೋಚನ ಉವಾಚ ||

ಭಗವಂಸ್ತದ್ವ್ರತಂ ಸಮ್ಯಕ್ಶ್ರೋತುಮಿಚ್ಛಾಮಿ ತತ್ತ್ವತಃ ।
ದೀಯಮಾನಂ ತು ಯದ್ದಾನಂ ಮಯಾ ದೃಷ್ಟಂ ಭವಾಂತರೇ ||೨೫||

ಮಾಹಾತ್ಮ್ಯಂ ಚ ವಿಧಿಂ ತಸ್ಯ ಯಥಾವದ್ವಕ್ತುಮರ್ಹಸಿ ।
ಇತಿ ತದ್ವಚನಂ ಶ್ರುತ್ವಾ ಪುನಃ ಪ್ರೋವಾಚ ವಿಸ್ತರಾತ್ ||೨೬||

|| ಶುಕ್ರ ಉವಾಚ ||

ಚತುರ್ಥ್ಯಂಗಾರಕದಿನೇ ಯದಾ ಭವತಿ ದಾನವ ।
ಮೃದಾ ಸ್ನಾನಂ ತದಾ ಕುರ್ಯಾತ್ಪದ್ಮರಾಗವಿಭೂಷಿತಃ ||೨೭||

---

೨೪. ಈಶ್ವರನು ಹೇಳಿದನು.—ಮಹಾತ್ಮನಾದ ಶುಕ್ರಾಚಾರ್ಯನ ಆ ಮಾತನ್ನು ಕೇಳಿ ಪ್ರಹ್ಲಾದಪುತ್ರನಾದ ವಿರೋಚನನು ಆಶ್ಚರ್ಯದಿಂದ ಮತ್ತೆ ಪ್ರಶ್ನಿಸಿದನು.

೨೫. ವಿರೋಚನನು ಹೇಳಿದನು.—ಎಲೈ ಪೂಜ್ಯನೇ, ಹಿಂದಿನ ಜನ್ಮದಲ್ಲಿ ಯಾವ ವ್ರತದ ಸಂಬಂಧವಾಗಿ ದಾನಮಾಡುವುದನ್ನು ನಾನು ಕಂಡೆನೋ ಆ ವ್ರತವನ್ನು ಆಮೂಲಾಗ್ರವಾಗಿ ಕೇಳಲು ಬಯಸುತ್ತೇನೆ.

೨೬. ಅದರ ಮಾಹಾತ್ಮ್ಯವನ್ನೂ ವಿಧಾನವನ್ನೂ ವಿವರವಾಗಿ ಹೇಳು ಎಂದು ವಿರೋಚನನು ಪ್ರಾರ್ಥಿಸಲು, ಶುಕ್ರಾಚಾರ್ಯನು ವಿಸ್ತಾರವಾಗಿ ಮರಳಿ ಹೇಳತೊಡಗಿದನು.

೨೭. ಶುಕ್ರಾಚಾರ್ಯನು ಹೇಳಿದನು.—ಓ ವಿರೋಚನಾ, ಚತುರ್ಥಿಯೊಡನೆ ಮಂಗಳವಾರವು ಕೂಡಿದ ದಿನದಲ್ಲಿ, ಪದ್ಮರಾಗ ರತ್ನಭೂಷಿತನಾಗಿ ಮೃತ್ತಿಕಾಸ್ನಾನವನ್ನು ಮಾಡಬೇಕು.

ಅಗ್ನಿರ್ಮೂರ್ಧಾ ದಿವೋ ಮಂತ್ರಂ ಜಪನ್ನಾಸ್ತೇ ಉದಙ್ಮುಖಃ ।
ಶೂದ್ರಸ್ತೂಷ್ಣೀಂ ಸ್ಮರನ್ಭೌಮಮಾಸ್ತೇ ಭೋಗವಿವರ್ಜಿತಃ ॥೨೮॥

ತಥಾಸ್ತಮಿತ ಆದಿತ್ಯೇ ಗೋಮಯೇನಾನುಲೇಪಯೇತ್ ।
ಪ್ರಾಂಗಣಂ ಪುಷ್ಪಮಾಲಾಭಿರಕ್ಷತಾಭಿಃ ಸಮಂತತಃ ॥೨೯॥

ಅಭ್ಯರ್ಚ್ಯಾಭಿಲಿಖೇತ್ಪದ್ಮಂ ಕುಂಕುಮೇನಾಷ್ಟಪತ್ರಕಂ ।
ಕುಂಕುಮಸ್ಯಾಪ್ಯಭಾವೇ ತು ರಕ್ತಚಂದನಮಿಷ್ಯತೇ ॥೩೦॥

ಚತ್ವಾರಃ ಕರಕಾಃ ಕಾರ್ಯಾ ಭಕ್ಷ್ಯಭೋಜ್ಯಸಮನ್ವಿತಾಃ ।
ತಂಡುಲೈ ರಕ್ತಶಾಲೀಯೈಃ ಪದ್ಮರಾಗೈಶ್ಚ ಸಂಯುತಾಃ ॥೩೧॥

ಚತುಷ್ಕೋಣೇಷು ತಾನ್ ಕೃತ್ವಾ ಫಲಾನಿ ವಿವಿಧಾನಿ ಚ
ಗಂಧಮಾಲ್ಯಾದಿಕಂ ಸರ್ವಂ ತಥೈವ ವಿನಿವೇದಯೇತ್ ॥೩೨॥

ಸುವರ್ಣಶೃಂಗೀಂ ಕಪಿಲಾಮಥಾರ್ಚ್ಯ
ರೌಪ್ಯೈಃ ಖುರೈಃ ಕಾಂಸ್ಯದೋಹಾಂ ಸವತ್ಸಾಂ ।

---

೨೮. "ಅಗ್ನಿರ್ಮೂರ್ಧಾ ದಿವಃ" ಎಂಬ ಮಂತ್ರವನ್ನು ಜಪಿಸುತ್ತ ಉತ್ತರಾಭಿಮುಖವಾಗಿ ಕುಳಿತುಕೊಂಡಿರಬೇಕು. ಶೂದ್ರನಾದರೋ ಗಂಧಪುಷ್ಪಾದಿ ಭೋಗಗಳನ್ನುಳಿದು ಮೌನದಿಂದ ಅಂಗಾರಕನನ್ನು ಸ್ಮರಿಸುತ್ತಿರಬೇಕು.

೨೯-೩೦. ಸೂರ್ಯನು ಮುಳುಗಿದ ಮೇಲೆ ಅಂಗಳವನ್ನು ಗೋಮಯದಿಂದ ದಿಂದ ಸಾರಿಸಿ, ನಾಲ್ಕು ಕಡೆಯೂ ಪುಷ್ಪಮಾಲೆಗಳಿಂದಲೂ ಅಕ್ಷತೆಗಳಿಂದಲೂ ಅರ್ಚಿಸಿ, ಕುಂಕುಮ ಕೇಸರಿಯಿಂದ ಅಷ್ಟದಳ ಪದ್ಮವನ್ನು ಬರೆಯಬೇಕು. ಕೇಸರಿ ಇಲ್ಲದಿದ್ದರೆ ಕೆಂಪು ಗಂಧವಾದರೂ ಆಗಬಹುದು.

೩೧. ಕೆಂಪು ಬಣ್ಣದ ಅಕ್ಕಿಯಿಂದಲೂ ಪದ್ಮರಾಗ ಮಣಿಗಳಿಂದಲೂ ಕೂಡಿದ, ಭಕ್ಷ್ಯಭೋಜ್ಯಸಹಿತವಾದ ನಾಲ್ಕು ಕಲಶಗಳನ್ನು ಸಿದ್ಧಗೊಳಿಸಬೇಕು.

೩೨. ನಾಲ್ಕು ಮೂಲೆಗಳಲ್ಲೂ ಅವುಗಳನ್ನಿರಿಸಿ, ಗಂಧ ಮಾಲ್ಯಾದಿಗಳಿಂದ ಅಲಂಕರಿಸಿ ಬಗೆಬಗೆಯ ಫಲಗಳನ್ನು ನೈವೇದ್ಯಮಾಡಬೇಕು.

೩೩. ಚಿನ್ನದಿಂದ ಕೊಂಬುಗಳನ್ನೂ ಬೆಳ್ಳಿಯಿಂದ ಗೊರಸುಗಳನ್ನೂ ಅಲಂಕರಿಸಿ, ಕರುವಿನ ಸಹಿತವಾಗಿ ಕಪಿಲವರ್ಣದ ಹಸುವನ್ನು ಪೂಜಿಸಿ ದಾನ

ಧುರಂಧರಂ ರಕ್ತಮತೀವ ಸೌಮ್ಯಂ
ಧಾನ್ಯಾನಿ ಸಪ್ತಾಂಬರಸಂಯುತಾನಿ ॥೩೩॥

ಅಂಗುಷ್ಠಮಾತ್ರಂ ಪುರುಷಂ ತಥೈವ
ಸೌವರ್ಣಮತ್ಯಾಯತಬಾಹುದಂಡಂ ।
ಚತುರ್ಭುಜಂ ಹೇಮಮಯೇ ನಿವಿಷ್ಟಂ
ಪಾತ್ರೇ ಗುಡಸ್ಯೋಪರಿ ಸರ್ಪಿಯುಕ್ತೇ ॥೩೪॥

ಸಮಸ್ತಯಜ್ಞಾಯ ಜಿತೇಂದ್ರಿಯಾಯ
ಪಾತ್ರಾಯ ಶೀಲಾನ್ವಯಸಂಯುತಾಯ ।
ದಾತವ್ಯಮೇತತ್ಸಕಲಂ ದ್ವಿಜಾಯ
ಕುಟುಂಬಿನೇ ನೈವ ತು ದಾಂಭಿಕಾಯ ॥೩೫॥

ಸಮರ್ಪಯೇದ್ವಿಪ್ರವರಾಯ ಭಕ್ತ್ಯಾ ।
ಕೃತಾಂಜಲಿಃ ಪೂರ್ವಮುದೀರ್ಯ ಮಂತ್ರಂ ॥೩೬॥

---

ಮಾಡಬೇಕು. ಹಾಲು ಕರೆಯುವುದಕ್ಕಾಗಿ ಕಂಚಿನ ಪಾತ್ರೆಯನ್ನೂ ಸಹ ಕೊಡಬೇಕು. ಇದರ ಜೊತೆಯಲ್ಲಿ ಬಹಳ ಸಾಧುವಾದ ಕೆಂಪು ಬಣ್ಣದ ಎತ್ತನ್ನೂ, ಧಾನ್ಯಗಳನ್ನೂ, ಏಳು ವಸ್ತ್ರಗಳನ್ನೂ ದಾನಮಾಡಬೇಕು.

೩೪. ದಂಡದಂತೆ ದೀರ್ಘವಾದ ನಾಲ್ಕು ತೋಳುಗಳಿಂದ ವಿರಾಜಿಸುವ, ಅಂಗುಷ್ಠಪ್ರಮಾಣದ ಸುವರ್ಣ ಪ್ರತಿಮೆಯನ್ನು ತುಪ್ಪ ತುಂಬಿದ ಚಿನ್ನದ ಪಾತ್ರೆಯಲ್ಲಿ ಬೆಲ್ಲದ ಮೇಲೆ ಕೂರಿಸಬೇಕು.

೩೫. ಎಲ್ಲ ಯಜ್ಞಗಳನ್ನು ಮಾಡಿದವನೂ, ಜಿತೇಂದ್ರಿಯನೂ, ಅರ್ಹನೂ, ಕುಲಶೀಲಗಳಿಂದ ಕೂಡಿದವನೂ, ಕುಟುಂಬಿಯೂ ಆದ ಬ್ರಾಹ್ಮಣನಿಗೆ ಇವೆಲ್ಲವನ್ನೂ ಕೊಡಬೇಕು. ಕಪಟಚಾರಿಗೆ ಮಾತ್ರ ಕೊಡಲೇಬಾರದು.

೩೬. ಭಕ್ತಿಯಿಂದ ಕೈಮುಗಿದು, ಈ ಮಂತ್ರವನ್ನು ಮೊದಲು ಹೇಳಿ ಬಳಿಕ ಬ್ರಾಹ್ಮಣೋತ್ತಮನಿಗೆ ಸಮರ್ಪಿಸಬೇಕು.

ಭೂಮಿಪುತ್ರ ಮಹಾಭಾಗ ಸ್ವೇದೋದ್ಭವ ಪಿನಾಕಿನಃ ।
ರೂಪಾರ್ಥೀ ತ್ವಾಂ ಪ್ರಪನ್ನೋಽಹಂ ಗೃಹಾಣಾರ್ಘ್ಯಂ ನಮೋಽಸ್ತು ತೇ ॥

ಮಂತ್ರೇಣಾನೇನ ದತ್ವಾರ್ಘ್ಯಂ ರಕ್ತಚಂದನವಾರಿಣಾ ।
ತತೋಽರ್ಚಯೇದ್ವಿಪ್ರವರಂ ರಕ್ತಮಾಲ್ಯಾಂಬರಾದಿಭಿಃ ॥೩೮॥

ದದ್ಯಾದೇತೇನ ಮಂತ್ರೇಣ ಭೌಮಂ ಗೋಮಿಥುನಾನ್ವಿತಂ ।
ಶಯ್ಯಾಂ ಚ ಶಕ್ತಿತೋ ದದ್ಯಾತ್ಸರ್ವೋಪಸ್ಕರಸಂಯುತಾಂ ॥೩೯॥

ಯದ್ಯದಿಷ್ಟತಮಂ ಲೋಕೇ ಯಚ್ಚಾಸ್ಯ ದಯಿತಂ ಗೃಹೇ ।
ತತ್ತದ್ಗುಣವತೇ ದೇಯಂ ತದೇವಾಕ್ಷಯ್ಯಮಿಚ್ಛತಾ ॥೪೦॥

ಪ್ರದಕ್ಷಿಣಂ ತತಃ ಕೃತ್ವಾ ವಿಸರ್ಜ್ಯ ದ್ವಿಜಪುಂಗವಂ ।
ನಕ್ತಮಕ್ಷಾರಲವಣಮಶ್ನೀಯಾದ್ಘೃತಸಂಯುತಂ ॥೪೧॥

---

೩೭. "ಎಲೈ ಭೂಮಿಪುತ್ರನೇ, ಮಹಾಮಹಿಮನೇ, ಈಶ್ವರನ ಬೆವರಿನಿಂದ ಹುಟ್ಟಿದವನೇ, ಸೌಂದರ್ಯಕಾಮನಾಗಿ ನಾನು ನಿನ್ನನ್ನು ಮರೆಹೊಕ್ಕಿರುವೆನು. ಅರ್ಘ್ಯವನ್ನು ಸ್ವೀಕರಿಸು. ನಿನಗೆ ನಮಸ್ಕಾರ."

೩೮. ಈ ಮಂತ್ರವನ್ನು ಹೇಳಿ ಕೆಂಪುಗಂಧದ ನೀರಿನಿಂದ ಅರ್ಘ್ಯವನ್ನು ಕೊಡಬೇಕು. ಬಳಿಕ ಬ್ರಾಹ್ಮಣಶ್ರೇಷ್ಠನಿಗೆ ಕೆಂಪುಬಣ್ಣದ ವಸ್ತ್ರವನ್ನೂ ಪುಷ್ಪಗಳನ್ನೂ ಕೊಟ್ಟು ಸತ್ಕರಿಸಬೇಕು.

೩೯. ಇದೇ ಮಂತ್ರದಿಂದ ಅಂಗಾರಕ ವಿಗ್ರಹವನ್ನೂ, ಎತ್ತನ್ನೂ, ಹಸುವನ್ನೂ ದಾನಮಾಡಬೇಕು. ತನ್ನ ಶಕ್ತಿಗೆ ತಕ್ಕಂತೆ ಸಕಲಭೋಗವಸ್ತುಸಹಿತವಾದ ಹಾಸಿಗೆಯನ್ನೂ ಕೊಡಬೇಕು.

೪೦. ಲೋಕದಲ್ಲಿ ಯಾವ ಯಾವುದು ತನಗೆ ಬಹಳ ಇಷ್ಟವೋ, ಮನೆಯಲ್ಲಿ ಯಾವುದು ತನಗೆ ಪ್ರಿಯವೋ ಅದೆಲ್ಲವನ್ನೂ ಗುಣವಂತನಾದ ಬ್ರಾಹ್ಮಣನಿಗೆ ಕೊಡಬೇಕು. ಇದರಿಂದ ಅಕ್ಷಯ ಫಲವು ಬರುವುದು.

೪೧. ಬಳಿಕ ಬ್ರಾಹ್ಮಣೋತ್ತಮನನ್ನು ಪ್ರದಕ್ಷಿಣಮಾಡಿ ಬೀಳ್ಕೊಡಬೇಕು. ರಾತ್ರಿಯಲ್ಲಿ ಉಪ್ಪುಕಾರಗಳನ್ನುಳಿದು ತುಪ್ಪಹಾಕಿಕೊಂಡು ಭೋಜನಮಾಡಬೇಕು.

ಭಕ್ತ್ಯಾ ಯಸ್ತು ಪುನಃ ಕುರ್ಯಾದೇವಮಂಗಾರಕಾಷ್ಟಕಂ ।
ಚತುರೋ ವಾಽಥ ವಾ ತಸ್ಯ ಯತ್ಪುಣ್ಯಂ ತದ್ವದಾಮಿ ತೇ ॥೪೨॥

ರೂಪಸೌಭಾಗ್ಯಸಂಪನ್ನಃ ಪುನರ್ಜನ್ಮನಿ ಜನ್ಮನಿ ।
ವಿಷ್ಣೌ ವಾಽಥ ಶಿವೇ ಭಕ್ತಃ ಸಪ್ತದ್ವೀಪಾಧಿಪೋ ಭವೇತ್ ॥೪೩॥

ಸಪ್ತಕಲ್ಪಸಹಸ್ರಾಣಿ ರುದ್ರಲೋಕೇ ಮಹೀಯತೇ ।
ತಸ್ಮಾತ್ತ್ವಮಪಿ ದೈತ್ಯೇಂದ್ರ ವ್ರತಮೇತತ್ಸಮಾಚರ ॥೪೪॥

॥ ಪಿಪ್ಪಲಾದ ಉವಾಚ ॥

ಇತ್ಯೇವಮುಕ್ತ್ವಾ ಭೃಗುನಂದನೋಽಪಿ
ಜಗಾಮ ದೈತ್ಯಶ್ಚ ಚಕಾರ ಸರ್ವಂ
ತ್ವಂ ಚಾಪಿ ರಾಜನ್ ಕುರು ಸರ್ವಮೇತ
ದ್ಯತೋಽಕ್ಷಯಂ ವೇದವಿದೋ ವದಂತಿ ॥೪೫॥

---

೪೨. ಹೀಗೆ ಭಕ್ತಿಯಿಂದ ಯಾರು ಅಂಗಾರಕವ್ರತವನ್ನು ಎಂಟು ಸಾರಿ ಇಲ್ಲವೇ ನಾಲ್ಕು ಸಾರಿಯಾದರೂ ಮಾಡುವನೋ ಅವನಿಗೆ ಲಭಿಸುವ ಪುಣ್ಯವನ್ನು ನಿನಗೆ ಹೇಳುತ್ತೇನೆ ಕೇಳು.

೪೩. ಪ್ರತಿಯೊಂದು ಜನ್ಮದಲ್ಲಿಯೂ ರೂಪಸೌಭಾಗ್ಯಸಂಪನ್ನನೆನಿಸಿ ವಿಷ್ಣುವಿನ ಅಥವಾ ಶಿವನ ಭಕ್ತನಾಗುವನು. ಸಪ್ತದ್ವೀಪಗಳ ಆಧಿಪತ್ಯವೂ ಆತನಿಗೆ ದೊರಕುವುದು.

೪೪. ಏಳು ಸಾವಿರ ಕಲ್ಪಗಳ ಕಾಲ ಆತನು ರುದ್ರಲೋಕದಲ್ಲಿ ಮಾನ್ಯನಾಗುವನು. ಆದುದರಿಂದ, ದೈತ್ಯರಾಜನಾದ ಎಲೈ ವಿರೋಚನನೇ, ಈ ವ್ರತವನ್ನು ನೀನೂ ಸಹ ಮಾಡು.

೪೫. ಪಿಪ್ಪಲಾದನು ಹೇಳಿದನು.—ಹೀಗೆ ಹೇಳಿ ಶುಕ್ರಾಚಾರ್ಯನು ಅತ್ತ ಹೊರಟುಹೋದನು. ಇತ್ತ ವಿರೋಚನನೂ ಕೂಡ ಅದರಂತೆ ಎಲ್ಲವನ್ನೂ ನಡೆಸಿದನು. ಓ ರಾಜಾ, ನೀನೂ ಸಹ ಈ ವ್ರತವನ್ನು ಸಾಂಗವಾಗಿ ಮಾಡು. ಏಕೆಂದರೆ ವೇದವನ್ನು ಬಲ್ಲವರು ಇದು ಅಕ್ಷಯಫಲಪ್ರದವೆಂದು ಹೇಳುತ್ತಾರೆ.

॥ ಈಶ್ವರ ಉವಾಚ ॥

ತಥೇತಿ ಸಂಪೂಜ್ಯ ಸ ಪಿಪ್ಪಲಾದಂ
ವಾಕ್ಯಂ ಚಕಾರಾದ್ಭುತವೀರ್ಯಕರ್ಮಾ ।
ಶೃಣೋತಿ ಯಶ್ಚೈವಮನನ್ಯಚೇತಾ
ಸ್ತಸ್ಯಾಪಿ ಸಿದ್ಧಿಂ ಭಗವಾನ್ ವಿಧತ್ತೇ ॥೪೬॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇಽಂಗಾರಕವ್ರತಂ ನಾಮ
ದ್ವಿಸಪ್ತತಿತಮೋಽಧ್ಯಾಯಃ

---

೪೫. ಈಶ್ವರನು ಹೇಳಿದನು.—ಅದ್ಭುತವಾದ ವೀರ್ಯವೂ ಕರ್ಮವೂ ಉಳ್ಳ ಆ ಧರ್ಮರಾಜನು ಪಿಪ್ಪಲಾದನನ್ನು ಸತ್ಕರಿಸಿ ಅವನ ವಾಕ್ಯವನ್ನು ನಡೆಸಿದನು. ಈ ವೃತ್ತಾಂತವನ್ನು ಅವಧಾನದಿಂದ ಕೇಳತಕ್ಕವನಿಗೂ ಕೂಡ ಭಗವಂತನು ಸಿದ್ಧಿಯನ್ನು ಅನುಗ್ರಹಿಸುವನು.

## ಅಧ್ಯಾಯದ ಸಾರಾಂಶ

ಅಂಗಾರಕವ್ರತದ ವಿಧಾನವನ್ನು ಈ ಅಧ್ಯಾಯವು ವಿವರಿಸುತ್ತದೆ.

ಆರೋಗ್ಯ, ಐಶ್ವರ್ಯ, ಧರ್ಮಬುದ್ಧಿ ಮೊದಲಾದುವುಗಳನ್ನು ಕೊಡುವ ಸಾಧನ ವಾವುದೆಂದು ಧರ್ಮರಾಜನು ಕೇಳಲು ಪಿಪ್ಪಲಾದಮುನಿಯು ಈ ವ್ರತದ ವಿಧಾನ ವನ್ನು ತಿಳಿಸಿದನು. ದಕ್ಷಬ್ರಹ್ಮನ ಯಜ್ಞವನ್ನು ಕೆಡಿಸಿದ ವೀರಭದ್ರನು ಪರಮೇಶ್ವರನ ವರಪ್ರಸಾದದಿಂದ ನವಗ್ರಹಗಳಲ್ಲಿ ಪ್ರಸಿದ್ಧನಾದ ಅಂಗಾರಕನಾದನು. ಅವನ ಪ್ರೀತ್ಯರ್ಥವಾಗಿ ಮಾಡುವ ವ್ರತವಿದು. ಚತುರ್ಥಿಯೊಡಗೂಡಿದ ಮಂಗಳವಾರದ ದಿನ ಇದನ್ನು ಪ್ರಾರಂಭಿಸಬೇಕು. ವ್ರತಾನಂತರ ಅಂಗಾರಕ ಪ್ರತಿಮೆಯನ್ನೂ, ಗೋ ಮಿಥುನವನ್ನೂ, ಶಯ್ಯೆಯನ್ನೂ ದಾನಮಾಡಬೇಕು. ಇದರಿಂದ ಸಕಲ ಸೌಭಾಗ್ಯ ಗಳೂ ಸಿದ್ಧಿಸುವುವು. ಇದನ್ನು ಎಂಟು ಅಥವಾ ನಾಲ್ಕು ಸಾರಿ ಮಾಡಿದಾತನು ಸಪ್ತದ್ವೀಪಾಧಿಪನಾಗುವನು. ಪ್ರತಿಜನ್ಮದಲ್ಲೂ ರೂಪಸೌಭಾಗ್ಯಸಂಪನ್ನನೆನಿಸುವನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಅಂಗಾರಕವ್ರತವೆಂಬ ಎಪ್ಪತ್ತೆರಡನೆಯ
ಅಧ್ಯಾಯವು ಮುಗಿದುದು.

## ಅಥ ತ್ರಿಸಪ್ತತಿತಮೋಽಧ್ಯಾಯಃ

|| ಪಿಪ್ಪಲಾದ ಉವಾಚ ||

ಅಥಾತಃ ಶೃಣು ಭೂಪಾಲ ಪ್ರತಿಶುಕ್ರಂ ಪ್ರಶಾಂತಯೇ |
ಯಾತ್ರಾರಂಭೇಽವಸಾನೇ ಚ ತಥಾ ಶುಕ್ರೋದಯೇ ತ್ವಿಹ || ೧ ||

ರಾಜತೇ ವಾಽಥ ಸೌವರ್ಣೇ ಕಾಂಸ್ಯಪಾತ್ರೇಽಥವಾ ಪುನಃ |
ಶುಕ್ಲಪುಷ್ಪಾಂಬರಯುತೇ ಸಿತತಂಡುಲಪೂರಿತೇ || ೨ ||

ವಿಧಾಯ ರಾಜತಂ ಶುಕ್ರಂ ಶುಚಿಮುಕ್ತಾಫಲಾನ್ವಿತಂ |
ಮಂತ್ರೇಣಾನೇನ ತತ್ಸರ್ವಂ ಸಾಮಗಾಯ ನಿವೇದಯೇತ್ || ೩ ||

ನಮಸ್ತೇ ಸರ್ವಲೋಕೇಶ ನಮಸ್ತೇ ಭೃಗುನಂದನ |
ಕವೇ ಸರ್ವಾರ್ಥಸಿದ್ಧ್ಯರ್ಥಂ ಗೃಹಾಣಾರ್ಘ್ಯಂ ನಮೋಽಸ್ತು ತೇ || ೪ ||

---

೧. ಪಿಪ್ಪಲಾದನು ಹೇಳಿದನು.—ಓ ಭೂಪಾಲಾ, ಇನ್ನು ಪ್ರಯಾಣದ ಪ್ರಾರಂಭದಲ್ಲಿಯೂ, ಕೊನೆಯಲ್ಲಿಯೂ, ಶುಕ್ರೋದಯದಲ್ಲಿಯೂ ಶಾಂತಿಗೋಸ್ಕರವಾಗಿ ಶುಕ್ರನನ್ನುದ್ದೇಶಿಸಿ ಮಾಡಬೇಕಾದ ಪೂಜಾ ವಿಧಾನವನ್ನು ಕೇಳು.

೨-೩. ಬೆಳ್ಳಿಯ, ಚಿನ್ನದ ಅಥವಾ ಕಂಚಿನ ಪಾತ್ರೆಯಲ್ಲಿ ಬೆಳ್ಳಗಿರುವ ಅಕ್ಕಿಯನ್ನು ತುಂಬಿ, ಶುಭ್ರಪುಷ್ಪಗಳಿಂದಲೂ ವಸ್ತ್ರದಿಂದಲೂ ಅಲಂಕರಿಸಿ, ಬೆಳ್ಳಿಯ ಶುಕ್ರವಿಗ್ರಹವನ್ನು ಅದರಲ್ಲಿಟ್ಟು ಶುಭ್ರವಾದ ಮುತ್ತಿನ ಕುಚ್ಚನ್ನು ಅದಕ್ಕೆ ಧರಿಸಬೇಕು. ಅವೆಲ್ಲವನ್ನೂ ಈ ಮುಂದಿನ ಮಂತ್ರದಿಂದ ಸಾಮವೇದಜ್ಞನಾದ ಬ್ರಾಹ್ಮಣನಿಗೆ ಒಪ್ಪಿಸಬೇಕು.

೪. ಸರ್ವಲೋಕಾಧೀಶ್ವರಾ, ನಿನಗೆ ನಮಸ್ಕಾರ. ಭೃಗುಸುತಾ, ನಿನಗೆ ನಮಸ್ಕಾರ. ಓ ಶುಕ್ರಾ, ಸವಾರ್ಥಗಳ ಸಿದ್ಧಿಗೋಸ್ಕರ ನಿನಗೆ ಅರ್ಘ್ಯವನ್ನು ಕೊಡುವೆನು. ತೆಗೆದುಕೋ. ನಿನಗೆ ನಮಸ್ಕಾರ.

**ಏವಮುಷ್ಯೋದಯೇ ಕುರ್ವನ್ಯಾತ್ರಾದಿಷು ಚ ಭಾರತ |**
**ಸರ್ವಾನ್ ಕಾಮಾನವಾಪ್ನೋತಿ ವಿಷ್ಣುಲೋಕೇ ಮಹೀಯತೇ || ೫ ||**

**ಯಾವಚ್ಛುಕ್ರಸ್ಯ ನ ಕೃತಾ ಪೂಜಾ ಸಾ ಮಾಲ್ಯಕೈಃ ಶುಭೈಃ |**
**ವಟಕೈಃ ಪೂರಿಕಾಭಿಶ್ಚ ಗೋಧೂಮೈಶ್ಚಣಕೈರಪಿ |**
**ತಾವದನ್ನಂ ನ ಚಾಶ್ನೀಯಾತ್ತ್ರಿಭಿಃ ಕಾಮಾರ್ಥಸಿದ್ಧಯೇ || ೬ ||**

**ತದ್ವದ್ವಾಚಸ್ಪತೇಃ ಪೂಜಾಂ ಪ್ರವಕ್ಷ್ಯಾಮಿ ಯುಧಿಷ್ಠಿರ |**
**ಸುವರ್ಣಪಾತ್ರೇ ಸೌವರ್ಣಮಮರೇಶಪುರೋಹಿತಂ || ೭ ||**

**ಪೀತಪುಷ್ಪಾಂಬರಯುತಂ ಕೃತ್ವಾ ಸ್ನಾತ್ವಾಥ ಸರ್ಷಪೈಃ |**
**ಪಲಾಶಾಶ್ವತ್ಥಯೋಗೇನ ಪಂಚಗವ್ಯಜಲೇನ ಚ || ೮ ||**

**ಪೀತಾಂಗರಾಗವಸನೋ ಘೃತಹೋಮಂ ಚ ಕಾರಯೇತ್ |**
**ಪ್ರಣಮ್ಯ ಚ ಗವಾ ಸಾರ್ಧಂ ಬ್ರಾಹ್ಮಣಾಯ ನಿವೇದಯೇತ್ || ೯ ||**

---

೫. ಧರ್ಮಪುತ್ರಾ, ಶುಕ್ರನು ಉದಿಸಿದಾಗಲೂ, ಯಾತ್ರಾದಿಗಳನ್ನು ಮಾಡುವಾಗಲೂ ಅವನನ್ನು ಅರ್ಚಿಸುವಾತನು ಸಕಲೇಷ್ಟಾರ್ಥಗಳನ್ನೂ ಪಡೆಯುವನು. ವಿಷ್ಣುಲೋಕದಲ್ಲಿ ಮನ್ನಣೆಗೆ ಪಾತ್ರನಾಗುವನು.

೬. ಮಂಗಳಕರವಾದ ಪುಷ್ಪಮಾಲೆಗಳು, ವಡೆಗಳು, ಪೂರಿಗಳು, ಗೋಧಿ ಮತ್ತು ಕಡಲೆಯಿಂದ ಮಾಡಿದ ಭಕ್ಷ್ಯಗಳು ಇವುಗಳಿಂದ ಶುಕ್ರನ ಪೂಜೆಯನ್ನು ನೆರವೇರಿಸಬೇಕು. ಅದುವರೆಗೆ ಭೋಜನವನ್ನು ಮಾಡಬಾರದು. ಕಾಮಾರ್ಥಗಳು ಸಿದ್ಧಿಸಬೇಕಾದರೆ ಈ ಪೂಜೆಯನ್ನು ಮೂರು ಸಾರಿ ನಡೆಸಬೇಕು.

೭-೮. ಯುಧಿಷ್ಠಿರಾ, ಹಾಗೆಯೇ ಬೃಹಸ್ಪತಿಯ ಪೂಜಾವಿಧಿಯನ್ನು ಹೇಳುತ್ತೇನೆ ಕೇಳು. ದೇವಗುರುವಿನ ಸುವರ್ಣ ಪ್ರತಿಮೆಯನ್ನು ಚಿನ್ನದ ಪಾತ್ರೆಯಲ್ಲಿ ಇರಿಸಬೇಕು. ಸಾಸುವೆಯಿಂದಲೂ, ಮುತ್ತುಗದ ಮತ್ತು ಅರಳಿಯ ಎಲೆಗಳ ನೀರಿನಿಂದಲೂ, ಪಂಚಗವ್ಯೋದಕದಿಂದಲೂ ಸ್ನಾನಮಾಡಬೇಕು.

೯. ಹೊಂಬಣ್ಣದ ಗಂಧವನ್ನೂ ವಸ್ತ್ರವನ್ನೂ ಧರಿಸಿಕೊಂಡು ತುಪ್ಪದಿಂದ ಹೋಮವನ್ನು ನಡೆಸಬೇಕು. ನಮಸ್ಕಾರ ಪೂರ್ವಕವಾಗಿ ಹಸುವಿನೊಡನೆ ಪ್ರತಿಮೆಯನ್ನು ಬ್ರಾಹ್ಮಣನಿಗೆ ದಾನಮಾಡಬೇಕು.

**ನಮಸ್ತೇಽಂಗಿರಸಾಂ ನಾಥ ವಾಕ್ಪತೇ ಚ ಬೃಹಸ್ಪತೇ ।**
**ಕ್ರೂರಗ್ರಹೈಃ ಪೀಡಿತಾನಾಮಮೃತಾಯ ನಮೋ ನಮಃ ॥೧೦॥**
**ಸಂಕ್ರಾಂತಾವಸ್ಯ ಕೌಂತೇಯ ಯಾತ್ರಾಸ್ವಭ್ಯುದಯೇಷು ಚ ।**
**ಕುರ್ವನ್ ಬೃಹಸ್ಪತೇಃ ಪೂಜಾಂ ಸರ್ವಾನ್ ಕಾಮಾನ್ ಸಮಶ್ನುತೇ ॥೧೧॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಗುರುಶುಕ್ರಪೂಜಾವಿಧಿರ್ನಾಮ ತ್ರಿಸಪ್ತತಿತಮೋಽಧ್ಯಾಯಃ**

---

೧೦. ಅಂಗಿರಸನ ವಂಶೋದ್ಭವರಲ್ಲಿ ಶ್ರೇಷ್ಠನೂ, ವಾಕ್ಪತಿಯೂ ಆದ ಎಲೈ ಬೃಹಸ್ಪತಿಯೇ ನಿನಗೆ ನಮಸ್ಕಾರ. ಕ್ರೂರ ಗ್ರಹಗಳ ಬಾಧೆಗೆ ಒಳಗಾದವರಿಗೆ ಅಮೃತದಂತಿರುವ ನಿನಗೆ ನಮಸ್ಕಾರ ನಮಸ್ಕಾರ.

೧೧. ಸಂಕ್ರಮಣದಲ್ಲಿ,ಯಾತ್ರಾಕಾಲಗಳಲ್ಲಿ, ಅಭ್ಯುದಯ ಸಮಯಗಳಲ್ಲಿ ಈ ಬೃಹಸ್ಪತಿ ಪೂಜೆಯನ್ನು ನಡೆಸುವಾತನಿಗೆ ಸಕಲೇಷ್ಟಾರ್ಥಗಳು ಲಭಿಸುವುವು.

## ಅಧ್ಯಾಯದ ಸಾರಾಂಶ

ಗುರುಶುಕ್ರರ ಪೂಜಾವಿಧಿಯನ್ನು ಈ ಅಧ್ಯಾಯದಲ್ಲಿ ತಿಳಿಸಿದೆ.

ಚಿನ್ನದ ಪಾತ್ರೆಗಳಲ್ಲಿ ಗುರುಶುಕ್ರರ ಚಿನ್ನದ ಪ್ರತಿಮೆಗಳನ್ನು ಇರಿಸಿ, ಗಂಧ ಪುಷ್ಪಾದಿಗಳಿಂದ ಅರ್ಚಿಸಿ, ಪ್ರಾರ್ಥನಾಪೂರ್ವಕವಾಗಿ ಬ್ರಾಹ್ಮಣನಿಗೆ ದಾನಮಾಡಬೇಕು. ಯಾತ್ರಾರಂಭದಲ್ಲಿಯೂ, ಅಭ್ಯುದಯಕಾಲಗಳಲ್ಲಿಯೂ ಈ ಪೂಜೆಗಳನ್ನು ನಡೆಸಿದರೆ ಸರ್ವಸಿದ್ಧಿಗಳೂ ಲಭಿಸುವುವು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಗುರುಶುಕ್ರ ಪೂಜಾವಿಧಿಯೆಂಬ
ಎಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.

## ಅಥ ಚತುಸ್ಸಪ್ತತಿತಮೋಽಧ್ಯಾಯಃ

॥ ಬ್ರಹ್ಮೋವಾಚ ॥

ಭಗವನ್ ಭವ ಸಂಸಾರಸಾಗರೋತ್ತಾರಕಾರಕ ।
ಕಿಂಚಿದ್ವ್ರತಂ ಸಮಾಚಕ್ಷ್ವ ಸ್ವರ್ಗಾರೋಗ್ಯಸುಖಪ್ರದಂ ॥ ೧ ॥

॥ ಈಶ್ವರ ಉವಾಚ ॥

ಸೌರಂ ಧರ್ಮಂ ಪ್ರವಕ್ಷ್ಯಾಮಿ ನಾಮ್ನಾ ಕಲ್ಯಾಣಸಪ್ತಮೀಂ ।
ವಿಶೋಕಸಪ್ತಮೀಂ ತದ್ವತ್ಫಲಾಢ್ಯಾಂ ಪಾಪನಾಶಿನೀಂ ॥ ೨ ॥

ಶರ್ಕರಾಸಪ್ತಮೀಂ ಪುಣ್ಯಾಂ ತಥಾ ಕಮಲಸಪ್ತಮೀಂ ।
ಮಂದಾರಸಪ್ತಮೀಂ ತದ್ವಚ್ಛುಭದಾಂ ಶುಭಸಪ್ತಮೀಂ ॥ ೩ ॥

ಸರ್ವಾನಂತಫಲಾಃ ಪ್ರೋಕ್ತಾಃ ಸರ್ವಾ ದೇವರ್ಷಿಪೂಜಿತಾಃ ।
ವಿಧಾನಮಾಸಾಂ ವಕ್ಷ್ಯಾಮಿ ಯಥಾವದನುಪೂರ್ವಶಃ ॥ ೪ ॥

---

೧. ಬ್ರಹ್ಮನು ಹೇಳಿದನು.—ಸಂಸಾರ ಸಾಗರದಿಂದ ಪಾರುಮಾಡುವ ಪೂಜ್ಯನಾದ ಓ ಪರಮೇಶ್ವರಾ, ಸ್ವರ್ಗವನ್ನೂ, ಆರೋಗ್ಯವನ್ನೂ, ಸುಖವನ್ನೂ ಕೊಡುವ ಯಾವುದಾದರೊಂದು ವ್ರತವನ್ನು ಹೇಳು.

೨. ಈಶ್ವರನು ಹೇಳಿದನು.—ಸೂರ್ಯಸಂಬಂಧವಾದ ವ್ರತವನ್ನು ಹೇಳುತ್ತೇನೆ ಕೇಳು. ಇದಕ್ಕೆ ಕಲ್ಯಾಣಸಪ್ತಮಿಯೆಂದು ಹೆಸರು. ವಿಶೋಕಸಪ್ತಮಿ, ಫಲಸಪ್ತಮಿ ಎಂಬ ವ್ರತಗಳೂ ಸಹ ಪಾಪಪರಿಹಾರಕವಾದುವು. ಅವುಗಳನ್ನೂ ತಿಳಿಸುವೆನು.

೩. ಶರ್ಕರಾಸಪ್ತಮಿ, ಪುಣ್ಯಕರವಾದ ಕಮಲಸಪ್ತಮಿ, ಮಂದಾರಸಪ್ತಮಿ, ಮತ್ತು ಶುಭಪ್ರದವಾದ ಶುಭಸಪ್ತಮಿಯೆಂಬ ವ್ರತಗಳನ್ನು ಹೇಳುತ್ತೇನೆ.

೪. ಇವೆಲ್ಲವೂ ಅನಂತಫಲಪ್ರದಗಳು. ದೇವರ್ಷಿಗಳಿಂದ ಪೂಜಿತವಾದುವು. ಇವುಗಳ ವಿಧಾನವನ್ನು ಅನುಕ್ರಮವಾಗಿ ವಿವರಿಸುವೆನು.

**ಯದಾ ತು ಶುಕ್ಲಸಪ್ತಮ್ಯಾಮಾದಿತ್ಯಸ್ಯ ದಿನಂ ಭವೇತ್ ।**
**ಸಾ ತು ಕಲ್ಯಾಣಿನೀ ನಾಮ ವಿಜಯಾ ಚ ನಿಗದ್ಯತೇ ॥ ೫ ॥**

**ಪ್ರಾತರ್ಗವ್ಯೇನ ಪಯಸಾ ಸ್ನಾನಮಸ್ಯಾಂ ಸಮಾಚರೇತ್ ।**
**ತತಃ ಶುಕ್ಲಾಂಬರಃ ಪದ್ಮಮಕ್ಷತಾಭಿಃ ಪ್ರಕಲ್ಪಯೇತ್ ॥ ೬ ॥**

**ಪ್ರಾಙ್ಮುಖೋಽಷ್ಟದಲಂ ಮಧ್ಯೇ ತದ್ವದ್ವೃತ್ತಾಂ ಚ ಕರ್ಣಿಕಾಂ ।**
**ಪುಷ್ಪಾಕ್ಷತಾಭಿರ್ದೇವೇಶಂ ವಿನ್ಯಸೇತ್ಸರ್ವತಃ ಕ್ರಮಾತ್ ॥ ೭ ॥**

**ಪೂರ್ವೇಣ ತಪನಾಯೇತಿ ಮಾರ್ತಂಡಾಯೇತಿ ಚಾನಲೇ ।**
**ಯಾಮ್ಯೇ ದಿವಾಕರಾಯೇತಿ ವಿಧಾತ್ರ ಇತಿ ನೈಋರ್ತೇ ॥ ೮ ॥**

**ಪಶ್ಚಿಮೇ ವರುಣಾಯೇತಿ ಭಾಸ್ಕರಾಯೇತಿ ಚಾನಿಲೇ ।**
**ಸೌಮ್ಯೇ ವಿಕರ್ತನಾಯೇತಿ ರವಯೇ ಚಾಷ್ಟಮೇ ದಲೇ ॥ ೯ ॥**

**ಆದಾವಂತೇ ಚ ಮಧ್ಯೇ ಚ ನಮೋಽಸ್ತು ಪರಮಾತ್ಮನೇ**
**ಮಂತ್ರೈರೇಭಿಃ ಸಮಭ್ಯರ್ಚ್ಯ ನಮಸ್ಕಾರಾಂತದೀಪಿತೈಃ ॥೧೦॥**

---

೫. ಶುಕ್ಲಪಕ್ಷದ ಸಪ್ತಮಿಯೂ ಭಾನುವಾರವೂ ಕೂಡಿದ ದಿನವನ್ನು ಕಲ್ಯಾಣಿನೀ ಅಥವಾ ವಿಜಯಾ ಎಂದು ಕರೆಯುವರು.

೬-೭. ಈ ಪವಿತ್ರ ದಿನದ ಪ್ರಾತಃಕಾಲದಲ್ಲಿ ಹಸುವಿನ ಹಾಲಿನಿಂದ ಸ್ನಾನ ಮಾಡಿ ಶುಭ್ರವಸ್ತ್ರವನ್ನು ಧರಿಸಬೇಕು. ಬಳಿಕ ಪೂರ್ವಾಭಿಮುಖನಾಗಿ ಅಕ್ಷತೆಗಳಿಂದ ಅಷ್ಟದಲ ಪದ್ಮವನ್ನೂ, ನಡುವೆ ಗುಂಡಗಿರುವ ಕರ್ಣಿಕೆಯನ್ನೂ ರಚಿಸಬೇಕು. ಪುಷ್ಪಾಕ್ಷತೆಗಳಿಂದ ದೇವೇಶನಾದ ಸೂರ್ಯನನ್ನು ಕ್ರಮವಾಗಿ ಎಲ್ಲಕಡೆಗಳಲ್ಲಿಯೂ ವಿನ್ಯಾಸಮಾಡಬೇಕು.

೮-೯. ಪೂರ್ವದಲ್ಲಿ ತಪನನಿಗೆ, ಆಗ್ನೇಯದಲ್ಲಿ ಮಾರ್ತಂಡನಿಗೆ, ದಕ್ಷಿಣದಲ್ಲಿ ದಿವಾಕರನಿಗೆ, ನೈಋತ್ಯದಲ್ಲಿ ವಿಧಾತ್ರನಿಗೆ, ಪಶ್ಚಿಮದಲ್ಲಿ ವರುಣನಿಗೆ, ವಾಯುವ್ಯದಲ್ಲಿ ಭಾಸ್ಕರನಿಗೆ, ಉತ್ತರದಲ್ಲಿ ವಿಕರ್ತನನಿಗೆ ಮತ್ತು ಈಶಾನ್ಯದಿಕ್ಕಿನ ಎಂಟನೆಯ ದಲದಲ್ಲಿ ರವಿಗೆ ಎಂದು ನಮಸ್ಕಾರ ಪೂರ್ವಕವಾಗಿ ಆಸನವನ್ನು ಸಮರ್ಪಿಸಬೇಕು.

೧೦. ಆದ್ಯಂತ ಮಧ್ಯಗಳಲ್ಲಿ ಪರಮಾತ್ಮನಿಗೆ ನಮಸ್ಕಾರವೆಂದು ಉಚ್ಚರಿಸಬೇಕು. ನಮಸ್ಕಾರ ಶಬ್ದವನ್ನು ಕೊನೆಯಲ್ಲಿ ಸೇರಿಸಿ ಈ ಮಂತ್ರಗಳಿಂದ ಅರ್ಚಿಸಬೇಕು.

ಶುಕ್ಲವಸ್ತ್ರೈಃ ಫಲೈರ್ಭಕ್ಷೈರ್ಧೂಪಮಾಲ್ಯಾನುಲೇಪನೈಃ ।
ಸ್ಥಂಡಿಲೇ ಪೂಜಯೇದ್ಭಕ್ತ್ಯಾ ಗುಡೇನ ಲವಣೇನ ಚ ॥೧೧॥

ತತೋ ವ್ಯಾಹೃತಿಮಂತ್ರೇಣ ವಿಸೃಜೇದ್ದ್ವಿಜಪುಂಗವಂ ।
ಶಕ್ತಿತಃ ಪೂಜಯೇದ್ಭಕ್ತ್ಯಾ ಗುಡಕ್ಷೀರಘೃತಾದಿಭಿಃ ।
ತಿಲಪಾತ್ರಂ ಹಿರಣ್ಯಂ ಚ ಬ್ರಾಹ್ಮಣಾಯ ನಿವೇದಯೇತ್ ॥೧೨॥

ಏವಂ ನಿಯಮಕೃತ್ಸುಪ್ತ್ವಾ ಪ್ರಾತರುತ್ಥಾಯ ಮಾನವಃ ।
ಕೃತಸ್ನಾನಜಪೋ ವಿಪ್ರೈಃ ಸಹೈವ ಘೃತಪಾಯಸಂ ॥೧೩॥

ಭುಕ್ತ್ವಾ ಚ ವೇದವಿದುಷೇ ವಿಡಾಲವ್ರತವರ್ಜಿತೇ ।
ಘೃತಪಾತ್ರಂ ಸಕನಕಂ ಸೋದಕುಂಭಂ ನಿವೇದಯೇತ್ ॥೧೪॥

ಪ್ರೀಯತಾಮತ್ರಭಗವಾನ್ ಪರಮಾತ್ಮಾ ದಿವಾಕರಃ ।
ಅನೇನ ವಿಧಿನಾ ಸರ್ವಂ ಮಾಸಿ ಮಾಸಿ ವ್ರತಂ ಚರೇತ್ ॥೧೫॥

---

೧೧. ಶುಭ್ರವಸ್ತ್ರಗಳಿಂದಲೂ, ಫಲಗಳಿಂದಲೂ, ಭಕ್ಷ್ಯಗಳಿಂದಲೂ, ಗಂಧ ಪುಷ್ಪ ಧೂಪಗಳಿಂದಲೂ, ನೆಲದ ಮೇಲೆ ಸೂರ್ಯದೇವನನ್ನು ಭಕ್ತಿಯೊಡನೆ ಪೂಜಿಸಿ, ಬೆಲ್ಲವನ್ನೂ ಉಪ್ಪನ್ನೂ ನಿವೇದನಮಾಡಬೇಕು.

೧೨. ಬಳಿಕ ವ್ಯಾಹೃತಿ ಮಂತ್ರಗಳನ್ನು ಹೇಳಿ ಬ್ರಾಹ್ಮಣೋತ್ತಮನನ್ನು ಬೀಳ್ಕೊಡಬೇಕು. ಬೆಲ್ಲ, ಹಾಲು, ತುಪ್ಪ ಇವುಗಳಿಂದ ಸತ್ಕರಿಸಿ ಎಳ್ಳುತುಂಬಿದ ಪಾತ್ರೆಯನ್ನೂ ಹಿರಣ್ಯವನ್ನೂ ಅವನಿಗೆ ದಾನಮಾಡಬೇಕು.

೧೩-೧೪. ಹೀಗೆ ನಿಯಮದಿಂದ ಮಲಗಿ, ಬೆಳಗ್ಗೆ ಎದ್ದು ಸ್ನಾನಜಪಗಳನ್ನು ನೆರವೇರಿಸಿ, ಬ್ರಾಹ್ಮಣರೊಡನೆ ತುಪ್ಪದ ಮತ್ತು ಪಾಯಸದ ಭೋಜನವನ್ನು ಮಾಡಬೇಕು. ವೇದಜ್ಞನೂ ಅದಾಂಭಿಕನೂ ಆದ ದ್ವಿಜೋತ್ತಮನಿಗೆ ತುಪ್ಪ ತುಂಬಿದ ಪಾತ್ರೆಯನ್ನು ಜಲಕುಂಭಸಹಿತವಾಗಿ ದಕ್ಷಿಣೆಯೊಡನೆ ದಾನಮಾಡಬೇಕು.

೧೫. "ಪೂಜ್ಯನಾದ ಸೂರ್ಯದೇವನು ಈ ಕರ್ಮದಿಂದ ಪ್ರೀತನಾಗಲಿ" ಎಂದು ಅನುಸಂಧಾನಮಾಡಬೇಕು. ಈ ಎಲ್ಲ ವಿಧಾನದಿಂದ ಪ್ರತಿ ತಿಂಗಳಲ್ಲೂ ವ್ರತವನ್ನು ನಡೆಸಬೇಕು.

ತತಸ್ತ್ರಯೋದಶೇ ಮಾಸಿ ಗಾ ವೈ ದದ್ಯಾತ್ತ್ರಯೋದಶ ।
ವಸ್ತ್ರಾಲಂಕಾರಸಂಯುಕ್ತಾಃ ಸುವರ್ಣಾಸ್ಯಾಃ ಪಯಸ್ವಿನೀಃ ॥೧೬॥

ಏಕಾಮಪಿ ಪ್ರದದ್ಯಾದ್ವಾ ವಿತ್ತಹೀನೋ ವಿಮತ್ಸರಃ ।
ನ ವಿತ್ತಶಾಠ್ಯಂ ಕುರ್ವೀತ ಯತೋ ಮೋಹಾತ್ಪತತ್ಯಧಃ ॥೧೭॥

ಅನೇನ ವಿಧಿನಾ ಯಸ್ತು ಕುರ್ಯಾತ್ಕಲ್ಯಾಣಸಪ್ತಮೀಂ ।
ಸರ್ವಪಾಪವಿನಿರ್ಮುಕ್ತಃ ಸೂರ್ಯಲೋಕೇ ಮಹೀಯತೇ ।
ಆಯುರಾರೋಗ್ಯಮೈಶ್ವರ್ಯಮನಂತಮಿಹ ಜಾಯತೇ ॥೧೮॥

ಸರ್ವಪಾಪಹರಾ ನಿತ್ಯಂ ಸರ್ವದೈವತಪೂಜಿತಾ ।
ಸರ್ವದುಷ್ಟೋಪಶಮನೀ ಸದಾ ಕಲ್ಯಾಣಸಪ್ತಮೀ ॥೧೯॥

---

೧೬. ಬಳಿಕ ಹದಿಮೂರನೆಯ ತಿಂಗಳಲ್ಲಿ ಮುಖವನ್ನು ಚಿನ್ನದೊಡವೆಗಳಿಂದ ಸಿಂಗರಿಸಿದ, ವಸ್ತ್ರಾಲಂಕಾರಸಹಿತಗಳಾದ, ಚೆನ್ನಾಗಿ ಹಾಲುಕೊಡುವ ಹದಿಮೂರು ಹಸುಗಳನ್ನು ದಾನಮಾಡಬೇಕು.

೧೭. ದ್ರವ್ಯವಿಲ್ಲದಿದ್ದರೆ ಶುದ್ಧಮನಸ್ಸಿನಿಂದ ಒಂದು ಹಸುವನ್ನಾದರೂ ಕೊಡಬೇಕು. ಹಣಕ್ಕಾಗಿ ಕಾರ್ಪಣ್ಯವನ್ನು ಮಾಡಬಾರದು. ಮೋಹದಿಂದ ಹಾಗೆ ಮಾಡಿದರೆ ಅಧೋಗತಿಗೆ ಇಳಿಯುವನು.

೧೮. ಈ ವಿಧಿಯಿಂದ ಕಲ್ಯಾಣ ಸಪ್ತಮೀವ್ರತವನ್ನು ಮಾಡುವಾತನು ಸರ್ವಪಾಪನಿರ್ಮುಕ್ತನಾಗಿ ಸೂರ್ಯಲೋಕದಲ್ಲಿ ಪೂಜ್ಯತೆಯನ್ನು ಪಡೆಯುವನು. ಭೂಮಿಯಲ್ಲಿರುವ ವರೆಗೂ ಆತನಿಗೆ ಆಯುರಾರೋಗ್ಯೈಶ್ವರ್ಯಗಳು ಅನಂತವಾಗಿ ಲಭಿಸುವುವು.

೧೯. ಕಲ್ಯಾಣ ಸಪ್ತಮೀವ್ರತವು ಸರ್ವಪಾಪವನ್ನೂ ಕಳೆಯುವುದು. ಎಲ್ಲ ದೇವತೆಗಳಿಗೂ ಮಾನ್ಯವೆನಿಸುವುದು. ಎಡೆಬಿಡದೆ ಸರ್ವದೋಷಗಳನ್ನೂ ಪರಿಹರಿಸುವುದು.

**ಇಮಾಮನಂತಫಲದಾಂ ಯಸ್ತು ಕಲ್ಯಾಣಸಪ್ತಮೀಂ ।**
**ಶೃಣೋತಿ ಪಠತೇ ಚೇಹ ಸರ್ವಪಾಪೈಃ ಪ್ರಮುಚ್ಯತೇ ॥೨೦॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಕಲ್ಯಾಣಸಪ್ತಮೀವ್ರತಂ**
**ನಾಮ ಚತುಸ್ಸಪ್ತತಿತಮೋಽಧ್ಯಾಯಃ**

---

೨೦. ಅಪರಿಮಿತ ಫಲವನ್ನು ಕೊಡುವ ಈ ಕಲ್ಯಾಣಸಪ್ತಮೀವ್ರತವನ್ನು ಕೇಳಲಿ, ಓದಲಿ ಆತನೂ ಸಹ ಈ ಲೋಕದಲ್ಲಿ ಎಲ್ಲ ಪಾಪಗಳಿಂದಲೂ ಮುಕ್ತನಾಗುವನು.

### ಅಧ್ಯಾಯದ ಸಾರಾಂಶ

ಸೂರ್ಯ ಪೂಜಾರೂಪವಾದ ಕಲ್ಯಾಣ ಸಪ್ತಮೀವ್ರತವು ಈ ಅಧ್ಯಾಯದಲ್ಲಿ ಉಕ್ತವಾಗಿದೆ.

ಶುಕ್ಲಪಕ್ಷದ ಸಪ್ತಮಿಯೊಡಗೂಡಿದ ಭಾನುವಾರದ ದಿನ ಈ ವ್ರತವನ್ನು ಪ್ರಾರಂಭಿಸಿ ಪ್ರತಿ ತಿಂಗಳಲ್ಲೂ ನಡೆಸುತ್ತಿರಬೇಕು. ಅಷ್ಟದಳ ಪದ್ಮವನ್ನು ಬರೆದು ಅದರಲ್ಲಿ ಸೂರ್ಯದೇವನನ್ನು ಆವಾಹನಮಾಡಿ ಷೋಡಶೋಪಚಾರಗಳಿಂದ ಪೂಜಿಸಬೇಕು. ಹದಿಮೂರನೆಯ ತಿಂಗಳಲ್ಲಿ ಆ ಭಗವಂತನ ಪ್ರೀತ್ಯರ್ಥವಾಗಿ ಗೋದಾನವನ್ನು ಮಾಡಬೇಕು. ಇದು ಸಕಲ ಪಾಪಗಳನ್ನೂ ಕಳೆದು ಆಯುರಾರೋಗ್ಯೈಶ್ವರ್ಯಗಳನ್ನು ಕೊಡುವ ಅತಿ ಶ್ರೇಷ್ಠವಾದ ವ್ರತ.

ಶ್ರೀಮತ್ಸ್ಯಮಹಾಪುರಾಣದಲ್ಲಿ ಕಲ್ಯಾಣಸಪ್ತಮೀವ್ರತವೆಂಬ
ಎಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.

## ಅಥ ಪಂಚಸಪ್ತತಿತಮೋಽಧ್ಯಾಯಃ

॥ ಈಶ್ವರ ಉವಾಚ ॥

ವಿಶೋಕಸಪ್ತಮೀಂ ತದ್ವದ್ವಕ್ಷ್ಯಾಮಿ ಮುನಿಪುಂಗವ ।
ಯಾಮುಪೋಷ್ಯ ನರಃ ಶೋಕಂ ನ ಕದಾಚಿದಿಹಾಶ್ನುತೇ ॥ ೧ ॥

ಮಾಘೇ ಕೃಷ್ಣತಿಲೈಃ ಸ್ನಾತ್ವಾ ಷಷ್ಠ್ಯಾಂ ವೈ ಶುಕ್ಲಪಕ್ಷತಃ ।
ಕೃತಾಹಾರಃ ಕೃಸರಯಾ ದಂತಧಾವನಪೂರ್ವಕಂ ।
ಉಪವಾಸವ್ರತಂ ಕೃತ್ವಾ ಬ್ರಹ್ಮಚಾರೀ ಭವೇನ್ನಿಶಿ ॥ ೨ ॥

ತತಃ ಪ್ರಭಾತ ಉತ್ಥಾಯ ಕೃತಸ್ನಾನಜಪಃ ಶುಚಿಃ ।
ಕೃತ್ವಾ ತು ಕಾಂಚನಂ ಪದ್ಮಮರ್ಕಾಯೇತಿ ಚ ಪೂಜಯೇತ್ ।
ಕರವೀರಸ್ಯ ಪುಷ್ಪೈಸ್ತು ರಕ್ತವಸ್ತ್ರಯುಗೇನ ಚ ॥ ೩ ॥

ಯಥಾ ವಿಶೋಕಂ ಭುವನಂ ತ್ವಯೈವಾದಿತ್ಯ ಸರ್ವದಾ ।
ತಥಾ ವಿಶೋಕತಾ ಮೇಽಸ್ತು ತ್ವದ್ಭಕ್ತಿಃ ಪ್ರತಿಜನ್ಮ ಚ ॥ ೪ ॥

---

೧. ಈಶ್ವರನು ಹೇಳಿದನು.—ಓ ಮುನಿವರ್ಯಾ, ಇನ್ನು ವಿಶೋಕಸಪ್ತಮೀ ವ್ರತವನ್ನು ಹೇಳುವೆನು. ಇದೊಂದರಲ್ಲಿ ಉಪವಾಸಮಾಡಿದರೆ ಸಾಕು; ಮನುಷ್ಯನಿಗೆ ಶೋಕವೆಂದಿಗೂ ಬಾರದು.

೨. ಮಾಘಮಾಸದ ಶುಕ್ಲಪಕ್ಷದಲ್ಲಿ ಷಷ್ಠಿಯ ದಿನ ದಂತಧಾವನದೊಡನೆ ಕರಿಯೆಳ್ಳಿನಿಂದ ಸ್ನಾನಮಾಡಿ, ಕೃಸರವನ್ನು (ಚಿಗಳಿಯನ್ನು) ಭಕ್ಷಿಸಿ ಉಪವಾಸ ವತ್ರವನ್ನು ಮಾಡಬೇಕು. ರಾತ್ರಿ ಬ್ರಹ್ಮಚರ್ಯದಲ್ಲಿರಬೇಕು.

೩. ಬಳಿಕ ಮಾರನೆಯ ದಿನ ಬೆಳಗ್ಗೆ ಎದ್ದು, ಸ್ನಾನಜಪಗಳಿಂದ ಶುದ್ಧನಾಗಿ, ಚಿನ್ನದ ತಾವರೆಯನ್ನು ನಿರ್ಮಿಸಿ, ಕೆಂಪು ಗಣಿಗಲೆ ಹೂಗಳಿಂದಲೂ, ಒಂದು ಜತೆ ಕೆಂಪು ವಸ್ತ್ರದಿಂದಲೂ ಸೂರ್ಯ ಭಗವಂತನನ್ನು ನಮಸ್ಕಾರವೆನ್ನುತ್ತ ಪೂಜಿಸಬೇಕು.

೪. "ಓ ಸೂರ್ಯದೇವಾ, ನಿನ್ನಿಂದ ಲೋಕವು ಯಾವಾಗಲೂ ಶೋಕರಹಿತ ವಾಗಿರುವುದು. ಹಾಗೆಯೇ ನನಗೂ ಶೋಕರಾಹಿತ್ಯವಿರಲಿ. ಪ್ರತಿಜನ್ಮದಲ್ಲೂ ನನಗೆ ನಿನ್ನಲ್ಲಿ ಭಕ್ತಿ ನೆಲಸಲಿ."

ಏವಂ ಸಂಪೂಜ್ಯ ಷಷ್ಠ್ಯಾಂ ತು ಭಕ್ತ್ಯಾ ಸಂಪೂಜಯೇದ್ದ್ವಿಜಾನ್ ।
ಸುಪ್ತ್ವಾ ಸಂಪ್ರಾಶ್ಯ ಗೋಮುತ್ರಮುತ್ಥಾಯ ಕೃತನೈತ್ಯಕಃ ॥ ೫ ॥

ಸಂಪೂಜ್ಯ ವಿಪ್ರಾನನ್ನೇನ ಗುಡಪಾತ್ರಸಮನ್ವಿತಂ ।
ತದ್ವಸ್ತ್ರಯುಗ್ಮಂ ಪದ್ಮಂ ಚ ಬ್ರಾಹ್ಮಣಾಯ ನಿವೇದಯೇತ್ ॥ ೬ ॥

ಅತೈಲಲವಣಂ ಭುಕ್ತ್ವಾ ಸಪ್ತಮ್ಯಾಂ ಮೌನಸಂಯುತಃ ।
ತತಃ ಪುರಾಣಶ್ರವಣಂ ಕರ್ತವ್ಯಂ ಭೂತಿಮಿಚ್ಛತಾ ॥ ೭ ॥

ಅನೇನ ವಿಧಿನಾ ಸರ್ವಮುಭಯೋರಪಿ ಪಕ್ಷಯೋಃ ।
ಕೃತ್ವಾ ಯಾವತ್ಪುನರ್ಮಾಘಶುಕ್ಲಪಕ್ಷಸ್ಯ ಸಪ್ತಮೀ ॥ ೮ ॥

ವ್ರತಾಂತೇ ಕಲಶಂ ದದ್ಯಾತ್ಸುವರ್ಣಕಮಲಾನ್ವಿತಂ ।
ಶಯ್ಯಾಂ ಸೋಪಸ್ಕರಾಂ ದದ್ಯಾತ್ಕಪಿಲಾಂ ಚ ಪಯಸ್ವಿನೀಂ ॥ ೯ ॥

---

೫. ಷಷ್ಠಿಯ ದಿನ ಹೀಗೆ ಪೂಜಿಸಿ ಭಕ್ತಿಯಿಂದ ಬ್ರಾಹ್ಮಣರನ್ನು ಸತ್ಕರಿಸಬೇಕು. ಗೋಮೂತ್ರಪ್ರಾಶನವನ್ನು ಮಾಡಿ ಮಲಗಬೇಕು. ಬೆಳಗ್ಗೆ ಎದ್ದು ನಿತ್ಯಕರ್ಮಗಳನ್ನು ನೆರವೇರಿಸಬೇಕು.

೬. ಬ್ರಾಹ್ಮಣರನ್ನು ಭೋಜನದಿಂದ ಉಪಚರಿಸಿ, ಗುಡಪಾತ್ರಸಹಿತವಾಗಿ ಆ ತಾವರೆಯನ್ನೂ ಕೆಂಪುವಸ್ತ್ರಗಳೆರಡನ್ನೂ ದ್ವಿಜನಿಗೆ ದಾನಮಾಡಬೇಕು.

೭. ಸಪ್ತಮಿಯ ದಿನ ಉಪ್ಪೂ ಎಣ್ಣೆಯೂ ಇಲ್ಲವೆ ಭೋಜನಮಾಡಿ ಮೌನವ್ರತದಿಂದಿರಬೇಕು. ಐಶ್ವರ್ಯಾರ್ಥಿಯು ಪುರಾಣಶ್ರವಣವನ್ನು ಮಾಡಬೇಕು.

೮. ಪುನಃ ಮಾಘ ಶುಕ್ಲ ಸಪ್ತಮಿಯು ಬರುವವರೆಗೆ ಎರಡು ಪಕ್ಷಗಳಲ್ಲಿಯೂ ಇದೇ ಕ್ರಮದಿಂದ ವ್ರತವನ್ನು ಮಾಡುತ್ತಿರಬೇಕು.

೯. ವ್ರತದ ಸಮಾಪ್ತಿಯಲ್ಲಿ ಸುವರ್ಣಕಮಲಸಹಿತವಾದ ಕಲಶವನ್ನೂ, ಸಪರಿಕರವಾದ ಶಯನವನ್ನೂ, ವಿಶೇಷವಾಗಿ ಹಾಲು ಕರೆಯುವ ಹಸುವನ್ನೂ ದಾನಮಾಡಬೇಕು.

ಅನೇನ ವಿಧಿನಾ ಯಸ್ತು ವಿತ್ತಶಾಠ್ಯವಿವರ್ಜಿತಃ ।
ವಿಶೋಕಸಪ್ತಮೀಂ ಕುರ್ಯಾತ್ಸ ಯಾತಿ ಪರಮಾಂ ಗತಿಂ ॥೧೦॥

ಯಾವಜ್ಜನ್ಮಸಹಸ್ರಾಣಾಂ ಸಾಗ್ರಂ ಕೋಟಿಶತಂ ಭವೇತ್ ।
ತಾವನ್ನ ಶೋಕಮಭ್ಯೇತಿ ರೋಗದೌರ್ಗತ್ಯವರ್ಜಿತಃ ॥೧೧॥

ಯಂ ಯಂ ಪ್ರಾರ್ಥಯತೇ ಕಾಮಂ ತಂ ತಮಾಪ್ನೋತಿ ಪುಷ್ಕಲಂ ।
ನಿಷ್ಕಾಮಃ ಕುರುತೇ ಯಸ್ತು ಸ ಪರಂ ಬ್ರಹ್ಮ ಗಚ್ಛತಿ ॥೧೨॥

ಯಃ ಪಠೇಚ್ಛೃಣುಯಾದ್ವಾಽಪಿ ವಿಶೋಕಾಖ್ಯಾಂ ಚ ಸಪ್ತಮೀಂ ।
ಸೋಽಪೀಂದ್ರಲೋಕಮಾಪ್ನೋತಿ ನ ದುಃಖೀ ಜಾಯತೇ ಕ್ವಚಿತ್ ॥೧೩॥

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ವಿಶೋಕಸಪ್ತಮೀವ್ರತಂ ನಾಮ ಪಂಚಸಪ್ತತಿತಮೋಽಧ್ಯಾಯಃ**

---

೧೦. ಧಾರಾಳವಾಗಿ ಹಣವನ್ನು ವೆಚ್ಚಮಾಡಿ, ಈ ವಿಧಾನದಿಂದ ವಿಶೋಕ ಸಪ್ತಮೀ ವ್ರತವನ್ನು ನಡೆಸುವಾತನು ಉತ್ತಮಗತಿಯನ್ನೈದುವನು.

೧೧. ಸಾವಿರಗಟ್ಟಲೆಯ ಕೋಟಿ ಜನ್ಮಗಳು ಬರಲಿ, ಆತನು ದುಃಖಕ್ಕೀಡಾಗುವುದಿಲ್ಲ; ರೋಗವೂ ಬಡತನವೂ ಅವನನ್ನು ಮುಟ್ಟಲಾರವು.

೧೨. ಆತನು ಕೋರಿದ ಇಷ್ಟಾರ್ಥಗಳೆಲ್ಲವೂ ಯಥೇಚ್ಛವಾಗಿ ಈಡೇರುವುವು. ನಿಷ್ಕಾಮಬುದ್ಧಿಯಿಂದ ಈ ವ್ರತವನ್ನು ಮಾಡಿದವನು ಪರಬ್ರಹ್ಮಸಾಯುಜ್ಯವನ್ನು ಪಡೆಯುವನು.

೧೩. ವಿಶೋಕಸಪ್ತಮೀ ವ್ರತವನ್ನು ಯಾವಾತನು ಓದುತ್ತಾನೋ, ಇಲ್ಲವೇ ಕೇಳುತ್ತಾನೋ ಅವನೂ ಸಹ ಇಂದ್ರಲೋಕವನ್ನೈದುವನು. ಅವನಿಗೆ ದುಃಖವೆಂದಿಗೂ ಬಾರದು.

## ಅಧ್ಯಾಯದ ಸಾರಾಂಶ

ವಿಶೋಕಸಪ್ತಮೀ ವ್ರತದ ವಿಧಾನವನ್ನು ಈ ಅಧ್ಯಾಯವು ತಿಳಿಸುತ್ತದೆ.

ಮಾಘ ಶುಕ್ಲ ಷಷ್ಠಿಯ ದಿನ ವಿಧ್ಯುಕ್ತವಾಗಿ ಸೂರ್ಯದೇವನನ್ನು ಪೂಜಿಸಿ, ನಿಯಮದಿಂದೆದ್ದು ಸಪ್ತಮಿಯಲ್ಲಿ ಬ್ರಾಹ್ಮಣರನ್ನು ಭೋಜನಾದಿಗಳಿಂದ ಸತ್ಕರಿಸಬೇಕು. ಪ್ರತಿ ತಿಂಗಳ ಎರಡು ಪಕ್ಷಗಳಲ್ಲೂ ಹೀಗೆ ಮಾಡುತ್ತ ವರ್ಷಾಂತದಲ್ಲಿ ವ್ರತವನ್ನು ಸಮಾಪ್ತಿಗೊಳಿಸಬೇಕು. ಆಗ ಗೋದಾನಾದಿಗಳನ್ನು ನಡೆಸುವುದು ಆವಶ್ಯಕ. ಈ ವ್ರತಾಚರಣೆಯಿಂದ ಶೋಕ ರೋಗದಾರಿದ್ರ್ಯಗಳು ದೂರವಾಗುವುವು.

ಶ್ರೀಮತ್ಸ್ಯಮಹಾಪುರಾಣದಲ್ಲಿ ವಿಶೋಕಸಪ್ತಮೀವ್ರತವೆಂಬ
ಎಪ್ಪತ್ತೈದನೆಯ ಅಧ್ಯಾಯವು ಮುಗಿದುದು.



## ಅಥ ಷಟ್‍ಸಪ್ತತಿತಮೋಽಧ್ಯಾಯಃ

॥ ಈಶ್ವರ ಉವಾಚ ॥

ಅನ್ಯಾಮಪಿ ಪ್ರವಕ್ಷ್ಯಾಮಿ ನಾಮ್ನಾ ತು ಫಲಸಪ್ತಮೀಂ ।
ಯಾಮುಪೋಷ್ಯ ನರಃ ಪಾಪಾದ್ವಿಮುಕ್ತಃ ಸ್ವರ್ಗಭಾಗ್ಭವೇತ್ ॥ ೧ ॥

ಮಾರ್ಗಶೀರ್ಷೇ ಶುಭೇ ಮಾಸಿ ಸಪ್ತಮ್ಯಾಂ ನಿಯತವ್ರತಃ ।
ತಾಮುಪೋಷ್ಯಾಥ ಕಮಲಂ ಕಾರಯಿತ್ವಾ ತು ಕಾಂಚನಂ ॥ ೨ ॥

ಶರ್ಕರಾಸಂಯುತಂ ದದ್ಯಾದ್ಬ್ರಾಹ್ಮಣಾಯ ಕುಟುಂಬಿನೇ ।
ರವಿಂ ಕಾಂಚನಕಂ ಕೃತ್ವಾ ಪಲಸ್ಯೈಕಸ್ಯ ಧರ್ಮವಿತ್ ।
ದದ್ಯಾದ್ದ್ವಿಕಾಲವೇಲಾಯಾಂ ಭಾನುರ್ಮೇ ಪ್ರೀಯತಾಮಿತಿ ॥ ೩ ॥

ಭಕ್ತ್ಯಾ ತು ವಿಪ್ರಾನ್ ಸಂಪೂಜ್ಯ ಚಾಷ್ಟಮ್ಯಾಂ ಕ್ಷೀರಭೋಜನಂ ।
ಕೃತ್ವಾ ಕುರ್ಯಾತ್ಫಲತ್ಯಾಗಂ ಯಾವತ್ಕೃಷ್ಣಾಷ್ಟಸಪ್ತಮೀ ॥ ೪ ॥

---

೧. ಈಶ್ವರನು ಹೇಳಿದನು.—ಫಲಸಪ್ತಮಿಯೆಂಬ ಮತ್ತೊಂದು ವ್ರತವನ್ನು ಹೇಳುವೆನು ಕೇಳು. ಅದನ್ನು ನೆರವೇರಿಸಿ ಉಪವಾಸವಿದ್ದವನು ಪಾಪಮುಕ್ತನಾಗಿ ಸ್ವರ್ಗಕ್ಕೆ ಹೋಗಲು ಅರ್ಹನೆನಿಸುವನು.

೨. ಶುಭಕರವಾದ ಮಾರ್ಗಶಿರಮಾಸದ ಸಪ್ತಮಿಯಲ್ಲಿ ನಿಯಮವಂತನಾಗಿ ಉಪವಾಸವನ್ನಾಚರಿಸಬೇಕು. ಚಿನ್ನದ ತಾವರೆಯೊಂದನ್ನು ಮಾಡಿಸಿ ಸಕ್ಕರೆಯೊಡನೆ ಅದನ್ನು ಕುಟುಂಬಿಯಾದ ಬ್ರಾಹ್ಮಣನಿಗೆ ದಾನಮಾಡಬೇಕು.

೩. ಒಂದು ಪಲ ಪ್ರಮಾಣದ ಚಿನ್ನದಿಂದ ಸೂರ್ಯನ ಪ್ರತಿಮೆಯನ್ನು ಮಾಡಿಸಿ "ನನ್ನಲ್ಲಿ ಸೂರ್ಯದೇವನು ಪ್ರೀತನಾಗಲಿ" ಎಂದು ಹೇಳಿ ಮಧ್ಯಾಹ್ನದ ವೇಳೆಯಲ್ಲಿ ಅದನ್ನು ದಾನವಾಗಿ ಕೊಡಬೇಕು.

೪-೫. ಬ್ರಾಹ್ಮಣರನ್ನು ಭಕ್ತಿಯಿಂದ ಪೂಜಿಸಿ, ಅಷ್ಟಮಿಯ ದಿನ ಕ್ಷೀರಭೋಜನವನ್ನು ಮಾಡಿ, ತನಗೆ ಇಷ್ಟವಾದ ಹಣ್ಣೊಂದನ್ನು ದಾನಮಾಡಬೇಕು ಕೃಷ್ಣ

**ತಾಮುಪ್ರೋಷ್ಯ ವಿಧಿವದನೇನೈವ ಕ್ರಮೇಣ ತು ।**
**ತದ್ವದ್ಧೈಮಫಲಂ ದತ್ವಾ ಸುವರ್ಣಕಮಲಾನ್ವಿತಂ** ॥ ೫ ॥

**ಶರ್ಕರಾಪಾತ್ರಸಂಯುಕ್ತಂ ವಸ್ತ್ರಮಾಲ್ಯಸಮನ್ವಿತಂ ।**
**ಸಂವತ್ಸರಂ ಚ ತೇನೈವ ವಿಧಿನೋಭಯಸಪ್ತಮೀಂ** ॥ ೬ ॥

**ಉಪೋಷ್ಯ ದತ್ವಾ ಕ್ರಮಶಃ ಸೂರ್ಯಮಂತ್ರಮುದೀರಯೇತ್**
**ಭಾನುರರ್ಕೋ ರವಿರ್ಬ್ರಹ್ಮಾ ಸೂರ್ಯಶ್ಶಕ್ರೋ ಹರಿಶ್ಶಿವಃ ।**
**ಶ್ರೀಮಾನ್ವಿಭಾವಸುಸ್ತ್ವಷ್ಟಾ ವರುಣಃ ಪ್ರೀಯತಾಮಿತಿ** ॥ ೭ ॥

**ಪ್ರತಿಮಾಸಂ ಚ ಸಪ್ತಮ್ಯಾಮೇಕೈಕಂ ನಾಮ ಕೀರ್ತಯೇತ್ ।**
**ಪ್ರತಿಪಕ್ಷಂ ಫಲತ್ಯಾಗಮೇತತ್ಕುರ್ವನ್ ಸಮಾಚರೇತ್** ॥ ೮ ॥

**ವ್ರತಾಂತೇ ವಿಪ್ರಮಿಥುನಂ ಪೂಜಯೇದ್ವಸ್ತ್ರಭೂಷಣೈಃ ।**
**ಶರ್ಕರಾಕಲಶಂ ದದ್ಯಾದ್ಧೇಮಪದ್ಮಸಮನ್ವಿತಂ** ॥ ೯ ॥

---

ಸಪ್ತಮಿಯ ದಿನವೂ ಸಹ ಉಪವಾಸಮಾಡಿ, ಇದೇ ಕ್ರಮದಿಂದ ವ್ರತವನ್ನಾಚರಿಸಿ, ಸಕ್ಕರೆತುಂಬಿದ ಪಾತ್ರೆ, ಸುವರ್ಣಕುಮಲ, ವಸ್ತ್ರ, ಪುಷ್ಪಗಳು ಇವೆಲ್ಲವುಗಳೊಡನೆ ಬಂಗಾರದಿಂದ ಮಾಡಿದ ಹಣ್ಣೊಂದನ್ನು ದಾನವಾಗಿ ಕೊಡಬೇಕು.

೬. ಉಭಯಪಕ್ಷಗಳ ಸಪ್ತಮಿಯಲ್ಲಿಯೂ ಅದೇ ಕ್ರಮದಿಂದ ವರ್ಷ ಪೂರ್ತಿಯಾಗುವ ವರೆಗೆ ವ್ರತವನ್ನಾಚರಿಸಿ ಉಪವಾಸವನ್ನೂ ದಾನವನ್ನೂ ನೆರವೇರಿಸಬೇಕು. ಮುಂದೆ ಹೇಳುವ ಸೂರ್ಯಮಂತ್ರವನ್ನು ಕ್ರಮವಾಗಿ ಉಚ್ಚರಿಸಬೇಕು.

೭-೮. ಭಾನು ಅರ್ಕ, ರವಿ, ಬ್ರಹ್ಮ, ಸೂರ್ಯ, ಶಕ್ರ, ಹರಿ, ಶಿವ, ಶ್ರೀಮಂತ, ವಿಭಾವಸು, ತ್ವಷ್ಟ, ವರುಣ ಇವರು ಪ್ರೀತರಾಗಲೆಂದು ಒಂದೊಂದು ತಿಂಗಳ ಸಪ್ತಮಿಯಲ್ಲಿಯೂ ಒಂದೊಂದು ಹೆಸರನ್ನು ಕೀರ್ತಿಸಬೇಕು. ಪ್ರತಿಪಕ್ಷದಲ್ಲೂ ವ್ರತವನ್ನಾಚರಿಸಿ ಫಲವನ್ನು ದಾನಮಾಡಬೇಕು.

೯. ವ್ರತದ ಸಮಾಪನಕಾಲದಲ್ಲಿ ಬ್ರಾಹ್ಮಣ ದಂಪತಿಗಳನ್ನು ವಸ್ತ್ರಭೂಷಣಗಳಿಂದ ಪೂಜಿಸಿ, ಸುವರ್ಣಕಮಲದೊಡನೆ ಸಕ್ಕರೆಯ ಕಲಶವನ್ನು ದಾನ ಮಾಡಬೇಕು.

ಯಥಾ ನ ವಿಫಲಾ ಕಾಮಾಸ್ತ್ವದ್ಭಕ್ತಾನಾಂ ಸದಾ ರವೇ ।
ತಥಾಽನಂತಫಲಾವಾಪ್ತಿರಸ್ತು ಮೇ ಸಪ್ತಜನ್ಮಸು ॥೧೦॥

ಇಮಾಮನಂತಫಲದಾಂ ಯಃ ಕುರ್ಯಾತ್ಫಲಸಪ್ತಮೀಂ ।
ಸರ್ವಪಾಪವಿಶುದ್ಧಾತ್ಮಾ ಸೂರ್ಯಲೋಕೇ ಮಹೀಯತೇ ॥೧೧॥

ಸುರಾಪಾನಾದಿಕಂ ಕಿಂಚಿದ್ಯದತ್ರಾಮುತ್ರ ವಾ ಕೃತಂ ।
ತತ್ಸರ್ವಂ ನಾಶಮಾಯಾತಿ ಯಃ ಕುರ್ಯಾತ್ಫಲಸಪ್ತಮೀಂ ॥೧೨॥

ಕುರ್ವಾಣಃ ಸಪ್ತಮೀಂ ಚೇಮಾಂ ಸತತಂ ರೋಗವರ್ಜಿತಃ ।
ಭೂತಾನ್ ಭವ್ಯಾಂಶ್ಚ ಪುರುಷಾಂಸ್ತಾರಯೇದೇಕವಿಂಶತಿಂ ।
ಯಃ ಶೃಣೋತಿ ಪಠೇದ್ವಾಽಪಿ ಸೋಽಪಿ ಕಲ್ಯಾಣಭಾಗ್ಭವೇತ್ ॥೧೩॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಫಲಸಪ್ತಮೀವ್ರತಂ ನಾಮ
ಷಟ್‌ಸಪ್ತತಿತಮೋಽಧ್ಯಾಯಃ

---

೧೦. "ಓ ಸೂರ್ಯದೇವಾ, ನಿನ್ನ ಭಕ್ತರ ಇಷ್ಟಾರ್ಥಗಳು ವ್ಯರ್ಥವಾಗಲಾರವು. ಹಾಗೆಯೇ ಏಳು ಜನ್ಮಗಳಲ್ಲಿಯೂ ನನಗೆ ಅನಂತ ಫಲಗಳು ಲಭಿಸಲಿ."

೧೧. ಅನಂತ ಫಲಪ್ರದವಾದ ಫಲಸಪ್ತಮೀವ್ರತವನ್ನು ಮಾಡುವಾತನು ಸಮಸ್ತಪಾಪಗಳನ್ನೂ ಕಳೆದುಕೊಂಡು, ಶುದ್ಧಾತ್ಮನಾಗಿ ಸೂರ್ಯಲೋಕದಲ್ಲಿ ಪೂಜ್ಯನಾಗುವನು.

೧೨. ಈ ಲೋಕದಲ್ಲೋ, ಬೇರೆ ಲೋಕದಲ್ಲೋ ಸುರಾಪಾನವೇ ಮೊದಲಾದ ಯಾವ ಅಕೃತ್ಯವನ್ನು ಮಾಡಿರಲಿ, ಫಲಸಪ್ತಮೀ ವ್ರತವನ್ನು ಮಾಡಿದಾತನಿಗೆ ಆ ಪಾಪಗಳೆಲ್ಲವೂ ನಾಶವಾಗುವುವು.

೧೩. ಈ ಸಪ್ತಮೀ ವ್ರತವನ್ನು ನೆರವೇರಿಸಿದವನು ಯಾವಾಗಲೂ ರೋಗರಹಿತನಾಗುವನು. ಹಿಂದಿನ ಮತ್ತು ಮುಂದಿನ ಇಪ್ಪತ್ತೊಂದು ತಲೆಯ ವಂಶೀಯರನ್ನು ಉದ್ಧರಿಸುವನು. ಇದನ್ನು ಯಾವಾತನು ಕೇಳುತ್ತಾನೋ, ಇಲ್ಲವೇ ಓದುತ್ತಾನೋ ಅವನೂ ಸಹ ಮಂಗಲ ಪಾತ್ರನಾಗುವನು.

## ಅಧ್ಯಾಯದ ಸಾರಾಂಶ

ಫಲಸಪ್ತಮೀವ್ರತದ ವಿಧಿಯು ಈ ಅಧಾಯಲ್ಲಿ ಉಕ್ತವಾಗಿದೆ.

ಮಾರ್ಗಶಿರಮಾಸದ ಶುಕ್ಲಸಪ್ತಮಿಯ ದಿನ ಈ ವ್ರತವನ್ನು ಪ್ರಾರಂಭಿಸಿ ವರ್ಷಾಂತದ ವರೆಗೆ ಎರಡು ಪಕ್ಷಗಳಲ್ಲೂ ನಡೆಸುತ್ತಿರಬೇಕು. ಪ್ರತಿಯೊಂದು ಸಲವೂ ಚಿನ್ನದ ತಾವರೆ, ಚಿನ್ನದ ಹಣ್ಣು, ಸಕ್ಕರೆ ತುಂಬಿದ ಪ್ರಾತೆ ಇವನ್ನು ಸೂರ್ಯದೇವನ ಪ್ರೀತಿಯನ್ನು ಕೋರಿ ದಾನಮಾಡಬೇಕು. ವ್ರತದ ಸಮಾಪನಕಾಲದಲ್ಲಿ ಬ್ರಾಹ್ಮಣದಂಪತಿಗಳನ್ನು ದಾನದಕ್ಷಿಣಾದಿಗಳಿಂದ ತೃಪ್ತಿಪಡಿಸಬೇಕು. ಈ ವ್ರತದಿಂದ ಸಕಲೇಷ್ಟಾರ್ಥಗಳೂ ಸಿದ್ಧಿಸುವುವು. ಸಮಸ್ತಪಾಪಗಳೂ ಪರಿಹಾರವಾಗುವುವು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಫಲಸಪ್ತಮೀವ್ರತವೆಂಬ ಎಪ್ಪತ್ತಾರನೆಯ ಅಧ್ಯಾಯವು ಮುಗಿದುದು.



## ಅಥ ಸಪ್ತಸಪ್ತತಿತಮೋಽಧ್ಯಾಯಃ

॥ ಈಶ್ವರ ಉವಾಚ ॥

ಶರ್ಕರಾಸಪ್ತಮೀಂ ವಕ್ಷ್ಯೇ ತದ್ವತ್ಕಲ್ಮಷನಾಶಿನೀಂ ।
ಆಯುರಾರೋಗ್ಯಮೈಶ್ವರ್ಯಂ ಯಯಾಽನಂತಂ ಪ್ರಜಾಯತೇ ॥ ೧ ॥

ಮಾಧವಸ್ಯ ಸಿತೇ ಪಕ್ಷೇ ಸಪ್ತಮ್ಯಾಂ ನಿಯತವ್ರತಃ ।
ಪ್ರಾತಃ ಸ್ನಾತ್ವಾ ತಿಲೈಶ್ಶುಕ್ಲೈಶ್ಶುಕ್ಲಮಾಲ್ಯಾನುಲೇಪನಃ ॥ ೨ ॥

ಸ್ಥಂಡಿಲೇ ಪದ್ಮಮಾಲಿಖ್ಯ ಕುಂಕುಮೇನ ಸಕರ್ಣಿಕಂ ।
ನಮಃ ಸವಿತ್ರ ಇತ್ಯೇವಂ ಗಂಧಧೂಪೌ ನಿವೇದಯೇತ್ ॥ ೩ ॥

ಸ್ಥಾಪಯೇದುದಕುಂಭಂ ಚ ಶರ್ಕರಾಪಾತ್ರಸಂಯುತಂ ।
ಶುಕ್ಲವಸ್ತ್ರೈರಲಂಕೃತ್ಯ ಶುಕ್ಲಮಾಲ್ಯಾನುಲೇಪನೈಃ ।
ಸುವರ್ಣೇನ ಸಮಾಯುಕ್ತಂ ಮಂತ್ರೇಣಾನೇನ ಪೂಜಯೇತ್ ॥ ೪ ॥

---

೧. ಈಶ್ವರನು ಹೇಳಿದನು.—ಪಾಪಪರಿಹಾರಕವೆನಿಸಿದ ಶರ್ಕರಾಸಪ್ತಮೀ ವ್ರತವನ್ನು ಹೇಳುವೆನು ಕೇಳು. ಇದರಿಂದ ಆಯುರಾರೋಗ್ಯೈಶ್ವರ್ಯಗಳು ಉಂಟಾಗುವುವು.

೨. ವೈಶಾಖಮಾಸದ ಶುಕ್ಲಪಕ್ಷ ಸಪ್ತಮಿಯ ದಿನ ಪ್ರಾತಃಕಾಲದಲ್ಲಿ ನಿಯಮದೊಡನೆ ಬಿಳಿಯೆಳ್ಳಿನಿಂದ ಸ್ನಾನಮಾಡಿ, ಬಿಳಿಯ ಗಂಧ ಪುಷ್ಪಗಳನ್ನು ಧರಿಸಬೇಕು.

೩. ನೆಲದ ಮೇಲೆ ಕೇಸರಿಯಿಂದ ಕರ್ಣಿಕಾಸಹಿತವಾದ ಪದ್ಮವನ್ನು ಬರೆದು, "ಸೂರ್ಯನಿಗೆ ನಮಸ್ಕಾರ" ವೆಂಬ ಮಂತ್ರದಿಂದ ಗಂಧವನ್ನೂ ಧೂಪವನ್ನೂ ಅರ್ಪಿಸಬೇಕು.

೪. ಸಕ್ಕರೆಯ ಪಾತ್ರೆಯೊಡನೆ ಜಲಪೂರ್ಣವಾದ ಕುಂಭವನ್ನು ಸ್ಥಾಪಿಸಿ, ಬಿಳಿಯ ಪಂಚೆಗಳಿಂದಲೂ, ಬಿಳಿಯ ಗಂಧ ಪುಷ್ಪಗಳಿಂದಲೂ ಅಲಂಕರಿಸಬೇಕು. ಹಿರಣ್ಯವನ್ನು ಅದರಲ್ಲಿ ಹಾಕಿ ಮುಂದಿನ ಮಂತ್ರದಿಂದ ಪೂಜಿಸಬೇಕು.

ವಿಶ್ವವೇದಮಯೋ ಯಸ್ಮಾದ್ವೇದವಾದೀತಿ ಪಠ್ಯಸೇ ।
ಸರ್ವಸ್ಯಾಮೃತಮೇವ ತ್ವಮತಃ ಶಾಂತಿಂ ಪ್ರಯಚ್ಛ ಮೇ ॥ ೫ ॥

ಪಂಚಗವ್ಯಂ ತತಃ ಪೀತ್ವಾ ಸ್ವಪೇತ್ತತ್ಪಾರ್ಶ್ವತಃ ಕ್ಷಿತೌ ।
ಸೌರಸೂಕ್ತಂ ಸ್ಮರನ್ನಾಸ್ತೇ ಪುರಾಣಶ್ರವಣೇನ ಚ ॥ ೬ ॥

ಅಹೋರಾತ್ರೇ ಗತೇ ಪಶ್ಚಾದಷ್ಟಮ್ಯಾಂ ಕೃತನೈತ್ಯಕಃ ।
ತತ್ಸರ್ವಂ ವಿದುಷೇ ತದ್ವದ್ಬ್ರಾಹ್ಮಣಾಯ ನಿವೇದಯೇತ್ ॥ ೭ ॥

ಭೋಜಯೇಚ್ಛಕ್ತಿತೋ ವಿಪ್ರಾಞ್ಛರ್ಕರಾಘೃತಪಾಯಸೈಃ ।
ಭುಂಜೀತಾತೈಲಲವಣಂ ಸ್ವಯಮಪ್ಯಥ ವಾಗ್ಯತಃ ॥ ೮ ॥

ಅನೇನ ವಿಧಿನಾ ಸರ್ವಂ ಮಾಸಿ ಮಾಸಿ ಸಮಾಚರೇತ್ ।
ಸಂವತ್ಸರಾಂತೇ ಶಯನಂ ಶರ್ಕರಾಕಲಶಾನ್ವಿತಂ ॥ ೯ ॥

---

೫. "ಓ ದೇವಾ, ನೀನು ಸರ್ವವೇದಸ್ವರೂಪನು. ನಿನ್ನನ್ನು ವೇದವಾದಿಯೆಂದು ಹೇಳುತ್ತಾರೆ. ಎಲ್ಲ ಜಗತ್ತಿಗೂ ಅಮೃತಪ್ರಾಯನು ನೀನು. ಆದಕಾರಣ ನನಗೆ ಶಾಂತಿಯನ್ನು ನೀಡು."

೬. ಬಳಿಕ ಪಂಚಗವ್ಯವನ್ನು ಕುಡಿದು, ಆ ಕುಂಭದ ಬಳಿ ಸೂರ್ಯಸೂಕ್ತವನ್ನು ಸ್ಮರಿಸುತ್ತ, ಪುರಾಣವನ್ನು ಕೇಳುತ್ತ ಕುಳಿತಿರಬೇಕು. ಅಲ್ಲೇ ನೆಲದಮೇಲೆ ಮಲಗಬೇಕು.

೭. ಹಗಲೂ ರಾತ್ರಿಯೂ ಕಳೆಯಲು ಅಷ್ಟಮಿಯ ದಿನ ನಿತ್ಯಕರ್ಮವನ್ನು ಮಾಡಿ, ಅದೆಲ್ಲವನ್ನೂ ಬ್ರಾಹ್ಮಣನಿಗೆ ದಾನಮಾಡಬೇಕು.

೮. ಸಕ್ಕರೆ, ತುಪ್ಪ, ಪಾಯಸ ಇವುಗಳಿಂದ ಶಕ್ತ್ಯನುಸಾರವಾಗಿ ಬ್ರಾಹ್ಮಣರಿಗೆ ಭೋಜನಮಾಡಿಸಬೇಕು. ತಾನೂ ಕೂಡ ಮೌನದಿಂದ ಎಣ್ಣೆ ತುಪ್ಪಗಳನ್ನು ಬಿಟ್ಟು ಊಟಮಾಡಬೇಕು.

೯-೧೦. ಈ ವಿಧಿಯಿಂದ ಪ್ರತಿ ತಿಂಗಳಲ್ಲೂ ಎಲ್ಲವನ್ನೂ ನಡೆಸಬೇಕು. ವರ್ಷಾಂತದಲ್ಲಿ ಸಕ್ಕರೆಯೊಡನೆ ಸಕಲ ಪರಿಕರಸಹಿತವಾದ ಹಾಸಿಗೆಯನ್ನೂ, ಕರೆ

ಸರ್ವೋಪಸ್ಕರಸಂಯುಕ್ತಾಂ ತಥೈಕಾಂ ಗಾಂ ಪಯಸ್ವಿನೀಂ ।
ಗೃಹಂ ಚ ಶಕ್ತಿರ್ವಾ ದದ್ಯಾತ್ಸಮಸ್ತೋಪಸ್ಕರಾನ್ವಿತಂ ॥೧೦॥
ಸಹಸ್ರೇಣಾಥ ನಿಷ್ಕಾಣಾಂ ಕೃತ್ವಾ ದದ್ಯಾಚ್ಛತೇನ ವಾ ।
ದಶಭಿರ್ವಾಥ ನಿಷ್ಕೇಣ ತದರ್ಧೇನಾಪಿ ಶಕ್ತಿತಃ ॥೧೧॥
ಸುವರ್ಣಾಶ್ವಃ ಪ್ರದಾತವ್ಯಃ ಪೂರ್ವವನ್ಮಂತ್ರವಾದನಂ ।
ನ ವಿತ್ತಶಾಠ್ಯಂ ಕುರ್ವೀತ ಕುರ್ವನ್ ದೋಷಂ ಸಮಶ್ನುತೇ ॥೧೨॥
ಅಮೃತಂ ಪಿಬತೋ ವಕ್ತ್ರಾತ್ಸೂರ್ಯಸ್ಯಾಮೃತಬಿಂದವಃ ।
ನಿಪೇತುರ್ಯೇ ಧರಣ್ಯಾಂ ತು ಶಾಲಿಮುದ್ಗೇಕ್ಷವಃ ಸ್ಮೃತಾಃ ॥೧೩॥
ಶರ್ಕರಾ ತು ಪರಾ ತಸ್ಮಾದಿಕ್ಷುಸಾರೋಽಮೃತಾತ್ಮವಾನ್ ।
ಇಷ್ಟಾ ರವೇರತಃ ಪುಣ್ಯಾ ಶರ್ಕರಾ ಹವ್ಯಕವ್ಯಯೋಃ ॥೧೪॥
ಶರ್ಕರಾಸಪ್ತಮೀ ಚೇಯಂ ವಾಜಿಮೇಧಫಲಪ್ರದಾ ।
ಸರ್ವದುಷ್ಟಪ್ರಶಮನೀ ಪುತ್ರಪೌತ್ರಪ್ರವರ್ಧಿನೀ ॥೧೫॥

---

ಯುವ ಹಸುವನ್ನೂ, ಶಕ್ತಿಯಿದ್ದರೆ ಸಕಲ ಸಂಭಾರಯುಕ್ತವಾದ ಮನೆಯನ್ನೂ ದಾನಮಾಡಬೇಕು.

೧೧. ದಾನಾನಂತರ ತನ್ನ ಶಕ್ತಿಗೆ ತಕ್ಕಂತೆ ಸಾವಿರ, ನೂರು, ಹತ್ತು ಇಲ್ಲವೇ ಐದು ಸುವರ್ಣ ನಾಣ್ಯಗಳನ್ನು ದಕ್ಷಿಣೆಯಾಗಿ ಕೊಡಬೇಕು.

೧೨. ಹಿಂದಿನಂತೆ ಮಂತ್ರವನ್ನು ಹೇಳಿ ಚಿನ್ನದ ಕುದುರೆಯನ್ನು ದಾನ ಮಾಡಬೇಕು. ದ್ರವ್ಯದಲ್ಲಿ ಕಾರ್ಪಣ್ಯವನ್ನು ಮಾಡಬಾರದು. ಹಾಗೆ ಮಾಡಿದರೆ ದೋಷವು ಬರುವುದು.

೧೩. ಸೂರ್ಯನು ಅಮೃತವನ್ನು ಕುಡಿಯುತ್ತಿರುವಾಗ ಆತನ ಬಾಯಿ ಯಿಂದ ಅಮೃತಬಿಂದುಗಳು ನೆಲದ ಮೇಲೆ ಬಿದ್ದುವು. ಅವುಗಳೇ ಬತ್ತ, ಹೆಸರು, ಕಬ್ಬು ಈ ರೂಪವನ್ನು ತಾಳಿದುವು.

೧೪. ಆದುದರಿಂದ ಸಕ್ಕರೆಯು ಶ್ರೇಷ್ಠ. ಅದು ಅಮೃತವಾದುದು. ಸೂರ್ಯ ನಿಗೆ ಪ್ರಿಯವಾದುದು. ಹವ್ಯಕವ್ಯಗಳಲ್ಲಿ ಉಪಯೋಗಿಸಲು ಪವಿತ್ರವಾದುದು.

೧೫. ಈ ಶರ್ಕರಾಸಪ್ತಮೀ ವ್ರತವು ಅಶ್ವಮೇಧದ ಫಲವನ್ನು ಕೊಡುವುದು; ಸರ್ವದೋಷಗಳನ್ನೂ ಪರಿಹರಿಸುವುದು ; ಪುತ್ರಪೌತ್ರರನ್ನು ಹೆಚ್ಚಿಸುವುದು.

ಯಃ ಕುರ್ಯಾತ್ಪರಯಾ ಭಕ್ತ್ಯಾ ಸ ವೈ ಸದ್ಗತಿಮಾಪ್ನುಯಾತ್ ।
ಕಲ್ಪಮೇಕಂ ವಸೇತ್ಸ್ವರ್ಗೇ ತತೋ ಯಾತಿ ಪರಂ ಪದಂ ॥೧೬॥

ಇದಮನಘಂ ಶೃಣೋತಿ ಯಃ ಸ್ಮರೇದ್ವಾ ।
ಪರಿಪಠತೀಹ ದಿವಾಕರಸ್ಯ ಲೋಕೇ ।
ಮತಿಮಪಿ ಚ ದದಾತಿ ಸೋಽಪಿ ದೇವೈ
ರಮರವಧೂಜನಮಾಲಯಾಭಿಪೂಜ್ಯಃ ॥೧೭॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಶರ್ಕರಾವ್ರತಂ ನಾಮ
ಸಪ್ತಸಪ್ತತಿತಮೋಽಧ್ಯಾಯಃ

---

೧೬. ಇದನ್ನು ಒಳ್ಳೆಯ ಭಕ್ತಿಯಿಂದ ಆಚರಿಸುವಾತನಿಗೆ ಸದ್ಗತಿಯು ಪ್ರಾಪ್ತವಾಗುವುದು. ಅವನು ಒಂದು ಕಲ್ಪಕಾಲ ಸ್ವರ್ಗದಲ್ಲಿ ವಾಸಿಸಿ ಬಳಿಕ ಪರಮ ಪದವನ್ನೈದುವನು.

೧೭. ಪಾಪರಹಿತವಾದ ಈ ವ್ರತದ ಚರಿತ್ರವನ್ನು ಕೇಳಲಿ, ಸ್ಮರಿಸಲಿ, ಅಥವಾ ಓದಲಿ ಅವನು ಸೂರ್ಯಲೋಕದಲ್ಲಿ ಮಾನ್ಯನಾಗುವನು. ಇದರಲ್ಲಿ ಇತರರಿಗೆ ಬುದ್ಧಿಯನ್ನು ಹುಟ್ಟಿಸುವಾತನೂ ಸಹ ದೇವಸುಂದರಿಯರ ಮನ್ನಣೆಗೆ ಪಾತ್ರನಾಗುವನು. ಅವರು ಅವನನ್ನೆದುರುಗೊಂಡು ಅವನ ಕೊರಳಿಗೆ ಹೂಮಾಲೆಯನ್ನು ಹಾಕುವರು.

## ಅಧ್ಯಾಯದ ಸಾರಾಂಶ

ಶರ್ಕರಾ ಸಪ್ತಮೀ ವ್ರತವನ್ನು ಈ ಅಧ್ಯಾಯದಲ್ಲಿ ವಿವರಿಸಿದೆ.

ವೈಶಾಖಮಾಸದ ಶುಕ್ಲಪಕ್ಷ ಸಪ್ತಮಿಯ ದಿನ ತಿಲಸ್ನಾನದಿಂದ ಶುದ್ಧನಾಗಿ ಈ ವ್ರತವನ್ನು ಪ್ರಾರಂಭಿಸಿ ಪ್ರತಿ ತಿಂಗಳೂ ನಡೆಸುತ್ತ ಬರಬೇಕು. ಸಂವತ್ಸರಾಂತದಲ್ಲಿ ಶರ್ಕರಾ ಕಲಶ ಸಹಿತವಾಗಿ ಶಯ್ಯಾದಾನಮಾಡಬೇಕು. ಅನುಕೂಲ್ಯವಿದ್ದರೆ ಗೃಹದಾನವನ್ನೂ, ಸುವರ್ಣಾಶ್ವದಾನವನ್ನೂ ಮಾಡಬಹುದು. ಈ ವ್ರತದಿಂದ ಅಶ್ವಮೇಧದ ಫಲವು ಬರುತ್ತದೆ. ಸರ್ವಪಾಪಗಳೂ ತೊಲಗಿ ಸಂತಾನಾಭಿವೃದ್ಧಿಯಾಗುತ್ತದೆ.

ಶ್ರೀಮತ್ಸ್ಯಮಹಾಪುರಾಣದಲ್ಲಿ ಶರ್ಕರಾವ್ರತವೆಂಬ ಎಪ್ಪತ್ತೇಳನೆಯ
ಅಧ್ಯಾಯವು ಮುಗಿದುದು.

## ಅಥಾಷ್ಟಸಪ್ತತಿತಮೋಽಧ್ಯಾಯಃ

॥ ಈಶ್ವರ ಉವಾಚ ॥

ಅತಃ ಪರಂ ಪ್ರವಕ್ಷ್ಯಾಮಿ ತದ್ವತ್ಕಮಲಸಪ್ತಮೀಂ ।
ಯಸ್ಯಾಃ ಸಂಕೀರ್ತನಾದೇವ ತುಷ್ಯತೀಹ ದಿವಾಕರಃ ॥ ೧ ॥

ವಸಂತಾಮಲಸಪ್ತಮ್ಯಾಂ ಸ್ನಾತಃ ಸನ್ಗೌರಸರ್ಷಪೈಃ ।
ತಿಲಪಾತ್ರೇ ಚ ಸೌವರ್ಣೇ ವಿಧಾಯ ಕಮಲಂ ಶುಭಂ ॥ ೨ ॥

ವಸ್ತ್ರಯುಗ್ಮಾವೃತಂ ಕೃತ್ವಾ ಗಂಧಪುಷ್ಪೈಃ ಸಮರ್ಚಯೇತ್ ।
ನಮಃ ಕಮಲಹಸ್ತಾಯ ನಮಸ್ತೇ ವಿಶ್ವಧಾರಿಣೇ ॥ ೩

ದಿವಾಕರ ನಮಸ್ತುಭ್ಯಂ ಪ್ರಭಾಕರ ನಮೋಽಸ್ತು ತೇ ।
ತತೋ ದ್ವಿಕಾಲವೇಲಾಯಾಮುದಕುಂಭಸಮನ್ವಿತಂ ॥ ೪ ॥

ವಿಪ್ರಾಯ ದದ್ಯಾತ್ಸಂಪೂಜ್ಯ ವಸ್ತ್ರಮಾಲ್ಯವಿಭೂಷಣೈಃ ।
ಶಕ್ತ್ಯಾ ಚ ಕಪಿಲಾಂ ದದ್ಯಾದಲಂಕೃತ್ಯ ವಿಧಾನತಃ ॥ ೫ ॥

---

೧. ಈಶ್ವರನು ಹೇಳಿದನು.—ಇನ್ನು ಮುಂದೆ ಕಮಲಸಪ್ತಮೀ ವ್ರತವನ್ನು ಹೇಳುವೆನು. ಇದರ ಕೀರ್ತನ ಮಾತ್ರದಿಂದಲೇ ಸೂರ್ಯನು ಸಂತೋಷಪಡುತ್ತಾನೆ.

೨. ಚೈತ್ರ ಶುಕ್ಲ ಸಪ್ತಮಿಯ ದಿನ ಬಿಳಿಯ ಸಾಸುವೆಯಿಂದ ಸ್ನಾನಮಾಡಿ, ಎಳ್ಳು ತುಂಬಿದ ಚಿನ್ನದ ಪಾತ್ರೆಯಲ್ಲಿ ಮಂಗಲಕರವಾದ ಕಮಲವನ್ನಿರಿಸಿ, ವಸ್ತ್ರಯುಗ್ಮವನ್ನು ಧರಿಸಿ ಗಂಧಪುಷ್ಪಗಳಿಂದ ಪೂಜಿಸಬೇಕು.

೩. “ಕಮಲಹಸ್ತನಿಗೆ ನಮಸ್ಕಾರ. ವಿಶ್ವಧಾರಕನಾದ ನಿನಗೆ ನಮಸ್ಕಾರ. ಹಗಲಿನಲ್ಲಿ ಬೆಳಗುವವನೇ, ನಿನಗೆ ನಮಸ್ಕಾರ. ಬೆಳಕನ್ನು ಕೊಡತಕ್ಕವನೇ, ನಿನಗೆ ನಮಸ್ಕಾರ.”

೪-೫. ಬಳಿಕ ಮಧ್ಯಾಹ್ನದ ವೇಳೆಯಲ್ಲಿ ಬ್ರಾಹ್ಮಣನನ್ನು ಪುಷ್ಪಾಲಂಕಾರಗಳಿಂದ ಸತ್ಕರಿಸಿ, ಉದಕುಂಭದೊಡನೆ ಮೇಲೆ ಹೇಳಿದ ಕಮಲವನ್ನು ಅವನಿಗೆ ದಾನಮಾಡಬೇಕು. ಶಕ್ತಿಯಿದ್ದರೆ ಕ್ರಮವಾಗಿ ಅಲಂಕರಿಸಿ ಗೋವನ್ನು ದಾನ ಮಾಡಬಹುದು.

ಅಹೋರಾತ್ರೇ ಗತೇ ಪಶ್ಚಾದಷ್ಟಮ್ಯಾಂ ಭೋಜಯೇದ್ದ್ವಿಜಾನ್ ।
ಯಥಾಶಕ್ತ್ಯಥ ಭುಂಜೀತ ಮಾಂಸತೈಲವಿವರ್ಜಿತಂ ॥ ೬ ॥

ಅನೇನ ವಿಧಿನಾ ಶುಕ್ಲಸಪ್ತಮ್ಯಾಂ ಮಾಸಿ ಮಾಸಿ ಚ ।
ಸರ್ವಂ ಸಮಾಚರೇದ್ಭಕ್ತ್ಯಾ ವಿತ್ತಶಾಠ್ಯವಿವರ್ಜಿತಃ ॥ ೭ ॥

ವ್ರತಾಂತೇ ಶಯನಂ ದದ್ಯಾತ್ಸುವರ್ಣಕಮಲಾನ್ವಿತಂ ।
ಗಾಂ ಚ ದದ್ಯಾತ್ಸ್ವಶಕ್ತ್ಯಾ ತು ಸುವರ್ಣಾಢ್ಯಾಂ ಪಯಸ್ವಿನೀಂ ॥ ೮ ॥

ಭಾಜನಾಸನದೀಪಾದೀನ್ಯಥಾದಿಷ್ಟಾನುಪಸ್ಕರಾನ್ ।
ಅನೇನ ವಿಧಿನಾ ಯಸ್ತು ಕುರ್ಯಾತ್ಕಮಲಸಪ್ತಮೀಂ ।
ಲಕ್ಷ್ಮೀಮನಂತಾಮಭ್ಯೇತಿ ಸೂರ್ಯಲೋಕೇ ಮಹೀಯತೇ ॥ ೯ ॥

ಕಲ್ಪೇ ಕಲ್ಪೇ ತತೋ ಲೋಕಾನ್ ಸಪ್ತ ಗತ್ವಾ ಪೃಥಕ್ ಪೃಥಕ್ ।
ಅಪ್ಸರೋಭಿಃ ಪರಿವೃತಸ್ತತೋ ಯಾತಿ ಪರಾಂ ಗತಿಂ ॥೧೦॥

---

೬. ಹಗಲೂ ರಾತ್ರಿಯೂ ಹೀಗೆ ಕಳೆದ ಬಳಿಕ, ಅಷ್ಟಮಿಯ ದಿನ ತನ್ನ ಶಕ್ತಿಗೆ ತಕ್ಕಂತೆ ಬ್ರಾಹ್ಮಣರಿಗೆ ಭೋಜನಮಾಡಿಸಬೇಕು. ಮಾಂಸವನ್ನೂ ತೈಲವನ್ನೂ ಉಳಿದು ತಾನು ಊಟಮಾಡಬೇಕು.

೭. ಪ್ರತಿ ತಿಂಗಳಿನ ಶುಕ್ಲಪಕ್ಷದ ಸಪ್ತಮಿಯಲ್ಲೂ ದ್ರವ್ಯದಲ್ಲಿ ಲೌಭ್ಯವನ್ನು ಮಾಡದೆ, ಇದೇ ವಿಧಾನದಿಂದ ಎಲ್ಲವನ್ನೂ ನಡೆಸುತ್ತ ಬರಬೇಕು.

೮. ವ್ರತದ ಕೊನೆಯಲ್ಲಿ ಹಿರಣ್ಯಕಮಲಸಹಿತವಾದ ಶಯನವನ್ನೂ, ಶಕ್ತಿ ಇದ್ದರೆ ಸುವರ್ಣದಿಂದಲಂಕೃತವಾದ, ಹಾಲುಗರೆವ ಹಸುವನ್ನೂ ದಾನಮಾಡಬೇಕು.

೯. ಪಾತ್ರೆ, ಆಸನ, ದೀಪ ಮುಂತಾದ ವ್ರತವಿಧಾನೋಕ್ತವಾದ ಸಾಮಗ್ರಿಗಳನ್ನೂ ಕೊಡಬೇಕು. ಈ ವಿಧಿಯನ್ನನುಸರಿಸಿ ಕಮಲ ಸಪ್ತಮೀವ್ರತವನ್ನು ಮಾಡುವಾತನಿಗೆ ಅಪರಿಮಿತ ಸಂಪತ್ತು ಲಭಿಸುವುದು. ಅವನು ಸೂರ್ಯಲೋಕದಲ್ಲಿ ಪೂಜ್ಯತೆಯನ್ನು ಪಡೆಯುವನು.

೧೦. ಒಂದೊಂದು ಕಲ್ಪದಲ್ಲೂ ಒಂದೊಂದು ಲೋಕದಂತೆ ಏಳು ಲೋಕಗಳಿಗೂ ಹೋಗಿ, ಅಪ್ಸರ ಸ್ತ್ರೀಯರೊಡನೆ ಸಂತೋಷದಿಂದ ಕೂಡಿ ತರುವಾಯ ಅತ್ಯುತ್ತಮಗತಿಯನ್ನೈದುವನು.

ಅಧ್ಯಾಯ ೭೮

**ಯಃ ಪಶ್ಯತೀದಂ ಶೃಣುಯಾಚ್ಚ ಮರ್ತ್ಯಃ**
**ಪಠೇಚ್ಚ ಭಕ್ತ್ಯಾಽಥ ಮತಿಂ ದದಾತಿ ।**
**ಸೋಽಪ್ಯತ್ರ ಲಕ್ಷ್ಮೀಮಚಲಾಮವಾಪ್ಯ**
**ಗಂಧರ್ವವಿದ್ಯಾಧರಲೋಕಭಾಕ್ ಸ್ಯಾತ್ ॥೧೧॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಕಮಲಸಪ್ತಮೀವ್ರತಂ ನಾಮಾಷ್ಟಸಪ್ತತಿತಮೋಽಧ್ಯಾಯಃ**

---

೧೧. ಈ ವ್ರತಾಚರಣೆಯನ್ನು ನೋಡಲಿ, ಕೇಳಲಿ, ಭಕ್ತಿಯಿಂದ ಓದಲಿ ಅಥವಾ ಇತರರಿಗೆ ಇದರಲ್ಲಿ ಬುದ್ಧಿಯು ಪ್ರವೇಶಿಸುವಂತೆ ಮಾಡಲಿ ಅಂತಹ ಮನುಷ್ಯನೂ ಸಹ ಶಾಶ್ವತವಾದ ಸಂಪತ್ತನ್ನು ಪಡೆಯುವನು. ಗಂಧರ್ವಲೋಕವನ್ನೂ ವಿದ್ಯಾಧರಲೋಕವನ್ನೂ ಸೇರಿ ಸುಖಿಸುವನು.

**ಅಧ್ಯಾಯದ ಸಾರಾಂಶ**

ಈ ಅಧ್ಯಾಯದಲ್ಲಿ ಕಮಲಸಪ್ತಮೀವ್ರತದ ವಿಧಿಯನ್ನು ವರ್ಣಿಸಿದೆ.

ಚೈತ್ರ ಶುಕ್ಲ ಸಪ್ತಮೀ ತಿಥಿಯಲ್ಲಿ ಬಿಳಿಯ ಸಾಸವೆಯಿಂದ ಸ್ನಾನಮಾಡಿ ಕಮಲ ಸಪ್ತಮೀ ವ್ರತವನ್ನು ನಡೆಸಬೇಕು. ಎಳ್ಳು ತುಂಬಿದ ಪಾತ್ರೆಯಲ್ಲಿ ಕಮಲವನ್ನು ಸ್ಥಾಪಿಸಿ ಸೂರ್ಯದೇವನನ್ನು ಆರಾಧಿಸಬೇಕು. ಪ್ರತಿ ತಿಂಗಳೂ ಶುಕ್ಲಪಕ್ಷದ ಸಪ್ತಮಿಯಲ್ಲಿ ಈ ವ್ರತವನ್ನು ನಡೆಸುತ್ತ ವರ್ಷಾಂತದಲ್ಲಿ ಸುವರ್ಣ ಕಮಲಸಹಿತವಾಗಿ ಶಯ್ಯಾದಾನವನ್ನೂ ಗೋದಾನಾದಿಗಳನ್ನೂ ಮಾಡಬೇಕು. ಈ ವ್ರತದ ಆಚರಣೆಯಿಂದ ಅನಂತೈಶ್ವರ್ಯಲಾಭವೂ ಸೂರ್ಯಲೋಕಪ್ರಾಪ್ತಿಯೂ ಆಗುವುವು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಕಮಲಸಪ್ತಮೀ ವ್ರತವೆಂಬ
ಎಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.

# ಅಥ ಏಕೋನಾಶೀತಿತಮೋಽಧ್ಯಾಯಃ

॥ ಈಶ್ವರ ಉವಾಚ ॥

ಅಥಾತಃ ಸಂಪ್ರವಕ್ಷ್ಯಾಮಿ ಸರ್ವಪಾಪಪ್ರಣಾಶಿನೀಂ ।
ಸರ್ವಕಾಮಪ್ರದಾಂ ರಮ್ಯಾಂ ನಾಮ್ನಾ ಮಂದಾರಸಪ್ತಮೀಂ ॥ ೧ ॥

ಮಾಘಸ್ಯಾಮಲಪಕ್ಷೇ ತು ಪಂಚಮ್ಯಾಂ ಲಘುಭುಙ್ನರಃ ।
ದಂತಕಾಷ್ಠಂ ತತಃ ಕೃತ್ವಾ ಷಷ್ಠೀಮುಪವಸೇದ್ಬುಧಃ ॥ ೨ ॥

ವಿಪ್ರಾನ್ ಸಂಪೂಜಯಿತ್ವಾ ತು ಮಂಧಾರಂ ಪ್ರಾಶಯೇನ್ನಿಶಿ ।
ತತಃ ಪ್ರಭಾತ ಉತ್ಥಾಯ ಕೃತ್ವಾ ಸ್ನಾನಂ ಪುನರ್ದ್ವಿಜಾನ್ ॥ ೩ ॥

ಭೋಜಯೇಚ್ಛಕ್ತಿತಃ ಕೃತ್ವಾ ಮಂದಾರಕುಸುಮಾಷ್ಟಕಂ ।
ಸೌವರ್ಣಂ ಪುರುಷಂ ತದ್ವತ್ಪದ್ಮಹಸ್ತಂ ಸುಶೋಭನಂ ॥ ೪ ॥

---

೧. ಈಶ್ವರನು ಹೇಳಿದನು.—ಇನ್ನು ಮುಂದೆ ಸರ್ವಪಾಪಗಳನ್ನು ಕಳೆದು ಸಕಲೇಷ್ಟಾಥಗಳನ್ನು ಕೊಡುವ ಉತ್ತಮವಾದ ಒಂದು ವ್ರತವನ್ನು ಹೇಳುವೆನು. ಅದಕ್ಕೆ ಮಂದಾರಸಪ್ತಮಿಯೆಂದು ಹೆಸರು.

೨. ಮಾಘಮಾಸದ ಶುಕ್ಲಪಕ್ಷ ಪಂಚಮಿಯಲ್ಲಿ ಸ್ವಲ್ಪವಾಗಿ ಆಹಾರವನ್ನು ತೆಗೆದುಕೊಂಡು ದಂತಕಾಷ್ಠದಿಂದ ದಂತಶೋಧನವನ್ನು ಮಾಡಬೇಕು. ಷಷ್ಠಿಯ ದಿವಸದಲ್ಲಿ ಉಪವಾಸಮಾಡಬೇಕು.

೩-೪. ಬ್ರಾಹ್ಮಣರನ್ನು ಪೂಜಿಸಿ ರಾತ್ರಿಯಲ್ಲಿ ಮಂದಾರಪುಷ್ಪವನ್ನು ಪ್ರಾಶನ ಮಾಡಬೇಕು. ತರುವಾಯ ಪ್ರಾತಃಕಾಲದಲ್ಲೆದ್ದು ಸ್ನಾನಮಾಡಿ, ತನ್ನ ಶಕ್ತಿಗೆ ತಕ್ಕಂತೆ ದ್ವಿಜರಿಗೆ ಭೋಜನಮಾಡಿಸಬೇಕು. ಚಿನ್ನದಿಂದ ಎಂಟು ಮಂದಾರ ಕುಸುಮಗಳನ್ನೂ, ಪದ್ಮಹಸ್ತವೂ ಶುಭಮಯವೂ ಆದ ಪುರುಷವಿಗ್ರಹವನೂ ಮಾಡಿಸಬೇಕು.

ಪದ್ಮಂ ಕೃಷ್ಣತಿಲೈಃ ಕೃತ್ವಾ ತಾಮ್ರಪಾತ್ರೇಽಷ್ಟಪತ್ರಕಂ ।
ಹೈಮಮಂದಾರಕುಸುಮೈರ್ಭಾಸ್ಕರಾಯೇತಿ ಪೂರ್ವತಃ ॥ ೫ ॥

ನಮಸ್ಕಾರೇಣ ತದ್ವಚ್ಚ ಸೂರ್ಯಾಯೇತ್ಯಾನಲೇ ದಲೇ ।
ದಕ್ಷಿಣೇ ತದ್ವದರ್ಕಾಯ ತಥಾರ್ಯಮ್ಣೇ ಚ ನೈಋತೇ ॥ ೬ ॥

ಪಶ್ಚಿಮೇ ವೇದಧಾಮ್ನೇ ಚ ವಾಯವ್ಯೇ ಚಂಡಭಾನವೇ ।
ಪೂಷ್ಣೇತ್ಯುತ್ತರತಃ ಪೂಜ್ಯಮಾನಂದಾಯೇತ್ಯತಃ ಪರಂ ॥ ೭ ॥

ಕರ್ಣಿಕಾಯಾಂ ಚ ಪುರುಷಂ ಸರ್ವಾತ್ಮನ ಇತಿ ನ್ಯಸೇತ್ ।
ಶುಕ್ಲವಸ್ತ್ರೈಃ ಸಮಾವೇಷ್ಟ್ಯ ಭಕ್ಷ್ಯೈರ್ಮಾಲ್ಯಫಲಾದಿಭಿಃ ॥ ೮ ॥

ಏವಮಭ್ಯರ್ಚ್ಯ ತತ್ಸರ್ವಂ ದದ್ಯಾದ್ವೇದವಿದೇ ಪುನಃ ।
ಭುಂಜೀತಾತೈಲಲವಣಂ ವಾಗ್ಯತಃ ಪ್ರಾಙ್ಮುಖೋ ಗೃಹೀ ॥ ೯ ॥

---

೫. ಕರಿಯ ಎಳ್ಳಿನಿಂದ ತಾಮ್ರಪಾತ್ರದಲ್ಲಿ ಎಂಟೆಸಳಿನ ತಾವರೆಯನ್ನು ರಚಿಸಿ, ಪೂರ್ವದಿಕ್ಕಿನ ದಳದ ಮೇಲೆ ಭಾಸ್ಕರನಿಗೆ ನಮಸ್ಕಾರವೆಂದು ಚಿನ್ನದ ಮಂದಾರ ಪುಷ್ಪಗಳೆಂಟರಲ್ಲಿ ಒಂದನ್ನು ಇರಿಸಬೇಕು.

೬-೭. ಹಾಗೆಯೇ ಆಗ್ನೇಯ ದಿಕ್ಕಿನ ದಳದಲ್ಲಿ ಸೂರ್ಯನಿಗೂ, ದಕ್ಷಿಣದಲ್ಲಿ ಅರ್ಕನಿಗೂ, ನೈಋತ್ಯದಲ್ಲಿ ಅರ್ಯಮನಿಗೂ, ಪಶ್ಚಿಮದಲ್ಲಿ ವೇದಧಾಮನಿಗೂ, ವಾಯವ್ಯದಲ್ಲಿ ಚಂಡಭಾನುವಿಗೂ, ಉತ್ತರದಲ್ಲಿ ಪೂಷನಿಗೂ, ತರುವಾಯ ಈಶಾನ್ಯದಲ್ಲಿ ಆನಂದನಿಗೂ ನಮಸ್ಕರಿಸಿ ಪುಷ್ಪವನ್ನರ್ಚಿಸಿ ಪೂಜಿಸಬೇಕು.

೮-೯. ಕರ್ಣಿಕೆಯಲ್ಲಿ ಸರ್ವಾತ್ಮನಿಗೆ ನಮಸ್ಕಾರವೆಂದು ಪುರುಷಪ್ರತಿಮೆಯನ್ನು ಸ್ಥಾಪಿಸಬೇಕು. ಶುಭ್ರವಸ್ತ್ರಗಳನ್ನು ಧರಿಸಿ, ಪುಷ್ಪಫಲ ಭಕ್ಷ್ಯಗಳಿಂದ ಪೂಜಿಸಿ ಅದೆಲ್ಲವನ್ನೂ ವೇದಜ್ಞನಾದ ಬ್ರಾಹ್ಮಣನಿಗೆ ದಾನಮಾಡಬೇಕು. ತರುವಾಯ ಗೃಹಸ್ಥನು ಎಣ್ಣೆ, ಉಪ್ಪು ಇವನ್ನು ಬಿಟ್ಟು ಮೌನದಿಂದ ಭೋಜನ ಮಾಡಬೇಕು.

ಅನೇನ ವಿಧಿನಾ ಸರ್ವಂ ಸಪ್ತಮ್ಯಾಂ ಮಾಸಿ ಮಾಸಿ ಚ ।
ಕುರ್ಯಾತ್ಸಂವತ್ಸರಂ ಯಾವದ್ವಿತ್ತಶಾಠ್ಯವಿವರ್ಜಿತಃ ॥೧೦॥
ಏತದೇವ ವ್ರತಾಂತೇ ತು ನಿಧಾಯ ಕಲಶೋಪರಿ ।
ಗೋಭಿರ್ವಿಭವತಃ ಸಾರ್ಧಂ ದಾತವ್ಯಂ ಭೂತಿಮಿಚ್ಛತಾ ॥೧೧॥
ನಮೋ ಮಂದಾರನಾಥಾಯ ಮಂದಾರಭವನಾಯ ಚ ।
ತ್ವಂ ರವೇ ತಾರಯಸ್ವಾಸ್ಮಾನ್ ಸಂಸಾರಮಯಸಾಗರಾತ್ ॥೧೨॥
ಅನೇನ ವಿಧಿನಾ ಯಸ್ತು ಕುರ್ಯಾನ್ಮಂದಾರಸಪ್ತಮೀಂ ।
ವಿಪಾಪ್ಮಾ ಸ ಸುಖೀ ಮರ್ತ್ಯಃ ಕಲ್ಪಂ ಚ ದಿವಿ ಮೋದತೇ ॥೧೩॥
ಇಮಾಮಘೌಘಪಟಲಭೀಷಣಧ್ವಾಂತದೀಪಿಕಾಂ ।
ಗಚ್ಛನ್ ಪ್ರಗೃಹ್ಯ ಸಂಸಾರೇ ಸರ್ವಾರ್ಥಾಂಶ್ಚ ಲಭೇನ್ನರಃ ॥೧೪॥

---

೧೦. ಒಂದೊಂದು ತಿಂಗಳ ಸಪ್ತಮಿಯಲ್ಲೂ ಈ ವಿಧಾನದಿಂದ ವರ್ಷವು ಪೂರ್ಣವಾಗುವ ವರೆಗೂ ವ್ರತವನ್ನು ಮಾಡುತ್ತಿರಬೇಕು. ಅವಶ್ಯವಾದಷ್ಟು ಹಣ ವನ್ನು ವೆಚ್ಚಮಾಡಲು ಹಿಂಜರಿಯಬಾರದು.

೧೧. ಐಶ್ವರ್ಯಾರ್ಥಿಯು ವ್ರತಾವಸಾನದಲ್ಲಿ ಈ ಸುವರ್ಣಪ್ರತಿಮೆ ಮೊದಲಾ ದುವನ್ನು ಕಲಶದ ಮೇಲಿರಿಸಿ, ಹಸುಗಳ ಸಹಿತವಾಗಿ ವಿಭವದಿಂದ ದಾನ ಮಾಡಬೇಕು.

೧೨. "ಮಂದಾರಕುಸುಮದ ಅಧಿದೇವತೆಗೂ, ಮಂದಾರಪುಷ್ಪದಲ್ಲಿ ವಾಸಿಸುವವನಿಗೂ ನಮಸ್ಕಾರ. ಓ ಸೂರ್ಯದೇವಾ, ಸಂಸಾರವೆಂಬ ಸಾಗರದಿಂದ ನಮ್ಮನ್ನು ಪಾರುಮಾಡು."

೧೩. ಈ ವಿಧಿಯಿಂದ ಮಂದಾರಸಪ್ತಮೀವ್ರತವನ್ನು ಮಾಡುವ ಮನು ಷ್ಯನು ಪಾಪರಹಿತನೂ ಸುಖಿಯೂ ಆಗಿ, ಕಲ್ಪಪೂರ್ತಿಯಾಗಿ ಸ್ವರ್ಗದಲ್ಲಿ ಸುಖಪಡುವನು.

೧೪. ಈ ವ್ರತವು ಪಾಪರಾಶಿಯೆಂಬ ಗಾಢಾಂಧಕಾರಕ್ಕೆ ದೀವಿಗೆ ಯೆನಿಸಿದೆ. ಇದನ್ನು ಆಚರಿಸುವಾತನು ಸಂಸಾರದಲ್ಲಿ ಸಕಲೇಷ್ಟಾರ್ಥಗಳನ್ನೂ ಪಡೆಯುವನು.

**ಮಂದಾರಸಪ್ತಮೀಮೇತಾಮೀಪ್ಸಿತಾರ್ಥಫಲಪ್ರದಾಂ ।**
**ಯಃ ಪಠೇಚ್ಛೃಣುಯಾದ್ವಾಪಿ ಸರ್ವಪಾಪೈಃ ಪ್ರಮುಚ್ಯತೇ ॥೧೫॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಮಂದಾರಸಪ್ತಮೀವ್ರತಂ ನಾಮೈಕೋನಾಶೀತಿತಮೋಽಧ್ಯಾಯಃ**

---

೧೫. ಕೋರಿದ ಬಯಕೆಯನ್ನೆಲ್ಲ ಈಡೇರಿಸುವ ಈ ಮಂದಾರಸಪ್ತಮೀ ವ್ರತವನ್ನು ಯಾವನು ಓದುತ್ತಾನೋ ಅಥವಾ ಕೇಳುತ್ತಾನೋ ಅವನು ಎಲ್ಲ ಪಾಪಗಳಿಂದಲೂ ಬಿಡುಗಡೆಹೊಂದುವನು.

## ಅಧ್ಯಾಯದ ಸಾರಾಂಶ

ಮಂದಾರ ಸಪ್ತಮೀವ್ರತ ವಿಧಾನವು ಈ ಅಧ್ಯಾಯದಲ್ಲಿ ಹೇಳಲ್ಪಟ್ಟಿದೆ.

ಮಾಘ ಶುಕ್ಲ ಪಂಚಮಿಯ ದಿನ ಒಂದು ಹೊತ್ತು ಊಟಮಾಡಿ, ಷಷ್ಠಿಯ ದಿವಸ ಉಪವಾಸವಿರಬೇಕು. ಸಪ್ತಮಿಯಲ್ಲಿ ಸ್ನಾನಾನಂತರ ಯಥಾಶಕ್ತಿ ಬ್ರಾಹ್ಮಣ ಭೋಜನಮಾಡಿಸಿ, ಸುವರ್ಣಮಯವಾದ ಮಂದಾರಪುಷ್ಪಗಳನ್ನು ಅಷ್ಟದಳ ಪದ್ಮದ ಒಂದೊಂದು ಎಸಳಿನಲ್ಲಿಯೂ ಸೂರ್ಯದೇವನ ನಾಮೋಚ್ಚಾರಣ ಪೂರ್ವಕವಾಗಿ ಇರಿಸಬೇಕು. ನಡುವೆ ಕರ್ಣಿಕೆಯಲ್ಲಿ ಸೂರ್ಯನ ಪ್ರತಿಮೆಯನ್ನು ಸ್ಥಾಪಿಸಿ ಅರ್ಚಿಸಬೇಕು. ಸಂವತ್ಸರವು ಪೂರ್ಣವಾಗುವ ವರೆಗೆ ಹೀಗೆ ಪ್ರತಿ ತಿಂಗಳ ಸಪ್ತಮಿಯಲ್ಲೂ ವ್ರತವನ್ನು ನಡೆಸಿ, ಪ್ರತಿಮಾದಾನ ಗೋದಾನಾದಿಗಳನ್ನು ಮಾಡಬೇಕು. ಈ ವ್ರತಾಚರಣೆಯಿಂದ ಸಮಸ್ತ ಪಾಪಗಳೂ ಪರಿಹಾರವಾಗುವುವು. ಸಕಲೇಷ್ಟಾರ್ಥಗಳೂ ಸಿದ್ಧಿಸುವುವು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಮಂದಾರಸಪ್ತಮೀವ್ರತವೆಂಬ
ಎಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

# ಅಥ ಅಶೀತಿತಮೋಽಧ್ಯಾಯಃ

॥ ಶ್ರೀ ಭಗವಾನುವಾಚ ॥

ಅಥಾನ್ಯಾಮಪಿ ವಕ್ಷ್ಯಾಮಿ ಶೋಭನಾಂ ಶುಭಸಪ್ತಮೀಂ ।
ಯಾಮುಪೋಷ್ಯ ನರೋ ರೋಗಶೋಕದುಃಖೈಃ ಪ್ರಮುಚ್ಯತೇ ॥ ೧ ॥

ಪುಣ್ಯೇ ಚಾಶ್ವಯುಜೇ ಮಾಸಿ ಕೃತಸ್ನಾನಜಪಃ ಶುಚಿಃ ।
ವಾಚಯಿತ್ವಾ ತತೋ ವಿಪ್ರಾನಾರಭೇಚ್ಛುಭಸಪ್ತಮೀಂ ॥ ೨ ॥

ಕಪಿಲಾಂ ಪೂಜಯೇದ್ಭಕ್ತ್ಯಾ ಗಂಧಮಾಲ್ಯಾನುಲೇಪನೈಃ ।
ನಮಾಮಿ ಸೂರ್ಯಸಂಭೂತಾಮಶೇಷಭುವನಾಲಯಾಂ ।
ತ್ವಾಮಹಂ ಶುಭಕಲ್ಯಾಣಶರೀರಾಂ ಸರ್ವಸಿದ್ಧಯೇ ॥ ೩ ॥

ಅಥ ಕೃತ್ವಾ ತಿಲಪ್ರಸ್ಥಂ ತಾಮ್ರಪಾತ್ರೇಣ ಸಂಯುತಂ ।
ಕಾಂಚನಂ ವೃಷಭಂ ತದ್ವದ್ಗಂಧಮಾಲ್ಯಗುಡಾನ್ವಿತೈಃ ॥ ೪ ॥

---

೧. ಭಗವಂತನು ಹೇಳಿದನು.—ಮುಂದೆ ಶುಭಸಪ್ತಮಿಯೆಂಬ ಮತ್ತೊಂದು ಮಂಗಳಕರವಾದ ವ್ರತವನ್ನು ಹೇಳುತ್ತೇನೆ. ಇದನ್ನು ನೆರವೇರಿಸಿ ಉಪವಾಸ ವಿರತಕ್ಕವನು ರೋಗ, ಶೋಕ, ದುಃಖ ಇವುಗಳಿಂದ ಬಿಡುಗಡೆಹೊಂದುತ್ತಾನೆ.

೨. ಪವಿತ್ರವೆನಿಸಿದ ಆಶ್ವಯುಜ ಸಪ್ತಮಿಯ ದಿನ ಸ್ನಾನವನ್ನೂ, ಜಪವನ್ನೂ ಮಾಡಿ ಶುದ್ಧನಾಗಿ, ಬ್ರಾಹ್ಮಣಾನುಗ್ರಹವನ್ನು ಪಡೆದು ಶುಭಸಪ್ತಮೀ ವ್ರತವನ್ನಾರಂಭಿಸಬೇಕು.

೩. ಗಂಧ ಪುಷ್ಪಾದಿಗಳಿಂದ ಭಕ್ತಿಯೊಡನೆ ಗೋಪೂಜೆಯನ್ನು ಮಾಡಬೇಕು. "ಸೂರ್ಯನಿಂದ ಜನಿಸಿ, ಎಲ್ಲ ಲೋಕಗಳಿಗೂ ನೆಲೆಯಾಗಿ ಶುಭವೂ, ಕಲ್ಯಾಣಕರವೂ ಆದ ಶರೀರದಿಂದ ಕೂಡಿದ ನಿನ್ನನ್ನು ಸಕಲ ಸಿದ್ಧಿಗಳಿಗಾಗಿ ನಮಸ್ಕರಿಸುತ್ತೇನೆ" ಎಂದು ಪ್ರಾರ್ಥನೆಮಾಡಬೇಕು.

೪-೫. ತರುವಾಯ ಗಂಧ, ಪುಷ್ಪ, ಬೆಲ್ಲ, ಬಗೆ ಬಗೆಯ ಹಣ್ಣುಗಳು, ಭಕ್ಷ್ಯಗಳು, ತುಪ್ಪ, ಪಾಯಸ ಇವುಗಳೊಡನೆ ಒಂದು ಬಳ್ಳ ಎಳ್ಳು

ಫಲೈರ್ನಾನಾವಿಧೈರ್ಭಕ್ಷ್ಯೈರ್ಘೃತಪಾಯಸಸಂಯುತೈಃ ।
ದದ್ಯಾದ್ದ್ವಿಜಕಾಲವೇಲಾಯಾಮರ್ಯಮಾ ಪ್ರೀಯತಾಮಿತಿ ॥ ೫ ॥

ಪಂಚಗವ್ಯಂ ಚ ಸಂಪ್ರಾಶ್ಯ ಸ್ವಪೇದ್ಭೂಮೌ ವಿಮತ್ಸರಃ ।
ತತಃ ಪ್ರಭಾತೇ ಸಂಜಾತೇ ಭಕ್ತ್ಯಾ ಸಂಪೂಜಯೇದ್ದ್ವಿಜಾನ್ ॥ ೬ ॥

ಅನೇನ ವಿಧಿನಾ ದದ್ಯಾನ್ಮಾಸಿ ಮಾಸಿ ಸದಾ ನರಃ ।
ವಾಸಸೀ ವೃಷಭಂ ಹೈಮಂ ತದ್ವದ್ಗಾಂ ಕಾಂಚನೋದ್ಭವಾಂ ॥ ೭ ॥

ಸಂವತ್ಸರಾಂತೇ ಶಯನಮಿಕ್ಷುದಂಡಗುಡಾನ್ವಿತಂ ।
ಸೋಪಧಾನಕವಿಶ್ರಾಮಂ ಭಾಜನಾಸನಸಂಯುತಂ ॥ ೮ ॥

ತಾಮ್ರಪಾತ್ರೇ ತಿಲಪ್ರಸ್ಥಂ ಸೌವರ್ಣಂ ವೃಷಭಂ ತಥಾ ।
ದದ್ಯಾದ್ವೇದವಿದೇ ಸರ್ವಂ ವಿಶ್ವಾತ್ಮಾ ಪ್ರೀಯತಾಮಿತಿ ॥ ೯ ॥

---

ತುಂಬಿದ ತಾಮ್ರದ ಪಾತ್ರೆಯನ್ನೂ, ಸುವರ್ಣ ವೃಷಭವನ್ನೂ ಸೂರ್ಯನು ಪ್ರೀತನಾಗಲೆಂದು ಪ್ರಾರ್ಥಿಸಿ ಮಧ್ಯಾಹ್ನದ ವೇಳೆಯಲ್ಲಿ ದಾನಮಾಡಬೇಕು.

೬. ಪಂಚಗವ್ಯವನ್ನು ಪ್ರಾಶನಮಾಡಿ ಶುದ್ಧಮನಸ್ಸಿನಿಂದ ನೆಲದ ಮೇಲೆ ಮಲಗಬೇಕು. ಪ್ರಾತಃಕಾಲವಾದ ಮೇಲೆ ಭಕ್ತಿಯಿಂದ ಬ್ರಾಹ್ಮಣರನ್ನು ಪೂಜಿಸಬೇಕು.

೭. ಈ ವಿಧಿಯನ್ನನುಸರಿಸಿ ಒಂದು ಜೊತೆ ಪಂಚೆ, ಚಿನ್ನದಿಂದ ಮಾಡಿದ ಎತ್ತಿನ ಮತ್ತು ಹಸುವಿನ ಪ್ರತಿಮೆಗಳು ಇವನ್ನು ಪ್ರತಿಮಾಸವೂ ಕೊಡುತ್ತಿರಬೇಕು.

೮-೯. ವರ್ಷದ ಕೊನೆಯಲ್ಲಿ ಒರಗುದಿಂಬು, ತಲೆದಿಂಬು ಇವುಗಳೊಳಗೂಡಿದ ಹಾಸಿಗೆಯನ್ನೂ, ಕಬ್ಬಿನ ಜಲ್ಲೆ, ಬೆಲ್ಲ, ಗೃಹಕೃತ್ಯೋಪಯುಕ್ತವಾದ ಪಾತ್ರೆಗಳು, ಆಸನ ಒಂದು ಬಳ್ಳ ಎಳ್ಳು ತುಂಬಿದ ತಾಮ್ರದ ಪಾತ್ರೆ, ಚಿನ್ನದಿಂದ ಮಾಡಿದ ವೃಷಭದ ಪ್ರತಿಮೆ ಇವನ್ನೂ "ಸರ್ವಸ್ವರೂಪನಾದ ಸೂರ್ಯದೇವನು ಪ್ರೀತನಾಗಲಿ" ಎಂದು ಅನುಸಂಧಾನಮಾಡಿ ವೇದಜ್ಞನಾದ ಬ್ರಾಹ್ಮಣೋತ್ತಮನಿಗೆ ದಾನವಾಗಿ ಕೊಡಬೇಕು.

ಅನೇನ ವಿಧಿನಾ ವಿದ್ವಾನ್ಕುರ್ಯಾದ್ಯಶ್ಶುಭಸಪ್ತಮೀಂ ।
ತಸ್ಯ ಶ್ರೀರ್ವಿಪುಲಾ ಕೀರ್ತಿರ್ಭವೇಜ್ಜನ್ಮನಿ ಜನ್ಮನಿ ॥೧೦॥

ಅಪ್ಸರೋಗಣಗಂಧರ್ವೈಃ ಪೂಜ್ಯಮಾನಃ ಸುರಾಲಯೇ ।
ವಸೇದ್ಗಣಾಧಿಪೋ ಭೂತ್ವಾ ಯಾವದಾಭೂತಸಂಪ್ಲವಂ ।
ಕಲ್ಪಾದಾವವತೀರ್ಣಸ್ತು ಸಪ್ತದ್ವೀಪಾಧಿಪೋ ಭವೇತ್ ॥೧೧॥

ಬ್ರಹ್ಮಹತ್ಯಾಸಹಸ್ರಸ್ಯ ಭ್ರೂಣಹತ್ಯಾಶತಸ್ಯ ಚ ।
ನಾಶಾಯಾಲಮಿಯಂ ಪುಣ್ಯಾ ಪಠ್ಯತೇ ಶುಭಸಪ್ತಮೀ ॥೧೨॥

ಇಮಾಂ ಪಠೇದ್ಯಃ ಶೃಣುಯಾನ್ಮುಹೂರ್ತಂ
ಪಶ್ಯೇತ್ಪ್ರಸಂಗಾದಪಿ ದೀಯಮಾನಂ ।
ಸೋಽಪ್ಯತ್ರ ಸರ್ವಾಘವಿಮುಕ್ತದೇಹಃ
ಪ್ರಾಪ್ನೋತಿ ವಿದ್ಯಾಧರನಾಯಕತ್ವಂ ॥೧೩॥

---

೧೦. ಈ ಕ್ರಮದಿಂದ ಶುಭಸಪ್ತಮೀ ವ್ರತವನ್ನು ಆಚರಿಸುವ ವಿದ್ವಾಂಸನಿಗೆ ಅತಿಶಯವಾದ ಸಂಪತ್ತೂ, ಕೀರ್ತಿಯೂ ಪ್ರತಿಜನ್ಮದಲ್ಲೂ ಲಭಿಸುವುವು.

೧೧. ಅವನು ಅಪ್ಸರಸ್ತ್ರೀಯರಿಂದಲೂ ಗಂಧರ್ವರಿಂದಲೂ ಮನ್ನಣೆಯನ್ನು ಪಡೆದು, ದೇವಗಣಗಳಿಗೆ ಅಧಿಪತಿಯಾಗಿ ಮಹಾಪ್ರಳಯದ ವರೆಗೆ ಸ್ವರ್ಗಲೋಕದಲ್ಲಿ ವಾಸಿಸುವನು. ಪುನಃ ಕಲ್ಪಾದಿಯಲ್ಲಿ ಅವತರಿಸಿ ಸಪ್ತದ್ವೀಪಗಳ ಅಧಿಪತಿಯಾಗುವನು.

೧೨. ಪುಣ್ಯಕರವಾದ ಶುಭ ಸಪ್ತಮೀ ವ್ರತದಿಂದ ಸಾವಿರ ಬ್ರಹ್ಮಹತ್ಯೆಗಳ ದೋಷವೂ, ನೂರಾರು ಭ್ರೂಣಹತ್ಯೆಗಳ ಪಾತಕವೂ ನಶಿಸುವುವು ಎಂದು ಪುರಾಣಗಳಲ್ಲಿ ಹೇಳಿದೆ.

೧೩. ಈ ವ್ರತವನ್ನು ಓದುವವನು, 'ಮುಹೂರ್ತಕಾಲವಾದರೂ ಕೇಳುವವನು ಅಥವಾ ಅಕಸ್ಮಾತ್ತಾಗಿ ವ್ರತಾಂಗವಾದ ದಾನವನ್ನು ನೋಡುವವನು ಇವರೂ ಸಹ ಸಮಸ್ತಪಾಪಗಳಿಂದಲೂ ರಹಿತರಾಗಿ ಶುದ್ಧಾತ್ಮರೆನಿಸುವರು. ವಿದ್ಯಾಧರಾಧಿಪತ್ಯವನ್ನು ಪಡೆಯುವರು.

## ಅಧ್ಯಾಯ ೮೦

**ಯಾವತ್ಸಮಾಃ ಸಪ್ತ ನರಃ ಕರೋತಿ**
**ಯಃ ಸಪ್ತಮೀಂ ಸಪ್ತವಿಧಾನಯುಕ್ತಾಂ ।**
**ಸ ಸಪ್ತಲೋಕಾಧಿಪತಿಃ ಕ್ರಮೇಣ**
**ಭೂತ್ವಾ ಪದಂ ಯಾತಿ ಪರಂ ಮುರಾರೇಃ ॥೧೪॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಶುಭಸಪ್ತಮೀವ್ರತಂ ನಾಮಾಶೀತಿತಮೋಽಧ್ಯಾಯಃ**

---

೧೪. ಮೇಲೆ ಹೇಳಿದಂತೆ ವಿಶೋಕಸಪ್ತಮಿ, ಫಲಸಪ್ತಮಿ ಮೊದಲಾಗಿ ಏಳು ಬಗೆಯಾಗಿರುವ ಸಪ್ತಮೀವ್ರತಗಳನ್ನು ಏಳು ವರ್ಷಗಳ ಕಾಲ ಬಿಡದೆ ನಡೆಸುವ ಮನುಷ್ಯನು ಕ್ರಮವಾಗಿ ಸಪ್ತಲೋಕಗಳ ಆಧಿಪತ್ಯವನ್ನು ಪಡೆದು ಬಳಿಕ ಮಹಾವಿಷ್ಣುವಿನ ಅತ್ಯುತ್ತಮವಾದ ಸಾನ್ನಿಧ್ಯವನ್ನು ಹೊಂದುವನು.

### ಅಧ್ಯಾಯದ ಸಾರಾಂಶ

ಶುಭಸಪ್ತಮೀ ವ್ರತವನ್ನು ಈ ಅಧ್ಯಾಯವು ವಿವರಿಸುತ್ತದೆ.

ಆಶ್ವಯುಜ ಶುಕ್ಲ ಸಪ್ತಮಿಯ ದಿನ ಮಾಡಬೇಕಾದ ವ್ರತವಿದು. ಬ್ರಾಹ್ಮಣಾನುಗ್ರಹವನ್ನು ಪಡೆದು, ಗೋಪೂಜೆಯನ್ನು ನೆರವೇರಿಸಿ ತಿಲದಾನವನ್ನೂ, ಸುವರ್ಣವೃಷಭದಾನವನ್ನೂ ಮಾಡಬೇಕು. ಮರುದಿನ ಬ್ರಾಹ್ಮಣಪೂಜೆಯನ್ನು ನಡೆಸಬೇಕು. ಹೀಗೆ ಪ್ರತಿ ತಿಂಗಳೂ ಮಾಡುತ್ತ ಸಂವತ್ಸರಾಂತದಲ್ಲಿ ಶಯ್ಯಾದಾನಾದಿಗಳನ್ನು ಕೊಡಬೇಕು. ಈ ವ್ರತದಿಂದ ಬ್ರಹ್ಮಹತ್ಯಾದಿ ಮಹಾಪಾತಕಗಳೂ ನಶಿಸುವುವು. ಸಕಲ ಶುಭಲೋಕಗಳೂ ಸಿದ್ಧಿಸುವುವು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಶುಭಸಪ್ತಮೀವ್ರತವೆಂಬ
ಎಂಬತ್ತನೆಯ ಅಧ್ಯಾಯವು ಮುಗಿದುದು.

## ಅಥ ಏಕಾಶೀತಿತಮೋಽಧ್ಯಾಯಃ

|| ಮನುರುವಾಚ ||

ಕಿಮಭೀಷ್ಟವಿಯೋಗಶೋಕಸಂಘಾ
ದಲಮುದ್ಧರ್ತುಮುಪೋಷಣಂ ವ್ರತಂ ವಾ ।
ವಿಭವೋದ್ಭವಕಾರಿ ಭೂತಲೇಽಸ್ಮಿನ್
ಭವಭೀತೇರಪಿ ಸೂದನಂ ಚ ಪುಂಸಃ || ೧ ||

|| ಮತ್ಸ್ಯ ಉವಾಚ ||

ಪರಿಪೃಷ್ಟಮಿದಂ ಜಗತ್ಪ್ರಿಯಂ ತೇ
ವಿಬುಧಾನಾಮಪಿ ದುರ್ಲಭಂ ಮಹತ್ತ್ವಾತ್ ।
ತವ ಭಕ್ತಿಮತಸ್ತಥಾಪಿ ವಕ್ಷ್ಯೇ
ವ್ರತಮಿಂದ್ರಾಸುರಮಾನವೇಷು ಗುಹ್ಯಂ || ೨ ||

ಪುಣ್ಯಮಾಶ್ವಯುಜೇ ಮಾಸಿ ವಿಶೋಕದ್ವಾದಶೀವ್ರತಂ ।
ದಶಮ್ಯಾಂ ಲಘುಭುಗ್ವಿದ್ವಾನಾರಭೇನ್ನಿಯಮೇನ ತು || ೩ ||

---

೧. ಮನುಚಕ್ರವರ್ತಿ ಹೇಳಿದನು.—ಇಷ್ಟಜನರ ಅಗಲಿಕೆ, ಶೋಕ ಪರಂಪರೆ ಇವುಗಳನ್ನು ಪರಿಹರಿಸಬಲ್ಲ ಉಪವಾಸವಾಗಲಿ ವ್ರತವಾಗಲಿ ಆವುದು? ಈ ಭೂಮಿಯಲ್ಲಿ ಮನುಷ್ಯನಿಗೆ ಸಂಸಾರದ ಭೀತಿಯನ್ನು ಕಳೆದು ವೈಭವವನು ಹೆಚ್ಚಿಸಬಲ್ಲ ಉಪಾಯವೇನು?

೨. ಮತ್ಸ್ಯರೂಪನಾದ ಭಗವಂತನು ಹೇಳಿದನು.—ನೀನು ಕೇಳಿದುದು ಜಗತ್ತಿಗೆಲ್ಲ ಪ್ರಿಯಕರವಾದುದು; ಬಹು ಮಹಿಮೆಯುಳ್ಳದು. ಆದುದರಿಂದ ದೇವತೆಗಳಿಗೆ ಕೂಡ ದುರ್ಲಭವು. ಆದರೂ ನನ್ನ ಭಕ್ತನಾದುದರಿಂದ ನಿನಗೆ ಹೇಳುವೆನು. ಇಂದ್ರ, ಅಸುರರು ಮತ್ತು ಮನುಷ್ಯರು ರಹಸ್ಯವಾಗಿ ರಕ್ಷಿಸಿಕೊಂಡು ಬರಬೇಕಾದ ಮಹಾವ್ರತವಿದು.

೩. ಪುಣ್ಯಕರವಾದ ವಿಶೋಕದ್ವಾದಶೀ ವ್ರತವನ್ನು ಆಶ್ವಯುಜಮಾಸದಲ್ಲಿ ನಡೆಸಬೇಕು. ಪ್ರಾಜ್ಞನಾದ ಯಜಮಾನನು ಶುಕ್ಲಪಕ್ಷದ ದಶಮಿಯ ದಿನ ನಿಯಮದಿಂದ ಇದನ್ನು ಪ್ರಾರಂಭಿಸಬೇಕು. ಆ ದಿನ ಒಪ್ಪತ್ತು ಊಟಮಾಡಬೇಕು.

ಉದಙ್ಮುಖಃ ಪ್ರಾಙ್ಮುಖೋ ವಾ ದಂತಧಾವನಪೂರ್ವಕಂ ।
ಏಕಾದಶ್ಯಾಂ ನಿರಾಹಾರಃ ಸಮಭ್ಯರ್ಚ್ಯ ತು ಕೇಶವಂ ।
ಶ್ರಿಯಂ ಚಾಭ್ಯರ್ಚ್ಯ ವಿಧಿವದ್ಭೋಕ್ಷ್ಯಾಮಿ ತ್ವಪರೇಽಹನಿ ॥ ೪ ॥

ಏವಂ ನಿಯಮಕೃತ್ಸುಪ್ತ್ವಾ ಪ್ರಾತರುತ್ಥಾಯ ಮಾನವಃ ।
ಸ್ನಾನಂ ಸರ್ವೌಷಧ್ಯೈಃ ಕುರ್ಯಾತ್ಪಂಚಗವ್ಯಜಲೇನ ತು ।
ಶುಕ್ಲಮಾಲ್ಯಾಂಬರಧರಃ ಪೂಜಯೇಚ್ಛ್ರೀಶಮುತ್ಪಲೈಃ ॥ ೫ ॥

ವಿಶೋಕಾಯ ನಮಃ ಪಾದೌ ಜಂಘೇ ಚ ವರದಾಯ ವೈ ।
ಶ್ರೀಶಾಯ ಜಾನುನೀ ತದ್ವದೂರೂ ಚ ಜಲಶಾಯಿನೇ ॥ ೬ ॥

ಕಂದರ್ಪಾಯ ನಮೋ ಗುಹ್ಯಂ ಮಾಧವಾಯ ನಮಃ ಕಟಿಂ
ದಾಮೋದರಾಯೇತ್ಯುದರಂ ಪಾರ್ಶ್ವೇ ಚ ವಿಪುಲಾಯ ವೈ ॥ ೭ ॥

---

೪. ಉತ್ತರಾಭಿಮುಖವಾಗಿ ಅಥವಾ ಪೂರ್ವಾಭಿಮುಖವಾಗಿ ದಂತಧಾವನವನ್ನು ಮಾಡಿ "ಏಕಾದಶಿಯ ದಿನ ಉಪವಾಸವಿರುವೆನು. ಕೇಶವನನ್ನೂ, ಲಕ್ಷ್ಮಿಯನ್ನೂ ಶಾಸ್ತ್ರೋಕ್ತವಾಗಿ ಆರಾಧಿಸಿ ದ್ವಾದಶಿಯ ದಿನ ಪಾರಣೆಮಾಡುವೆನು" ಎಂದು ಸಂಕಲ್ಪಮಾಡಿ ಯಜಮಾನನು ಮಲಗಬೇಕು.

೫. ಬೆಳಗ್ಗೆ ಎದ್ದು ಸಕಲ ಮೂಲಿಕೆಗಳಿಂದಲೂ, ಪಂಚಗವ್ಯೋದಕದಿಂದಲೂ ಸ್ನಾನಮಾಡಿ, ಶುಭ್ರ ವಸ್ತ್ರವನ್ನುಟ್ಟು, ನೈದಿಲೆಹೂಗಳಿಂದ ವಿಷ್ಣುವನ್ನು ಅರ್ಚಿಸಬೇಕು.

೬. ಶೋಕರಹಿತನಿಗೆ ನಮಸ್ಕಾರವೆಂದು ಪಾದಗಳನ್ನೂ, ವರವನ್ನು ಕರುಣಿಸುವಾತನಿಗೆ ನಮಸ್ಕಾರವೆಂದು ಮೊಣಕಾಲುಗಳನ್ನೂ, ಲಕ್ಷ್ಮೀಪತಿಗೆ ನಮಸ್ಕಾರವೆಂದು ಮಂಡಿಯನ್ನೂ, ಕ್ಷೀರಸಾಗರಶಯನನಿಗೆ ನಮಸ್ಕಾರವೆಂದು ತೊಡೆಗಳನ್ನೂ ಅರ್ಚಿಸಬೇಕು.

೭. ಕಂದರ್ಪನಿಗೆ ನಮಸ್ಕಾರವೆಂದು ಗುಹ್ಯಸ್ಥಲವನ್ನೂ, ಮಾಧವನಿಗೆ ನಮಸ್ಕಾರವೆಂದು ಮಧ್ಯಸ್ಥಲವನ್ನೂ, ದಾಮೋದರನಿಗೆ ನಮಸ್ಕಾರವೆಂದು ಉದರವನ್ನೂ, ವಿಪುಲನಿಗೆ ನಮಸ್ಕಾರವೆಂದು ಪಾರ್ಶ್ವಗಳನ್ನೂ ಪೂಜಿಸಬೇಕು.

**ನಾಭಿಂ ಚ ಪದ್ಮನಾಭಾಯ ಹೃದಯಂ ಮನ್ಮಥಾಯ ವೈ ।**
**ಶ್ರೀಧರಾಯ ವಿಭೋರ್ವಕ್ಷಃ ಕರೌ ಮಧುಜಿತೇ ನಮಃ ॥ ೮ ॥**

**ಚಕ್ರಿಣೇ ವಾಮಬಾಹುಂ ಚ ದಕ್ಷಿಣಂ ಗದಿನೇ ನಮಃ ।**
**ವೈಕುಂಠಾಯ ನಮಃ ಕಂಠಮಾಸ್ಯಂ ಯಜ್ಞಮುಖಾಯ ವೈ ॥ ೯ ॥**

**ನಾಸಾಮಶೋಕನಿಧಯೇ ವಾಸುದೇವಾಯ ಚಾಕ್ಷಿಣೀ ।**
**ಲಲಾಟಂ ವಾಮನಾಯೇತಿ ಹರಯೇ ಚ ಪುನರ್ಭ್ರುವೌ ॥೧೦॥**

**ಅಳಕಾನ್ಮಾಧವಾಯೇತಿ ಕಿರೀಟಂ ವಿಶ್ವರೂಪಿಣೇ ।**
**ನಮಃ ಸರ್ವಾತ್ಮನೇ ತದ್ವಚ್ಛಿರ ಇತ್ಯಭಿಪೂಜಯೇತ್ ॥೧೧॥**

**ಏವಂ ಸಂಪೂಜ್ಯ ಗೋವಿಂದಂ ಫಲಮಾಲ್ಯಾನುಲೇಪನೈಃ ।**
**ತತಸ್ತು ಮಂಡಲಂ ಕೃತ್ವಾ ಸ್ಥಂಡಿಲಂ ಕಾರಯೇನ್ಮುದಾ ॥೧೨॥**

---

೮. ಪದ್ಮನಾಭನಿಗೆಂದು ನಾಭಿಯನ್ನೂ, ಮನ್ಮಥನಿಗೆಂದು ಹೃದಯವನ್ನೂ, ಶ್ರೀಧರನಿಗೆಂದು ವಿಭುವಿನ ವಕ್ಷಸ್ಥಲವನ್ನೂ, ಮಧುಜಿತ್ತಿಗೆಂದು ಕರಗಳನ್ನೂ ನಮಸ್ಕರಿಸಿ ಪೂಜಿಸಬೇಕು.

೯. ಚಕ್ರಧಾರಿಗೆಂದು ಎಡದೋಳನ್ನೂ, ಗದಾಧಾರಿಗೆಂದು ಬಲದೋಳನ್ನೂ, ವೈಕುಂಠನಿಗೆಂದು ಕಂಠವನ್ನೂ, ಯಜ್ಞಮುಖನಿಗೆಂದು ಮುಖವನ್ನೂ ನಮಿಸಿ ಅರ್ಚಿಸಬೇಕು.

೧೦. ಅಶೋಕನಿಧಿಗೆಂದು ನಾಸಿಕೆಯನ್ನೂ, ವಾಸುವೇವನಿಗೆಂದು ನೇತ್ರಗಳನ್ನೂ, ವಾಮನನಿಗೆಂದು ಹಣೆಯನ್ನೂ, ಹರಿಗೆಂದು ಹುಬ್ಬುಗಳನ್ನೂ ನಮಸ್ಕಾರ ಮಾಡಿ ಆರಾಧಿಸಬೇಕು.

೧೧. ಮಾಧವನಿಗೆ ನಮಸ್ಕಾರವೆಂದು ಮುಂಗುರಳನ್ನೂ, ವಿಶ್ವರೂಪನಿಗೆ ನಮಸ್ಕಾರವೆಂದು ಕಿರೀಟವನ್ನೂ, ಸರ್ವಾತ್ಮನಿಗೆ ನಮಸ್ಕಾರವೆಂದೂ ಶಿರಸ್ಸನ್ನೂ ಪೂಜಿಸಬೇಕು.

೧೨. ಹೀಗೆ ಗೋವಿಂದನನ್ನು ಗಂಧಪುಷ್ಪ ಫಲಗಳಿಂದ ಪೂಜಿಸಬೇಕು. ಬಳಿಕ ಮಂಡಲವನ್ನು ರಚಿಸಿ ಸಂತುಷ್ಟಮನಸ್ಸಿನಿಂದ ಪೂಜೆಗಾಗಿ ಸ್ಥಲವನ್ನು ಏರ್ಪಡಿಸಬೇಕು.

ಚತುರಸ್ರಂ ಸಮಂತಾಚ್ಚ ರತ್ನಿಮಾತ್ರಮುದಕ್ಪ್ಲವಂ ।
ಶ್ಲಕ್ಷ್ಣಂ ಹೃದ್ಯಂ ಚ ಪರಿತೋ ವಪ್ರತ್ರಯಸಮಾವೃತಂ ॥೧೩॥
ಅಂಗುಲೇನೋಚ್ಛ್ರಿತಾ ವಪ್ರಾಸ್ತದ್ವಿಸ್ತಾರಸ್ತು ದ್ವ್ಯಂಗುಲಃ ।
ಸ್ಥಂಡಿಲಸ್ಯೋಪರಿಷ್ಟಾಚ್ಚ ಭಿತ್ತಿರಷ್ಟಾಂಗುಲಾ ಭವೇತ್ ॥೧೪॥
ನದೀವಾಲುಕಯಾ ಶೂರ್ಪೇ ಲಕ್ಷ್ಮ್ಯಾಃ ಪ್ರತಿಕೃತಿಂ ನ್ಯಸೇತ್ ।
ಸ್ಥಂಡಿಲೇ ಶೂರ್ಪಮಾರೋಪ್ಯ ಲಕ್ಷ್ಮೀಮಿತ್ಯರ್ಚಯೇದ್ಬುಧಃ ॥೧೫॥
ನಮೋ ದೇವ್ಯೈ ನಮಃ ಶಾಂತ್ಯೈ ನಮೋ ಲಕ್ಷ್ಮ್ಯೈ ನಮಃ ಶ್ರಿಯೈ ।
ನಮಃ ಪುಷ್ಟ್ಯೈ ನಮಸ್ತುಷ್ಟ್ಯೈ ವೃಷ್ಟ್ಯೈ ಹೃಷ್ಟ್ಯೈ ನಮೋ ನಮಃ ॥೧೬॥
ವಿಶೋಕಾ ದುಃಖನಾಶಾಯ ವಿಶೋಕಾ ವರದಾಽಸ್ತು ಮೇ ।
ವಿಶೋಕಾ ಚಾಸ್ತು ಸಂಪತ್ತ್ಯೈ ವಿಶೋಕಾ ಸರ್ವಸಿದ್ಧಯೇ ॥೧೭॥

---

೧೩. ಸ್ಥಂಡಿಲವು ಚಚ್ಚೌಕವಾಗಿ ನಾಲ್ಕು ಕಡೆಯೂ ಒಂದು ಮೊಳ ಅಳತೆಯುಳ್ಳದಾಗಿ ಉತ್ತರಕ್ಕೆ ಇಳಿಜಾರಾಗಿರಬೇಕು. ಅದು ನಯವಾಗಿಯೂ ಅಂದವಾಗಿಯೂ ಇರಬೇಕು. ಸುತ್ತಲೂ ಮೂರು ವಪ್ರಗಳಿಂದ (ಮೆಟ್ಟಿಲುಗಳಿಂದ) ಕೂಡಿರಬೇಕು.

೧೪. ವಪ್ರಗಳ ಎತ್ತರವು ಒಂದೊಂದು ಅಂಗುಲ. ಅಗಲವಾದರೋ ಎರಡು ಅಂಗುಲಗಳು. ಸ್ಥಂಡಿಲದ ಮೇಲ್ಗಡೆಯಲ್ಲಿನ ಗೋಡೆಯ ಪ್ರಮಾಣವು ಎಂಟು ಅಂಗುಲವಿರಬೇಕು.

೧೫. ಹೊಳೆಯ ಮರಳಿನಿಂದ ಮೊರದಲ್ಲಿ ಲಕ್ಷ್ಮಿಯ ಪ್ರತಿಮೆಯನ್ನು ಮಾಡಬೇಕು. ಮೊರವನ್ನು ಹಿಂದೆ ಸಿದ್ಧಪಡಿಸಿದ ಸ್ಥಂಡಿಲದಲ್ಲಿರಿಸಿ, ಲಕ್ಷ್ಮಿಯನ್ನು ಈ ಕೆಳಗೆ ಹೇಳುವಂತೆ ಅರ್ಚಿಸಬೇಕು.

೧೬. "ದೇವಿಗೆ ನಮಸ್ಕಾರ, ಶಾಂತಿಗೆ ನಮಸ್ಕಾರ, ಲಕ್ಷ್ಮಿಗೆ ನಮಸ್ಕಾರ, ಶ್ರೀಗೆ ನಮಸ್ಕಾರ, ಪುಷ್ಟಿಗೆ ನಮಸ್ಕಾರ, ತುಷ್ಟಿಗೆ ನಮಸ್ಕಾರ ವೃಷ್ಟಿಗೂ, ಹೃಷ್ಟಿಗೂ ನಮಸ್ಕಾರ ನಮಸ್ಕಾರ.

೧೭. ಶೋಕರಹಿತಳಾದ ಲಕ್ಷ್ಮಿಯು ನನ್ನ ದುಃಖವನ್ನು ನಾಶಪಡಿಸಲಿ. ನನಗೆ ವರವನ್ನು ಅನುಗ್ರಹಿಸಲಿ. ಸಂಪತ್ತನ್ನು ಕರುಣಿಸಲಿ. ಸರ್ವಸಿದ್ಧಿಗಳನ್ನೂ ದಯೆಗೆಯ್ಯಲಿ."

ತತಶ್ಶುಕ್ಲಾಂಬರೈಃ ಶೂರ್ಪಂ ವೇಷ್ಟ್ಯ ಸಂಪೂಜಯೇತ್ಫಲೈಃ ।
ವಸ್ತ್ರೈರ್ನಾನಾವಿಧೈಸ್ತದ್ವತ್ಸುವರ್ಣಕಮಲೇನ ಚ ॥೧೮॥

ರಜನೀಷು ಚ ಸರ್ವಾಸು ಪಿಬೇದ್ದರ್ಭೋದಕಂ ಬುಧಃ ।
ತತಸ್ತು ಗೀತನೃತ್ಯಾದಿ ಕಾರಯೇತ್ಸಕಲಾಂ ನಿಶಾಂ ॥೧೯॥

ಯಾಮತ್ರಯೇ ವ್ಯತೀತೇ ತು ಸುಪ್ತ್ವೋಪ್ಯುತ್ಥಾಯ ಮಾನವಃ ।
ಅಭಿಗಮ್ಯ ಚ ವಿಪ್ರಾಣಾಂ ಮಿಥುನಾನಿ ತದಾರ್ಚಯೇತ್ ॥೨೦॥

ಶಕ್ತಿತಸ್ತ್ರೀಣಿ ಚೈಕಂ ವಾ ವಸ್ತ್ರಮಾಲ್ಯಾನುಲೇಪನೈಃ ।
ಶಯನಸ್ಥಾನಿ ಪೂಜ್ಯಾನಿ ನಮೋಽಸ್ತು ಜಲಶಾಯಿನೇ ॥೨೧॥

ತತಸ್ತು ಗೀತವಾದ್ಯೇನ ರಾತ್ರೌ ಜಾಗರಣೇ ಕೃತೇ ।
ಪ್ರಭಾತೇ ಚ ತತಃ ಸ್ನಾನಂ ಕೃತ್ವಾ ದಾಂಪತ್ಯಮರ್ಚಯೇತ್ ॥೨೨॥

---

೧೮. ಬಳಿಕ ಮೊರದ ಸುತ್ತಲೂ ಬಿಳಿಯ ಬಟ್ಟೆಯನ್ನು ಧರಿಸಿ ಬಗೆಬಗೆಯ ಹಣ್ಣುಗಳಿಂದಲೂ, ವಸ್ತ್ರಗಳಿಂದಲೂ, ಚಿನ್ನದ ತಾವರೆ ಹೂವಿನಿಂದಲೂ ಅರ್ಚಿಸಬೇಕು.

೧೯. ಪ್ರಾಜ್ಞನಾದ ಯಜಮಾನನು ಈ ವ್ರತವನ್ನು ನಡೆಸುವಾಗಲೆಲ್ಲ ರಾತ್ರಿಯಲ್ಲಿ ದರ್ಭೋದಕವನ್ನು ಪ್ರಾಶನಮಾಡಬೇಕು. ಇರುಳೆಲ್ಲ ಸಂಗೀತ ನರ್ತನಗಳನ್ನು ನಡೆಸಬೇಕು.

೨೦. ರಾತ್ರಿಯು ಕಳೆದ ಬಳಿಕ ಆತನು ನಿದ್ರೆಯಿಂದೆದ್ದು ಬ್ರಾಹ್ಮಣ ದಂಪತಿಗಳ ಬಳಿಗೆ ಹೋಗಿ ಅವರನ್ನು ಆರಾಧಿಸಬೇಕು.

೨೧. ತನ್ನ ಶಕ್ತಿಗೆ ತಕ್ಕಂತೆ ದ್ವಿಜ ದಂಪತಿಗಳು ಮೂವರನ್ನು ಅಥವಾ ಕೊನೆಗೆ ಒಂದು ಜೋಡಿಯನ್ನು ಗಂಧ, ಪುಷ್ಪ, ವಸ್ತ್ರಗಳಿಂದ ಅವರು ಹಾಸಿಗೆಯಲ್ಲಿದ್ದಂತೆಯೇ ಪೂಜಿಸಬೇಕು. "ಸಾಗರಶಾಯಿಯಾದ ಶ್ರೀ ಮಹಾವಿಷ್ಣುವಿಗೆ ಪ್ರೀತಿಯಾಗಲಿ" ಎಂದು ಅನುಸಂಧಾನಮಾಡಬೇಕು.

೨೨. ಹೀಗೆ ರಾತ್ರಿಯೆಲ್ಲ ಗೀತವಾದ್ಯಗಳಿಂದ ಜಾಗರಣಮಾಡಿದ ತರುವಾಯ ಪ್ರಾತಃಕಾಲದಲ್ಲಿ ಸ್ನಾನವನ್ನು ಮಾಡಿ ದ್ವಿಜದಂಪತಿಗಳನ್ನು ಅರ್ಚಿಸಬೇಕು.

**ಭೋಜನಂ ಚ ಯಥಾಶಕ್ತ್ಯಾ ವಿತ್ತಶಾಠ್ಯವಿವರ್ಜಿತಃ ।**
**ಭುಕ್ತ್ವಾ ಶ್ರುತ್ವಾ ಪುರಾಣಾನಿ ತದ್ದಿನಂ ಚಾತಿವಾಹಯೇತ್ ॥೨೩॥**

**ಅನೇನ ವಿಧಿನಾ ಸರ್ವಂ ಮಾಸಿ ಮಾಸಿ ಸಮಾಚರೇತ್ ।**
**ವ್ರತಾಂತೇ ಶಯನಂ ದದ್ಯಾದ್ಗುಡಧೇನುಸಮನ್ವಿತಂ ।**
**ಸೋಪಧಾನಕವಿಶ್ರಾಮಂ ಸಾಸ್ತರಾವರಣಂ ಶುಭಂ ॥೨೪॥**

**ಯಥಾ ನ ಲಕ್ಷ್ಮೀರ್ದೇವೇಶ ತ್ವಾಂ ಪರಿತ್ಯಜ್ಯ ಗಚ್ಛತಿ ।**
**ತಥಾ ಸುರೂಪತಾರೋಗ್ಯಮಶೋಕಶ್ಚಾಸ್ತು ಮೇ ಸದಾ ॥೨೫॥**

**ಯಥಾ ದೇವೇನ ರಹಿತಾ ನ ಲಕ್ಷ್ಮೀರ್ಜಾಯತೇ ಕ್ವಚಿತ್ ।**
**ತಥಾ ವಿಶೋಕತಾ ಮೇಽಸ್ತು ಭಕ್ತಿರಗ್ರ್ಯಾ ಚ ಕೇಶವೇ ॥೨೬॥**

**ಮಂತ್ರೇಣಾನೇನ ಶಯನಂ ಗುಡಧೇನುಸಮನ್ವಿತಂ ।**
**ಶೂರ್ಪಂ ಚ ಲಕ್ಷ್ಮ್ಯಾ ಸಹಿತಂ ದಾತವ್ಯಂ ಭೂತಿಮಿಚ್ಛತಾ ॥೨೭॥**

---

೨೩. ಕಾರ್ಪಣ್ಯವನ್ನು ತೋರದೆ ತನ್ನ ಶಕ್ತಿಗೆ ತಕ್ಕಂತೆ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿ, ತಾನೂ ಊಟಮಾಡಿ ಪುರಾಣಶ್ರವಣದಿಂದ ಹಗಲನ್ನು ಕಳೆಯಬೇಕು.

೨೪. ಈ ವಿಧಾನದಿಂದ ಪ್ರತಿ ತಿಂಗಳಲ್ಲೂ ಎಲ್ಲವನ್ನೂ ನೆರವೇರಿಸಬೇಕು. ವ್ರತಾಂತದಲ್ಲಿ ಒರಗುದಿಂಬು, ತಲೆದಿಂಬು, ಮಗ್ಗಲುಹಾಸಿಗೆ, ಮೇಲುಹೊದಿಕೆ, ಇವೆಲ್ಲವುಗಳಿಂದಲೂ ಸುಸಜ್ಜಿತವಾದ ಹಾಸಿಗೆಯನ್ನು ದಾನಮಾಡಬೇಕು. ಇದರೊಡನೆ ಬೆಲ್ಲದಿಂದ ನಿರ್ಮಿಸಿದ ಹಸುವನ್ನು ಕೊಡಬೇಕು.

೨೫. "ಓ ದೇವೇಶ್ವರಾ, ನಿನ್ನನ್ನು ಬಿಟ್ಟು ಲಕ್ಷ್ಮಿಯು ಕದಲುವುದಿಲ್ಲ. ಹಾಗೆಯೇ ಒಳ್ಳೆಯ ರೂಪವೂ, ಆರೋಗ್ಯವೂ, ಶೋಕರಾಹಿತ್ಯವೂ ನನಗೆ ಯಾವಾಗಲೂ ಉಂಟಾಗಲಿ.

೨೬. ಭಗವಂತನನ್ನು ಬಿಟ್ಟು ಲಕ್ಷ್ಮಿಯು ಒಬ್ಬಳೇ ಎಲ್ಲೂ ಅವತಾರ ಮಾಡುವುದಿಲ್ಲ. ಅವರಿಬ್ಬರಿಗೂ ಹಾಗೆ ಅವಿನಾಭಾವ ಸಂಬಂಧವಿರುವಂತೆಯೇ ನನಗೆ ಶೋಕಾಭಾವವೂ, ಕೇಶವನಲ್ಲಿ ಶ್ರೇಷ್ಠವಾದ ಭಕ್ತಿಯೂ ನೆಲೆಸಲಿ."

೨೭. ಈ ಮಂತ್ರವನ್ನು ಹೇಳಿ ಬೆಲ್ಲದ ಹಸುವಿನೊಡನೆ ಶಯನವನ್ನೂ, ಲಕ್ಷ್ಮೀ ವಿಗ್ರಹಸಹಿತವಾದ ಮೊರವನ್ನೂ ದಾನಮಾಡಬೇಕು. ಇದರಿಂದ ಐಶ್ವರ್ಯ ಲಾಭವುಂಟಾಗುವುದು.

**ಉತ್ಪಲಂ ಕರವೀರಂ ಚ ಬಾಣಮುಮ್ಲಾನಕುಂಕುಮಂ ।**
**ಕೇತಕೀ ಸಿಂದುವಾರಂ ಚ ಮಲ್ಲಿಕಾ ಗಂಧಪಾಟಲಾ ।**
**ಕದಂಬಂ ಕುಬ್ಜಕಂ ಜಾತಿಃ ಶಸ್ತಾನ್ಯೇತಾನಿ ಸರ್ವದಾ ॥೨೮॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ವಿಶೋಕದ್ವಾದಶೀವ್ರತಂ ನಾಮೈಕಾಶೀತಿತಮೋಽಧ್ಯಾಯಃ**

---

೨೮. ನೈದಿಲೆ, ಕೆಂಪುಗಣಿಗಲೆ, ಕರಿಗೋರಂಟಿ, ದೊಡ್ಡಗೋರಂಟಿ, ಕೇಸರ, ತಾಳೆ, ಲಕ್ಕಿ, ಮಲ್ಲಿಗೆ, ಪಾದರಿ, ಕದಂಬ, ಕುಬ್ಜ, ಜಾಜಿ ಈ ಹೂವುಗಳೆಲ್ಲವೂ ಯಾವಾಗಲೂ ಶ್ರೇಷ್ಠವಾದುವು.

**ಅಧ್ಯಾಯದ ಸಾರಾಂಶ**

ಈ ಅಧ್ಯಾಯದಲ್ಲಿ ವಿಶೋಕದ್ವಾದಶೀ ವ್ರತವಿಧಾನವನ್ನು ಹೇಳಿದೆ.

ಆಶ್ವಯುಜ ಶುದ್ಧ ಏಕಾದಶಿಯ ದಿವಸ ಸ್ನಾನಾದಿಗಳಿಂದ ಶುದ್ಧನಾಗಿ, ಶುಭ್ರ ವಸ್ತ್ರವನ್ನು ಧರಿಸಿ ಗೋವಿಂದನ ಒಂದೊಂದು ಅವಯುವವನ್ನು ಮಂತ್ರಪೂರ್ವಕವಾಗಿ ಅರ್ಚಿಸಬೇಕು. ತರುವಾಯ ಮಂಡಲವನ್ನು ರಚಿಸಿ ನದಿಯ ಮರಳಿನಿಂದ ಮೊರದಲ್ಲಿ ಲಕ್ಷ್ಮೀಪ್ರತಿಮೆಯನ್ನು ಮಾಡಬೇಕು. ಪೂಜೆಯೆಲ್ಲವೂ ಆದ ಬಳಿಕ ಅಂದು ಉಪವಾಸಮಾಡಿ ಮಾರನೆಯ ದಿನ ಬ್ರಾಹ್ಮಣದಂಪತಿಗಳನ್ನೂ, ಬ್ರಾಹ್ಮಣರನ್ನೂ ಭೋಜನಾದಿಗಳಿಂದಲೂ ದಾನದಕ್ಷಿಣೆಗಳಿಂದಲೂ ಸತ್ಕರಿಸಬೇಕು. ತಾನೂ ಊಟಮಾಡಿ ಪುರಾಣಶ್ರವಣದಿಂದ ಆ ದಿನವನ್ನು ಕಳೆಯಬೇಕು. ಸಂವತ್ಸರಾಂತದಲ್ಲಿ ವ್ರತವು ಸಾಂಗವಾಗಿ ನೆರವೇರಿದ ಬಳಿಕ ಶಯ್ಯಾದಾನವನ್ನೂ ಗೋದಾನವನ್ನೂ ಮಾಡಬೇಕು. ಈ ವ್ರತಾಚರಣೆಯಿಂದ ಇಷ್ಟಜನರ ವಿಯೋಗದುಃಖವು ತೊಲಗುವುದು. ಸಂಸಾರದಲ್ಲಿ ಸಕಲವಿಧವಾದ ಶ್ರೇಯಸ್ಸೂ ಉಂಟಾಗುವುದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ವಿಶೋಕದ್ವಾದಶೀವ್ರತವೆಂಬ ಎಂಬತ್ತೊಂದನೆಯ ಅಧ್ಯಾಯವು ಮುಗಿದುದು.

## ಅಥ ದ್ವ್ಯಶೀತಿತಮೋಽಧ್ಯಾಯಃ

|| ಮನುರುವಾಚ ||

ಗುಡಧೇನುವಿಧಾನಂ ಮೇ ಸಮಾಚಕ್ಷ್ವ ಜಗತ್ಪತೇ ।
ಕಿಂರೂಪಂ ಕೇನ ಮಂತ್ರೇಣ ದಾತವ್ಯಂ ತದಿಹೋಚ್ಯತಾಂ || ೧ ||

|| ಮತ್ಸ್ಯ ಉವಾಚ ||

ಗುಡಧೇನುವಿಧಾನಸ್ಯ ಯದ್ರೂಪಮಿಹ ಯತ್ಫಲಂ ।
ತದಿದಾನೀಂ ಪ್ರವಕ್ಷ್ಯಾಮಿ ಸರ್ವಪಾಪವಿನಾಶನಂ || ೨ ||

ಕೃಷ್ಣಾಜಿನಂ ಚತುರ್ಹಸ್ತಂ ಪ್ರಾಗಗ್ರಂ ವಿನ್ಯಸೇದ್ಭುವಿ ।
ಗೋಮಯೇನಾನುಲಿಪ್ತಾಯಾಂ ದರ್ಭಾನಾಸ್ತೀರ್ಯ ಸರ್ವತಃ || ೩ ||

ಲಘ್ವೇಣಕಾಜಿನಂ ತದ್ವದ್ವತ್ಸಂ ಚ ಪರಿಕಲ್ಪಯೇತ್ ।
ಪ್ರಾಙ್ಮುಖೀಂ ಕಲ್ಪಯೇದ್ಧೇನುಮುದಕ್ಪಾದಾಂ ಸವತ್ಸಕಾಂ || ೪ ||

---

೧. ಮನುಚಕ್ರವರ್ತಿ ಹೇಳಿದನು.—ಓ ಜಗದೀಶ್ವರಾ, ಬೆಲ್ಲದ ಹಸುವನ್ನು ದಾನಮಾಡುವ ವಿಧಾನವನ್ನು ಹೇಳು. ಅದರ ರೂಪು ಯಾವುದು? ಅದನ್ನು ಯಾವ ಮಂತ್ರದಿಂದ ದಾನಮಾಡಬೇಕು ತಿಳಿಸು.

೨. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಬೆಲ್ಲದ ಹಸುವನ್ನು ಯಾವ ರೂಪದಿಂದ ಮಾಡಬೇಕು? ಅದರಿಂದ ಬರುವ ಫಲವಾವುದು? ಎಂಬುದನ್ನು ಈಗ ಹೇಳುವೆನು. ಇದು ಸರ್ವಪಾಪಗಳನ್ನೂ ಕಳೆಯುವುದು.

೩. ನೆಲವನ್ನು ಗೋಮಯದಿಂದ ಸಾರಿಸಿ, ದರ್ಭೆಗಳನ್ನು ಎಲ್ಲ ಕಡೆಯಲ್ಲೂ ಹರಡಿ, ನಾಲ್ಕು ಮೊಳ ಉದ್ದದ ಕೃಷ್ಣಾಜಿನವನ್ನು ಅಗ್ರಭಾಗವು ಪೂರ್ವಕ್ಕೆ ಬರುವಂತೆ ನೆಲದ ಮೇಲೆ ಹರಡಬೇಕು.

೪. ಹೀಗೆಯೇ ಮತ್ತೊಂದು ಚಿಕ್ಕ ಕೃಷ್ಣಾಜಿನವನ್ನು ಹಾಸಿ ಅದರಲ್ಲಿ ಕರುವನ್ನು ನಿರ್ಮಿಸಬೇಕು. ಹಸುವಿನ ಮುಖವು ಪೂರ್ವಕ್ಕೂ, ಕಾಲು ಉತ್ತರಕ್ಕೂ ಇರಬೇಕು. ಕರುವಿಗೂ ಹೀಗೆಯೇ.

ಉತ್ತಮಾ ಗುಡಧೇನುಃ ಸ್ಯಾತ್ಸದಾ ಭಾರಚತುಷ್ಟಯಂ ।
ವತ್ಸಂ ಭಾರೇಣ ಕುರ್ವೀತ ದ್ವಾಭ್ಯಾಂ ವೈ ಮಧ್ಯಮಾ ಸ್ಮೃತಾ ॥ ೫ ॥
ಅರ್ಧಭಾರೇಣ ವತ್ಸಃ ಸ್ಯಾತ್ಕನಿಷ್ಠಾ ಭಾರಕೇಣ ತು ।
ಚತುರ್ಥಾಂಶೇನ ವತ್ಸಃ ಸಾದ್ಗೃಹವಿತ್ತಾನುಸಾರತಃ ॥ ೬ ॥
ಧೇನುವತ್ಸೌ ಘೃತಾಸ್ಯೌ ಚ ಸಿತಸೂಕ್ಷ್ಮಾಂಬರಾವೃತೌ ।
ಶುಕ್ತಿಕರ್ಣಾವಿಕ್ಷುಪಾದೌ ಶುಚಿಮುಕ್ತಾಫಲೇಕ್ಷಣೌ ॥ ೭ ॥
ಸಿತಸೂತ್ರಶಿರಾಲೌ ತೌ ಸಿತಕಂಬಲಕಂಬಲೌ ।
ತಾಮ್ರಗಂಡಕಪೃಷ್ಠೌ ತೌ ಸಿತಚಾಮರರೋಮಕೌ ॥ ೮ ॥
ವಿದ್ರುಮಭ್ರೂಯುಗೋಪೇತೌ ನವನೀತಸ್ತನಾವುಭೌ ।
ಕ್ಷೌಮಪುಚ್ಛೌ ಕಾಂಸ್ಯದೋಹಾವಿಂದ್ರನೀಲಕತಾರಕೌ ॥ ೯ ॥

---

೫. ನಾಲ್ಕು ಭಾರಗಳ ತೂಕದ ಬೆಲ್ಲದಿಂದ ಮಾಡಿದ ಹಸುವು ಯಾವಾಗಲೂ ಶ್ರೇಷ್ಠವಾದುದು. ಕರುವನ್ನು ಒಂದು ಭಾರ ತೂಕ ಬೆಲ್ಲದಿಂದ ಮಾಡಬೇಕು. ಎರಡು ಭಾರಗಳಿಂದಾದ ಹಸುವು ಮಧ್ಯಮವೆನಿಸುವುದು.

೬. ಮಧ್ಯಮಪಕ್ಷದ ಕರುವೆಂದರೆ ಅರ್ಧಭಾರ ತೂಕದ್ದು. ಒಂದು ಭಾರದಿಂದ ಹಸುವನ್ನೂ, ಅದರ ಕಾಲುಭಾಗದಿಂದ ಕರುವನ್ನೂ ನಿರ್ಮಿಸಿದರೆ ಅದು ಕನಿಷ್ಠಪಕ್ಷವಾಗುವುದು. ಮುಖ್ಯವಾಗಿ ಇದೆಲ್ಲವನ್ನೂ ಮನೆಯಲ್ಲಿ ದ್ರವ್ಯಾನುಕೂಲತೆಗೆ ತಕ್ಕಂತೆ ಮಾಡಬೇಕು.

೭. ಹಸು ಮತ್ತು ಕರುಗಳಿಗೆ ತುಪ್ಪದ ಮುಖವೂ, ಮುತ್ತಿನ ಚಿಪ್ಪಿನ ಕಿವಿಗಳೂ, ಕಬ್ಬಿನ ಕಾಲುಗಳೂ, ನಿರ್ಮಲವಾದ ಮುತ್ತಿನ ಕಣ್ಣುಗಳೂ ಇರಬೇಕು. ಅವುಗಳಿಗೆ ಶುಭ್ರವಾದ ತೆಳು ಬಟ್ಟೆಯನ್ನು ಹೊದಿಸಿರಬೇಕು.

೮. ಅವೆರಡಕ್ಕೂ ಬಿಳಿಯ ದಾರದ ನರವೂ ಬಿಳಿಯ ಕಂಬಳಿಯ ಗಂಗೆದೊಗಲೂ ಇರಬೇಕು. ಕೆನ್ನೆಯೂ ಬೆನ್ನೂ ತಾಮ್ರದಿಂದಲೂ, ಕೂದಲು ಬಿಳಿಯ ಚಾಮರದಿಂದಲೂ ಆಗಿರುವುವು.

೯. ಹುಬ್ಬುಗಳೆರಡೂ ಹವಳದಿಂದಲೂ, ಸ್ತನಗಳು ಬೆಣ್ಣೆಯಿಂದಲೂ, ಬಾಲವು ರೇಷ್ಮೆಯಿಂದಲೂ, ಕಡೆಗಣ್ಣು ಇಂದ್ರ ನೀಲರತ್ನದಿಂದಲೂ, ನಿರ್ಮಿತವಾಗಬೇಕು. ಕರೆಯುವ ಪಾತ್ರೆಯು ಕಂಚಿನದಾಗಿರಬೇಕು.

ಸುವರ್ಣಶೃಂಗಾಭರಣೌ ರಾಜತ್ಯೈಃ ಖುರಸಂಯುತೌ।
ನಾನಾಫಲಸಮಾಯುಕ್ತೌ ಘ್ರಾಣಗಂಧಕರಂಡಕೌ।
ಇತ್ಯೇವಂ ರಚಯಿತ್ವಾ ತೌ ಧೂಪದೀಪೈರಥಾರ್ಚಯೇತ್ ॥೧೦॥

ಯಾ ಲಕ್ಷ್ಮೀಃ ಸರ್ವಭೂತಾನಾಂ ಯಾ ಚ ದೇವೇಷ್ವವಸ್ಥಿತಾ।
ಧೇನುರೂಪೇಣ ಸಾ ದೇವೀ ಮಮ ಶಾಂತಿಂ ಪ್ರಯಚ್ಛತು ॥೧೧॥

ದೇಹಸ್ಥಾ ಯಾ ಚ ರುದ್ರಾಣೀ ಶಂಕರಸ್ಯ ಸದಾ ಪ್ರಿಯಾ।
ಧೇನುರೂಪೇಣ ಸಾ ದೇವೀ ಮಮ ಪಾಪಂ ವ್ಯಪೋಹತು ॥೧೨॥

ವಿಷ್ಣೋರ್ವಕ್ಷಸಿ ಯಾ ಲಕ್ಷ್ಮೀಃ ಸ್ವಾಹಾ ಯಾ ಚ ವಿಭಾವಸೋಃ।
ಚಂದ್ರಾರ್ಕಶಕ್ರಶಕ್ತಿರ್ಯಾ ಧೇನುರೂಪಾಽಸ್ತು ಸಾ ಶ್ರಿಯೇ ॥೧೩॥

---

೧೦. ಕೊಂಬುಗಳಿಗೆ ಚಿನ್ನದ ಒಡವೆಗಳನ್ನೂ, ಗೊರಸುಗಳಿಗೆ ಬೆಳ್ಳಿಯ ಆಭರಣಗಳನ್ನೂ ತೊಡಿಸಬೇಕು. ಮೂಗಿನಲ್ಲಿ ಗಂಧದ ಭರಣಿಯನ್ನಿಡಬೇಕು. ಬಗೆಬಗೆಯ ಹಣ್ಣುಗಳನ್ನು ಬೇರೆ ಬೇರೆ ಸ್ಥಳಗಳಲ್ಲಿ ಇರಿಸಿ, ಹಸುವನ್ನೂ ಕರುವನ್ನೂ ಈ ರೀತಿಯಲ್ಲಿ ರಚಿಸಿ ಧೂಪ ದೀಪಗಳಿಂದ ಅರ್ಚಿಸಬೇಕು.

೧೧. "ಯಾರು ಸರ್ವಪ್ರಾಣಿಗಳಿಗೂ ಸಂಪತ್ಸ್ವರೂಪಳೋ, ಯಾರು ದೇವತೆಗಳಲ್ಲಿ ನೆಲೆಸಿರುವಳೋ ಆ ದೇವಿಯು ಹಸುವಿನ ರೂಪದಿಂದ ನನಗೆ ಶಾಂತಿಯನ್ನು ನೀಡಲಿ.

೧೨. ಈಶ್ವರನ ದೇಹದಲ್ಲಿ ನೆಲೆಸಿ ರುದ್ರಾಣಿಯೆಂಬ ಹೆಸರಿನಿಂದ ಆತನಿಗೆ ಸದಾ ಪ್ರಿಯಳಾಗಿರುವ ಆ ದೇವಿಯು ಗೋರೂಪದಿಂದ ಇಲ್ಲಿ ಬಂದು ನನ್ನ ಪಾಪವನ್ನು ಪರಿಹರಿಸಲಿ.

೧೩. ಯಾರು ವಿಷ್ಣುವಿನ ವಕ್ಷಸ್ಥಲದಲ್ಲಿ ಲಕ್ಷ್ಮಿಯೆಂಬ ಹೆಸರಿನಿಂದ ವಾಸಿಸುವಳೋ, ಯಾರು ಸ್ವಾಹಾದೇವಿಯೆಂದು ಖ್ಯಾತಳಾಗಿ ಅಗ್ನಿಯ ಪತ್ನಿಯಾಗಿರುವಳೋ, ಚಂದ್ರಸೂರ್ಯೇಂದ್ರರ ಶಕ್ತಿಮಯಳಾದ ಈ ದೇವಿಯು ಧೇನುರೂಪದಿಂದ ಸಂಪತ್ತನ್ನು ಕರುಣಿಸಲಿ.

**ಚತುರ್ಮುಖಸ್ಯ ಯಾ ಲಕ್ಷ್ಮೀರ್ಯಾ ಲಕ್ಷ್ಮೀರ್ಧನದಸ್ಯ ಚ ।**
**ಲಕ್ಷ್ಮೀರ್ಯಾ ಲೋಕಪಾಲಾನಾಂ ಸಾ ಧೇನುರ್ವರದಾಸ್ತು ಮೇ ॥೧೪॥**

**ಸ್ವಧಾ ಯಾ ಪಿತೃಮುಖ್ಯಾನಾಂ ಸ್ವಾಹಾ ಯಜ್ಞಭುಜಾಂ ಚ ಯಾ ।**
**ಸರ್ವಪಾಪಹರಾ ಧೇನುಸ್ತಸ್ಮಾಚ್ಛಾಂತಿಂ ಪ್ರಯಚ್ಛ ಮೇ ॥೧೫॥**

**ಏವಮಾಮಂತ್ರ್ಯ ತಾಂ ಧೇನುಂ ಬ್ರಾಹ್ಮಣಾಯ ನಿವೇದಯೇತ್ ।**
**ವಿಧಾನಮೇತದ್ಧೇನೂನಾಂ ಸರ್ವಾಸಾಮಭಿಪಠ್ಯತೇ ॥೧೬॥**

**ಯಾಸ್ತಾಃ ಪಾಪವಿನಾಶಿನ್ಯಃ ಪಠ್ಯಂತೇ ದಶ ಧೇನವಃ ।**
**ತಾಸಾಂ ಸ್ವರೂಪಂ ವಕ್ಷ್ಯಾಮಿ ನಾಮಾನಿ ಚ ನರಾಧಿಪ ॥೧೭॥**

**ಪ್ರಥಮಾ ಗುಡಧೇನುಃ ಸ್ಯಾದ್ಘೃತಧೇನುಸ್ತಥಾ ಪರಾ ।**
**ತಿಲಧೇನುಸ್ತೃತೀಯಾ ತು ಚತುರ್ಥೀ ಜಲಸಂಜ್ಞಿತಾ ॥೧೮॥**

---

೧೪ ಯಾರು ಬ್ರಹ್ಮನ ಲಕ್ಷ್ಮಿಯೋ, ಯಾರು ಕುಬೇರನ ಲಕ್ಷ್ಮಿಯೋ, ಯಾರು ಲೋಕಪಾಲಕರ ಲಕ್ಷ್ಮಿಯೋ ಆ ಗೋದೇವಿಯು ನನಗೆ ವರವನ್ನು ಕೊಡತಕ್ಕವಳಾಗಲಿ.

೧೫. ಅಗ್ನಿಷ್ವಾತ್ತಾದಿ ಪಿತೃಗಳಿಗೆ ಸ್ವಧಾರೂಪಳೂ, ದೇವತೆಗಳಿಗೆ ಸ್ವಾಹಾ ರೂಪಳೂ ಆಗಿ ಸರ್ವಪಾಪಗಳನ್ನೂ ಕಳೆಯತಕ್ಕ ಗೋರೂಪಳಾದ ಓ ಲಕ್ಷ್ಮೀ, ನನಗೆ ಶಾಂತಿಯನ್ನು ಕೊಡು.''

೧೬. ಹೀಗೆ ಪ್ರಾರ್ಥಿಸಿ ಆ ಹಸುವನ್ನು ಬ್ರಾಹ್ಮಣನಿಗೆ ದಾನಮಾಡಬೇಕು. ಎಲ್ಲ ಹಸುಗಳ ದಾನವಿಧಿಯೂ ಇದೇ ರೀತಿಯೆಂದು ಪ್ರಾಜ್ಞರು ಹೇಳುತ್ತಾರೆ.

೧೭. ಓ ರಾಜಾ, ಪಾಪಹಾರಕಗಳೆಂದು ಪ್ರಸಿದ್ಧವಾದುವು ಹತ್ತು ಬಗೆಯ ಹಸುಗಳು. ಅವುಗಳ ಸ್ವರೂಪವನ್ನೂ ಹೆಸರುಗಳನ್ನೂ ಹೇಳುವೆನು.

೧೮. ಮೊದಲನೆಯದಕ್ಕೆ ಗುಡಧೇನುವೆಂದೂ, ಎರಡನೆಯದಕ್ಕೆ ಘೃತ ಧೇನುವೆಂದೂ ಹೆಸರು. ಮೂರನೆಯುದನ್ನು ತಿಲಧೇನುವೆಂದೂ, ನಾಲ್ಕನೆಯದನ್ನು ಜಲಧೇನುವೆಂದೂ ಕರೆಯುತ್ತಾರೆ.

ಕ್ಷೀರಧೇನುಶ್ಚ ವಿಖ್ಯಾತಾ ಮಧುಧೇನುಸ್ತಥಾ ಪರಾ ।
ಸಪ್ತಮೀ ಶರ್ಕರಾಧೇನುರ್ದಧಿಧೇನುಸ್ತಥಾಷ್ಟಮೀ ।
ರಸಧೇನುಶ್ಚ ನವಮೀ ದಶಮೀ ಸ್ಯಾತ್ಸ್ವರೂಪತಃ ॥೧೯॥

ಕುಂಭಾಃ ಸ್ಯುರ್ದ್ರವಧೇನೂನಾಮಿತರಾಸಾಂ ತು ರಾಶಯಃ ।
ಸುವರ್ಣಧೇನುಮಪ್ಯತ್ರ ಕೇಚಿದಿಚ್ಛಂತಿ ಮಾನವಾಃ ॥೨೦॥

ನವನೀತೇನ ರತ್ನೈಶ್ಚ ತಥಾನ್ಯೇ ತು ಮಹರ್ಷಯಃ ।
ಏತದೇವಂ ವಿಧಾನಂ ಸ್ಯಾತ್ತ ಏವೋಪಸ್ಕರಾಃ ಸ್ಮೃತಾಃ ॥೨೧॥

ಮಂತ್ರಾವಾಹನಸಂಯುಕ್ತಾಃ ಸದಾ ಪರ್ವಣಿ ಪರ್ವಣಿ ।
ಯಥಾಶ್ರದ್ಧಂ ಪ್ರದಾತವ್ಯಾ ಭುಕ್ತಿಮುಕ್ತಿಫಲಪ್ರದಾಃ ॥೨೨॥

---

೧೯. ಕ್ಷೀರಧೇನು ಮಧುಧೇನು ಎಂಬುವು ಮುಂದಿನವು. ಏಳನೆಯದು ಶರ್ಕರಾಧೇನು. ಎಂಟನೆಯದನ್ನು ದಧಿಧೇನುವೆಂದೂ, ಒಂಬತ್ತನೆಯದನ್ನು ರಸಧೇನುವೆಂದೂ ಹೇಳುತ್ತಾರೆ. ಹತ್ತನೆಯದೇ ಸ್ವರೂಪಧೇನು ಎಂದರೆ ನಿಜವಾದ ಹಸು.

೨೦. ಜಲ, ಕ್ಷೀರ, ಮಧು ಮೊದಲಾದ ದ್ರವಗಳಿಂದ ರಚಿತವಾಗುವ ಹಸುಗಳಿಗೆ ಆ ದ್ರವಗಳ ಕುಂಭಗಳು ಬೇಕು. ಮಿಕ್ಕವುಗಳಿಗಾದರೋ ಆಯಾ ಪದಾರ್ಥಗಳ ರಾಶಿಗಳು ಆವಶ್ಯಕ. ಸುವರ್ಣಧೇನುವೂ ಉಂಟೆಂದು ಕೆಲವರು ಅಭಿಪ್ರಾಯಪಡುತ್ತಾರೆ.

೨೧. ಇನ್ನೂ ಕೆಲವು ಮಹರ್ಷಿಗಳು ಬೆಣ್ಣೆಯಿಂದಲೂ, ರತ್ನಗಳಿಂದಲೂ, ಗೋಪ್ರತಿಮೆಯನ್ನು ಮಾಡಬಹುದೆನ್ನುವರು. ಇದೇ ಗುಡಧೇನ್ವಾದಿಗಳನ್ನು ರಚಿಸುವ ವಿಧಾನ. ಮೇಲೆ ಹೇಳಿದ ದ್ರವ್ಯಗಳೇ ಗೋಭೇದಗಳನ್ನು ನಿರ್ಮಿಸಲು ಬೇಕಾದ ಸಾಮಗ್ರಿಗಳು.

೨೨. ಪ್ರತಿಯೊಂದು ಪರ್ವಕಾಲದಲ್ಲಿಯೂ ಶ್ರದ್ಧಾನುಗುಣವಾಗಿ ಮೇಲೆ ಹೇಳಿದ ಗೋವುಗಳಲ್ಲಿ ಇಷ್ಟಬಂದುದನ್ನು ಮಂತ್ರಾವಾಹನ ಸಹಿತವಾಗಿ ದಾನಮಾಡಬೇಕು. ಇದರಿಂದ ಸ್ವರ್ಗಾದಿಭೋಗವೂ ಮೋಕ್ಷವೂ ಲಭಿಸುವುವು.

**ಗುಡಧೇನುಪ್ರಸಂಗೇನ ಸರ್ವಾಸ್ತಾವನ್ಮಯೋದಿತಾಃ ।**
**ಅಶೇಷಯಜ್ಞಫಲದಾಃ ಸರ್ವಾಃ ಪಾಪಹರಾಃ ಶುಭಾಃ ॥೨೩॥**

**ವ್ರತಾನಾಮುತ್ತಮಂ ಯಸ್ಮಾದ್ವಿಶೋಕದ್ವಾದಶೀವ್ರತಂ ।**
**ತದಂಗತ್ವೇನ ಚೈವಾತ್ರ ಗುಡಧೇನುಃ ಪ್ರಶಸ್ಯತೇ ॥೨೪॥**

**ಅಯನೇ ವಿಷುವೇ ಪುಣ್ಯೇ ವ್ಯತೀಪಾತೇಽಥವಾ ಪುನಃ ।**
**ಗುಡಧೇನ್ವಾದಯೋ ದೇಯಾಸ್ತೂಪರಾಗಾದಿಪರ್ವಸು ॥೨೫॥**

**ವಿಶೋಕದ್ವಾದಶೀ ಚೈಷಾ ಪುಣ್ಯಾ ಪಾಪಹರಾ ಶುಭಾ ।**
**ಯಾಮುಪೋಷ್ಯ ನರೋ ಯಾತಿ ತದ್ವಿಷ್ಣೋಃ ಪರಮಂ ಪದಂ ॥೨೬॥**

**ಇಹಲೋಕೇ ಚ ಸೌಭಾಗ್ಯಮಾಯುರಾರೋಗ್ಯಮೇವ ಚ ।**
**ವೈಷ್ಣವಂ ಪುರಮಾಪ್ನೋತಿ ಮರಣೇ ಚ ಸ್ಮರನ್ಹರಿಂ ॥೨೭॥**

---

೨೩. ಗುಡಧೇನು ಪ್ರಸಂಗದಿಂದ ಎಲ್ಲ ಬಗೆಯ ಧೇನುಗಳ ವಿಚಾರವನ್ನೂ ಹೇಳಿದೆನು. ಅವೆಲ್ಲವೂ ಸಕಲ ಯಜ್ಞಗಳ ಫಲವನ್ನು ಕೊಡತಕ್ಕವು, ಪಾಪಹಾರಕಗಳು, ಶುಭಕರವಾದುವು.

೨೪. ವಿಶೋಕದ್ವಾದಶೀ ವ್ರತವು ಮಿಕ್ಕೆಲ್ಲ ವ್ರತಗಳಿಗಿಂತಲೂ ಶ್ರೇಷ್ಠವಾದುದು. ಅದರ ಅಂಗವಾದುದರಿಂದಲೇ ಗುಡಧೇನುವಿಗೂ ಸಹ ಪ್ರಾಶಸ್ತ್ಯ ಬಂದಿತು.

೨೫. ಉತ್ತರಾಯಣ, ದಕ್ಷಿಣಾಯನ, ಚಿತ್ರವಿಷು, ತುಲಾವಿಷು, ವ್ಯತೀಪಾತ ಮುಂತಾದ ಪುಣ್ಯಕಾಲಗಳಲ್ಲಿಯೂ, ಅಮಾವಾಸ್ಯೆ, ಪೌರ್ಣಮಿ, ಗ್ರಹಣ ಮೊದಲಾದ ಪರ್ವಕಾಲಗಳಲ್ಲಿಯೂ ಗುಡಧೇನು ಮುಂತಾದುವುಗಳನ್ನು ದಾನ ಮಾಡಬೇಕು.

೨೬. ಈ ವಿಶೋಕದ್ವಾದಶೀ ವ್ರತವು ಪುಣ್ಯಕರವೂ, ಪಾಪಹರವೂ ಆದುದು. ಈ ದಿವಸದಲ್ಲಿ ಉಪವಾಸಮಾಡಿದರೆ ವಿಷ್ಣುವಿನ ಅತಿಶ್ರೇಷ್ಠವಾದ ಸಾನ್ನಿಧ್ಯವು ಲಭಿಸುವುದು.

೨೭. ಇದನ್ನು ಆಚರಿಸಿದವನು ಈ ಲೋಕದಲ್ಲಿ ಸೌಭಾಗ್ಯವನ್ನೂ, ಆಯುಸ್ಸನ್ನೂ, ಆರೋಗ್ಯವನ್ನೂ ಪಡೆಯುವನು. ಹರಿಧ್ಯಾನದ ಫಲವಾಗಿ ಮರಣಾನಂತರ ವೈಕುಂಠವನ್ನು ಸೇರುವನು.

ನವಾರ್ಬುದಸಹಸ್ರಾಣಿ ದಶ ಚಾಷ್ಟೌ ಚ ಧರ್ಮವಿತ್ ।
ನ ಶೋಕದುಃಖದೌರ್ಗತ್ಯಂ ತಸ್ಯ ಸಂಜಾಯತೇ ನೃಪ ॥೨೮॥

ನಾರೀ ವಾ ಕುರುತೇ ಯಾ ತು ವಿಶೋಕದ್ವಾದಶೀವ್ರತಂ ।
ನೃತ್ಯಗೀತಪರಾ ನಿತ್ಯಂ ಸಾಪಿ ತತ್ಫಲಮಾಪ್ನುಯಾತ್ ॥೨೯॥

ತಸ್ಮಾದಗ್ರೇ ಹರೇರ್ನಿತ್ಯಮನಂತಂ ಗೀತವಾದನಂ ।
ಕರ್ತವ್ಯಂ ಭೂತಿಕಾಮೇನ ಭಕ್ತ್ಯಾ ತು ಪರಯಾ ನೃಪ ॥೩೦॥

ಇತಿ ಪಠತಿ ಯ ಇತ್ಥಂ ಯಃ ಶೃಣೋತೀಹ ಸಮ್ಯಕ್
ಮಧುಮುರನರಕಾರೇರರ್ಚನಂ ಯಶ್ಚ ಪಶ್ಯೇತ್ ।
ಮತಿಮಪಿ ಚ ಜನಾನಾಂ ಯೋ ದದಾತೀಂದ್ರಲೋಕೇ
ವಸತಿ ಸ ವಿಬುಧೌಘೈಃ ಪೂಜ್ಯತೇ ಕಲ್ಪಮೇಕಂ ॥೩೧॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ವಿಶೋಕದ್ವಾದಶೀವ್ರತಂ ನಾಮ
ದ್ವ್ಯಶೀತಿತಮೋಽಧ್ಯಾಯಃ

---

೨೮. ಓ ರಾಜಾ, ಈ ವ್ರತಧರ್ಮವನ್ನರಿತವನು ಹದಿನೆಂಟು ಸಾವಿರ ಅರ್ಬುದ ವರ್ಷಗಳ ಕಾಲ ಶೋಕ, ದುಃಖ, ಬಡತನ ಇವನ್ನು ಕಾಣನು. ಎಂದರೆ. ಅವನಿಗೆ ಎಂದೆಂದಿಗೂ ಶೋಕದ ಸಂಬಂಧವೇ ಇರುವುದಿಲ್ಲವೆಂದು ಅಭಿಪ್ರಾಯ.

೨೯. ನಿತ್ಯವೂ ನೃತ್ಯಗೀತಪರಾಯಣಳಾಗಿ ವಿಶೋಕದ್ವಾದಶೀ ವ್ರತವನ್ನು ನೆರವೇರಿಸುವ ನಾರೀಮಣಿಯೂ ಸಹ ಮೇಲೆ ಹೇಳಿದ ಫಲವನ್ನು ಪಡೆಯುವಳು.

೩೦. ಓ ಭೂಪಾಲಕಾ, ಆದುದರಿಂದ ಶ್ರೇಯಸ್ಸನ್ನು ಕೋರುವವನು ವಿಷ್ಣುಮೂರ್ತಿಯ ಮುಂದೆ ಭಕ್ತಿಯಿಂದ ಎಡೆಬಿಡದೆ ಗಾನಮಾಡಬೇಕು.

೩೧. ಮಧು, ಮುರ, ನರಕ ಮೊದಲಾದ ದೈತ್ಯರನ್ನು ಸಂಹಾರಮಾಡಿದ ಮಹಾವಿಷ್ಣುವಿನ ಅರ್ಚಾರೂಪವಾದ ಈ ವ್ರತವಿಧಾನವನ್ನು ಪಾರಾಯಣ ಮಾಡಲಿ, ಭಕ್ತಿಯಿಂದ ಕೇಳಲಿ, ಕಣ್ಣಿನಿಂದ ನೋಡಲಿ ಅಥವಾ ಇತರರಿಗೆ ಇದರಲ್ಲಿ ಬುದ್ಧಿ ಹುಟ್ಟುವಂತೆ ಮಾಡಲಿ ಅಂತಹ ಮನುಜನು ಇಂದ್ರಲೋಕದಲ್ಲಿ ದೇವತೆಗಳಿಂದ ಪೂಜಿತನಾಗಿ ಒಂದು ಕಲ್ಪಕಾಲ ಸುಖದಿಂದಿರುವನು.

## ಅಧ್ಯಾಯದ ಸಾರಾಂಶ

ದಾನಕ್ಕೆ ಅರ್ಹವಾದ ಗೋಪ್ರಭೇದಗಳನ್ನೂ, ಅವುಗಳ ದಾನವಿಧಿಯನ್ನೂ ಈ ಅಧ್ಯಾಯವು ತಿಳಿಸುತ್ತದೆ.

ಬೆಲ್ಲ, ತುಪ್ಪ, ಸಕ್ಕರೆ, ಎಳ್ಳು ಮುಂತಾದ ಒಂಬತ್ತು ಬಗೆಯ ದ್ರವ್ಯಗಳಲ್ಲಿ ಗೋಪ್ರತಿಕೃತಿಯನ್ನು ಮಾಡಿ ದಾನಮಾಡಬಹುದು. ಇವಕ್ಕೆ ಕ್ರಮವಾಗಿ ಗುಡ ಧೇನು, ಶರ್ಕರಾಧೇನು ಮುಂತಾದ ಹೆಸರುಗಳುಂಟು. ಇದಲ್ಲದೆ ಬೆಣ್ಣೆ, ಚಿನ್ನ, ರತ್ನ ಮುಂತಾದುವುಗಳಿಂದಲೂ ಮಾಡಬಹುದೆಂದು ಕೆಲವರ ಮತವಿದೆ. ಪ್ರತ್ಯಕ್ಷ ಗೋದಾನವಂತೂ ಎಲ್ಲರಿಗೂ ತಿಳಿದೇ ಇದೆ. ಅತ್ಯುತ್ತಮವಾದ ವಿಶೋಕದ್ವಾದಶೀ ವ್ರತದ ಅಂಗವಾದುದರಿಂದ ಗುಡಧೇನುವಿಗೆ ಪ್ರಾಶಸ್ತ್ಯವು ಬಂದಿದೆ. ಮೇಲೆ ಹೇಳಿದ ಯಾವ ಬಗೆಯ ಗೋದಾನಮಾಡಿದರೂ ಅನಂತ ಪುಣ್ಯವು ಲಭಿಸುವುದು. ವಿಶೋಕದ್ವಾದಶೀವ್ರತದಿಂದ ವಿಷ್ಣುವು ಮೆಚ್ಚುವನು. ತನ್ನ ಸಾನ್ನಿಧ್ಯವನ್ನು ಕರುಣಿಸುವನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ವಿಶೋಕದ್ವಾದಶೀ ವ್ರತವೆಂಬ
ಎಂಬತ್ತೆರಡನೆಯ ಅಧ್ಯಾಯವು ಮುಗಿದುದು.



# ಅಥ ತ್ರ್ಯಶೀತಿತಮೋऽಧ್ಯಾಯಃ

॥ ನಾರದ ಉವಾಚ ॥

ಭಗವಞ್ಶ್ರೋತುಮಿಚ್ಛಾಮಿ ದಾನಮಾಹಾತ್ಮ್ಯಮುತ್ತಮಂ ।
ಯದಕ್ಷಯಂ ಪರೇ ಲೋಕೇ ದೇವರ್ಷಿಗಣಪೂಜಿತಂ ॥ ೧ ॥

॥ ಉಮಾಪತಿರುವಾಚ ॥

ಮೇರೋಃ ಪ್ರದಾನಂ ವಕ್ಷ್ಯಾಮಿ ದಶಧಾ ಮುನಿಪುಂಗವ ।
ಯತ್ಪ್ರದಾನಾನ್ನರೋ ಲೋಕಾನಾಪ್ನೋತಿ ಸುರಪೂಜಿತಾನ್ ॥ ೨ ॥
ಪುರಾಣೇಷು ಚ ವೇದೇಷು ಯಜ್ಞೇಷ್ವಾಯತನೇಷು ಚ ।
ನ ತತ್ಫಲಮಧೀತೇಷು ಕೃತೇಷ್ವಿಹ ಯದಶ್ನುತೇ ॥ ೩ ॥
ತಸ್ಮಾದ್ವಿಧಾನಂ ವಕ್ಷ್ಯಾಮಿ ಪರ್ವತಾನಾಮನುಕ್ರಮಾತ್ ।
ಪ್ರಥಮೋ ಧಾನ್ಯಶೈಲಃ ಸ್ಯಾದ್ದ್ವಿತೀಯೋ ಲವಣಾಚಲಃ ॥ ೪ ॥

---

೧. ನಾರದನು ಹೇಳಿದನು.—ಭಗವಂತಾ, ಪರಲೋಕದಲ್ಲಿ ಅಕ್ಷಯವೆನಿಸಿ ದೇವತೆಗಳಿಂದಲೂ, ಋಷಿಗಳಿಂದಲೂ ಮನ್ನಣೆಯನ್ನು ಪಡೆಯುವ ದಾನದ ವಿಪುಲ ಮಾಹಾತ್ಮ್ಯವನ್ನು ಕೇಳಲಿಚ್ಛಿಸುತ್ತೇನೆ.

೨. ಪರಮೇಶ್ವರನು ಹೇಳಿದನು.—ಓ ಮುನಿವರ್ಯಾ, ಚಿನ್ನಬೆಳ್ಳಿಗಳಿಂದ ಮೇರುಪರ್ವತದ ಆಕೃತಿಯನ್ನು ರಚಿಸಿ ದಾನಮಾಡುವ ವಿಧಾನವನ್ನೂ, ಧಾನ್ಯ ಶೈಲ, ಗುಡಶೈಲ ಮೊದಲಾದ ಹತ್ತು ಬಗೆಯ ಪರ್ವತಗಳ ದಾನ ವಿಧಿಯನ್ನೂ ಹೇಳುವೆನು. ಈ ದಾನಗಳಿಂದ ಮಾನವನು ದೇವಪೂಜಿತಗಳಾದ ವಿವಿಧ ಲೋಕಗಳನ್ನು ಸೇರುವನು.

೩. ಪುರಾಣಗಳನ್ನೂ, ವೇದಗಳನ್ನೂ ಪಾರಾಯಣಮಾಡಲಿ; ದೇವತಾ ಮಂದಿರಗಳನ್ನು ಕಟ್ಟಿಸಲಿ; ಈ ದಾನಗಳಿಂದ ಬರುವಷ್ಟು ಪುಣ್ಯವು ಲಭಿಸಲಾರದು.

೪. ಆದುದರಿಂದ ದಾನವಾಗಿ ಕೊಡುವ ಪದಾರ್ಥಗಳನ್ನು ಪರ್ವತಾಕೃತಿ ಯಲ್ಲಿ ರಚಿಸುವ ವಿಧಾನವನ್ನು ಕ್ರಮವಾಗಿ ಹೇಳುವೆನು. ಮೊದಲನೆಯದು ಧಾನ್ಯ ಶೈಲ; ಎರಡನೆಯದು ಲವಣಾಚಲ ಎಂದರೆ ಉಪ್ಪಿನ ಬೆಟ್ಟ.

ಗುಡಾಚಲಸ್ತೃತೀಯಸ್ತು ಚತುರ್ಥೋ ಹೇಮಪರ್ವತಃ ।
ಪಂಚಮಸ್ತಿಲಶೈಲಃ ಸ್ಯಾತ್ ಷಷ್ಠಃ ಕಾರ್ಪಾಸಪರ್ವತಃ ॥ ೫ ॥

ಸಪ್ತಮೋ ಘೃತಶೈಲಶ್ಚ ರತ್ನಶೈಲಸ್ತಥಾಷ್ಟಮಃ ।
ರಾಜತೋ ನವಮಸ್ತದ್ವದ್ದಶಮಃ ಶರ್ಕರಾಚಲಃ ॥ ೬ ॥

ವಕ್ಷ್ಯೇ ವಿಧಾನಮೇತೇಷಾಂ ಯಥಾವದನುಪೂರ್ವಶಃ ।
ಅಯನೇ ವಿಷುವೇ ಪುಣ್ಯೇ ವ್ಯತೀಪಾತೇ ದಿನಕ್ಷಯೇ ॥ ೭ ॥

ಶುಕ್ಲಪಕ್ಷೇ ತೃತೀಯಾಯಾಮುಪರಾಗೇ ಶಶಿಕ್ಷಯೇ ।
ವಿವಾಹೋತ್ಸವಯಜ್ಞೇಷು ದ್ವಾದಶ್ಯಾಮಥವಾ ಪುನಃ ॥ ೮ ॥

ಶುಕ್ಲಾಯಾಂ ಪಂಚದಶ್ಯಾಂ ವಾ ಪುಣ್ಯರ್ಕ್ಷೇ ವಾ ವಿಧಾನತಃ ।
ಧಾನ್ಯಶೈಲಾದಯೋ ದೇಯಾ ಯಥಾಶಾಸ್ತ್ರಂ ವಿಧಾನತಃ ॥ ೯ ॥

---

೫. ಬೆಲ್ಲದ ಬೆಟ್ಟವು ಮೂರನೆಯದು ; ನಾಲ್ಕನೆಯದು ಸುವರ್ಣಪರ್ವತ ; ಎಳ್ಳಿನ ಬೆಟ್ಟವು ಐದನೆಯದು ; ಆರನೆಯದು ಹತ್ತಿಯ ಪರ್ವತ.

೬. ಏಳನೆಯದು ಘೃತಶೈಲ ; ಎಂಟನೆಯದು ರತ್ನಶೈಲ ; ಬೆಳ್ಳಿಯದು ಒಂಬತ್ತನೆಯದು ; ಸಕ್ಕರೆಯ ಬೆಟ್ಟವು ಹತ್ತನೆಯದು.

೭-೯. ಇವುಗಳ ರಚನಾವಿಧಾನವನ್ನು ಕ್ರಮವಾಗಿ ಹೇಳುವೆನು ಕೇಳು. ಉತ್ತರಾಯಣ, ದಕ್ಷಿಣಾಯನ, ತುಲಾವಿಷು, ಚಿತ್ರವಿಷು, ವ್ಯತೀಪಾತ, ದಿನಕ್ಷಯ, ಶುಕ್ಲಪಕ್ಷದ ತೃತೀಯೆ, ಗ್ರಹಣ, ಅಮಾವಾಸ್ಯೆ, ವಿವಾಹಾದಿ ಸಂತೋಷ ಸಮಯಗಳು, ಯಜ್ಞ, ದ್ವಾದಶಿ, ಹುಣ್ಣಿಮೆ, ಪುಣ್ಯನಕ್ಷತ್ರ ಇವೇ ಮೊದಲಾದ ಸಮಯಗಳಲ್ಲಿ ಧಾನ್ಯಶೈಲ, ಗುಡಶೈಲ ಮೊದಲಾದುವುಗಳನ್ನು ಶಾಸ್ತ್ರೋಕ್ತವಿಧಿಯಿಂದ ದಾನಮಾಡಬೇಕು.

ತೀರ್ಥೇಷ್ವಾಯತನೇ ವಾಪಿ ಗೋಷ್ಠೇ ವಾ ಭವನಾಂಗಣೇ ।
ಮಂಡಪಂ ಕಾರಯೇದ್ಭಕ್ತ್ಯಾ ಚತುರಸ್ರಮುದಙ್ಮುಖಂ ।
ಪ್ರಾಗುದಕ್ಪ್ರವಣಂ ತದ್ವತ್ಪ್ರಾಙ್ಮುಖಂ ಚ ವಿಧಾನತಃ ॥೧೦॥

ಗೋಮಯೇನಾನುಲಿಪ್ತಾಯಾಂ ಭೂಮಾವಾಸ್ತೀರ್ಯ ವೈ ಕುಶಾ ।
ತನ್ಮಧ್ಯೇ ಪರ್ವತಂ ಕುರ್ಯಾದ್ವಿಷ್ಕಂಭಪರ್ವತಾನ್ವಿತಂ ॥೧೧॥

ಧಾನ್ಯದ್ರೋಣಸಹಸ್ರೇಣ ಭವೇದ್ಗಿರಿರಿಹೋತ್ತಮಃ ।
ಮಧ್ಯಮಃ ಪಂಚಶತಿಕಃ ಕನಿಷ್ಠಃ ಸ್ಯಾತ್ತ್ರಿಭಿಃ ಶತೈಃ ॥೧೨॥

ಮೇರುರ್ಮಹಾವ್ರೀಹಿಮಯಸ್ತು ಮಧ್ಯೇ
ಸುವರ್ಣವೃಕ್ಷತ್ರಯಸಂಯುತಃ ಸ್ಯಾತ್ ।
ಪೂರ್ವೇಣ ಮುಕ್ತಾಫಲವಜ್ರಯುಕ್ತೋ
ಯಾಮ್ಯೇನ ಗೋಮೇದಕಪುಷ್ಪರಾಗೈಃ ॥೧೩॥

---

೧೦. ಪುಣ್ಯತೀರ್ಥಗಳಲ್ಲಿ, ದೇವಾಲಯಗಳಲ್ಲಿ, ಕೊಟ್ಟಿಗೆಯಲ್ಲಿ ಇಲ್ಲವೇ ಮನೆಯ ಅಂಗಳದಲ್ಲಿ ಭಕ್ತಿಯೊಡನೆ ಚೌಕವಾದ ಮಂಟಪವನ್ನು ಉತ್ತರಾಭಿಮುಖವಾಗಿ ರಚಿಸಬೇಕು. ನೆಲವು ಪೂರ್ವಕ್ಕೋ, ಉತ್ತರಕ್ಕೋ ಇಳಿಜಾರಾಗಿರಬೇಕು. ಮಂಟಪವು ಪೂರ್ವಾಭಿಮುಖವಾದರೂ ಆಗಬಹುದು.

೧೧. ನೆಲವನ್ನು ಗೋಮಯದಿಂದ ಸಾರಿಸಿ, ದರ್ಭಗಳನ್ನು ಹರಡಿ ಮಧ್ಯದಲ್ಲಿ ಪರ್ವತವನ್ನು ರಚಿಸಬೇಕು. ಅದರ ಮಗ್ಗುಲಲ್ಲಿ ಸುತ್ತಲೂ ವಿಷ್ಕಂಭ ಪರ್ವತಗಳನ್ನು ನಿರ್ಮಿಸಬೇಕು.

೧೨. ಸಾವಿರ ಕೊಳಗ ಧಾನ್ಯದಿಂದ ಉತ್ತಮಪರ್ವತವೂ, ಐನೂರರಿಂದ ಮಧ್ಯಮಪರ್ವತವೂ, ಮುನ್ನೂರರಿಂದ ಕನಿಷ್ಠಪರ್ವತವೂ ಆಗುವುವು.

೧೩. ಬತ್ತದಿಂದ ಮೇರುಪರ್ವತವನ್ನು ಮಧ್ಯದಲ್ಲಿ ರಚಿಸಿ ಅದರ ಶಿಖರದಲ್ಲಿ ಮೂರು ಚಿನ್ನದ ಮರಗಳನ್ನು ನೆಡಬೇಕು. ಅದರ ಪೂರ್ವಭಾಗದಲ್ಲಿ ಮುತ್ತು ವಜ್ರಗಳನ್ನೂ, ದಕ್ಷಿಣದಲ್ಲಿ ಗೋಮೇದಕ ಪುಷ್ಪರಾಗಗಳನ್ನೂ ಕೆತ್ತಬೇಕು.

ಪಶ್ಚಾಚ್ಚ ಗಾರುತ್ಮತನೀಲರತ್ನೈಃ
ಸೌಮ್ಯೇನ ವೈದೂರ್ಯಸರೋಜರಾಗೈಃ ।
ಶ್ರೀಖಂಡಖಂಡ್ಯೈರಭಿತಃ ಪ್ರವಾಲೈ
ರ್ಲತಾನ್ವಿತಃ ಶುಕ್ತಿಶಿಲಾತಲಃ ಸ್ಯಾತ್ ॥೧೪॥

ಬ್ರಹ್ಮಾಥ ವಿಷ್ಣುರ್ಭಗವಾನ್ಪುರಾರಿ
ರ್ದಿವಾಕರೋಽಪ್ಯತ್ರ ಹಿರಣ್ಮಯಃ ಸ್ಯಾತ್ ।
ಮೂರ್ಧನ್ಯವಸ್ಥಾನಮಮತ್ಸರೇಣ
ಕಾರ್ಯಸ್ತ್ವನೇಕೈಶ್ಚ ಪುನರ್ದ್ವಿಜೌಘೈಃ ॥೧೫॥

ಚತ್ವಾರಿ ಶೃಂಗಾಣಿ ಚ ರಾಜತಾನಿ
ನಿತಂಬಭಾಗೇಷ್ವಪಿ ರಾಜತಃ ಸ್ಯಾತ್ ।
ತಥೇಕ್ಷುವಂಶಾವೃತಕಂದರಸ್ತು
ಘೃತೋದಕಪ್ರಸ್ರವಣೈಶ್ಚ ದಿಕ್ಷು ॥೧೬॥

---

೧೪. ಅದು ಪಶ್ಚಿಮದಿಕ್ಕಿನಲ್ಲಿ ಗರುಡನೀಲ ರತ್ನಗಳಿಂದಲೂ, ಉತ್ತರದಲ್ಲಿ ವೈಡೂರ್ಯ ಕಮಲಗಳಿಂದಲೂ ಕೂಡಿರಬೇಕು. ಸುತ್ತಲೂ ಶ್ರೀಗಂಧದ ಖಂಡಗಳೂ, ಹವಳಗಳೂ, ಬಳ್ಳಿಗಳೂ ಅದನ್ನು ಅಲಂಕರಿಸುವುವು. ಮುತ್ತಿನ ಚಿಪ್ಪುಗಳೇ ಆ ಪರ್ವತಗಳ ಬಂಡೆಗಳೆನಿಸುವುವು.

೧೫. ಬ್ರಹ್ಮ, ಪೂಜ್ಯನಾದ ವಿಷ್ಣು, ಈಶ್ವರ, ಸೂರ್ಯ ಇವರೆಲ್ಲರ ಪ್ರತಿಮೆಗಳನ್ನು ಚಿನ್ನದಿಂದ ಮಾಡಿಸಬೇಕು. ಬಗೆಬಗೆಯ ಚಿನ್ನದ ಹಕ್ಕಿಗಳು ಶಿಖರಾಗ್ರದಲ್ಲಿ ವಿರಾಜಿಸಬೇಕು. ದ್ರವ್ಯವು ವ್ಯಯವಾಗುವುದೆಂಬ ಕಳಂಕವನ್ನು ಮನಸ್ಸಿನಲ್ಲಿಡಬಾರದು.

೧೬. ಬೆಳ್ಳಿಯ ನಾಲ್ಕು ಶಿಖರಗಳು ಕಂಗೊಳಿಸುವುವು. ತಪ್ಪಲು ಭಾಗವು ಬೆಳ್ಳಿಯ ತಗಡಿನಿಂದ ಶೋಭಿಸುವುದು. ಕಬ್ಬೇ ಅಲ್ಲಿನ ಗುಹೆಯ ಬಳಿ ಬೆಳೆದು ಮುಚ್ಚಿಕೊಂಡಿರುವ ಬಿದಿರುಮೆಳೆ. ತುಪ್ಪದ ಪ್ರವಾಹವೇ ಸುತ್ತಲೂ ಹರಿಯುವ ಗಿರಿಝರಿಗಳು.

ಶುಕ್ಲಾಂಬರಾಣ್ಯಂಬುಧರಾವಲೀ ಸ್ಯಾತ್
ಪೂರ್ವೇಣ ಪೀತಾನಿ ಚ ದಕ್ಷಿಣೇನ ।
ವಾಸಾಂಸಿ ಪಶ್ಚಾದಥ ಕರ್ಬುರಾಣಿ
ರಕ್ತಾನಿ ಚೈವೋತ್ತರತೋ ಘನಾಲೀ ॥೧೭॥

ರೌಪ್ಯಾನ್ಮಹೇಂದ್ರಪ್ರಮುಖಾಂಸ್ತಥಾಷ್ಟೌ
ಸಂಸ್ಥಾಪ್ಯ ಲೋಕಾಧಿಪತೀನ್ಕ್ರಮೇಣ ।
ನಾನಾಫಲಾಲೀ ಚ ಸಮಂತತಃ ಸ್ಯಾ
ನ್ಮನೋರಮಂ ಮಾಲ್ಯವಿಲೇಪನಂ ಚ ॥೧೮॥

ವಿತಾನಕಂ ಚೋಪರಿ ಪಂಚವರ್ಣ
ಮಮ್ಲಾನಪುಷ್ಪಾಭರಣಂ ಸಿತಂ ಚ ।
ಇತ್ಥಂ ನಿವೇಶ್ಯಾಽಮರಶೈಲಮಗ್ರ್ಯಂ
ಮೇರೋಸ್ತು ವಿಷ್ಕಂಭಗಿರೀನ್ಕ್ರಮೇಣ ॥೧೯॥

---

೧೭. ವಸ್ತ್ರಗಳೇ ಈ ಮೇರುಪರ್ವತದ ಮೇಘಮಾಲೆಗಳು. ಪೂರ್ವಕ್ಕೆ ಬಿಳಿಯ ಬಟ್ಟೆಗಳನ್ನೂ, ದಕ್ಷಿಣಕ್ಕೆ ಕೆಂಪು ಬಣ್ಣದವನ್ನೂ ಹೊದಿಸಬೇಕು. ಇವೇ ಆಯಾ ಬಣ್ಣದ ಮೋಡಗಳೆಂದರಿಯಬೇಕು.

೧೮. ದೇವೆಂದ್ರನೇ ಮೊದಲಾದ ಎಂಟು ಜನ ಲೋಕಪಾಲಕರ ಬೆಳ್ಳಿಯ ಪ್ರತಿಮೆಗಳನ್ನು ಪೂರ್ವಾದಿ ದಿಕ್ಕುಗಳಲ್ಲಿ ಕ್ರಮವಾಗಿರಿಸಬೇಕು. ಸುತ್ತಲೂ ಬಗೆ ಬಗೆಯ ಹಣ್ಣುಗಳೂ, ಸುಂದರವಾದ ಗಂಧಪುಷ್ಪಗಳೂ ಕಂಗೊಳಿಸಬೇಕು.

೧೯. ಮೇಲೆ ಪಂಚವರ್ಣದ ಮೇಲುಗಟ್ಟನ್ನು ಕಟ್ಟಿ, ಬಿಳಿಯ ಗೋರಂಟಿಯ ಹೂವಿನಿಂದ ಸಿಂಗರಿಸಬೇಕು. ಇಲ್ಲಿಗೆ ಶ್ರೇಷ್ಠವಾದ ಮೇರುಪರ್ವತವು ಸಿದ್ಧವಾದಂತಾಯಿತು. ತರುವಾಯ ಅದರ ಉಪಗಿರಿಗಳನ್ನು ಕ್ರಮವರಿತು ರಚಿಸಬೇಕು.

ತುರೀಯಭಾಗೇನ ಚತುರ್ದಿಶಂ ಚ
ಸಂಸ್ಥಾಪಯೇತ್ಪುಷ್ಪವಿಲೇಪನಾಢ್ಯಾನ್ ।
ಪೂರ್ವೇಣ ಮಂದರಮನೇಕಫಲಾವಲೀಭಿ
ರ್ಯುಕ್ತಂ ಯವೈಃ ಕನಕಭದ್ರಕದಂಬಚಿಹ್ನೈಃ ॥೨೦॥

ಕಾಮೇನ ಕಾಂಚನಮಯೇನ ವಿರಾಜಮಾನ
ಮಾಕಾರಯೇತ್ಕುಸುಮವಸ್ತ್ರವಿಲೇಪನಾಢ್ಯಂ ।
ಕ್ಷೀರಾರುಣೋದಸರಸಾಽಥ ವನೇನ ಚೈವಂ
ರೌಪ್ಯೇಣ ಶುಕ್ತಿಘಟಿತೇನ ವಿರಾಜಮಾನಂ ॥೨೧॥

ಯಾಮ್ಯೇನ ಗಂಧಮದನಶ್ಚ ನಿವೇಶನೀಯೋ
ಗೋಧೂಮಸಂಚಯಮಯಃ ಕಲಧೌತಯುಕ್ತಃ ।
ಹೈಮೇನ ಯಜ್ಞಪತಿನಾ ಘೃತಮಾನಸೇನ
ವಸ್ತ್ರೈಶ್ಚ ರಾಜತವನೇನ ಚ ಸಂಯುತಃ ಸ್ಯಾತ್ ॥೨೨॥

---

೨೦. ಆಕಾರದಲ್ಲಿ ಮೇರುಪರ್ವತದ ಕಾಲುಪಾಲಿರುವಂತೆ ನಾಲ್ಕುದಿಕ್ಕಿನಲ್ಲೂ, ಗಂಧಪುಷ್ಪಗಳಿಂದ ಪೂರ್ಣವಾದ ಉಪಗಿರಿಗಳನ್ನು ರಚಿಸಬೇಕು. ಪೂರ್ವಭಾಗದಲ್ಲಿ ಯವಧ್ಯಾನದಿಂದ ನಿರ್ಮಿತವಾದ ಮಂದರಪರ್ವತವು ಅನೇಕ ಫಲಗಳಿಂದಲೂ, ಚಿನ್ನದಿಂದ ಮಾಡಿದ ಕದಂಬವೃಕ್ಷಗಳಿಂದಲೂ ಕಂಗೊಳಿಸುತ್ತಿರಬೇಕು.

೨೧. ಗಂಧಪುಷ್ಪ ವಸ್ತ್ರಗಳಿಂದ ವಿಶೇಷವಾಗಿ ಅಲಂಕೃತವಾದ ಮನ್ಮಥನ ಸುವರ್ಣ ಪ್ರತಿಮೆಯು ಶೋಭಿಸುತ್ತಿರಲು, ವನಗಳು ಹಾಲಿನ ಮತ್ತು ಕೇಸರಿಯ ನೀರಿನ ಸರೋವರದಿಂದ ರಂಜಿಸುತ್ತಿರಲು, ಬೆಳ್ಳಿಯೂ, ಮುತ್ತಿನ ಚಿಪ್ಪೂ ಅಲ್ಲಲ್ಲಿ ಥಳಥಳಿಸುತ್ತಿರುವಂತೆ ಮಂದರ ಪರ್ವತವನ್ನು ನಿರ್ಮಾಣಮಾಡಬೇಕು.

೨೨. ದಕ್ಷಿಣದ ಕಡೆ ಬಂಗಾರದೊಡಗೂಡಿದ ಗೋದುವೆಯ ರಾಶಿಯಲ್ಲಿ ಗಂಧಮಾದನ ಪರ್ವತವನ್ನು ರಚಿಸಬೇಕು. ಯಜ್ಞೇಶ್ವರನಾದ ವಿಷ್ಣುವಿನ ಸುವರ್ಣ ವಿಗ್ರಹ, ತುಪ್ಪದ ಮಾನಸ ಸರೋವರ, ಬಗೆಬಗೆಯ ವಸ್ತ್ರಗಳು, ಬೆಳ್ಳಿಯ ಗಿಡಗಳ ತೋಟ ಇವುಗಳಿಂದ ಇದು ಕಂಗೊಳಿಸುತ್ತಿರುವುದು.

ಪಶ್ಚಾತ್ತಿಲಾಚಲಮನೇಕಸುಗಂಧಿಪುಷ್ಪ
ಸೌವರ್ಣಪಿಪ್ಪಲಹಿರಣ್ಮಯಹಂಸಯುಕ್ತಂ ।
ಆಕಾರಯೇದ್ರಜತಪುಷ್ಪವನೇನ ತದ್ವ
ದ್ವಸ್ತ್ರಾನ್ವಿತಂ ದಧಿಸಿತೋದಸರಸ್ತಥಾಗ್ರೇ ॥೨೩॥

ಸಂಸ್ಥಾಪ್ಯ ತಂ ವಿಪುಲಶೈಲಮಥೋತ್ತರೇಣ
ಶೈಲಂ ಸುಪಾರ್ಶ್ವಮಪಿ ಮಾಷಮಯಂ ಸುವಸ್ತ್ರಂ ।
ಪುಷ್ಪೈಶ್ಚ ಹೇಮವಟಪಾದಪಶೇಖರಂ ತ
ಮಾಕಾರಯೇತ್ಕನಕಧೇನುವಿರಾಜಮಾನಂ ॥೨೪॥

ಮಾಕ್ಷೀಕಭದ್ರಸರಸಾಽಥ ವನೇನ ತದ್ವ
ದ್ರೌಪ್ಯೇಣ ಭಾಸ್ವರವತಾ ಚ ಯುತಂ ನಿಧಾಯ ।
ಹೋಮಶ್ಚತುರ್ಭಿರಥ ವೇದಪುರಾಣವಿದ್ಭಿ
ರ್ದಾಂತೈರನಿಂದ್ಯಚರಿತಾಕೃತಿಭಿರ್ದ್ವಿಜೇಂದ್ರೈಃ ॥೨೫॥

---

೨೩. ಬಗೆಬಗೆಯ ಪರಿಮಳ ಪುಷ್ಪಗಳು, ಚಿನ್ನದ ಅರಳಿಯ ಮರ, ಸುವರ್ಣದ ಹಂಸ, ಇವುಗಳಿಂದ ರಂಜಿಸುವ ಎಳ್ಳಿನ ಪರ್ವತವನ್ನು ಪಶ್ಚಿಮದಿಕ್ಕಿನಲ್ಲಿ ನಿರ್ಮಿಸಬೇಕು. ಅದರ ವನದಲ್ಲಿ ಬೆಳ್ಳಿಯ ಹೂಗಿಡಗಳೂ, ಮೊಸರಿನ ಮತ್ತು ನಿರ್ಮಲೋದಕದ ಸರೋವರಗಳೂ ಪ್ರಕಾಶಿಸುತ್ತಿರಬೇಕು. ಆ ಗಿರಿಗೆ ವಸ್ತ್ರವನ್ನು ಧರಿಸಬೇಕು.

೨೪. ಹೀಗೆ ಆ ಮಹಾಪರ್ವತವನ್ನು ರಚಿಸಿದ ತರುವಾಯ ಉತ್ತರ ದಿಕ್ಕಿನಲ್ಲಿ ಉದ್ದಿನಿಂದ ಸುಪಾರ್ಶ್ವಗಿರಿಯನ್ನು ನಿರ್ಮಿಸಿ, ದಿವ್ಯವಸ್ತ್ರವನ್ನು ಧರಿಸಿ ಹೂಮಾಲೆಗಳನ್ನು ಮುಡಿಸಬೇಕು. ಬಂಗಾರದಿಂದ ಮಾಡಿದ ಆಲದ ಮರವೂ, ಹಸುವೂ ಶಿಖರದಲ್ಲಿ ಶೋಭಿಸುತ್ತಿರುವುವು.

೨೫. ಪ್ರಕಾಶವಾದ ಬೆಳ್ಳಿಯ ವನವೂ, ಅದರಲ್ಲಿ ಹೊಳೆಹೊಳೆವ ಜೇನುತುಪ್ಪದ ಸರೋವರವೂ ವಿರಾಜಿಸುತ್ತಿರಬೇಕು. ವೇದಪುರಾಣಗಳನ್ನರಿತವರೂ, ಜಿತೇಂದ್ರಿಯರೂ, ಶುಭಚರಿತ್ರರೂ ಆದ ನಾಲ್ವರು ದ್ವಿಜೋತ್ತಮರು ಹೋಮವನ್ನು ನಡೆಸಬೇಕು.

**ಪೂರ್ವೇಣ ಹಸ್ತಮಿತಮತ್ರ ವಿಧಾಯ ಕುಂಡಂ**
**ಕಾರ್ಯಸ್ತಿಲೈರ್ಯವಘೃತೇನ ಸಮಿತ್ಕುಶೈಶ್ಚ ।**
**ರಾತ್ರೌ ಚ ಜಾಗರಮನುದ್ಧತಗೀತತೂರ್ಯೈ**
**ರಾವಾಹನಂ ಚ ಕಥಯಾಮಿ ಶಿಲೋಚ್ಚಯಾನಾಂ ॥೨೬॥**

**ತ್ವಂ ಸರ್ವದೇವಗಣಧಾಮನಿಧೇ ವಿರುದ್ಧ**
**ಮಸ್ಮದ್ಗೃಹೇಷ್ವಮರಪರ್ವತ ನಾಶಯಾಶು ।**
**ಕ್ಷೇಮಂ ವಿಧತ್ಸ್ವ ಕುರು ಶಾಂತಿಮನುತ್ತಮಾಂ ನಃ**
**ಸಂಪೂಜಿತಃ ಪರಮಭಕ್ತಿಮತಾ ಮಯಾ ಹಿ ॥೨೭॥**

**ತ್ವಮೇವ ಭಗವಾನೀಶೋ ಬ್ರಹ್ಮಾ ವಿಷ್ಣುರ್ದಿವಾಕರಃ ।**
**ಮೂರ್ತಾಮೂರ್ತಾತ್ಪರಂ ಬೀಜಮತಃ ಪಾಹಿ ಸನಾತನ ॥೨೮॥**

**ಯಸ್ಮಾತ್ತ್ವಂ ಲೋಕಪಾಲಾನಾಂ ವಿಶ್ವಮೂರ್ತೇಶ್ಚ ಮಂದಿರಂ ।**
**ರುದ್ರಾದಿತ್ಯವಸೂನಾಂ ಚ ತಸ್ಮಾಚ್ಛಾಂತಿಂ ಪ್ರಯಚ್ಛ ಮೇ ॥೨೯॥**

---

೨೬. ಪೂರ್ವದಿಕ್ಕಿನಲ್ಲಿ ಒಂದು ಮೊಳದಳತೆಯ ಅಗ್ನಿಕುಂಡವನ್ನು ಮಾಡಿ ಎಳ್ಳು, ಜವೆ, ತುಪ್ಪ, ಸಮಿತ್ತು ಮತ್ತು ದರ್ಭೆಗಳಿಂದ ಹೋಮಮಾಡಬೇಕು. ಇನ್ನು ಮುಂದೆ ಪರ್ವತಗಳ ಆವಾಹನ ಕ್ರಮವನ್ನು ಹೇಳುತ್ತೇನೆ.

೨೭. "ಎಲೈ ಮೇರುಪರ್ವತವೇ, ನೀನು ಸಕಲದೇವಗಣಗಳಿಗೂ ನೆಲೆಯಾಗಿರುವೆ. ನಮ್ಮ ಮನೆಗಳಲ್ಲಿರುವ ಅನಿಷ್ಟವನ್ನು ಬೇಗನೆ ತೊಲಗಿಸು. ಕ್ಷೇಮವನ್ನು ಕೊಡು. ನಮಗೆ ಶ್ರೇಯಸ್ಕರವಾದ ಶಾಂತಿಯನ್ನು ಕರುಣಿಸು. ಪರಮಭಕ್ತನಾದ ನಾನು ನಿನ್ನನ್ನು ಪೂಜಿಸುವೆನು.

೨೮. ಓ ಸನಾತನಾ, ಭಗವಂತನಾದ ಈಶ್ವರ, ಬ್ರಹ್ಮ, ವಿಷ್ಣು, ಸೂರ್ಯ ಇವರೆಲ್ಲ ನೀನೇ ಆಗಿರುವೆ. ಆಕೃತಿಪಡೆದ ಮತ್ತು ಪಡೆಯದ ವಸ್ತುಗಳೆಲ್ಲಕ್ಕಿಂತ ವಿಲಕ್ಷಣನಾಗಿ ಅವುಗಳಿಗೆ ಬೀಜಭೂತನಾಗಿರುವೆ. ಆದುದರಿಂದ ನಮ್ಮನ್ನು ಸಲಹು.

೨೯. ಲೋಕಪಾಲಕರು, ಮಹಾವಿಷ್ಣು, ರುದ್ರರು, ಆದಿತ್ಯರು, ವಸುಗಳು, ಇವರೆಲ್ಲರಿಗೂ ನೀನು ವಾಸಸ್ಥಾನನಾಗಿರುವೆ. ಎಲೈ ಪರ್ವತರಾಜಾ, ಆದಕಾರಣ ನೀನು ನನಗೆ ಶಾಂತಿಯನ್ನು ನೀಡು.

ಯಸ್ಮಾದಶೂನ್ಯಮಮರೈರ್ನಾರೀಭಿಶ್ಚ ಶಿವೇನ ಚ ।
ತಸ್ಮಾನ್ಮಾಮುದ್ಧರಾಶೇಷದುಃಖಸಂಸಾರಸಾಗರಾತ್ ॥೩೦॥

ಏವಮಭ್ಯರ್ಚ್ಯ ತಂ ಮೇರುಂ ಮಂದರಂ ಚಾಪಿ ಪೂಜಯೇತ್ ।
ಯಸ್ಮಾಚ್ಚೈತ್ರರಥೇನ ತ್ವಂ ಭದ್ರಾಶ್ವೇನ ಚ ವರ್ಷತಃ ॥೩೧॥

ಶೋಭಸೇ ಮಂದರ ಕ್ಷಿಪ್ರಮತಸ್ತುಷ್ಟಿಕರೋ ಭವ ।
ಯಸ್ಮಾಚ್ಚೂಡಾಮಣಿರ್ಜಂಬೂದ್ವೀಪೇ ತ್ವಂ ಗಂಧಮಾದನ ॥೩೨॥

ಗಂಧರ್ವವನಶೋಭಾವಾನತಃ ಕೀರ್ತಿರ್ದೃಢಾಽಸ್ತು ಮೇ ।
ಯಸ್ಮಾತ್ತ್ವಂ ಕೇತುಮಾಲೇನ ವೈಭ್ರಾಜೇನ ವನೇನ ಚ ॥೩೩॥

ಹಿರಣ್ಮಯಾಶ್ವತ್ಥಶಿರಾಸ್ತಸ್ಮಾತ್ಪುಷ್ಟಿರ್ಧ್ರುವಾಸ್ತು ಮೇ ।
ಉತ್ತರೈಃ ಕುರುಭಿರ್ಯಸ್ಮಾತ್ಸಾವಿತ್ರೇಣ ವನೇನ ಚ ॥೩೪॥

---

೩೦. ದೇವತೆಗಳು, ದೇವನಾರಿಯರು, ಶಿವ ಇವರು ನಿನ್ನನ್ನು ಬಿಟ್ಟಿರುವುದಿಲ್ಲ. ಹೀಗೆ ಮಹಾಮಹಿಮನಾದುದರಿಂದ ನೀನು ಸಂಸಾರವೆಂಬ ಸಾಗರದ ಸಕಲ ದುಃಖಗಳಿಂದಲೂ ನನ್ನನ್ನು ಪಾರುಮಾಡು."

೩೧. ಮೇರುಪರ್ವತವನ್ನಿಂತು ಪೂಜಿಸಿದ ಬಳಿಕ ಮಂದರಪರ್ವತವನ್ನು ಆರಾಧಿಸಬೇಕು. "ಎಲೈ ಮಂದರಪರ್ವತವೇ, ನೀನು ಚೈತ್ರರಥವೆಂಬ ವನದೊಡನೆ ಭದ್ರಾಶ್ವವರ್ಷದಲ್ಲಿ ಪ್ರಕಾಶಿಸುತ್ತಿರುವೆ. ಶೀಘ್ರವಾಗಿ ನನಗೆ ತುಷ್ಟಿಯನ್ನು ಕೊಡು.

೩೨. ಓ ಗಂಧಮಾದನಾ, ಜಂಬೂದ್ವೀಪದಲ್ಲಿ ನೀನು ಅತಿ ಶ್ರೇಷ್ಠನೆನಿಸಿರುವೆ. ನನ್ನ ಕೀರ್ತಿಯು ದೃಢವಾಗುವಂತೆ ಅನುಗ್ರಹಿಸು.

೩೩. ಎಲೈ ತಿಲಾಚಲವೇ, ನೀನು ವೈಭ್ರಾಜವನದಿಂದ ಕೂಡಿ ಕೇತುಮಾಲ ವರ್ಷದಲ್ಲಿ ಮೆರೆಯುತ್ತಿದ್ದೀಯೆ. ನಿನ್ನ ಶಿಖರದಲ್ಲಿ ಹಿರಣ್ಮಯವಾದ ಅಶ್ವತ್ಥ ವೃಕ್ಷವು ಬೆಳೆದಿರುವುದು. ನನಗೆ ಪುಷ್ಟಿಯು ಸ್ಥಿರವಾಗಿ ಲಭಿಸಲಿ.

೩೪. ಎಲೈ ಸುಪಾರ್ಶ್ವಪರ್ವತವೇ, ನೀನು ಉತ್ತರ ಕುರುವರ್ಷದಲ್ಲಿ ಶೋಭಿಸುತ್ತಿರುವೆ. ನಿನ್ನ ತಪ್ಪಲಲ್ಲಿ ಸಾವಿತ್ರವನವು ವಿರಾಜಿಸುತ್ತಿದೆ. ನನಗೆ ನಿತ್ಯವೂ ಅಕ್ಷಯ ಸಂಪತ್ತೊದಗಲಿ."

ಸುಪಾರ್ಶ್ವ ರಾಜಸೇ ನಿತ್ಯಮತಃ ಶ್ರೀರಕ್ಷಯಾಽಸ್ತು ಮೇ ।
ಏವಮಾಮಂತ್ರ್ಯ ತಾನ್ಸರ್ವಾನ್ ಪ್ರಭಾತೇ ವಿಮಲೇ ಪುನಃ ||೩೫||

ಸ್ನಾತ್ವಾಥ ಗುರವೇ ದದ್ಯಾನ್ಮಧ್ಯಮಂ ಪರ್ವತೋತ್ತಮಂ ।
ವಿಷ್ಕಂಭಪರ್ವತಾನ್ ದದ್ಯಾದೃತ್ವಿಗ್ಭ್ಯಃ ಕ್ರಮಶೋ ಮುನೇ ||೩೬||

ಗಾಶ್ಚ ದದ್ಯಾಚ್ಚತುರ್ವಿಂಶತ್ಯಥವಾ ದಶ ನಾರದ ।
ನವ ಸಪ್ತ ತಥಾಷ್ಟೌ ವಾ ಪಂಚ ದದ್ಯಾದಶಕ್ತಿಮಾನ್ ||೩೭||

ಏಕಾಪಿ ಗುರವೇ ದೇಯಾ ಕಪಿಲಾ ಚ ಪಯಸ್ವಿನೀ ।
ಪರ್ವತಾನಾಮಶೇಷಾಣಾಮೇಷ ಏವ ವಿಧಿಃ ಸ್ಮೃತಃ ||೩೮||

ತ ಏವ ಪೂಜನೇ ಮಂತ್ರಾಸ್ತ ಏವೋಪಸ್ಕರಾ ಮತಾಃ ।
ಗ್ರಹಾಣಾಂ ಲೋಕಪಾಲಾನಾಂ ಬ್ರಹ್ಮಾದೀನಾಂ ಚ ಸರ್ವದಾ ||೩೯||

---

೩೫-೩೬. ಹೀಗೆ ಆ ಪರ್ವತಗಳೆಲ್ಲವನ್ನೂ ಪ್ರಾರ್ಥಿಸಿ, ಪ್ರಾತಃಕಾಲವಾದ ತರುವಾಯ ಸ್ನಾನಮಾಡಿ, ಮಧ್ಯದಲ್ಲಿರುವ ಮೇರುಪರ್ವತವನ್ನು ಆಚಾರ್ಯನಿಗೆ ದಾನಮಾಡಬೇಕು. ಎಲೈ ನಾರದಮುನಿಯೇ, ಉಪಗಿರಿಗಳನ್ನು ಕ್ರಮವಾಗಿ ಋತ್ವಿಕ್ಕುಗಳಿಗೆ ಕೊಡಬೇಕು.

೩೭ ಇಪ್ಪತ್ತನಾಲ್ಕು, ಹತ್ತು, ಎಂಟು ಅಥವಾ ಏಳು ಹಸುಗಳನ್ನು ದಾನಮಾಡಬೇಕು. ಶಕ್ತಿಯಿಲ್ಲದವನು ಐದು ಹಸುಗಳನ್ನಾದರೂ ಕೊಡಬೇಕು.

೩೮. ಕೊನೆಯ ಪಕ್ಷ ಆಚಾರ್ಯನಿಗಾದರೂ ಹೆಚ್ಚಾಗಿ ಹಾಲ್ಗರೆವ ಒಂದು ಹಸುವನ್ನು ದಾನಮಾಡಬೇಕು. ಎಲ್ಲ ಪರ್ವತಗಳ ದಾನಕ್ಕೂ ಇದೇ ವಿಧಾನವೆನ್ನುವರು.

೩೯-೪೦. ಪೂಜೆಯ ಮಂತ್ರಗಳು, ಸಾಮಗ್ರಿಗಳು ಇವೆಲ್ಲವೂ ಇವೇ. ಎಲ್ಲ ಶೈಲಗಳ ದಾನವಿಧಿಯಲ್ಲೂ ಗ್ರಹಗಳು, ಲೋಕಪಾಲಕರು ಮತ್ತು ಬ್ರಹ್ಮಾದಿಗಳಿಗೆ

**ಸ್ವಮಂತ್ರೇಣೈವ ಸರ್ವೇಷು ಹೋಮಃ ಶೈಲೇಷು ಪಠ್ಯತೇ ।**
**ಉಪವಾಸೀ ಭವೇನ್ನಿತ್ಯಮಶಕ್ತೇ ನಕ್ತಮಿಷ್ಯತೇ ॥೬೦॥**

**ವಿಧಾನಂ ಸರ್ವಶೈಲಾನಾಂ ಕ್ರಮಶಃ ಶೃಣು ನಾರದ ।**
**ದಾನಕಾಲೇ ಚ ಯೇ ಮಂತ್ರಾಃ ಪರ್ವತೇಷು ಚ ಯತ್ಫಲಂ ॥೬೧॥**

**ಅನ್ನಂ ಬ್ರಹ್ಮ ಯತಃ ಪ್ರೋಕ್ತಮನ್ನೇ ಪ್ರಾಣಾಃ ಪ್ರತಿಷ್ಠಿತಾಃ ।**
**ಅನ್ನಾದ್ಭವಂತಿ ಭೂತಾನಿ ಜಗದನ್ನೇನ ವರ್ತತೇ ॥೬೨॥**

**ಅನ್ನಮೇವ ತತೋ ಲಕ್ಷ್ಮೀರನ್ನಮೇವ ಜನಾರ್ದನಃ ।**
**ಧಾನ್ಯಪರ್ವತರೂಪೇಣ ಪಾಹಿ ತಸ್ಮಾನ್ನಗೋತ್ತಮ ॥೬೩॥**

**ಅನೇನ ವಿಧಿನಾ ಯಸ್ತು ದದ್ಯಾದ್ಧಾನ್ಯಮಯಂ ಗಿರಿಂ ।**
**ಮನ್ವಂತರಂ ಶತಂ ಸಾಗ್ರಂ ದೇವಲೋಕೇ ಮಹೀಯತೇ ॥೬೪॥**

---

ಅವರವರ ಮಂತ್ರದಿಂದಲೇ ಹೋಮಮಾಡಬೇಕು. ವ್ರತಕಾಲದಲ್ಲೆಲ್ಲ ಯಜಮಾನನು ಉಪವಾಸವಿರಬೇಕು. ಅಶಕ್ತನಾದರೆ ಹಗಲು ಉಪವಾಸವಿದ್ದು ರಾತ್ರಿ ಭೋಜನವನ್ನು ಮಾಡಬಹುದೆನ್ನುವರು.

೬೧. ಓ ನಾರದಾ, ಎಲ್ಲ ಪರ್ವತಗಳ ರಚನಾವಿಧಾನವನ್ನೂ, ಅವುಗಳ ದಾನಕಾಲದಲ್ಲಿ ವಿನಿಯೋಗಿಸಬೇಕಾದ ಮಂತ್ರಗಳನ್ನೂ, ಅವುಗಳಿಂದ ಬರುವ ಫಲವನ್ನೂ ಕ್ರಮವಾಗಿ ಹೇಳುವೆನು ಕೇಳು.

೬೨. "ಅನ್ನವೇ ಬ್ರಹ್ಮಸ್ವರೂಪವೆಂದು ಹೇಳಿದೆ. ಪ್ರಾಣಗಳು ಉಳಿದಿರುವುದು ಅನ್ನದಲ್ಲಿ. ಅನ್ನದಿಂದ ಪ್ರಾಣಿಗಳು ಜನಿಸುತ್ತವೆ. ಅನ್ನದಿಂದಲೇ ಲೋಕವು ನಿಂತಿದೆ.

೬೩. ಆದುದರಿಂದ ಅನ್ನವೇ ಲಕ್ಷ್ಮಿ; ಅನ್ನವೇ ವಿಷ್ಣು ; ಧಾನ್ಯಪರ್ವತ ರೂಪದಿಂದಿರುವ ಎಲೈ ಪರ್ವತೋತ್ತಮಾ, ನನ್ನನ್ನು ಸಲಹು."

೬೪. ಈ ವಿಧಿಯಿಂದ ಧಾನ್ಯಪರ್ವತವನ್ನು ದಾನಮಾಡುವಾತನು ನೂರು ಮನ್ವಂತರಗಳ ಕಾಲ ಪೂರ್ಣವಾಗಿ ದೇವಲೋಕದಲ್ಲಿ ಮಾನ್ಯತೆಯನ್ನು ಪಡೆಯುವನು.

**ಅಪ್ಸರೋಗಣಗಂಧರ್ವೈರಾಕೀರ್ಣೇನ ವಿರಾಜತಾ ।
ವಿಮಾನೇನ ದಿವಃ ಪೃಷ್ಠಮಾಯಾತಿ ಋಷಿಸೇವಿತಃ ।
ಧರ್ಮಕ್ಷಯೇ ರಾಜರಾಜ್ಯಮಾಪ್ನೋತೀಹ ನ ಸಂಶಯಃ ॥೪೫॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ದಾನಮಾಹಾತ್ಮ್ಯಂ
ನಾಮ ತ್ರ್ಯಶೀತಿತಮೋಽಧ್ಯಾಯಃ**

---

೪೫. ಅಪ್ಸರ ಸ್ತ್ರೀಯರೂ ಗಂಧರ್ವರೂ ಕೂಡಿ ಮೆರೆಯುತ್ತಿರುವ ವಿಮಾನದಲ್ಲಿ ಕುಳಿತು, ಋಷಿಗಳಿಂದ ಸೇವೆಯನ್ನು ಕೈಗೊಂಡು ಸ್ವರ್ಗಲೋಕವನ್ನೈದುವನು. ಕರ್ಮವು ಕ್ಷಯಿಸಿದ ಬಳಿಕ ರಾಜ್ಯಾಧಿಪತ್ಯವನ್ನು ಪಡೆಯುವನು ; ಸಂಶಯವಿಲ್ಲ.

**ಅಧ್ಯಾಯದ ಸಾರಾಂಶ**

ಧಾನ್ಯಗಳನ್ನು ಪರ್ವತಾಕಾರವಾಗಿ ರಚಿಸಿ ದಾನಮಾಡುವುದರಿಂದ ಬರುವ ಫಲವನ್ನು ಈ ಅಧ್ಯಾಯವು ತಿಳಿಸುತ್ತದೆ.

ಧಾನ್ಯಪರ್ವತ, ಲವಣಪರ್ವತ, ಗುಡಪರ್ವತ ಹೀಗೆ ದಾನಯೋಗ್ಯಗಳಾದ ಪರ್ವತಗಳು ಹತ್ತು ಬಗೆಯಾಗಿವೆ. ಶುಭಕಾಲಗಳಲ್ಲೂ, ಪುಣ್ಯಕಾಲಗಳಲ್ಲೂ ಇವನ್ನು ದಾನಮಾಡುವುದರಿಂದ ಅನಂತಫಲವು ಲಭಿಸುವುದು. ಉಕ್ತಪ್ರಮಾಣದ ಬತ್ತದಿಂದ ಆದ ಪರ್ವತಾಕೃತಿಗೆ ಮೇರುವೆಂದು ಹೆಸರು. ಮೇರುಪರ್ವತದಲ್ಲಿರುವಂತೆಯೇ ಚಂದ್ರಸೂರ್ಯರು, ದೇವತೆಗಳು ಇವರೆಲ್ಲರ ಪ್ರತಿಮೆಗಳನ್ನು ಚಿನ್ನದಿಂದಲೋ, ಬೆಳ್ಳಿಯಿಂದಲೋ ರಚಿಸಿ ಸರ್ವಲಕ್ಷಣ ಸಮೃದ್ಧವಾಗಿ ಮಾಡಬೇಕು. ಅದರ ಸುತ್ತಲೂ ಬೇರೆಬೇರೆ ಧಾನ್ಯಗಳಿಂದ ಉಪಪರ್ವತಗಳನ್ನು ವಿರಚಿಸಿ ಷೋಡಶೋಪಚಾರಗಳಿಂದ ಸತ್ಕರಿಸಬೇಕು. ವೇದಜ್ಞರಾದ ಬ್ರಾಹ್ಮಣರ ಮುಖದಿಂದ ಹೋಮಕಾರ್ಯಗಳನ್ನು ಮಾಡಿ, ಈ ಪರ್ವತಗಳನ್ನು ಕ್ರಮವರಿತು ಅವರಿಗೆ ದಾನವಾಗಿ ಕೊಡಬೇಕು. ತನ್ನ ಕೈಲಾದಷ್ಟು ಗೋದಾನಗಳನ್ನೂ ಮಾಡಬಹುದು. ಇದನ್ನು ನಡೆಸಿದಾತನು ನೂರಾರು ಮನ್ವಂತರಗಳ ಕಾಲ ಸ್ವರ್ಗದಲ್ಲಿ ಸುಖವನ್ನನುಭವಿಸುವನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ದಾನಮಾಹಾತ್ಮ್ಯವೆಂಬ
ಎಂಬತ್ತಮೂರನೆಯ ಅಧ್ಯಾಯವು ಮುಗಿದುದು.

# ಅಥ ಚತುರಶೀತಿತಮೋಽಧ್ಯಾಯಃ

॥ ಈಶ್ವರ ಉವಾಚ ॥

ಅಥಾತಃ ಸಂಪ್ರವಕ್ಷ್ಯಾಮಿ ಲವಣಾಚಲಮುತ್ತಮಂ ।
ಯತ್ಪ್ರದಾನಾನ್ನರೋ ಲೋಕಾನಾಪ್ನೋತಿ ಶಿವಸಂಯುತಾನ್ ॥ ೧ ॥

ಉತ್ತಮಃ ಷೋಡಶದ್ರೋಣೈಃ ಕರ್ತವ್ಯೋ ಲವಣಾಚಲಃ ।
ಮಧ್ಯಮಃ ಸ್ಯಾತ್ತದರ್ಧೇನ ಚತುರ್ಭಿರಧಮಃ ಸ್ಮೃತಃ ॥ ೨ ॥

ವಿತ್ತಹೀನೋ ಯಥಾಶಕ್ತ್ಯಾ ದ್ರೋಣಾದೂರ್ಧ್ವಂ ತು ಕಾರಯೇತ್ ।
ಚತುರ್ಥಾಂಶೇನ ವಿಷ್ಕಂಭಪರ್ವತಾನ್ ಕಾರಯೇತ್ಪೃಥಕ್ ॥ ೩ ॥

ವಿಧಾನಂ ಪೂರ್ವವತ್ಕುರ್ಯಾದ್ಬ್ರಹ್ಮಾದೀನಾಂ ಚ ಸರ್ವದಾ ।
ತದ್ವದ್ಧೇಮಮಯಾನ್ ಸರ್ವಾಂಲ್ಲೋಕಪಾಲಾನ್ನಿವೇಶಯೇತ್ ॥ ೪ ॥

---

೧. ಈಶ್ವರನು ಹೇಳಿದನು.—ಇನ್ನುಮುಂದೆ ಶ್ರೇಷ್ಠವಾದ ಲವಣಾಚಲ ವಿಧಾನವನ್ನು ಹೇಳುವೆನು. ಅದನ್ನು ಕೊಡುವುದರಿಂದ ಮನುಷ್ಯನಿಗೆ ಶುಭಲೋಕಗಳು ಲಭಿಸುವುವು.

೨. ಹದಿನಾರು ಕೊಳಗ ಉಪ್ಪಿನಿಂದಾದ ಪರ್ವತವು ಉತ್ತಮವು. ಎಂಟರಿಂದ ಆದುದು ಮಧ್ಯಮವು. ನಾಲ್ಕು ಕೊಳಗದಿಂದಾದುದು ಅಧಮವು.

೩. ದ್ರವ್ಯಾನುಕೂಲತೆ ಇಲ್ಲದವನು ತನ್ನ ಶಕ್ತಿಗೆ ತಕ್ಕಂತೆ ಒಂದು ಕೊಳಗಕ್ಕೆ ಕಡಮೆಯಿಲ್ಲದೆ ಉಪ್ಪನ್ನುಪಯೋಗಿಸಿ ಪರ್ವತವನ್ನು ವಿರಚಿಸಬೇಕು. ಇದರ ನಾಲ್ಕರಲ್ಲೊಂದು ಪಾಲಿರುವಂತೆ ಉಪಪರ್ವತಗಳನ್ನು ಬೇರೆ ಬೇರೆಯಾಗಿ ನಿರ್ಮಿಸಬೇಕು.

೪. ಹಿಂದೆ ಹೇಳಿದಂತೆಯೇ ಬ್ರಹ್ಮಾದಿದೇವತೆಗಳನ್ನು ಸ್ಥಾಪನಮಾಡಬೇಕು. ಲೋಕಪಾಲಕರೆಲ್ಲರ ಸುವರ್ಣಪ್ರತಿಮೆಯನ್ನೂ ಹಾಗೆಯೇ ನಿವೇಶಮಾಡಬೇಕು.

ಸರಾಂಸಿ ಕಾಮದೇವಾದೀಂಸ್ತದ್ವದತ್ರಾಪಿ ಕಾರಯೇತ್ ।
ಕುರ್ಯಾಜ್ಜಾಗರಣಂ ಚಾಪಿ ದಾನಮಂತ್ರಾನ್ನಿಬೋಧತ ॥ ೫ ॥

ಸೌಭಾಗ್ಯಸರಸ್ಸಂಭೂತೋ ಯತೋಽಯಂ ಲವಣೋ ರಸಃ ।
ತದ್ದಾನಕರ್ತೃಕತ್ವೇನ ತ್ವಂ ಮಾಂ ಪಾಹಿ ನಗೋತ್ತಮ ॥ ೬ ॥

ಯಸ್ಮಾದನ್ನರಸಾಸ್ಸರ್ವೇ ನೋತ್ಕಟಾ ಲವಣಂ ವಿನಾ ।
ಪ್ರಿಯಂ ಚ ಶಿವಯೋರ್ನಿತ್ಯಂ ತಸ್ಮಾಚ್ಛಾಂತಿಂ ಪ್ರಯಚ್ಛ ಮೇ ॥ ೭ ॥

ವಿಷ್ಣುದೇಹಸಮುದ್ಭೂತಂ ಯಸ್ಮಾದಾರೋಗ್ಯವರ್ಧನಂ ।
ತಸ್ಮಾತ್ಪರ್ವತರೂಪೇಣ ಪಾಹಿ ಸಂಸಾರಸಾಗರಾತ್ ॥ ೮ ॥

ಅನೇನ ವಿಧಿನಾ ಯಸ್ತು ದದ್ಯಾಲ್ಲವಣಪರ್ವತಂ ।
ಉಮಾಲೋಕೇ ವಸೇತ್ಕಲ್ಪಂ ತತೋ ಯಾತಿ ಪರಾಂ ಗತಿಂ ॥ ೯ ॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಲವಣಾಚಲಕೀರ್ತನಂ
ನಾಮ ಚತುರಶೀತಿತಮೋಽಧ್ಯಾಯಃ

---

೫. ಸರೋವರಗಳನ್ನೂ ಕಾಮದೇವಾದಿಗಳನ್ನೂ ಅಲ್ಲಿನಂತೆಯೇ ಇಲ್ಲೂ ನಿರ್ಮಾಣಮಾಡಬೇಕು. ರಾತ್ರಿಯಲ್ಲಿ ಜಾಗರಣವೂ ಆವಶ್ಯಕ. ಇನ್ನು ದಾನ ಮಂತ್ರಗಳನ್ನು ಕೇಳಿರಿ.

೬. "ಈ ಲವಣರಸವು ಸೌಭಾಗ್ಯಸರೋವರದಲ್ಲಿ ಜನಿಸಿತು. ಎಲೈ ಪರ್ವತೋತ್ತಮನೇ, ಲವಣದಾನವನ್ನು ನಾನು ಮಾಡುವವನಾಗಿದ್ದೇನೆ; ನನ್ನನ್ನು ನೀನು ಸಲಹು.

೭. ಲವಣವಿಲ್ಲದಿದ್ದರೆ ಅನ್ನರಸಗಳೊಂದೂ ರುಚಿಸವು. ಅದು ಪಾರ್ವತೀ ಪರಮೇಶ್ವರರಿಗೆ ನಿತ್ಯವೂ ಪ್ರಿಯವೆನಿಸಿರುವುದು. ಆದಕಾರಣ, ಎಲೈ ಲವಣರಸವೇ, ನನಗೆ ಶಾಂತಿಯನ್ನು ನೀಡು.

೮. ನೀನು ವಿಷ್ಣುವಿನ ದೇಹದಲ್ಲಿ ಉದ್ಭವಿಸಿ ಆರೋಗ್ಯವನ್ನು ಬೆಳೆಸತಕ್ಕು ದಾಗಿರುವೆ. ಆದುದರಿಂದ ಪರ್ವತರೂಪದಿಂದಿರುವ ನೀನು ಸಂಸಾರಸಾಗರದಿಂದ ನನ್ನನ್ನು ರಕ್ಷಿಸು."

೯. ಈ ನಿಯಮವನ್ನನುಸರಿಸಿ ಲವಣಪರ್ವತವನ್ನು ದಾನಮಾಡತಕ್ಕವನು ಪಾರ್ವತೀಲೋಕದಲ್ಲಿ ಕಲ್ಪಪೂರ್ತಿಯಾಗಿ ವಾಸಮಾಡಿ ಬಳಿಕ ಮುಕ್ತನಾಗುವನು.

## ಅಧ್ಯಾಯ ೮೪

### ಅಧ್ಯಾಯದ ಸಾರಾಂಶ

ಲವಣಾಚಲದ ದಾನವಿಧಾನವು ಈ ಅಧ್ಯಾಯದಲ್ಲಿ ಹೇಳಲ್ಪಟ್ಟಿದೆ.

ಇದರ ರಚನೆ, ಹೋಮ, ದಾನ ಇವೆಲ್ಲವೂ ಹಿಂದಿನಂತೆಯೇ ಸರಿ. ದಾನ ಮಾಡುವ ಮಂತ್ರವು ಮಾತ್ರ ಲವಣರಸಕ್ಕೆ ಅನ್ವಯಿಸುವ ವಿಶೇಷಲಕ್ಷಣ ವುಳ್ಳುದು. ಲವಣಾಚಲವನ್ನು ದಾನಮಾಡುವಾತನು ಪಾರ್ವತೀಲೋಕದಲ್ಲಿ ಕಲ್ಪ ಪೂರ್ತಿಯಾಗಿ ವಾಸಿಸಿ ಬಳಿಕ ಮುಕ್ತನಾಗುವನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಲವಣಾಚಲಕೀರ್ತನವೆಂಬ
ಎಂಬತ್ತನಾಲ್ಕನೆಯ ಅಧ್ಯಾಯವು ಮುಗಿದುದು.



## ಅಥ ಪಂಚಾಶೀತಿತಮೋಽಧ್ಯಾಯಃ

॥ ಈಶ್ವರ ಉವಾಚ ॥

ಅತಃ ಪರಂ ಪ್ರವಕ್ಷ್ಯಾಮಿ ಗುಡಪರ್ವತಮುತ್ತಮಂ ।
ಯತ್ರ ದಾನಾನ್ನರಃ ಸ್ವರ್ಗಮಾಪ್ನೋತಿ ಸುರಪೂಜಿತಃ ॥ ೧ ॥

ಉತ್ತಮೋ ದಶಭಿರ್ಭಾರೈರ್ಮಧ್ಯಮಃ ಪಂಚಭಿರ್ಮತಃ ।
ತ್ರಿಭಿರ್ಭಾರೈಃ ಕನಿಷ್ಠಃ ಸ್ಯಾತ್ತದರ್ಧೇನಾಲ್ಪವಿತ್ತವಾನ್ ॥ ೨ ॥

ತದ್ವದಾಮಂತ್ರಣಂ ಪೂಜಾಂ ಹೇಮವೃಕ್ಷಸುರಾರ್ಚನಂ ।
ವಿಷ್ಕಂಭಪರ್ವತಾಂಸ್ತದ್ವತ್ಸರಾಂಸಿ ವನದೇವತಾಃ ॥ ೩ ॥

ಹೋಮಜಾಗರಣಂ ತದ್ವಲ್ಲೋಕಪಾಲಾಧಿವಾಸನಂ ।
ಧಾನ್ಯಪರ್ವತವತ್ಕುರ್ಯಾದಿಮಂ ಮಂತ್ರಮುದೀರಯೇತ್ ॥ ೪ ॥

---

೧. ಈಶ್ವರನು ಹೇಳಿದನು.—ಇನ್ನು ಮುಂದೆ ಬೆಲ್ಲದ ಬೆಟ್ಟದ ದಾನದ ವಿಧಿಯನ್ನು ಹೇಳುವೆನು. ಅದನ್ನು ಕೊಡುವುದರಿಂದ ಮನುಜನು ದೇವತೆಗಳಿಗೂ ಮಾನ್ಯನಾಗಿ ಸ್ವರ್ಗದಲ್ಲಿ ವಾಸಿಸುವನು.

೨. ಹತ್ತು* ಭಾರಗಳ ತೂಕ ಬೆಲ್ಲದಿಂದಾದ ಪರ್ವತವು ಉತ್ತಮ. ಐದು ಭಾರಗಳಿಂದಾದರೆ ಮಧ್ಯಮ. ಮೂರರಿಂದಾದುದು ಕನಿಷ್ಠವೆನಿಸುವುದು. ದ್ರವ್ಯ ಸೌಕರ್ಯವಿಲ್ಲದವನು ಇದರಲ್ಲಿ ಅರ್ಧದಿಂದಲಾದರೂ ಮಾಡಬಹುದು.

೩. ಹಿಂದೆ ಹೇಳಿದಂತೆಯೇ ಪ್ರಾರ್ಥನೆಯನ್ನೂ, ಪೂಜೆಯನ್ನೂ ಮಾಡಿ, ಚಿನ್ನದ ಮರಗಳನ್ನು ನೆಟ್ಟು ದೇವತೆಗಳನ್ನು ಆರಾಧಿಸಬೇಕು. ವಿಷ್ಕಂಭ ಪರ್ವತಗಳು, ಸರೋವರಗಳು, ವನಗಳು ಮತ್ತು ದೇವತೆಗಳು ಅಲ್ಲಿನಂತೆಯೇ ನಿರ್ಮಿತರಾಗುವರು.

೪. ಹೋಮ, ಜಾಗರಣ, ಲೋಕಪಾಲಕರ ನಿವೇಶನ ಇವೆಲ್ಲವನ್ನೂ ಧಾನ್ಯ ಪರ್ವತಕ್ಕೆ ಮಾಡಿದ ಹಾಗೆಯೇ ನಡೆಸಬೇಕು. ಈ ಮುಂದಿನ ಮಂತ್ರವನ್ನು ಉಚ್ಚರಿಸಬೇಕು.

---

* ಎರಡು ಸಾವಿರ ಪಲಗಳ ತೂಕಕ್ಕೆ ಒಂದು ಭಾರವೆಂದು ಹೆಸರು. ಪಲವೆಂದರೆ ಸುಮಾರು ಮೂರು ತೊಲೆಗಳ ತೂಕ.

ಯಥಾ ದೇವೇಷು ವಿಶ್ವಾತ್ಮಾ ಪ್ರವರೋಽಯಂ ಜನಾರ್ದನಃ ।
ಸಾಮವೇದಸ್ತು ವೇದಾನಾಂ ಮಹಾದೇವಸ್ತು ಯೋಗಿನಾಂ ॥ ೫ ॥

ಪ್ರಣವಃ ಸರ್ವಮಂತ್ರಾಣಾಂ ನಾರೀಣಾಂ ಪಾರ್ವತೀ ಯಥಾ ।
ತಥಾ ರಸಾನಾಂ ಪ್ರವರಃ ಸದೈವೇಕ್ಷುರಸೋ ಮತಃ ॥ ೬ ॥

ಮಮ ತಸ್ಮಾತ್ಪರಾಂ ಲಕ್ಷ್ಮೀಂ ಗುಡಪರ್ವತ ದೇಹಿ ವೈ ।
ಯಸ್ಮಾತ್ಸೌಭಾಗ್ಯದಾಯಿನ್ಯಾ ಭ್ರಾತಾ ತ್ವಂ ಗುಡಪರ್ವತ ।
ನಿವಾಸಶ್ಚಾಪಿ ಪಾರ್ವತ್ಯಾಸ್ತಸ್ಮಾಚ್ಛಾಂತಿಂ ಪ್ರಯಚ್ಛ ಮೇ ॥ ೭ ॥

ಅನೇನ ವಿಧಿನಾ ಯಸ್ತು ದದ್ಯಾದ್ಗುಡಮಯಂ ಗಿರಿಂ ।
ಪೂಜ್ಯಮಾನಃ ಸ ಗಂಧರ್ವೈರ್ಗೌರೀಲೋಕೇ ಮಹೀಯತೇ ॥ ೮ ॥

ತತಃ ಕಲ್ಪಶತಾಂತೇ ತು ಸಪ್ತದ್ವೀಪಾಧಿಪೋ ಭವೇತ್ ।
ಆಯುರಾರೋಗ್ಯಸಂಪನ್ನಃ ಶತ್ರುಭಿಶ್ಚಾಪರಾಜಿತಃ ॥ ೯ ॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಗುಡಪರ್ವತಕೀರ್ತನಂ ನಾಮ
ಪಂಚಾಶೀತಿತಮೋಽಧ್ಯಾಯಃ

---

೫-೬. "ದೇವತೆಗಳಲ್ಲಿ ವಿಶ್ವರೂಪನಾದ ಜನಾರ್ದನನೂ, ವೇದಗಳಲ್ಲಿ ಸಾಮವೇದವೂ, ನಾರಿಯರಲ್ಲಿ ಪಾರ್ವತಿಯೂ ಶ್ರೇಷ್ಠವೆನಿಸಿರುವಂತೆ ರಸಗಳಲ್ಲೆಲ್ಲ ಕಬ್ಬಿನ ರಸವು ಯಾವಾಗಲೂ ಉತ್ತಮವೆಂದು ಪ್ರಖ್ಯಾತವಾಗಿದೆ.

೭. ಎಲೈ ಗುಡಪರ್ವತವೇ, ಸೌಭಾಗ್ಯವನ್ನೀವ ಪಾರ್ವತೀದೇವಿಗೆ ನೀನು ಒಡಹುಟ್ಟಿದವನೂ ನಿವಾಸಸ್ಥಾನವೂ ಆಗಿರುವೆ. ಆದುದರಿಂದ ನನಗೆ ಉತ್ತಮವಾದ ಸಂಪತ್ತನ್ನೂ ಶಾಂತಿಯನ್ನೂ ಕರುಣಿಸು."

೮. ಈ ವಿಧಿಯಿಂದ ಗುಡಪರ್ವತವನ್ನು ದಾನಮಾಡುವಾತನು ಗಂಧರ್ವರಿಂದ ಪೂಜಿತನಾಗಿ ಪಾರ್ವತೀದೇವಿಯ ಲೋಕದಲ್ಲಿ ಮಾನ್ಯತೆಯನ್ನು ಪಡೆಯುವನು.

೯. ಬಳಿಕ ನೂರು ಕಲ್ಪಗಳ ಕೊನೆಯಲ್ಲಿ ಸಪ್ತದ್ವೀಪಗಳ ಅಧಿಪತಿಯಾಗುವನು. ಆಯುಸ್ಸು, ಆರೋಗ್ಯ ಇವುಗಳಿಂದ ಪೂರ್ಣನಾಗಿ ಶತ್ರುಗಳಿಗೆ ಅಜೇಯನಾಗಿರುವನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಗುಡಪರ್ವತದ ದಾನವಿಧಿಯನ್ನು ಫಲದೊಡನೆ ಹೇಳಿದೆ.

ಲವಣ ಪರ್ವತದ ವಿಧಾನವೇ ಇದಕ್ಕೂ ಎಲ್ಲ ವಿಷಯಗಳಲ್ಲಿಯೂ ಅನ್ವಯಿಸುವುದು. ಪಾರ್ವತೀದೇವಿಯ ಒಡಹುಟ್ಟಿದುದೆಂಬುದೂ ಅವಳ ನಿವಾಸಸ್ಥಾನವೆಂಬುದೂ ಪ್ರಾರ್ಥನೆಯಲ್ಲಿ ವಿಶೇಷಾಂಶಗಳು. ಇದರ ದಾನದಿಂದ ಗೌರೀಸಾನ್ನಿಧ್ಯವೂ ಸಪ್ತದ್ವೀಪಾಧಿಪತ್ಯವೂ ಲಭಿಸುವುವು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಗುಡಪರ್ವತಕೀರ್ತನವೆಂಬ
ಎಂಬತ್ತೈದನೆಯ ಅಧ್ಯಾಯವು ಮುಗಿದುದು.



## ಅಥ ಷಷ್ಠ್ಯಾಶೀತಿತಮೋಽಧ್ಯಾಯಃ

॥ ಈಶ್ವರ ಉವಾಚ ॥

ಅಥ ಪಾಪಹರಂ ವಕ್ಷ್ಯೇ ಸುವರ್ಣಾಚಲಮುತ್ತಮಂ ।
ಯಸ್ಯ ಪ್ರದಾನಾದ್ಭವನಂ ವೈರಿಂಚಂ ಯಾತಿ ಮಾನವಃ ॥ ೧ ॥

ಉತ್ತಮಃ ಪಲಸಾಹಸ್ರೋ ಮಧ್ಯಮಃ ಪಂಚಭಿಃ ಶತೈಃ ।
ತದರ್ಧೇನಾಧಮಸ್ತದ್ವದಲ್ಪವಿತ್ತೋಽಪಿ ಶಕ್ತಿತಃ ।
ದದ್ಯಾದೇಕಪಲಾದೂರ್ಧ್ವಂ ಯಥಾಶಕ್ತ್ಯಾ ವಿಮತ್ಸರಃ ॥ ೨ ॥

ಧಾನ್ಯಪರ್ವತವತ್ಸರ್ವಂ ವಿದಧ್ಯಾನ್ಮುನಿಪುಂಗವ ।
ವಿಷ್ಕಂಭಶೈಲಾಂಸ್ತದ್ವಚ್ಚ ಋತ್ವಿಗ್ಭ್ಯಃ ಪ್ರತಿಪಾದಯೇತ್ ॥ ೩ ॥

ನಮಸ್ತೇ ಬ್ರಹ್ಮಬೀಜಾಯ ಬ್ರಹ್ಮಗರ್ಭಾಯ ತೇ ನಮಃ ।
ಯಸ್ಮಾದನಂತಫಲದಸ್ತಸ್ಮಾತ್ಪಾಹಿ ಶಿಲೋಚ್ಚಯ ॥ ೪ ॥

---

೧. ಈಶ್ವರನು ಹೇಳಿದನು.—ಬಳಿಕ ಪಾಪಹರವೆನಿಸಿದ ಸುವರ್ಣಾಚಲದ ದಾನವಿಧಿಯನ್ನು ಹೇಳುತ್ತೇನೆ. ಅದನ್ನು ದಾನಮಾಡುವುದರಿಂದ ಮನುಜನು ಬ್ರಹ್ಮಲೋಕವನ್ನು ಪಡೆಯುವನು.

೨. ಸಾವಿರ ಪಲಗಳ ತೂಕದ ಚಿನ್ನದಿಂದಾದ ಪರ್ವತವು ಉತ್ತಮವು. ಐನೂರರಿಂದ ಮಧ್ಯಮವು. ಅದರ ಅರ್ಧದಿಂದಾದರೆ ಅಧಮವು. ಬಡವನಾದರೂ ತನ್ನ ಶಕ್ತಿಯನ್ನು ನೋಡಿಕೊಂಡು ಒಂದು ಪಲಕ್ಕೆ ಕಡಿಮೆಯಿಲ್ಲದಂತೆ ಸುವರ್ಣ ದಾನಮಾಡಬೇಕು. ಮತ್ಸರಿಸಬಾರದು.

೩. ಓ ಮುನಿಪುಂಗವಾ, ಧಾನ್ಯಪರ್ವತದಂತೆಯೇ ಎಲ್ಲವನ್ನೂ ಮಾಡಬೇಕು. ವಿಷ್ಕಂಭ ಪರ್ವತಗಳೂ ಅದರಂತೆಯೇ ಇರಬೇಕು. ಅವೆಲ್ಲವನ್ನೂ ಋತ್ವಿಕ್ಕುಗಳಿಗೆ ದಾನಮಾಡಬೇಕು.

೪. "ಎಲೈ ಸುವರ್ಣಪರ್ವತವೇ, ಬ್ರಹ್ಮಬೀಜವೂ ಬ್ರಹ್ಮಗರ್ಭವೂ ಆದ ನಿನಗೆ ನಮಸ್ಕಾರ. ನೀನು ಅನಂತಫಲವನ್ನು ಕೊಡತಕ್ಕವನು. ಆದುದರಿಂದ ನೀನು ನನ್ನನ್ನು ರಕ್ಷಿಸು.

**ಯಸ್ಮಾದಗ್ನೇರಪತ್ಯಂ ತ್ವಂ ಯಸ್ಮಾತ್ಪುಣ್ಯಂ ಜಗತ್ಪತೇ ।**
**ಹೇಮಪರ್ವತರೂಪೇಣ ತಸ್ಮಾತ್ಪಾಹಿ ನಗೋತ್ತಮ ॥ ೫ ॥**
**ಅನೇನ ವಿಧಿನಾ ಯಸ್ತು ದದ್ಯಾತ್ಕನಕಪರ್ವತಂ ।**
**ಸ ಯಾತಿ ಪರಮಂ ಬ್ರಹ್ಮಲೋಕಮಾನಂದಕಾರಕಂ ।**
**ತತ್ರ ಕಲ್ಪಶತಂ ತಿಷ್ಠೇತ್ತತೋ ಯಾತಿ ಪರಾಂ ಗತಿಂ ॥ ೬ ॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸುವರ್ಣಾಚಲಕೀರ್ತನಂ ನಾಮ ಷಷ್ಠಾಶೀತಿತಮೋಽಧ್ಯಾಯಃ**

---

೫. ಜಗತ್ಪತಿಯಾದ ಎಲೈ ಪರ್ವತಶ್ರೇಷ್ಠವೇ, ನೀನು ಅಗ್ನಿಯಲ್ಲಿ ಹುಟ್ಟಿದವನು. ಪವಿತ್ರರೂಪನು. ಸುವರ್ಣಪರ್ವತರೂಪದಿಂದ ನನ್ನನ್ನು ರಕ್ಷಿಸು.

೬. ಈ ವಿಧಿಯಿಂದ ಕನಕಪರ್ವತವನ್ನು ದಾನಮಾಡುವಾತನು ಪರಮಾನಂದಕರವಾದ ಬ್ರಹ್ಮಲೋಕವನ್ನೈದುವನು. ಅಲ್ಲಿ ನೂರು ಕಲ್ಪಗಳ ಕಾಲವಿದ್ದು ತರುವಾಯ ಉತ್ತಮಗತಿಯನ್ನು ಪಡೆಯುವನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಸುವರ್ಣಾಚಲದ ದಾನವಿಧಿಯನ್ನು ಹೇಳಿದೆ.

ರಚನೆ, ಪೂಜೆ, ಹೋಮ ಜಾಗರಣ ಇವೆಲ್ಲವೂ ಧಾನ್ಯಪರ್ವತದ ವಿಧಿಯಂತೆಯೇ ಇರುವುವು. ಈ ದಾನದಿಂದ ಕಲ್ಪಶತಗಳ ಕಾಲ ಬ್ರಹ್ಮಲೋಕದಲ್ಲಿ ವಾಸಿಸುವನು. ಬಳಿಕ ಮೋಕ್ಷವನ್ನೈದುವನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಸುವರ್ಣಾಚಲಕೀರ್ತನವೆಂಬ ಎಂಬತ್ತಾರನೆಯ ಅಧ್ಯಾಯವು ಮುಗಿದುದು.



# ಅಥ ಸಪ್ತಾಶೀತಿತಮೋಽಧ್ಯಾಯಃ

|| ಈಶ್ವರ ಉವಾಚ ||

ಅತಃ ಪರಂ ಪ್ರವಕ್ಷ್ಯಾಮಿ ತಿಲಶೈಲಂ ವಿಧಾನತಃ ।
ಯತ್ಪ್ರದಾನಾನ್ನರೋ ಯಾತಿ ವಿಷ್ಣುಲೋಕಂ ಸನಾತನಂ || ೧ ||

ಉತ್ತಮೋ ದಶಭಿರ್ದ್ರೋಣೈರ್ಮಧ್ಯಮಃ ಪಂಚಭಿಃ ಸ್ಮೃತಃ ।
ತ್ರಿಭಿಃ ಕನಿಷ್ಠೋ ವಿಪ್ರೇಂದ್ರ ತಿಲಶೈಲಃ ಪ್ರಕೀರ್ತಿತಃ || ೨ ||

ಪೂರ್ವವಚ್ಚಾಪರಾನ್ ಸರ್ವಾನ್ ವಿಷ್ಕಂಭಾನಭಿತೋ ಗಿರೀನ್ ।
ದಾನಮಂತ್ರಾನ್ ಪ್ರವಕ್ಷ್ಯಾಮಿ ಯಥಾವನ್ಮುನಿಪುಂಗವ || ೩ ||

ಯಸ್ಮಾನ್ಮಧುವಧೇ ವಿಷ್ಣೋರ್ದೇಹಸ್ವೇದಸಮುದ್ಭವಾಃ ।
ತಿಲಾಃ ಕುಶಾಶ್ಚ ಮಾಷಾಶ್ಚ ತಸ್ಮಾಚ್ಛಾಂತ್ಯೈ ಭವಂತ್ವಿಹ || ೪ ||

---

೧. ಈಶ್ವರನು ಹೇಳಿದನು.—ಇನ್ನು ಮುಂದೆ ತಿಲಶೈಲದ (ಎಳ್ಳಿನ ಬೆಟ್ಟದ) ದಾನವಿಧಿಯನ್ನು ಕ್ರಮವರಿತು ಹೇಳುವೆನು. ಈ ದಾನದಿಂದ ಮಾನವನು ಸನಾತನವಾದ ವಿಷ್ಣುಲೋಕವನ್ನು ಪಡೆಯುವನು.

೨. ಓ ನಾರದಾ, ಹತ್ತು ಕೊಳಗ ಎಳ್ಳಿನಿಂದಾದ ತಿಲಶೈಲವು ಉತ್ತಮ. ಐದು ಕೊಳಗದಿಂದಾದರೆ ಮಧ್ಯಮ. ಮೂರು ಕೊಳಗದಿಂದಾದುದು ಅಧಮವೆನಿಸಿಕೊಳ್ಳುತ್ತದೆ.

೩. ಸುತ್ತಲಿನ ವಿಷ್ಕಂಭ ಪರ್ವತಗಳ ರಚನೆಯು ಧಾನ್ಯಶೈಲಾದಿಗಳ ರೀತಿಯನ್ನೇ ಹೋಲುವುದು. ಓ ಮುನಿಪುಂಗವಾ, ದಾನಮಂತ್ರಗಳನ್ನು ಹೇಳುವೆನು ಕೇಳು.

೪. "ಮಧುವೆಂಬ ದೈತ್ಯನನ್ನು ಸಂಹಾರಮಾಡಿದಾಗ ವಿಷ್ಣುವಿನ ಮೈಬೆವರಿನಿಂದ ಎಳ್ಳು, ದರ್ಭೆ, ಉದ್ದು ಇವು ಜನಿಸಿದುವು. ಇವು ಶಾಂತಿಯನ್ನು ಕೊಡಲಿ.

ಹವ್ಯೇ ಕವ್ಯೇ ಚ ಯಸ್ಮಾಚ್ಚ ತಿಲಾ ಏವಾಭಿರಕ್ಷಣಂ ।
ಭವಾದುದ್ಧರ ಶೈಲೇಂದ್ರ ತಿಲಾಚಲ ನಮೋಽಸ್ತು ತೇ ॥ ೫ ॥

ಇತ್ಯಾಮಂತ್ರ್ಯ ಚ ಯೋ ದದ್ಯಾತ್ತಿಲಾಚಲಮನುತ್ತಮಂ ।
ಸ ವೈಷ್ಣವಪದಂ ಯಾತಿ ಪುನರಾವೃತ್ತಿದುರ್ಲಭಂ ॥ ೬ ॥

ದೀರ್ಘಾಯುಷ್ಯಂ ಸಮಾಪ್ನೋತಿ ಪುತ್ರಪೌತ್ರೈಶ್ಚ ಮೋದತೇ ।
ಪಿತೃಭಿರ್ದೇವಗಂಧರ್ವೈಃ ಪೂಜ್ಯಮಾನೋ ದಿವಂ ವ್ರಜೇತ್ ॥ ೭ ॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ತಿಲಾಚಲಕೀರ್ತನಂ
ನಾಮ ಸಪ್ತಾಶೀತಿತಮೋಽಧ್ಯಾಯಃ

---

೫. ದೇವಕಾರ್ಯವನ್ನೂ, ಪಿತೃಕಾರ್ಯವನ್ನೂ ಸಾಂಗವಾಗಿ ಪೂರ್ಣಗೊಳಿಸಿ ಯಜಮಾನನನ್ನು ರಕ್ಷಿಸಲು ಎಳ್ಳು ಆವಶ್ಯಕ. ಶೈಲಾಧಿಪತಿಯಾದ ತಿಲಾಚಲವೇ, ಸಂಸಾರದಿಂದ ನನ್ನನ್ನು ಪಾರುಮಾಡು. ನಿನಗೆ ನಮಸ್ಕಾರ."

೬. ಹೀಗೆ ಪ್ರಾರ್ಥಿಸಿ ಶ್ರೇಷ್ಠವಾದ ತಿಲಪರ್ವತವನ್ನು ದಾನಮಾಡುವಾತನು ವೈಷ್ಣವಸಾನ್ನಿಧ್ಯವನ್ನು ಪಡೆಯುವನು. ಅವನಿಗೆ ಪುನರಾವೃತ್ತಿಯಿಲ್ಲ.

೭. ಅವನು ದೀರ್ಘಾಯುಷ್ಮಂತನಾಗಿ, ಪುತ್ರಪೌತ್ರರನ್ನು ಪಡೆದು ಆನಂದಿಸುವನು. ಪಿತೃಗಳು, ದೇವತೆಗಳು ಮತ್ತು ಗಂಧರ್ವರಿಂದ ಪೂಜೆಯನ್ನು ಕೈಗೊಂಡು ಸ್ವರ್ಗವನ್ನು ಸೇರುವನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ತಿಲಾಚಲದ ದಾನ ವಿಧಿಯನ್ನೂ ಅದರ ಮಾಹಾತ್ಮ್ಯವನ್ನೂ ತಿಳಿಸಿದೆ. ಹತ್ತು, ಐದು ಅಥವಾ ಮೂರು ಕೊಳಗ ಎಳ್ಳಿನಿಂದ ತಿಲಪರ್ವತವನ್ನೂ, ಅದರ ಸುತ್ತಲೂ ಉಪಪರ್ವತಗಳನ್ನೂ ರಚಿಸಬೇಕು. ಅವುಗಳ ರಚನಾ ವಿಧಾನವೆಲ್ಲವೂ ಹಿಂದಿನ ಪರ್ವತಗಳಂತೆಯೇ. ಮಧುದೈತ್ಯನನ್ನು ಸಂಹಾರಮಾಡಿದಾಗ ಮಹಾವಿಷ್ಣುವಿನ 'ಸ್ವೇದ' ಬೆವರಿನಿಂದ ಎಳ್ಳು, ದರ್ಭೆ, ಉದ್ದು ಇವು ಜನಿಸಿದುವು. ಇದರಿಂದ ಎಳ್ಳಿಗೆ ಪ್ರಾಶಸ್ತ್ಯವು ಬಂದಿತು. ತಿಲಪರ್ವತವನ್ನು ದಾನಮಾಡುವಾತನು ಇಹದಲ್ಲಿ ಪುತ್ರ ಪೌತ್ರ ಸಂಪತ್ತನ್ನು ಪಡೆಯುವನು. ಪರದಲ್ಲಿ ಪುನರಾವೃತ್ತಿರಹಿತವಾದ ವಿಷ್ಣುಲೋಕವನ್ನೈದುವನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ತಿಲಾಚಲಕೀರ್ತನವೆಂಬ
ಎಂಬತ್ತೇಳನೆಯ ಅಧ್ಯಾಯವು ಮುಗಿದುದು.

## ಅಥಾಷ್ಟಾಶೀತಿತಮೋಽಧ್ಯಾಯಃ

॥ ಈಶ್ವರ ಉವಾಚ ॥

ಅಥಾತಃ ಸಂಪ್ರವಕ್ಷ್ಯಾಮಿ ಕಾರ್ಪಾಸಾಚಲಮುತ್ತಮಂ ।
ಯತ್ಪ್ರದಾನಾನ್ನರೋ ನಿತ್ಯಮಾಪ್ನೋತಿ ಪರಮಂ ಪದಂ ॥ ೧ ॥

ಕಾರ್ಪಾಸಪರ್ವತಸ್ತದ್ವದ್ವಿಂಶದ್ಭಾರೈರಿಹೋತ್ತಮಃ ।
ದಶಭಿರ್ಮಧ್ಯಮಃ ಪ್ರೋಕ್ತಃ ಪಂಚಭಿಸ್ತ್ವಧಮಃ ಸ್ಮೃತಃ ।
ಭಾರೇಣಾಲ್ಪಧನೋ ದದ್ಯಾದ್ವಿತ್ತಶಾಠ್ಯವಿವರ್ಜಿತಃ ॥ ೨ ॥

ಧಾನ್ಯಪರ್ವತವತ್ಸರ್ವಮಾಸಾದ್ಯ ಮುನಿಪುಂಗವ ।
ಪ್ರಭಾತಾಯಾಂ ತು ಶರ್ವರ್ಯಾಂ ದದ್ಯಾದಿದಮುದೀರಯೇತ್ ॥ ೩ ॥

ತ್ವಮೇವಾವರಣಂ ಯಸ್ಮಾಲ್ಲೋಕಾನಾಮಿಹ ಸರ್ವದಾ ।
ಕಾರ್ಪಾಸಾದ್ರೇ ನಮಸ್ತುಭ್ಯಮಘೌಘಧ್ವಂಸನೋ ಭವ ॥ ೪ ॥

---

೧. ಈಶ್ವರನು ಹೇಳಿದನು.—ಇನ್ನು ಅತಿ ಶ್ರೇಷ್ಠವೆನಿಸಿದ ಹತ್ತಿಯ ಬೆಟ್ಟದ ದಾನವಿಧಿಯನ್ನು ಹೇಳುತ್ತೇನೆ ಕೇಳು. ಈ ದಾನದಿಂದ ಮಾನವನು ಶಾಶ್ವತವಾದ ಪರಮಪದವನ್ನೈದುವನು.

೨. ಇಪ್ಪತ್ತು ಭಾರಗಳಿಂದಾದ ಹತ್ತಿಯ ಪರ್ವತವು ಉತ್ತಮ. ಹತ್ತು ಭಾರಗಳಿಂದ ಮಧ್ಯಮ. ಐದರಿಂದಾದರೆ ಅಧಮವು. ಬಡವನಾದರೂ ಒಂದು ಭಾರ ಹತ್ತಿಯನ್ನು ಪರ್ವತಾಕಾರವಾಗಿ ರಚಿಸಿ ದಾನಮಾಡಬೇಕು. ದ್ರವ್ಯದಲ್ಲಿ ಕಾರ್ಪಣ್ಯವನ್ನೆಸಗಬಾರದು.

೩. ಮುನಿವರ್ಯನಾದ ಓ ನಾರದಾ, ಧಾನ್ಯಪರ್ವತದಂತೆಯೇ ಎಲ್ಲವನ್ನೂ ರಚಿಸಿ, ಪ್ರಾತಃಕಾಲವಾದ ಬಳಿಕ ಈ ಮುಂದಿನ ಮಂತ್ರವನ್ನು ಹೇಳಿ ದಾನ ಮಾಡಬೇಕು.

೪. "ಲೋಕಗಳಿಗೆಲ್ಲ ಯಾವಾಗಲೂ ನೀನೇ ಆವರಣವಾಗಿರುವೆ. ಹತ್ತಿಯ ಬೆಟ್ಟವೇ, ನಿನಗೆ ನಮಸ್ಕಾರ. ನನ್ನ ಪಾಪರಾಶಿಯನ್ನು ಪರಿಹರಿಸು."

**ಇತಿ ಕಾರ್ಪಾಸಶೈಲೇಂದ್ರಂ ಯೋ ದದ್ಯಾಚ್ಛರ್ವಸನ್ನಿಧೌ ।**
**ರುದ್ರಲೋಕೇ ವಸೇತ್ಕಲ್ಪಂ ತತೋ ರಾಜಾ ಭವೇದಿಹ ॥ ೫ ॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಕಾರ್ಪಾಸಶೈಲಕೀರ್ತನಂ**
**ನಾಮಾಷ್ಟಾಶೀತಿತಮೋಽಧ್ಯಾಯಃ**

---

೫. ಹೀಗೆ ಹತ್ತಿಯ ಪರ್ವತವನ್ನು ಶಿವಸಾನ್ನಿಧ್ಯದಲ್ಲಿ ದಾನಮಾಡುವಾತನು ಕಲ್ಪಕಾಲ ಪೂರ್ತಿಯಾಗಿ ಶಿವಲೋಕದಲ್ಲಿ ವಾಸಿಸುವನು. ಬಳಿಕ ಈ ಲೋಕದಲ್ಲಿ ರಾಜನಾಗಿ ಜನಿಸುವನು.

## ಅಧ್ಯಾಯದ ಸಾರಾಂಶ

ಈ ಅಧಾಯವು ಹತ್ತಿಯನ್ನು ಪರ್ವತಾಕೃತಿಯಿಂದ ರಚಿಸಿ ದಾನಮಾಡುವ ವಿಧಾನವನ್ನು ತಿಳಿಸುತ್ತದೆ.

ಇದರ ರಚನಾ ವಿಧಾನ, ಪೂಜೆ, ಹೋಮ ಇವೆಲ್ಲವೂ ಹಿಂದಿನ ಕ್ರಮವನ್ನೇ ಹೋಲುವುವು. ಶಿವಸಾನ್ನಿಧ್ಯದಲ್ಲಿ ಇದನ್ನು ದಾನಮಾಡುವಾತನು ರುದ್ರಲೋಕದಲ್ಲಿ ಕಲ್ಪಪೂರ್ತಿಯಾಗಿ ವಾಸಮಾಡಿ, ರಾಜನಾಗಿ ಭೂಲೋಕದಲ್ಲಿ ಜನಿಸುವನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಕಾರ್ಪಾಸಶೈಲಕೀರ್ತನವೆಂಬ
ಎಂಬತ್ತೆಂಟನೆಯ ಅಧ್ಯಾಯವು ಮುಗಿದುದು.

## ಅಥ ಏಕೋನನವತಿತಮೋಽಧ್ಯಾಯಃ

|| ಈಶ್ವರ ಉವಾಚ ||

ಅತಃ ಪರಂ ಪ್ರವಕ್ಷ್ಯಾಮಿ ಘೃತಾಚಲಮನುತ್ತಮಂ ।
ತೇಜೋಽಮೃತಮಯಂ ದಿವ್ಯಂ ಮಹಾಪಾತಕನಾಶನಂ || ೧ ||

ವಿಂಶತ್ಯಾ ಘೃತಕುಂಭಾನಾಮುತ್ತಮಃ ಸ್ಯಾದ್ಘೃತಾಚಲಃ ।
ದಶಭಿರ್ಮಧ್ಯಮಃ ಪ್ರೋಕ್ತಃ ಪಂಚಭಿಸ್ತ್ವಧಮಃ ಸ್ಮೃತಃ || ೨ ||

ಅಲ್ಪವಿತ್ತೋಽಪಿ ಯಃ ಕುರ್ಯಾದ್ದ್ವಾಭ್ಯಾಮಿಹ ವಿಧಾನತಃ ।
ವಿಷ್ಕಂಭಪರ್ವತಾಂಸ್ತದ್ವಚ್ಚತುರ್ಭಾಗೇನ ಕಲ್ಪಯೇತ್ || ೩ ||

ಶಾಲಿತುಂಡಲಪಾತ್ರಾಣಿ ಕುಂಭೋಪರಿ ನಿವೇಶಯೇತ್ ।
ಕಾರಯೇತ್ಸಂಹತಾನುಚ್ಚಾನ್ಯಥಾಶೋಭಂ ವಿಧಾನತಃ || ೪ ||

---

೧. ಈಶ್ವರನು ಹೇಳಿದನು.—ತೇಜೋಮಯವೂ, ಅಮೃತಮಯವೂ, ಮಹಾಪಾತಕನಾಶನವೂ ಆದ ಅತಿಶ್ರೇಷ್ಠವೆನಿಸಿದ ಘೃತಾಚಲದ (ತುಪ್ಪದ ಬೆಟ್ಟದ) ದಾನವಿಧಾನವನ್ನು ಇನ್ನು ಹೇಳುವೆನು.

೨. ಇಪ್ಪತ್ತು ಕುಂಭಗಳ ತುಪ್ಪದಿಂದ ರಚಿಸಿದ ಘೃತಪರ್ವತವು ಉತ್ತಮವೆನಿಸುವುದು. ಹತ್ತರಿಂದ ಮಧ್ಯಮವೂ, ಐದರಿಂದ ಕನಿಷ್ಠವೂ ಆಗುವುವು.

೩. ಬಡವನಾದರೂ ಶಾಸ್ತ್ರವಿಧಿಯನ್ನನುಸರಿಸಿ ಎರಡು ಗಡಿಗೆಗಳಷ್ಟು ತುಪ್ಪದಿಂದಲಾದರೂ ಘೃತಪರ್ವತವನ್ನು ರಚಿಸಬೇಕು. ಹಿಂದೆ ಹೇಳಿದಂತೆಯೇ ಅದರ ಕಾಲುಪಾಲಿನಿಂದ ಉಪಪರ್ವತಗಳನ್ನು ನಿರ್ಮಿಸಬೇಕು.

೪. ಕುಂಭಗಳ ಮೇಲೆ ಅಕ್ಕಿ ತುಂಬಿದ ಪಾತ್ರೆಗಳನ್ನು ಇರಿಸಬೇಕು. ಅಂದವಾಗಿ ಕಾಣುವಂತೆ ಉನ್ನತವಾದ ಕುಂಭಗಳನ್ನು ಒಂದಕ್ಕೊಂದು ಸೇರಿದಹಾಗೆ ಇಡಬೇಕು.

ವೇಷ್ಟಯೇಚ್ಛುಕ್ಲವಾಸೋಭಿರಿಕ್ಷುದಂಡಫಲಾದಿಕೈಃ ।
ಧಾನ್ಯಪರ್ವತವಚ್ಛೇಷಂ ವಿಧಾನಮಿಹ ಪಠ್ಯತೇ ॥ ೫ ॥

ಅಧಿವಾಸನಪೂರ್ವಂ ಚ ತದ್ವದ್ಧೋಮಸುರಾರ್ಚನಂ ।
ಪ್ರಭಾತಾಯಾಂ ತು ಶರ್ವರ್ಯಾಂ ಗುರವೇ ತನ್ನಿವೇದಯೇತ್ ।
ವಿಷ್ಕಂಭಪರ್ವತಾಂಸ್ತದ್ವದೃತ್ವಿಗ್ಭ್ಯಃ ಶಾಂತಮಾನಸಃ ॥ ೬ ॥

ಸಂಯೋಗಾದ್ಘೃತಮುತ್ಪನ್ನಂ ಯಸ್ಮಾದಮೃತತೇಜಸೋಃ ।
ತಸ್ಮಾದ್ಘೃತಾರ್ಚಿರ್ವಿಶ್ವಾತ್ಮಾ ಪ್ರೀಯತಾಮತ್ರ ಶಂಕರಃ ॥ ೭ ॥

ಯಸ್ಮಾತ್ತೇಜೋಮಯಂ ಬ್ರಹ್ಮ ಘೃತೇ ತದ್ವಿದ್ಧ್ಯವಸ್ಥಿತಂ ।
ಘೃತಪರ್ವತರೂಪೇಣ ತಸ್ಮಾತ್ತ್ವಂ ಪಾಹಿ ನೋಽನಿಶಂ ॥ ೮ ॥

ಅನೇನ ವಿಧಿನಾ ದದ್ಯಾದ್ಘೃತಾಚಲಮನುತ್ತಮಂ ।
ಮಹಾಪಾತಕಯುಕ್ತೋಽಪಿ ಲೋಕಮಾಪ್ನೋತಿ ಶಾಂಕರಂ ॥ ೯ ॥

---

೫. ಬಿಳಿಯ ವಸ್ತ್ರಗಳನ್ನು ಧರಿಸಿ ಕಬ್ಬಿನ ಜಲ್ಲೆ, ಹಣ್ಣುಗಳು ಇವನ್ನು ಸುತ್ತಲೂ ಇರಿಸಬೇಕು. ಉಳಿದ ವಿಧಾನಗಳೆಲ್ಲವೂ ಧಾನ್ಯಪರ್ವತದಂತೆಯೇ ಸರಿ.

೬. ಗಂಧಪುಷ್ಪಾದಿಗಳ ಸಂಸ್ಕಾರಪೂರ್ವಕವಾಗಿ ಇಂದ್ರಾದಿ ಲೋಕಪಾಲಕರನ್ನು ನಿವೇಶಮಾಡುವುದು, ಹೋಮ, ದೇವತಾಪೂಜೆ ಇವೆಲ್ಲವನ್ನೂ ಧಾನ್ಯಪರ್ವದಂತೆಯೇ ನಡೆಸಬೇಕು. ಪ್ರಾತಃಕಾಲವಾದ ಮೇಲೆ ಪ್ರಧಾನಪರ್ವತವನ್ನು ಆಚಾರ್ಯನಿಗೂ ಉಪಪರ್ವತಗಳನ್ನು ಋತ್ವಿತ್ಕುಗಳಿಗೂ ಶಾಂತಚಿತ್ತದಿಂದ ದಾನ ಮಾಡಬೇಕು.

೭. "ಅಮೃತ ಮತ್ತು ತೇಜಸ್ಸುಗಳ ಸಂಯೋಗದಿಂದ ತುಪ್ಪವು ಉತ್ಪನ್ನವಾಯಿತು. ಆದಕಾರಣ ಘೃತದ ತೇಜಸ್ಸಿನಿಂದ ಕೂಡಿದ ಶಂಕರನು ಈ ದಾನ ವಿಧಿಯಿಂದ ಪ್ರೀತನಾಗಲಿ.

೮. ಬ್ರಹ್ಮವು ತೇಜೋಮಯವಾದುದು. ಅದು ಘೃತದಲ್ಲಿ ನೆಲೆಸಿರುವುದೆಂದು ತಿಳಿಯಬೇಕು. ಘೃತಪರ್ವತರೂಪದಿಂದಿರುವ ಓ ಭಗವಂತಾ, ನಮ್ಮನ್ನು ನೀನು ಯಾವಾಗಲೂ ಸಲಹು."

೯. ಅತಿ ಶ್ರೇಷ್ಠವಾದ ಘೃತಾಚಲವನ್ನು ಈ ವಿಧಿಯನ್ನನುಸರಿಸಿ ದಾನ ಮಾಡಬೇಕು. ಬ್ರಹ್ಮಹತ್ಯಾದಿ ಮಹಾಪಾತಕಗಳನ್ನು ಮಾಡಿದ್ದರೂ ಆತನು ಶಿವಲೋಕವನ್ನು ಸೇರುವನು.

**ಹಂಸಸಾರಸಯುಕ್ತೇನ ಕಿಂಕಿಣೀಜಾಲಮಾಲಿನಾ ।**
**ವಿಮಾನೇನಾಽಪ್ಸರೋಭಿಶ್ಚ ಸಿದ್ಧವಿದ್ಯಾಧರೈರ್ವೃತಃ ॥೧೦॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಘೃತಾಚಲಕೀರ್ತನಂ**
**ನಾಮೈಕೋನನವತಿತಮೋಽಧ್ಯಾಯಃ**

---

೧೦. ಹಂಸಗಳನ್ನೂ ಸಾರಸಗಳನ್ನೂ ಹೂಡಿದ ವಿಮಾನದಲ್ಲಿ ಕುಳಿತು, ಕಿರುಗಂಟೆಗಳ ಸಾಲು ಧ್ವನಿಮಾಡುತ್ತಿರಲು, ಅಪ್ಸರಸ್ತ್ರೀಯರು, ಸಿದ್ಧರು, ವಿದ್ಯಾಧರರು, ಪಿತೃಗಳು ಇವರೊಡನೆ ವಿಹರಿಸುತ್ತಿರುವನು. ಈ ಭೋಗವು ಚತುರ್ಮುಖ ಬ್ರಹ್ಮನ ಅವಸಾನಕಾಲದ ವರೆಗೂ ನಡೆದುಕೊಂಡು ಬರುವುದು.

## ಅಧ್ಯಾಯದ ಸಾರಾಂಶ

ಘೃತಪರ್ವತದ ದಾನವಿಧಿಯನ್ನು ಈ ಅಧ್ಯಾಯವು ತಿಳಿಸುತ್ತದೆ.

ಇಪ್ಪತ್ತು, ಹತ್ತು ಮತ್ತು ಐದು ಗಡಿಗೆ ತುಪ್ಪದಿಂದ ಆದ ಪರ್ವತವು ಕ್ರಮವಾಗಿ ಉತ್ತಮ ಮಧ್ಯಮ ಮತ್ತು ಅಧಮವೆನಿಸುವುದು. ಧಾನ್ಯಪರ್ವತದಂತೆಯೇ ಇದರಲ್ಲೂ ವಿಷ್ಕಂಭಪರ್ವತಗಳನ್ನು ನಿರ್ಮಿಸಿ ಲೋಕಪಾಲಾದಿ ನಿವೇಶವನ್ನೂ, ದೇವತಾಪೂಜೆಯನ್ನೂ ನಡೆಸಬೇಕು. ಮಧ್ಯದ ಪರ್ವತವನ್ನು ಆಚಾರ್ಯನಿಗೂ ಉಪಪರ್ವತಗಳನ್ನು ಋತ್ವಿಕ್ಕುಗಳಿಗೂ ದಾನಮಾಡಬೇಕು. ಈ ದಾನದಿಂದ ಮಹಾಪಾತಕಗಳು ಪರಿಹಾರವಾಗುವುವು. ಬ್ರಹ್ಮನ ಅವಸಾನಕಾಲದ ವರೆಗೂ ಸಿದ್ಧವಿದ್ಯಾಧರಾದಿಗಳೊಡನೆ ವಿಮಾನದಲ್ಲಿ ಸುಖಿಸಬಹುದಾದ ಅನಂತಪುಣ್ಯವು ಲಭಿಸುವುದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಘೃತಾಚಲಕೀರ್ತನವೆಂಬ
ಎಂಬತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

## ಅಥ ನವತಿತಮೋಽಧ್ಯಾಯಃ

॥ ಈಶ್ವರ ಉವಾಚ ॥

ಅತಃ ಪರಂ ಪ್ರವಕ್ಷ್ಯಾಮಿ ರತ್ನಾಚಲಮನುತ್ತಮಂ ।
ಮುಕ್ತಾಫಲಸಹಸ್ರೇಣ ಪರ್ವತಃ ಸ್ಯಾದನುತ್ತಮಃ ॥ ೧ ॥

ಮಧ್ಯಮಃ ಪಂಚಶತಕಸ್ತ್ರಿಶತೇನಾಧಮಃ ಸ್ಮೃತಃ ।
ಚತುರ್ಥಾಂಶೇನ ವಿಷ್ಕಂಭಪರ್ವತಾಃ ಸ್ಯುಃ ಸಮಂತತಃ ॥ ೨ ॥

ಪೂರ್ವೇಣ ವಜ್ರಗೋಮೇದೈರ್ದಕ್ಷಿಣೇನೇಂದ್ರನೀಲಕೈಃ ।
ಪದ್ಮರಾಗಯುತಃ ಕಾರ್ಯೋ ವಿದ್ವದ್ಭಿರ್ಗಂಧಮಾದನಃ ॥ ೩ ॥

ವೈಡೂರ್ಯವಿದ್ರುಮೈಃ ಪಶ್ಚಾತ್ಸಂಮಿಶ್ರೋ ವಿಮಲಾಚಲಃ ।
ಪದ್ಮರಾಗೈಃ ಸಸೌವರ್ಣೈರುತ್ತರೇಣ ಚ ವಿನ್ಯಸೇತ್ ॥ ೪ ॥

---

೧. ಈಶ್ವರನು ಹೇಳಿದನು.—ತರುವಾಯ ಅತಿ ಶ್ರೇಷ್ಠವೆನಿಸಿದ ರತ್ನಪರ್ವತದ ದಾನವಿಧಾನವನ್ನು ಹೇಳುವೆನು. ಒಂದು ಸಾವಿರ ಮುತ್ತುಗಳಿಂದಾದ ಪರ್ವತವು ಉತ್ತಮವೆನಿಸುವುದು.

೨. ಐನೂರು ಮುತ್ತುಗಳಿಂದಾದುದಕ್ಕೆ ಮಧ್ಯಮವೆಂದೂ, ಮುನ್ನೂರರಿಂದಾದುದಕ್ಕೆ ಅಧಮವೆಂದೂ ಹೆಸರು. ಸುತ್ತಲಿನ ಉಪಪರ್ವತಗಳು ಇದರ ಕಾಲುಪಾಲು ಅಳತೆಯವುಗಳಾಗಿರಬೇಕು.

೩. ಪೂರ್ವದಿಕ್ಕಿನಲ್ಲಿ ವಜ್ರಗಳಿಂದಲೂ, ಗೋಮೇದಕಗಳಿಂದಲೂ ವಿಷ್ಕಂಭಪರ್ವತವನ್ನು ರಚಿಸಬೇಕು. ದಕ್ಷಿಣದಲ್ಲಿ ಇಂದ್ರನೀಲ ಮತ್ತು ಪದ್ಮರಾಗ ರತ್ನಗಳಿಂದ ಗಂಧಮಾದನ ಪರ್ವತವನ್ನೆಸಗಬೇಕು.

೪. ವೈಡೂರ್ಯಗಳಿಂದಲೂ, ಹವಳಗಳಿಂದಲೂ ಮಿಶ್ರವಾದ ನಿರ್ಮಲ ಪರ್ವತವನ್ನು ಪಶ್ಚಿಮದಿಕ್ಕಿನಲ್ಲೂ, ಸುವರ್ಣಮಿಶ್ರವಾದ ಪುಷ್ಪರಾಗಗಳಿಂದ ಮತ್ತೊಂದು ಪರ್ವತವನ್ನು ಉತ್ತರದಿಕ್ಕಿನಲ್ಲೂ ವಿರಚಿಸಬೇಕು.

**ಧಾನ್ಯಪರ್ವತವತ್ಸರ್ವಮತ್ರಾಪಿ ಪರಿಕಲ್ಪಯೇತ್ ।**
**ತದ್ವದಾವಾಹನಂ ಕುರ್ಯಾದ್ವೃಕ್ಷಾನ್ ದೇವಾಂಶ್ಚ ಕಾಂಚನಾನ್** ॥ ೫ ॥

**ಪೂಜಯೇತ್ಪುಷ್ಪಗಂಧಾದ್ಯೈಃ ಪ್ರಭಾತೇ ಚ ವಿಮತ್ಸರಃ ।**
**ಪೂರ್ವವದ್ಗುರುಋತ್ವಿಗ್ಭ್ಯ ಇಮಾನ್ಮಂತ್ರಾನುದೀರಯೇತ್** ॥ ೬ ॥

**ಯದಾ ದೇವಗಣಾಃ ಸರ್ವೇ ಸರ್ವರತ್ನೇಷ್ವವಸ್ಥಿತಾಃ ।**
**ತ್ವಂ ಚ ರತ್ನಮಯೋ ನಿತ್ಯಂ ನಮಸ್ತೇಽಸ್ತು ಸದಾಽಚಲ** ॥ ೭ ॥

**ಯಸ್ಮಾದ್ರತ್ನಪ್ರದಾನೇನ ತುಷ್ಟಿಂ ಪ್ರಕುರತೇ ಹರಿಃ ।**
**ಸದಾ ರತ್ನಪ್ರದಾನೇನ ತಸ್ಮಾನ್ನಃ ಪಾಹಿ ಪರ್ವತ** ॥ ೮ ॥

**ಅನೇನ ವಿಧಿನಾ ಯಸ್ತು ದದ್ಯಾದ್ರತ್ನಮಯಂ ಗಿರಿಂ ।**
**ಸ ಯಾತಿ ವಿಷ್ಣುಸಾಲೋಕ್ಯಮಮರೇಶ್ವರಪೂಜಿತಃ** ॥ ೯ ॥

---

೫. ಧಾನ್ಯಪರ್ವತದಂತೆಯೇ ಎಲ್ಲವನ್ನೂ ರಚಿಸಿ ಅಲ್ಲಿನಂತೆಯೇ ಆವಾಹನವನ್ನು ಮಾಡಬೇಕು. ವೃಕ್ಷಗಳೂ, ದೇವತೆಗಳೂ ಸುವರ್ಣಮಯವಾಗಿರಬೇಕು.

೬. ಪ್ರಾತಃಕಾಲದಲ್ಲಿ ಶುದ್ಧಮನಸ್ಕನಾಗಿ ಗಂಧಪುಷ್ಪಾದಿಗಳಿಂದ ಪೂಜಿಸಬೇಕು. ಮೇಲಿನಂತೆಯೇ ಆಚಾರ್ಯನಿಗೂ ಋತ್ವಿಕ್ಕುಗಳಿಗೂ ಮುಂದಿನ ಮಂತ್ರವನ್ನು ಹೇಳಿ ದಾನಮಾಡಬೇಕು.

೭. "ಎಲ್ಲ ರತ್ನಗಳಲ್ಲಿಯೂ ದೇವತೆಗಳು ನೆಲೆಸಿರುವರು. ಎಲೈ ರತ್ನಾಚಲವೇ, ನೀನು ಸದಾ ರತ್ನಮಯನು. ನಿನಗೆ ನಿತ್ಯವೂ ನಮಸ್ಕಾರ.

೮. ರತ್ನಗಳನ್ನು ದಾನಮಾಡುವುದರಿಂದ ಮಹಾವಿಷ್ಣುವು ತುಷ್ಟನಾಗುತ್ತಾನೆ. ಆದುದರಿಂದ, ಎಲೈ ಪರ್ವತವೇ, ನೀನು ನಮಗೆ ಯಾವಾಗಲೂ ರತ್ನಗಳನ್ನಿತ್ತು ರಕ್ಷಿಸು.''

೯. ಈ ವಿಧಾನದಿಂದ ರತ್ನ ಪರ್ವತವನ್ನು ದಾನಮಾಡುವಾತನು ದೇವೇಂದ್ರನಿಂದ ಪೂಜಿತನಾಗಿ ಮಹಾವಿಷ್ಣುವಿನ ಸಾಲೋಕ್ಯವನ್ನು ಪಡೆಯುವನು.

**ಯಾವತ್ಕಲ್ಪಶತಂ ಸಾಗ್ರಂ ವಸೇಚ್ಚೇಹ ನರಾಧಿಪ ।**
**ರೂಪಾರೋಗ್ಯಗುಣೋಪೇತಃ ಸಪ್ತದ್ವೀಪಾಧಿಪೋ ಭವೇತ್** ॥೧೦॥

**ಬ್ರಹ್ಮಹತ್ಯಾದಿಕಂ ಕಿಂಚಿದ್ಯದತ್ರಾಮುತ್ರ ವಾ ಕೃತಂ ।**
**ತತ್ಸರ್ವಂ ನಾಶಮಾಯಾತಿ ಗಿರಿರ್ವಜ್ರಹತೋ ಯಥಾ** ॥೧೧॥

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ರತ್ನಾಚಲಕೀರ್ತನಂ**
**ನಾಮ ನವತಿತಮೋಽಧ್ಯಾಯಃ**

---

೧೦. ಈ ಭೋಗಲೋಕದಲ್ಲಿ ಕಲ್ಪಶತಗಳ ಕಾಲ ಪೂರ್ಣವಾಗಿ ವಾಸ ಮಾಡುವನು. ರೂಪ, ಆರೋಗ್ಯ ಮುಂತಾದ ಗುಣಗಳಿಂದ ಕೂಡಿ ಸಪ್ತದ್ವೀಪಾಧಿಪತ್ಯವನ್ನು ಅನುಭವಿಸುವನು.

೧೧. ಈ ಜನ್ಮದಲ್ಲೋ, ಬೇರೆ ಜನ್ಮದಲ್ಲೋ ಮಾಡಿದ ಬ್ರಹ್ಮಹತ್ಯಾದಿ ಪಾಪವೇನೇ ಇರಲಿ, ಅದು ವಜ್ರಾಯುಧಹತವಾದ ಪರ್ವತದಂತೆ ನಾಶವಾಗುವುದು.

## ಅಧ್ಯಾಯದ ಸಾರಾಂಶ

ರತ್ನಪರ್ವತದ ದಾನವಿಧಿಯು ಈ ಅಧ್ಯಾಯದಲ್ಲಿ ವಿವರಿಸಲ್ಪಟ್ಟಿದೆ.

ತನ್ನ ಯೋಗ್ಯತಾನುಸಾರವಾಗಿ ಉತ್ತಮ, ಮಧ್ಯಮ ಅಥವಾ ಅಧಮ ಪ್ರಮಾಣದ ರತ್ನಗಳಿಂದ ಈ ಪರ್ವತವನ್ನು ರಚಿಸಬೇಕು. ಧಾನ್ಯಪರ್ವತದಲ್ಲಿ ಮಾಡಿದಂತೆಯೇ ವಿಷ್ಕಂಭಪರ್ವತಗಳು, ಸುವರ್ಣ ವೃಕ್ಷಗಳು, ದೇವತೆಗಳು, ದಿಕ್ಪಾಲಕರು ಎಲ್ಲರನ್ನೂ ಸ್ಥಾಪಿಸಿ, ಆವಾಹನ, ಪೂಜೆ, ಹೋಮ ಮುಂತಾದುವನ್ನು ನಡೆಸಬೇಕು. ಬಳಿಕ ಆಚಾರ್ಯನಿಗೂ, ನಾಲ್ಕುಜನ ಋತ್ವಿಕ್ಕುಗಳಿಗೂ ಆ ಪರ್ವತಗಳನ್ನು ದಾನಕೊಡಬೇಕು. ಈ ಮಹಾದಾನವನ್ನು ಮಾಡುವಾತನು ದೇವೇಂದ್ರನಿಂದ ಮಾನ್ಯನಾಗಿ ವಿಷ್ಣುಲೋಕವನ್ನೈದುವನು. ಬ್ರಹ್ಮಹತ್ಯಾದಿ ಸಮಸ್ತ ಪಾತಕಗಳು—ಅವು ಯಾವ ಜನ್ಮದಲ್ಲಿ ಮಾಡಿದಂತಹವುಗಳಾಗಿರಲಿ—ನಷ್ಟವಾಗುವುವು.

ಶ್ರೀಮತ್ಸ್ಯಮಹಾಪುರಾಣದಲ್ಲಿ ರತ್ನಾಚಲಕೀರ್ತನವೆಂಬ
ತೊಂಬತ್ತನೆಯ ಅಧ್ಯಾಯವು ಮುಗಿದುದು.

## ಅಥ ಏಕನವತಿತಮೋಽಧ್ಯಾಯಃ

॥ ಈಶ್ವರ ಉವಾಚ ॥

ಅತಃ ಪರಂ ಪ್ರವಕ್ಷ್ಯಾಮಿ ರೌಪ್ಯಾಚಲಮನುತ್ತಮಂ ।
ಯತ್ಪ್ರದಾನಾನ್ನರೋ ಯಾತಿ ಸೋಮಲೋಕಮನುತ್ತಮಂ ॥ ೧ ॥

ದಶಭಿಃ ಪಲಸಾಹಸ್ರೈರುತ್ತಮೋ ರಜತಾಚಲಃ ।
ಪಂಚಭಿರ್ಮಧ್ಯಮಃ ಪ್ರೋಕ್ತಸ್ತದರ್ಧೇನಾಧಮಃ ಸ್ಮೃತಃ ॥ ೨ ॥

ಅಶಕ್ತೋ ವಿಂಶತೇರೂರ್ಧ್ವಂ ಕಾರಯೇಚ್ಛಕ್ತಿತಸ್ತದಾ ।
ವಿಷ್ಕಂಭಪರ್ವತಾಂಸ್ತದ್ವತ್ತುರೀಯಾಂಶೇನ ಕಲ್ಪಯೇತ್ ॥ ೩ ॥

ಪೂರ್ವವದ್ರಾಜತಾನ್ ಕುರ್ವನ್ ಮಂದಾರಾದೀನ್ ವಿಧಾನತಃ ।
ಕಲಧೌತಮಯಾಂಸ್ತದ್ವಲ್ಲೋಕೇಶಾನರ್ಚಯೇದ್ಬುಧಃ ॥ ೪ ॥

---

೧. ಈಶ್ವರನು ಹೇಳಿದನು.—ಇನ್ನು ಮುಂದೆ ಬೆಳ್ಳಿಯ ಬೆಟ್ಟದ ದಾನ ವಿಧಾನವನ್ನು ಹೇಳುವೆನು. ಈ ದಾನದಿಂದ ಮಾನವನು ಅತಿ ಶ್ರೇಷ್ಠವಾದ ಚಂದ್ರ ಲೋಕವನ್ನು ಸೇರುವನು.

೨. ಹತ್ತು ಸಾವಿರ ಪಲಪ್ರಮಾಣದ ಬೆಳ್ಳಿಯಿಂದಾದ ಬೆಟ್ಟವು ಉತ್ತಮ. ಐದು ಸಾವಿರದಿಂದಾದರೆ ಮಧ್ಯಮ. ಅದರಲ್ಲಿ ಅರ್ಧತೂಕದಿಂದ ಆಗಿದ್ದರೆ ಅಧಮ ವೆನಿಸುವುದು.

೩. ಎಷ್ಟೇ ಅಶಕ್ತನಾಗಿರಲಿ ಇಪ್ಪತ್ತು ಪಲಗಳಿಗೆ ಕಡಿಮೆ ಇಲ್ಲದಂತೆ ತನ್ನ ಯೋಗ್ಯತೆಗನುಸಾರವಾಗಿ ಪರ್ವತವನ್ನು ರಚಿಸಬೇಕು. ಧಾನ್ಯಪರ್ವತದ ವಿಧಾನ ದಂತೆಯೇ ಈ ತೂಕದ ನಾಲ್ಕರಲ್ಲೊಂದು ಪಾಲಿನಿಂದ ಉಪಪರ್ವತಗಳನ್ನು ಕಲ್ಪಿಸಬೇಕು.

೪. ಹಿಂದಿನಂತೆಯೇ ಮಂದಾರಾದಿವೃಕ್ಷಗಳನ್ನೂ, ಅಷ್ಟದಿಕ್ಪಾಲಕರನ್ನೂ ಬೆಳ್ಳಿಯಿಂದ ನಿರ್ಮಿಸಿ ಆಯಾ ಸ್ಥಳದಲ್ಲಿ ನಿವೇಶಮಾಡಬೇಕು.

**ಬ್ರಹ್ಮವಿಷ್ಣ್ವರ್ಕವಾನ್ ಕಾರ್ಯೋ ನಿತಂಬೋಽತ್ರ ಹಿರಣ್ಮಯಃ ।**
**ರಾಜತಂ ಸ್ಯಾದ್ಯದನ್ಯೇಷಾಂ ಸರ್ವಂ ತದಿಹ ಕಾಂಚನಂ ॥ ೫ ॥**

**ಶೇಷಂ ತು ಪೂರ್ವವತ್ಕುರ್ಯಾದ್ಧೋಮಜಾಗರಣಾದಿಕಂ ।**
**ದದ್ಯಾತ್ತತಃ ಪ್ರಭಾತೇ ತು ಗುರವೇ ರೌಪ್ಯಪರ್ವತಂ ॥ ೬ ॥**

**ವಿಷ್ಕಂಭಶೈಲಾನ್ ಋತ್ವಿಗ್ಭ್ಯಃ ಪೂಜ್ಯ ವಸ್ತ್ರವಿಭೂಷಣೈಃ ।**
**ಇಮಂ ಮಂತ್ರಂ ಪಠನ್ ದದ್ಯಾದ್ದರ್ಭಪಾಣಿರ್ವಿಮತ್ಸರಃ ॥ ೭ ॥**

**ಪಿತೄಣಾಂ ವಲ್ಲಭೋ ಯಸ್ಮಾದ್ಧರೀಂದ್ರಾಣಾಂ ಶಿವಸ್ಯ ಚ ।**
**ಪಾಹಿ ರಜತ ತಸ್ಮಾತ್ತ್ವಂ ಶೋಕಸಂಸಾರಸಾಗರಾತ್ ॥ ೮ ॥**

**ಇತ್ಥಂ ನಿವೇದ್ಯ ಯೋ ದದ್ಯಾದ್ರಜತಾಚಲಮುತ್ತಮಂ ।**
**ಗವಾಮಯುತದಾನಸ್ಯ ಫಲಂ ಪ್ರಾಪ್ನೋತಿ ಮಾನವಃ ॥ ೯ ॥**

---

೫. ಈ ಪರ್ವತದ ತಪ್ಪಲು ಪ್ರದೇಶವನ್ನು ಚಿನ್ನದ ತಗಡಿನಿಂದ ಹೊದಿಸಿ ಅದರಲ್ಲಿ ಬಹ್ಮ, ವಿಷ್ಣು, ಸೂರ್ಯರನ್ನು ಸ್ಥಾಪಿಸಬೇಕು. ಮಿಕ್ಕ ಪರ್ವತಗಳಲ್ಲಿ ಯಾವ ಯಾವುದನ್ನು ಬೆಳ್ಳಿಯಿಂದ ವಿರಚಿಸಬೇಕೋ ಅದೆಲ್ಲವೂ ಇಲ್ಲಿ ಬಂಗಾರದಿಂದ ಆಗಿರುವುದು

೬. ಹೋಮ, ಜಾಗರಣ, ಮುಂತಾದುವೆಲ್ಲವನ್ನೂ ಹಿಂದಿನಂತೆಯೇ ಮಾಡಬೇಕು. ಮರುದಿನ ಪ್ರಾತಃಕಾಲದಲ್ಲಿ ರಜತಪರ್ವತವನ್ನು ದಾನಮಾಡಬೇಕು.

೭. ಋತ್ವಿಕ್ಕುಗಳನ್ನು ವಸ್ತ್ರಾಲಂಕಾರಗಳಿಂದ ಸತ್ಕರಿಸಿ, ಉಪಪರ್ವತಗಳನ್ನು ಕೊಡಬೇಕು. ದಾನಮಾಡುವಾಗ ಬೆರಳಿನಲ್ಲಿ ದರ್ಭೆಯ ಪವಿತ್ರವನ್ನು ಧರಿಸಿ ಶುದ್ಧಮನಸ್ಸಿನಿಂದ ಈ ಮಂತ್ರವನ್ನು ಹೇಳಬೇಕು.

೮. "ಪಿತೃಗಳು, ವಿಷ್ಣು, ಇಂದ್ರ, ಶಿವ ಇವರೆಲ್ಲರಿಗೂ ನೀನು ಪ್ರಿಯನಾಗಿರುವೆ. ಎಲೈ ರಜತಾಚಲವೇ, ದುಃಖಮಯವಾದ ಈ ಸಂಸಾರಸಾಗರದಿಂದ ನನ್ನನ್ನು ಕಾಪಾಡು."

೯. ಹೀಗೆ ಪ್ರಾರ್ಥಿಸಿ ಉತ್ತಮವಾದ ರಜತಪರ್ವತವನ್ನು ದಾನಮಾಡುವ ಮನುಷ್ಯನಿಗೆ ಹತ್ತು ಸಾವಿರ ಗೋದಾನಗಳ ಫಲವು ಬರುತ್ತದೆ.

**ಸೋಮಲೋಕೇ ಸ ಗಂಧರ್ವೈಃ ಕಿನ್ನರಾಪ್ಸರಸಾಂ ಗಣೈಃ ।**
**ಪೂಜ್ಯಮಾನೋ ವಸೇದ್ವಿದ್ವಾನ್ ಯಾವದಾಭೂತಸಂಪ್ಲವಂ ॥೧೦॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ರೌಪ್ಯಾಚಲಕೀರ್ತನಂ**
**ನಾಮೈಕನವತಿತಮೋಽಧ್ಯಾಯಃ**

---

೧೦. ಜ್ಞಾನಿಯಾದ ಆತನು ಚಂದ್ರಲೋಕದಲ್ಲಿ ಗಂಧರ್ವರು, ಕಿನ್ನರರು ಮತ್ತು ಅಪ್ಸರಸ್ತ್ರೀಯರಿಂದ ಮನ್ನಣೆಯನ್ನು ಪಡೆಯುತ್ತ, ಪಂಚಮಹಾಭೂತಗಳು ಮೂಲಪ್ರಕೃತಿಯಲ್ಲಿ ವಿಲೀನವಾಗುವ ವರೆಗೆ ಎಂದರೆ ಮಹಾಪ್ರಳಯದ ವರೆಗೆ ಸುಖಿಸುವನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯವು ರಜತಪರ್ವತದ ದಾನವಿಧಿಯನ್ನು ತಿಳಿಸುತ್ತದೆ.

ಹತ್ತು, ಐದು ಮತ್ತು ಎರಡೂವರೆ ಸಾವಿರ ಪಲಗಳ ತೂಕದ ಬೆಳ್ಳಿಯಿಂದಾದ ಪರ್ವತಗಳು ಕ್ರಮವಾಗಿ ಉತ್ತಮ, ಮಧ್ಯಮ ಮತ್ತು ಅಧಮವೆನಿಸುವವು. ಇವುಗಳಲ್ಲಿ ತನ್ನ ಯೋಗ್ಯತೆಗೆ ತಕ್ಕುದನ್ನು ನಿರ್ಮಿಸಿ ಹಿಂದಿನಂತೆಯೇ ವಿಷ್ಕಂಭಪರ್ವತಾದಿ ಸಕಲ ರಚನೆಯನ್ನು ಮಾಡಬೇಕು. ಪೂಜಾನಂತರ ಪ್ರಾತಃಕಾಲದಲ್ಲಿ ಅವುಗಳನ್ನು ಆಚಾರ್ಯನಿಗೂ, ಋತ್ವಿಕ್ಕುಗಳಿಗೂ ದಾನಮಾಡಬೇಕು ಇದರಿಂದ ಹತ್ತು ಸಾವಿರ ಗೋದಾನಮಾಡಿದಷ್ಟು ಫಲ ಬರುವುದು. ಈ ದಾನಮಾಡಿದವನು ಕಿನ್ನರ ಗಂಧರ್ವಾದಿಗಳಿಂದ ಪೂಜಿತನಾಗಿ ಸೋಮಲೋಕದಲ್ಲಿ ಅನಂತಕಾಲ ಸುಖಿಸುವನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ರೌಪ್ಯಾಚಲಕೀರ್ತನವೆಂಬ
ತೊಂಬತ್ತೊಂದನೆಯ ಅಧ್ಯಾಯವು ಮುಗಿದುದು.



## ಅಥ ದ್ವಿನವತಿತಮೋಽಧ್ಯಾಯಃ

॥ ಈಶ್ವರ ಉವಾಚ ॥

ಅಥಾತಃ ಸಂಪ್ರವಕ್ಷ್ಯಾಮಿ ಶರ್ಕರಾಶೈಲಮುತ್ತಮಂ ।
ಯಸ್ಯ ಪ್ರದಾನಾದ್ವಿಷ್ಣ್ವರ್ಕರುದ್ರಾಸ್ತುಷ್ಯಂತಿ ಸರ್ವದಾ ॥ ೧ ॥

ಅಷ್ಟಾಭಿಃ ಶರ್ಕರಾಭಾರೈರುತ್ತಮಃ ಸ್ಯಾನ್ಮಹಾಚಲಃ ।
ಚತುರ್ಭಿರ್ಮಧ್ಯಮಃ ಪ್ರೋಕ್ತೋ ಭಾರಾಭ್ಯಾಮಧಮಃ ಸ್ಮೃತಃ ॥ ೨ ॥

ಭಾರೇಣ ವಾಽರ್ಧಭಾರೇಣ ಕುರ್ಯಾದ್ಯಃ ಸ್ವಲ್ಪವಿತ್ತವಾನ್ ।
ವಿಷ್ಕಂಭಪರ್ವತಾನ್ ಕುರ್ಯಾತ್ ತುರೀಯಾಂಶೇನ ಮಾನವಃ ॥ ೩ ॥

ಧಾನ್ಯಪರ್ವತವತ್ಸರ್ವಮಾಸಾದ್ಯಾಮರಸಂಯುತಂ ।
ಮೇರೋರುಪರಿ ತದ್ವಚ್ಚ ಸ್ಥಾಪ್ಯ ಹೇಮತರುತ್ರಯಂ ॥ ೪ ॥

---

೧. ಈಶ್ವರನು ಹೇಳಿದನು.—ಬಳಿಕ ಅತಿಶ್ರೇಷ್ಠವೆನಿಸಿದ ಸಕ್ಕರೆಯ ಬೆಟ್ಟದ ರಚನಾವಿಧಿಯನ್ನು ಹೇಳುವೆನು. ಇದನ್ನು ದಾನಮಾಡುವುದರಿಂದ ವಿಷ್ಣು, ಸೂರ್ಯ, ಈಶ್ವರ ಇವರೆಲ್ಲರೂ ಸದಾ ತುಷ್ಟರಾಗುವರು.

೨. ಎಂಟು ಭಾರ ತೂಕದ ಸಕ್ಕರೆಯಿಂದ ರಚಿಸಿದ ಬೆಟ್ಟವು ಉತ್ತಮ. ನಾಲ್ಕು ಭಾರಗಳಿಂದಾದದ್ದು ಮಧ್ಯಮ; ಎರಡು ಭಾರಗಳಿಂದಾದರೆ ಅಧಮ ವೆನಿಸುವುದು.

೩. ಶ್ರೀಮಂತನಲ್ಲದವನು ಒಂದು ಭಾರದ, ಇಲ್ಲವೇ ಅರ್ಧ ಭಾರದ ಸಕ್ಕರೆ ಯಿಂದ ಪರ್ವತವನ್ನು ರಚಿಸಬೇಕು. ಹಿಂದಿನಂತೆ ನಾಲ್ಕರಲ್ಲೊಂದು ಪಾಲಿನಲ್ಲಿ ವಿಷ್ಕಂಭಪರ್ವತಗಳನ್ನು ನಿರ್ಮಿಸಬೇಕು.

೪. ಧಾನ್ಯಪರ್ವತದಂತೆಯೇ ಇದರಲ್ಲೂ ದೇವತೆಗಳನ್ನೂ ದಿಕ್ಪಾಲಕರನ್ನೂ ಸ್ಥಾಪಿಸಬೇಕು. ಹಾಗೆಯೇ ಮಧ್ಯದಲ್ಲಿರುವ ಮೇರುಪರ್ವತದ ಮೇಲ್ಗಡೆಯಲ್ಲಿ ಚಿನ್ನ ದಿಂದ ಮಾಡಿದ ಮೂರು ಮರಗಳನ್ನು ನೆಡಬೇಕು.

ಮಂದಾರಃ ಪಾರಿಜಾತಶ್ಚ ತೃತೀಯಃ ಕಲ್ಪಪಾದಪಃ ।
ಏತದ್ವೃಕ್ಷತ್ರಯಂ ಮೂರ್ಧ್ನಿ ಸರ್ವೇಷ್ವಪಿ ನಿಯೋಜಯೇತ್ ॥ ೫ ॥

ಹರಿಚಂದನಸಂತಾನೌ ಪೂರ್ವಪಶ್ಚಿಮಭಾಗಯೋಃ ।
ನಿವೇಶ್ಯೌ ಸರ್ವಶೈಲೇಷು ವಿಶೇಷಾಚ್ಛರ್ಕರಾಚಲೇ ॥ ೬ ॥

ಮಂದರೇ ಕಾಮದೇವಸ್ತು ಪ್ರತ್ಯಗ್ವಕ್ತ್ರಃ ಸದಾ ಭವೇತ್ ।
ಗಂಧಮಾದನಶೃಂಗೇ ತು ಧನದಃ ಸ್ಯಾದುದಙ್ಮುಖಃ ॥ ೭ ॥

ಪ್ರಾಙ್ಮುಖೋ ವೇದಮೂರ್ತಿಸ್ತು ಹಂಸಃ ಸ್ಯಾದ್ವಿಪುಲಾಚಲೇ ।
ಹೈಮೀ ಸುಪಾರ್ಶ್ವೇ ಸುರಭಿರ್ದಕ್ಷಿಣಾಭಿಮುಖೀ ಭವೇತ್ ॥ ೮ ॥

ಧಾನ್ಯಪರ್ವತವತ್ಸರ್ವಮಾವಾಹನವಿಧಾನಕಂ ।
ಕೃತ್ವಾ ತು ಗುರವೇ ದದ್ಯಾನ್ಮಧ್ಯಮಂ ಪರ್ವತೋತ್ತಮಂ ।
ಋತ್ವಿಗ್ಭ್ಯಶ್ಚತುರಃ ಶೈಲಾನಿಮಾನ್ ಮಂತ್ರಾನುದೀರಯನ್ ॥ ೯ ॥

---

೫. ಮಂದಾರ, ಪಾರಿಜಾತ ಮತ್ತು ಕಲ್ಪವೃಕ್ಷಗಳೆಂಬ ಈ ಮೂರು ಮರಗಳನ್ನು ಎಲ್ಲ ಪರ್ವತಗಳ ಶಿಖರದಲ್ಲೂ ಸ್ಥಾಪಿಸಬೇಕು.

೬. ಎಲ್ಲ ಬೆಟ್ಟಗಳಲ್ಲಿಯೂ ಪೂರ್ವಪಶ್ಚಿಮ ಭಾಗಗಳಲ್ಲಿ ಹರಿಚಂದನ ಮತ್ತು ಸಂತಾನಗಳೆಂಬ ಮರಗಳನ್ನು ನೆಡಬೇಕು. ಮುಖ್ಯವಾಗಿ ಶರ್ಕರಾಚಲದಲ್ಲಿ ಇದು ಅವಶ್ಯಕ.

೭. ಮಂದರಪರ್ವತದಲ್ಲಿ ಕಾಮದೇವನು ಸದಾ ಪಶ್ಚಿಮಾಭಿಮುಖನಾಗಿಯೂ, ಗಂಧಮಾದನ ಶಿಖರದಲ್ಲಿ ಕುಬೇರನು ಉತ್ತರಾಭಿಮುಖನಾಗಿಯೂ ಇರುವರು.

೮. ವಿಪುಲಾಚಲದಲ್ಲಿ ವೇದರೂಪವೆನಿಸಿದ ಹಂಸವು ಪೂರ್ವಮುಖವಾಗಿಯೂ, ಸುಪಾರ್ಶ್ವಪರ್ವತದಲ್ಲಿ ಸುವರ್ಣಮಯವಾದ ಕಾಮಧೇನುವು ದಕ್ಷಿಣಮುಖವಾಗಿಯೂ ಇರುವುವು.

೯. ಆವಾಹನಾದಿ ಸಕಲ ಕಾರ್ಯವನ್ನೂ ಧಾನ್ಯಪರ್ವತಕ್ಕೆ ಮಾಡಿದಂತೆಯೇ ನಡೆಸಬೇಕು. ಬಳಿಕ ಮಧ್ಯಮಪರ್ವತವನ್ನು ಆಚಾರ್ಯನಿಗೂ, ಉಳಿದ ನಾಲ್ಕನ್ನು ಋತ್ವಿಕ್ಕುಗಳಿಗೂ ದಾನಮಾಡಬೇಕು. ಈ ಮಂತ್ರವನ್ನು ಜಪಿಸಬೇಕು.

**ಸೌಭಾಗ್ಯಾಮೃತಸಾರೋಽಯಂ ಪರ್ವತಃ ಶರ್ಕರಾಯುತಃ ।**
**ತಸ್ಮಾದಾನಂದಕಾರೀ ತ್ವಂ ಭವ ಶೈಲೇಂದ್ರ ಸರ್ವದಾ ॥೧೦॥**

**ಅಮೃತಂ ಪಿಬತಾಂ ಯೇ ತು ನಿಪೇತುರ್ಭುವಿ ಶೀಕರಾಃ ।**
**ದೇವಾನಾಂ ತತ್ಸಮುತ್ಥಸ್ತ್ವಂ ಪಾಹಿ ನಃ ಶರ್ಕರಾಚಲ ॥೧೧॥**

**ಮನೋಭವಧನುರ್ಮಧ್ಯಾದುದ್ಭೂತಾ ಶರ್ಕರಾ ಯತಃ ।**
**ತನ್ಮಯೋಽಸಿ ಮಹಾಶೈಲ ಪಾಹಿ ಸಂಸಾರಸಾಗರಾತ್ ॥೧೨॥**

**ಯೋ ದದ್ಯಾಚ್ಛರ್ಕರಾಶೈಲಮನೇನ ವಿಧಿನಾ ನರಃ ।**
**ಸರ್ವಪಾಪೈರ್ವಿನಿರ್ಮುಕ್ತಃ ಸ ಯಾತಿ ಪರಮಂ ಪದಂ ॥೧೩॥**

**ಚಂದ್ರತಾರಾರ್ಕಸಂಕಾಶಮಧಿರುಹ್ಯಾನುಜೀವಿಭಿಃ ।**
**ಸಹೈವ ಯಾನಮಾತಿಷ್ಠೇತ್ತತ್ರ ವಿಷ್ಣುಪ್ರಚೋದಿತಃ ॥೧೪॥**

---

೧೦. "ಶರ್ಕರಾಮಯವಾದ ಈ ಪರ್ವತವು ಸೌಭಾಗ್ಯಾಮೃತದ ಸಾರಭೂತವಾದುದು. ಆದುದರಿಂದ, ಎಲೈ ಪರ್ವತೋತ್ತಮವೇ, ಸರ್ವದಾ ನೀನು ನನಗೆ ಆನಂದಪ್ರದನಾಗು.

೧೧. ಎಲೈ ಶರ್ಕರಾಚಲವೇ, ದೇವತೆಗಳು ಅಮೃತಪಾನವನ್ನು ಮಾಡುತ್ತಿರುವಾಗ ನೆಲದಲ್ಲಿ ಬಿದ್ದ ಹನಿಗಳಿಂದ ನೀನು ಉತ್ಪನ್ನವಾದೆ. ನಮ್ಮನ್ನು ಬಿಡದೆ ರಕ್ಷಿಸು.

೧೨. ಮನ್ಮಥನ ಬಿಲ್ಲೆನಿಸಿದ ಕಬ್ಬಿನ ಮಧ್ಯದಿಂದ ಸಕ್ಕರೆಯು ಹುಟ್ಟಿತು. ಓ ಮಹಾಶೈಲವೇ, ನೀನು ಆ ಸಕ್ಕರೆಯಿಂದಲೇ ಆಗಿರುವೆ. ಸಂಸಾರ ಸಾಗರದಿಂದ ನನ್ನನ್ನು ಕಾಪಾಡು."

೧೩. ಈ ವಿಧಾನದಿಂದ ಶರ್ಕರಾಚಲವನ್ನು ದಾನಮಾಡುವ ಮನುಷ್ಯನು ಸರ್ವಪಾಪಗಳಿಂದಲೂ ಬಿಡುಗಡೆಹೊಂದಿ ಪರಮಪದವನ್ನೈದುವನು.

೧೪. ವಿಷ್ಣುವಿನ ಅಪ್ಪಣೆಯಂತೆ ಚಂದ್ರ, ಸೂರ್ಯ ಮತ್ತು ನಕ್ಷತ್ರಗಳ ಹಾಗೆ ಬೆಳಗುವ ದಿವ್ಯ ವಿಮಾನದಲ್ಲಿ ತನ್ನ ಅನುಜೀವಿಗಳೊಡನೆ ಸುಖಿಸುವನು.

ತತಃ ಕಲ್ಪಶತಾಂತೇ ತು ಸಪ್ತದ್ವೀಪಾಧಿಪೋ ಭವೇತ್ ।
ಆಯುರಾರೋಗ್ಯಸಂಪನ್ನೋ ಯಾವಜ್ಜನ್ಮಾರ್ಬುದತ್ರಯಂ ॥೧೫॥

ಭೋಜನಂ ಶಕ್ತಿತಃ ಕುರ್ಯಾತ್ಸರ್ವಶೈಲೇಷ್ವಮತ್ಸರಃ ।
ಸರ್ವತ್ರಾಕ್ಷಾರಲವಣಮಶ್ನೀಯಾತ್ತದನುಜ್ಞಯಾ ।
ಪರ್ವತೋಪಸ್ಕರಾನ್ ಸರ್ವಾನ್ ಪ್ರಾಪಯೇದ್ಬ್ರಾಹ್ಮಣಾಲಯಂ ॥೧೬॥

॥ ಈಶ್ವರ ಉವಾಚ ॥

ಆಸೀತ್ಪುರಾ ಬೃಹತ್ಕಲ್ಪೇ ಧರ್ಮಮೂರ್ತಿರ್ಜನಾಧಿಪಃ ।
ಸುಹೃಚ್ಛಕ್ರಸ್ಯ ನಿಹತಾ ಯೇನ ದೈತ್ಯಾಃ ಸಹಸ್ರಶಃ ॥೧೭॥

ಸೋಮಸೂರ್ಯಾದಯೋ ಯಸ್ಯ ತೇಜಸಾ ವಿಗತಪ್ರಭಾಃ ।
ಭವಂತಿ ಶತಶೋ ಯೇನ ಶತ್ರವಶ್ಚಾಪರಾಜಿತಾಃ ।
ಯಥೇಚ್ಛಾರೂಪಧಾರೀ ಚ ಮನುಷ್ಯೋಽಪ್ಯಪರಾಜಿತಃ ॥೧೮॥

---

೧೫. ಬಳಿಕ ಮೂರು ಕಲ್ಪಗಳ ಕೊನೆಯಲ್ಲಿ ಸಪ್ತದ್ವೀಪಗಳ ಅಧಿಪತಿಯಾಗುವನು. ಹಲವು ಕೋಟಿ ಜನ್ಮಗಳಲ್ಲಿ ಜನಿಸಿ ಒಂದೊಂದರಲ್ಲೂ ಆಯುರಾರೋಗ್ಯ ಸಂಪತ್ತಿಯನ್ನು ಪಡೆಯುವನು.

೧೬. ಹಿಂದೆ ಹೇಳಿದ ಎಲ್ಲ ಬಗೆಯ ಬೆಟ್ಟಗಳನ್ನು ದಾನಕೊಡುವಾಗಲೂ ಶಕ್ತ್ಯನುಸಾರವಾಗಿ ಶುದ್ಧಮನಸ್ಸಿನಿಂದ ಬ್ರಾಹ್ಮಣಭೋಜನವನ್ನು ಮಾಡಿಸಬೇಕು. ಅವರ ಅಪ್ಪಣೆಯನ್ನು ಪಡೆದು ಉಪ್ಪು ಕಾರಗಳನ್ನುಳಿದು ಭೋಜನಮಾಡಬೇಕು. ಪರ್ವತಕ್ಕೆ ಸಂಬಂಧಪಟ್ಟ ಸಕಲ ಸಾಮಗ್ರಿಗಳನ್ನೂ ಬ್ರಾಹ್ಮಣರ ಮನೆಗೆ ಕಳುಹಿಸಿ ಕೊಡಬೇಕು.

೧೭. ಈಶ್ವರನು ಹೇಳಿದನು.—ಹಿಂದೆ ಬೃಹತ್ಕಲ್ಪದಲ್ಲಿ ಧರ್ಮಸ್ವರೂಪನಾದ ರಾಜನೊಬ್ಬನಿದ್ದನು. ಅವನು ಇಂದ್ರನಿಗೆ ಸ್ನೇಹಿತನಾಗಿದ್ದನು; ಸಾವಿರಗಟ್ಟಲೆ ದೈತ್ಯರನ್ನು ಸಂಹಾರಮಾಡಿದ್ದನು.

೧೮. ಅವನ ತೇಜಸ್ಸಿನಿಂದ ಚಂದ್ರ ಸೂರ್ಯರೂ ಕಾಂತಿಗುಂದುತ್ತಿದ್ದರು. ಹಿಂದೆ ಯಾರಿಗೂ ಸೋಲದ ಶತ್ರುಗಳೂ ಸಹ ನೂರು ಗಟ್ಟಲೆಯಾಗಿ ಅವನ ಮುಂದೆ ತೇಜೋಹೀನರಾಗುತ್ತಿದ್ದರು. ಅವನು ಇಷ್ಟ ಬಂದ ರೂಪವನ್ನು ಧರಿಸಬಲ್ಲವನಾಗಿದ್ದನು. ಮನುಷ್ಯನಾಗಿದ್ದರೂ ಯಾರಿಗೂ ಸೋಲನು.

**ತಸ್ಯ ಭಾನುಮತೀ ನಾಮ ಭಾರ್ಯಾ ತ್ರೈಲೋಕ್ಯಸುಂದರೀ ।**
**ಲಕ್ಷ್ಮೀರಿವದ್ದಿವ್ಯರೂಪೇಣ ನಿರ್ಜಿತಾಽಮರಸುಂದರೀ ॥೧೯॥**

**ರಾಜ್ಞಸ್ತಸ್ಯಾಗ್ರ್ಯಮಹಿಷೀ ಪ್ರಾಣೇಭ್ಯೋಽಪಿ ಗರೀಯಸೀ ।**
**ದಶನಾರೀಸಹಸ್ರಾಣಾಂ ಮಧ್ಯೇ ಶ್ರೀರಿವ ರಾಜತೇ ॥೨೦॥**

**ನೃಪಕೋಟಿಸಹಸ್ರೇಣ ನ ಕದಾಚಿತ್ಸ ಮುಚ್ಯತೇ ।**
**ಕದಾಚಿದಾಸ್ಥಾನಗತಃ ಪಪ್ರಚ್ಛ ಸ ಪುರೋಧಸಂ ॥೨೧॥**

**॥ ರಾಜೋವಾಚ ॥**

**ಭಗವನ್ ಕೇನ ಧರ್ಮೇಣ ಮಮ ಲಕ್ಷ್ಮೀರನುತ್ತಮಾ ।**
**ಕಸ್ಮಾಚ್ಚ ವಿಪುಲಂ ತೇಜೋ ಮಚ್ಛರೀರೇ ಸದೋತ್ತಮಂ ॥೨೨॥**

---

೧೯. ತ್ರಿಲೋಕಸುಂದರಿಯಾಗಿದ್ದ ಭಾನುಮತಿಯೆಂಬಾಕೆಯು ಆತನ ಪತ್ನಿ. ಅವಳು ಲಕ್ಷ್ಮಿಯಂತೆ ದಿವ್ಯರೂಪದಿಂದ ಕೂಡಿದ್ದಳು. ಸೌಂದರ್ಯದಲ್ಲಿ ಅವಳನ್ನು ಯಾರೂ ಮೀರಿಸುವಂತಿರಲಿಲ್ಲ. ಆಕೆಯು ನಿಜವಾಗಿ ದೇವಾಂಗನೆಯಾಗಿದ್ದಳು.

೨೦. ಅವಳು ಆ ರಾಜನ ಪಟ್ಟದ ರಾಣಿ. ಪ್ರಾಣಗಳಿಗಿಂತಲೂ ಪ್ರಿಯಳಾದವಳು. ಹತ್ತು ಸಾವಿರ ಜನ ರಮಣಿಯರ ನಡುವೆ ಆಕೆಯು ಲಕ್ಷ್ಮಿಯಂತೆ ವಿರಾಜಿಸುತ್ತಿದ್ದಳು.

೨೧. ಸಾವಿರಾರು ಕೋಟಿ ರಾಜರು ಅವನನ್ನೆಂದಿಗೂ ಬಿಡದೆ ಸೇವಿಸುತ್ತಿದ್ದರು. ಒಂದು ದಿನ ಆ ರಾಜನು ಆಸ್ಥಾನದಲ್ಲಿ ಕುಳಿತಿರುವಾಗ ಋಷಿವರ್ಯನೂ ಪುರೋಹಿತನೂ ಆದ ವಸಿಷ್ಠಮಹಾಮುನಿಯನ್ನು ಇಂತು ಕೇಳಿದನು.

೨೨. ರಾಜನು ಹೇಳಿದನು.—ಎಲೈ ಪೂಜ್ಯನೇ, ಯಾವ ಧರ್ಮಕಾರ್ಯವನ್ನೆಸಗಿದುದರಿಂದ ನನ್ನಲ್ಲಿ ಅತ್ಯುತ್ತಮವಾದ ಈ ಸಂಪತ್ತು ನೆಲಸಿತು? ಏತರಿಂದ ನನ್ನ ದೇಹದಲ್ಲಿ ಯಾವಾಗಲೂ ಅತಿಶಯವಾದ ತೇಜಸ್ಸುಂಟಾಗಿರುವುದು.

॥ ವಸಿಷ್ಠ ಉವಾಚ ॥

**ಪುರಾ ಲೀಲಾವತೀ ನಾಮ ವೇಶ್ಯಾ ಶಿವಪರಾಯಣಾ ।**
**ತಯಾ ದತ್ತಶ್ಚತುರ್ದಶ್ಯಾಂ ಗುರವೇ ಲವಣಾಚಲಃ ।**
**ಹೇಮವೃಕ್ಷಾದಿಭಿಃ ಸಾರ್ಧಂ ಯಥಾವದ್ವಿಧಿಪೂರ್ವಕಂ ॥೨೩॥**

**ಶೂದ್ರಃ ಸುವರ್ಣಕಾರಶ್ಚ ನಾಮ್ನಾ ಶೌಂಡೋಽಭವತ್ತದಾ ।**
**ಭೃತ್ಯೋ ಲೀಲಾವತೀಗೇಹೇ ತೇನ ಹೇಮ್ನಾ ವಿನಿರ್ಮಿತಾಃ ॥೨೪॥**

**ತರವಃ ಸುರಮುಖ್ಯಾಶ್ಚ ಶ್ರದ್ಧಾಯುಕ್ತೇನ ಪಾರ್ಥಿವ ।**
**ಅತಿರೂಪೇಣ ಸಂಪನ್ನಾ ಘಟಯಿತ್ವಾ ವಿನಾ ಭೃತಿಂ ।**
**ಧರ್ಮಕಾರ್ಯಮಿತಿ ಜ್ಞಾತ್ವಾ ನ ಗೃಹ್ಣಾತಿ ಕಥಂಚನ ॥೨೫॥**

**ಉಜ್ಜ್ವಲಿತಾಶ್ಚ ತತ್ಪತ್ನ್ಯಾ ಸೌವರ್ಣಾಮರಪಾದಪಾಃ ।**
**ಲೀಲಾವತೀ ಗಿರೇಃ ಪಾರ್ಶ್ವೇ ಪರಿಚರ್ಯಾಂ ಚ ಪಾರ್ಥಿವ ॥೨೬॥**

---

೨೩. ವಸಿಷ್ಠನು ಹೇಳಿದನು.—ಪೂರ್ವದಲ್ಲಿ ಲೀಲಾವತಿಯೆಂಬ ವೇಶ್ಯೆಯೊಬ್ಬಳಿದ್ದಳು. ಅವಳಿಗೆ ಈಶ್ವರನಲ್ಲಿ ಬಹಳ ಭಕ್ತಿಯಿತ್ತು. ಆಕೆಯು ಚತುರ್ದಶಿಯ ದಿನ ಶಾಸ್ತ್ರೋಕ್ತನಿಯಮಗಳಿಗನುಸಾರವಾಗಿ ಸುವರ್ಣವೃಕ್ಷಾದಿಗಳೊಡನೆ ಗುರುವಿಗೆ ಲವಣಾಚಲವನ್ನು (ಪರ್ವತಾಕಾರವಾಗಿ ಮಾಡಿದ ಉಪ್ಪಿನ ರಾಶಿಯನ್ನು) ದಾನ ಮಾಡಿದಳು.

೨೪-೨೫. ಆ ಲೀಲಾವತಿಯ ಮನೆಯಲ್ಲಿ ಶೌಂಡನೆಂಬ ಶೂದ್ರನೊಬ್ಬನು ಸೇವಕನಾಗಿದ್ದನು. ಅವನು ಚಿನ್ನದ ಕೆಲಸಮಾಡುತ್ತಿದ್ದನು. ಅವನು ಲವಣಾಚಲಕ್ಕೆ ಬೇಕಾದ ಮರಗಳನ್ನೂ, ದೇವತೆಗಳ ಪ್ರತಿಮೆಗಳನ್ನೂ ಬಹಳ ಶ್ರದ್ಧೆಯೊಡನೆ ಚಿನ್ನದಲ್ಲಿ ಮಾಡಿಕೊಟ್ಟನು. ಅವು ಬಹಳ ಸುಂದರವಾಗಿದ್ದುವು. ರಾಜಾ, ಧರ್ಮಕಾರ್ಯವೆಂದು ತಿಳಿದು ಆತನು ಅದಕ್ಕಾಗಿ ಯಾವ ಕೂಲಿಯನ್ನೂ ತೆಗೆದುಕೊಳ್ಳಲಿಲ್ಲ.

೨೬. ಅವನ ಪತ್ನಿಯು ಸುವರ್ಣನಿರ್ಮಿತವಾದ ಆ ಕಲ್ಪವೃಕ್ಷಗಳನ್ನು ಬೆಳಗಿದಳು. ರಾಜಾ, ಲೀಲಾವತಿಯು ಗಿರಿಯ ಸಮೀಪದಲ್ಲಿ ಅವರಿಬ್ಬರೊಡನೆ ಶುದ್ಧ ಮನಸ್ಸಿನಿಂದ ಗುರುಶುಶ್ರೂಷೆಯೇ ಮೊದಲಾದುವನ್ನು ಮಾಡಿದಳು.

ಕೃತ್ವಾ ತಾಭ್ಯಾಮಶಾಠ್ಯೇನ ಗುರುಶುಶ್ರೂಷಣಾದಿಕಂ ।
ಸಾ ಚ ಲೀಲಾವತೀ ವೇಶ್ಯಾ ಕಾಲೇನ ಮಹತಾಪಿ ಚ ॥೨೭॥

ಕಾಲಧರ್ಮಮನುಪ್ರಾಪ್ತಾ ಕರ್ಮಯೋಗೇನ ನಾರದ ।
ಸರ್ವಪಾಪವಿನಿರ್ಮುಕ್ತಾ ಜಗಾಮ ಶಿವಮಂದಿರಂ ॥೨೮॥

ಯೋಽಸೌ ಸುವರ್ಣಕಾರಸ್ತು ದರಿದ್ರೋಽಪ್ಯತಿಸತ್ತ್ವವಾನ್ ।
ನ ಮೌಲ್ಯಮಾದಾದ್ವೇಶ್ಯಾತಃ ಸ ಭವಾನಿಹ ಸಾಂಪ್ರತಂ ॥೨೯॥

ಸಪ್ತದ್ವೀಪಪತಿರ್ಜಾತಃ ಸೂರ್ಯಾಯುತಸಮಪ್ರಭಃ ।
ಯಯಾ ಸುವರ್ಣಕಾರಸ್ಯ ತರವೋ ಹೇಮನಿರ್ಮಿತಾಃ ।
ಸಮ್ಯಗುಜ್ಜ್ವಾಲಿತಾಃ ಪತ್ನ್ಯಾ ಸೇಯಂ ಭಾನುಮತೀ ತವ ॥೩೦॥

ಉಜ್ಜ್ವಾಲನಾದುಜ್ಜ್ವಲರೂಪಮಸ್ಯಾಃ
  ಸಂಜಾತಮಸ್ಮಿನ್ ಭುವನಾಧಿಪತ್ಯಂ ।
ಯಸ್ಮಾತ್ಕೃತಂ ತತ್ಪರಿಕರ್ಮ ರಾತ್ರಾ
  ವನುದ್ಧತಾಭ್ಯಾಂ ಲವಣಾಚಲಸ್ಯ ॥೩೧॥

---

೨೭-೨೮. ಬಹು ಕಾಲಾನಂತರ ಆ ವೇಶ್ಯೆಯಾದ ಲೀಲಾವತಿಯೂ ಕಾಲ ವಶಳಾದಳು. ಓ ನಾರದಾ, ಆಕೆಯು ಕರ್ಮಯೋಗದಿಂದ ಸರ್ವಪಾಪಗಳನ್ನೂ ಕಳೆದುಕೊಂಡು ಕೈಲಾಸವನ್ನು ಸೇರಿದಳು.

೨೯. ಆ ಅಕ್ಕಸಾಲಿಗನಾದರೋ ಬಡವನಾದರೂ ಬಹಳ ಉನ್ನತಸ್ವಭಾವ ದವನು. ಆದುದರಿಂದಲೇ ವಾರಾಂಗನೆಯಿಂದ ತನ್ನ ಕೆಲಸಕ್ಕಾಗಿ ಕೂಲಿಯನ್ನು ತೆಗೆದುಕೊಳ್ಳಲಿಲ್ಲ. ರಾಜಾ, ಅವನೇ ನೀನಾಗಿರುವೆ.

೩೦. ಅವನು ಹತ್ತು ಸಾವಿರ ಸೂರ್ಯರಂತೆ ಪ್ರಕಾಶಿಸುತ್ತ ಸಪ್ತದ್ವೀಪಗಳ ಅಧಿಪತಿಯಾಗಿ ನಿನ್ನ ರೂಪದಿಂದ ಜನಿಸಿದನು. ಚಿನ್ನದ ಮರಗಳನ್ನು ಚೆನ್ನಾಗಿ ಬೆಳಗಿದ ಆ ಅಕ್ಕಸಾಲಿಗನ ಪತ್ನಿಯೇ ನಿನ್ನ ಪಟ್ಟದ ರಾಣಿಯಾದ ಈ ಭಾನುಮತಿ.

೩೧. ಕಲ್ಪ ವೃಕ್ಷಗಳನ್ನು ಬೆಳಗಿದ ಕಾರಣ ಆಕೆಗೆ ಉಜ್ವಲರೂಪವು ಪ್ರಾಪ್ತ ವಾಯಿತು. ಆತನಿಗೆ ಸಪ್ತದ್ವೀಪಾಧಿಪತ್ಯವು ಲಭಿಸಿತು. ಅವರಿಬ್ಬರೂ ನಮ್ರಭಾವ ದಿಂದ ರಾತ್ರಿಯಲ್ಲಿ ಲವಣಾಚಲದ ಶೃಂಗಾರಕಾರ್ಯವನ್ನೆಸಗಿದರು.

ತಸ್ಮಾಚ್ಚ ಲೋಕೇಷ್ವಪರಾಜಿತತ್ವ
ಮಾರೋಗ್ಯಸೌಭಾಗ್ಯಯುತಾ ಚ ಲಕ್ಷ್ಮೀಃ ।
ತಸ್ಮಾತ್ತ್ವಮಪ್ಯತ್ರ ವಿಧಾನಪೂರ್ವಂ
ಧಾನ್ಯಾಚಲಾದೀನ್ ದಶಧಾ ಕುರುಷ್ವ ॥೩೨॥

ತಥೇತಿ ಸತ್ಕೃತ್ಯ ಸ ಧರ್ಮಮೂರ್ತಿ
ರ್ವಚೋ ವಸಿಷ್ಠಸ್ಯ ದದೌ ಚ ಸರ್ವಾನ್ ।
ಧಾನ್ಯಾಚಲಾದೀಞ್ಛತಶೋ ಮುರಾರೇ
ರ್ಲೋಕಂ ಜಗಾಮಾಽಮರಪೂಜ್ಯಮಾನಃ ॥೩೩॥

ಪಶ್ಯೇದಪೀಮಾನಧನೋಽತಿಭಕ್ತ್ಯಾ
ಸ್ಪೃಶೇನ್ಮನುಷ್ಯೈರಪಿ ದೀಯಮಾನಂ ।
ಶೃಣೋತಿ ಭಕ್ತ್ಯಾಥ ಮತಿಂ ದದಾತಿ
ವಿಕಲ್ಮಷಃ ಸೋಽಪಿ ದಿವಂ ಪ್ರಯಾತಿ ॥೩೪॥

---

೩೨. ಆದಕಾರಣ, ಅವರಿಗೆ ನಿತ್ಯ ಜಯವೂ, ಆರೋಗ್ಯವೂ, ಸೌಭಾಗ್ಯವೂ, ಸಕಲ ಸಂಪತ್ತಿಯೂ ಒದಗಿದುವು. ಎಲೈ ಪಾರ್ಥಿವನೇ, ನೀನೂ ಸಹ ಶಾಸ್ತ್ರ ವಿಧಾನವನ್ನನುಸರಿಸಿ ಧಾನ್ಯ ಪರ್ವತವೇ ಮೊದಲಾದ ಪರ್ವತಗಳನ್ನು ರಚಿಸಿ ದಾನಮಾಡು.

೩೩. ಧರ್ಮ ಮೂರ್ತಿಯೆನಿಸಿದ ಆ ರಾಜನು ವಸಿಷ್ಠಮುನಿಯ ಮಾತನ್ನು ನಡೆಸುವುದಾಗಿ ಒಪ್ಪಿ ಅವನನ್ನು ಸತ್ಕರಿಸಿದನು. ಧಾನ್ಯಾಚಲವೇ ಮೊದಲಾದುವನ್ನು ನೂರುಗಟ್ಟಲೆಯಾಗಿ ದಾನಮಾಡಿದನು. ದೇವತೆಗಳಿಂದ ಪೂಜೆಯನ್ನು ಕೈಗೊಂಡು ವಿಷ್ಣುವಿನ ಲೋಕವನ್ನೈದಿದನು.

೩೪. ದರಿದ್ರನಾದವನು ಈ ವ್ರತವನ್ನು ಭಕ್ತಿಯೊಡನೆ ಕಣ್ಣಿನಿಂದಲಾದರೂ ನೋಡಬೇಕು. ದಾನವಾಗಿ ಕೊಡುವ ಪರ್ವತಾದಿಗಳನ್ನು ಕೈಯಿಂದಲಾದರೂ ಮುಟ್ಟಬೇಕು. ಈ ವ್ರತವಿಧಾನವನ್ನು ಶ್ರದ್ಧೆಯಿಂದ ಕೇಳಲಿ, ಇತರರಿಗೆ ಇದರಲ್ಲಿ ಆದರವನ್ನು ಹುಟ್ಟಿಸಲಿ ಅಂತಹವನೂ ಸಹ ಪಾಪರಹಿತನಾಗಿ ಸ್ವರ್ಗವನ್ನೇರುವನು.

**ದುಃಸ್ವಪ್ನಂ ಪ್ರಶಮಮುಪೈತಿ ಪಠ್ಯಮಾನೈಃ**
**ಶೈಲೇಂದ್ರೈರ್ಭವಭಯಭೇದನೈರ್ಮನುಷ್ಯೈಃ ।**
**ಯಃ ಕುರ್ಯಾತ್ಕಿಮು ಮುನಿಪುಂಗವೇಹ ಸಮ್ಯಕ್**
**ಶಾಂತಾತ್ಮಾ ಸಕಲಗಿರೀಂದ್ರಸಂಪ್ರದಾನಂ ॥೩೫॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಪರ್ವತಪ್ರದಾನ ಮಾಹಾತ್ಮ್ಯಂ ನಾಮ ದ್ವಿನವತಿತಮೋಽಧ್ಯಾಯಃ**

---

೩೫. ಸಂಸಾರಭಯವನ್ನು ನಿರ್ಮೂಲಮಾಡುವ ಧಾನ್ಯಾದಿ ಪರ್ವತಗಳ ವಿಧಾನವನ್ನು ಪಾರಾಯಣ ಮಾಡುವ ಮನುಷ್ಯರಿಗೆ ದುಃಸ್ವಪ್ನವು ತಲೆದೋರುವುದಿಲ್ಲ. ಹೀಗಿರುವಾಗ, ಋಷಿಶ್ರೇಷ್ಠನಾದ ಎಲೈ ನಾರದನೇ, ಆದರದಿಂದ ಈ ಪರ್ವತಗಳನ್ನು ದಾನಮಾಡಿದವನಿಗೆ ಬರುವ ಫಲವನ್ನೇನೆಂದು ಹೇಳಬೇಕು? ಅವನ ಮನಸ್ಸು ಶಾಂತವಾಗಿ ನಿಷ್ಕಲ್ಮಷವಾಗಿರುವುದಿಲ್ಲವೇ !

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಶರ್ಕರಾಚಲದ ವಿಧಾನವನ್ನೂ, ಪರ್ವತದಾನದ ಮಹಿಮೆಯನ್ನೂ ಹೇಳಿದೆ.

ಎಂಟು, ನಾಲ್ಕು ಅಥವಾ ಎರಡು ಭಾರ ತೂಕದ ಸಕ್ಕರೆಯಿಂದ ಪರ್ವತಗಳನ್ನು ಮಾಡಬಹುದು. ಧಾನ್ಯ ಪರ್ವತದಲ್ಲಿ ಮಾಡಿದಂತೆಯೇ ವಿಷ್ಕಂಭಪರ್ವತಗಳು, ಅಷ್ಟದಿಕ್ಪಾಲಕರು, ದೇವವೃಕ್ಷಗಳು, ಮುಂತಾದುವನ್ನು ನಿವೇಶಮಾಡಿ ಹೋಮಪೂಜಾದಿಗಳನ್ನು ನಡೆಸಬೇಕು. ರಾತ್ರಿಯಲ್ಲಿ ಜಾಗರಣ ಮಾಡಿ ಮರುದಿನ ಪ್ರಾತಃಕಾಲ ದಾನಮಾಡಬೇಕು. ಇದರಿಂದ ಸಕಲಪಾಪಗಳೂ ಪರಿಹಾರವಾಗುವುವಲ್ಲದೆ ಶುಭಲೋಕಪ್ರಾಪ್ತಿಯೂ ಸಪ್ತದ್ವೀಪಾಧಿಪತ್ಯವೂ ಒದಗುವುವು.

ಲೀಲಾವತಿಯೆಂಬ ವೇಶ್ಯೆಯೊಬ್ಬಳು ಲವಣಾಚಲವನ್ನು ನಿರ್ಮಿಸಿ ದಾನ ಮಾಡುವಾಗ ಆ ಕಾರ್ಯಕ್ಕೆ ಅತ್ಯಲ್ಪ ಸೇವೆಯನ್ನು ಮಾಡಿದ ಅವಳ ಸೇವಕನೂ, ಅವನ ಪತ್ನಿಯೂ ಸಪ್ತದ್ವೀಪಾಧಿಪತಿಯಾದ ರಾಜನೂ ರಾಣಿಯೂ ಆಗಿ ಜನಿಸಿದರು. ಅನುಕೂಲತೆಯಿಲ್ಲದವನು ಈ ಪರ್ವತದಾನದ ವಿಧಿಯನ್ನು ನೋಡಬೇಕು, ಕೇಳಬೇಕು, ಪಾರಾಯಣಮಾಡಬೇಕು. ಇತರರಲ್ಲಿ ಅಕ್ಕರೆ ಹುಟ್ಟುವಂತೆ ಮಾಡಬೇಕು. ಇದರಿಂದ ಆತನಿಗೆ ಸಕಲಸನ್ಮಂಗಲವೂ ಉಂಟಾಗುವುದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಪರ್ವತಪ್ರದಾನಮಾಹಾತ್ಮ್ಯವೆಂಬ ತೊಂಬತ್ತೆರಡನೆಯ ಅಧ್ಯಾಯವು ಮುಗಿದುದು.

# ಅಥ ತ್ರಿನವತಿತಮೋಽಧ್ಯಾಯಃ

॥ ಸೂತ ಉವಾಚ ॥

ವೈಶಂಪಾಯನಮಾಸೀನಮಪೃಚ್ಛಚ್ಛೌನಕಃ ಪುರಾ ।
ಸರ್ವಕಾಮಾಪ್ತಯೇ ನಿತ್ಯಂ ಕಥಂ ಶಾಂತಿಕಪೌಷ್ಟಿಕಂ ॥ ೧ ॥

॥ ವೈಶಂಪಾಯನ ಉವಾಚ ॥

ಶ್ರೀಕಾಮಃ ಶಾಂತಿಕಾಮೋ ವಾ ಗ್ರಹಯಜ್ಞಂ ಸಮಾರಭೇತ್ ।
ವೃದ್ಧ್ಯಾಯುಃ ಪುಷ್ಟಿಕಾಮೋ ವಾ ತಥೈವಾಭಿಚರನ್ ಪುನಃ ।
ಯೇನ ಬ್ರಹ್ಮನ್ವಿಧಾನೇನ ತನ್ಮೇ ನಿಗದತಃ ಶೃಣು ॥ ೨ ॥

ಸರ್ವಶಾಸ್ತ್ರಾಣ್ಯನುಕ್ರಮ್ಯ ಸಂಕ್ಷಿಪ್ಯ ಗ್ರಂಥವಿಸ್ತರಂ ।
ಗ್ರಹಶಾಂತಿಂ ಪ್ರವಕ್ಷ್ಯಾಮಿ ಪುರಾಣಶ್ರುತಿಚೋದಿತಂ ॥ ೩ ॥

---

೧. ಸೂತಪೌರಾಣಿಕನು ಹೇಳಿದನು.—ಪೂರ್ವದಲ್ಲಿ ಶೌನಕಮುನಿಯು ವಿರಾಮದಿಂದ ಕುಳಿತಿದ್ದ ವೈಶಂಪಾಯನನ ಬಳಿಗೆ ಹೋಗಿ "ಪ್ರತಿದಿನವೂ ಸಕಲೇಷ್ಟಾರ್ಥಗಳನ್ನೂ, ಶಾಂತಿಯನ್ನೂ, ಪುಷ್ಟಿಯನ್ನೂ ಪಡೆಯಬೇಕಾದರೆ ಆಚರಿಸಬೇಕಾದ ವ್ರತದ ವಿಧಾನವೆಂತು" ಎಂದು ಕೇಳಿದನು.

೨. ವೈಶಂಪಾಯನನು ಹೇಳಿದನು.—ಸಂಪತ್ತನ್ನೂ ಶಾಂತಿಯನ್ನೂ ಕೋರುವವನು ಗ್ರಹಯಜ್ಞವನ್ನಾಚರಿಸಬೇಕು. ಆಯುರ್ವೃದ್ಧಿಯನ್ನೂ, ಪುಷ್ಟಿಯನ್ನೂ ಬಯಸುವವನು ಸಹ ಇದನ್ನೇ ನಡೆಸಬೇಕು. ಎಲೈ ಬ್ರಹ್ಮಜ್ಞಾನಿಯೇ, ಅದರ ವಿಧಾನವನ್ನು ಹೇಳುತ್ತೇನೆ ಕೇಳು.

೩. ಪುರಾಣಗಳಲ್ಲೂ, ಶ್ರುತಿಗಳಲ್ಲೂ ಹೇಳಿರುವ ಗ್ರಹಶಾಂತಿ ವಿಧಿಯನ್ನು ಸಕಲ ಶಾಸ್ತ್ರಗಳಿಗನುಸಾರವಾಗಿ, ಗ್ರಂಥ ವಿಸ್ತರವಾಗದಂತೆ ಸಂಕ್ಷೇಪವಾಗಿ ಹೇಳುವೆನು.

ಪುಣ್ಯೇಽಹ್ನಿ ವಿಪ್ರಕಥಿತೇ ಕೃತ್ವಾ ಬ್ರಾಹ್ಮಣವಾಚನಂ ।
ಗ್ರಹಾನ್ ಗ್ರಹಾಧಿದೇವಾಂಶ್ಚ ಸ್ಥಾಪ್ಯ ಹೋಮಂ ಸಮಾರಭೇತ್ ॥ ೪ ॥

ಗ್ರಹಯಜ್ಞಸ್ತ್ರಿಧಾ ಪ್ರೋಕ್ತಃ ಪುರಾಣಶ್ರುತಿಕೋವಿದೈಃ ।
ಪ್ರಥಮೋಽಯುತಹೋಮಃ ಸ್ಯಾಲ್ಲಕ್ಷಹೋಮಸ್ತತಃ ಪರಃ ॥ ೫ ॥

ತೃತೀಯಃ ಕೋಟಿಹೋಮಸ್ತು ಸರ್ವಕಾಮಫಲಪ್ರದಃ ।
ಅಯುತೇನಾಹುತೀನಾಂ ಚ ನವಗ್ರಹಮಖಃ ಸ್ಮೃತಃ ॥ ೬ ॥

ತಸ್ಯ ತಾವದ್ವಿಧಿಂ ವಕ್ಷ್ಯೇ ಪುರಾಣಶ್ರುತಿಭಾಷಿತಂ ।
ಗರ್ತಸ್ಯೋತ್ತರಪೂರ್ವೇಣ ವಿತಸ್ತಿದ್ವಯವಿಸ್ತೃತಾಂ ॥ ೭ ॥

ವಪ್ರದ್ವಯಾವೃತಾಂ ವೇದಿಂ ವಿತಸ್ತ್ಯುಚ್ಛ್ರಾಯಸಮ್ಮಿತಾಂ ।
ಸಂಸ್ಥಾಪನಾಯ ದೇವಾನಾಂ ಚತುರಸ್ರಾಮುದಙ್ಮುಖಾಂ ॥ ೮ ॥

---

೪. ಬ್ರಾಹ್ಮಣರು ಹೇಳಿದ ಪುಣ್ಯದಿನದಲ್ಲಿ ಅವರ ಅನುಗ್ರಹವನ್ನು ಪಡೆದು ಗ್ರಹಗಳನ್ನೂ ಗ್ರಹಾಧಿದೇವತೆಗಳನ್ನೂ ಆವಾಹನಮಾಡಿ ಹೋಮವನ್ನು ನಡೆಸಬೇಕು.

೫. ಪುರಾಣಗಳನ್ನೂ, ವೇದಗಳನ್ನೂ ಬಲ್ಲವರು ಗ್ರಹಯಜ್ಞವನ್ನು ಮೂರು ವಿಧವಾಗಿ ಹೇಳಿರುವರು. ಮೊದಲನೆಯದು ಹತ್ತುಸಾವಿರ ಹೋಮವುಳ್ಳದು. ಎರಡನೆಯದು ಲಕ್ಷಹೋಮಾತ್ಮಕವಾದುದು.

೬. ಮೂರನೆಯದು ಒಂದುಕೋಟಿ ಹೋಮದಿಂದ ಕೂಡಿದುದು. ಹತ್ತು ಸಾವಿರ ಹೋಮಗಳ ಮೊದಲನೆಯ ವಿಧಕ್ಕೆ ನವಗ್ರಹ ಯಜ್ಞವೆಂದು ಹೆಸರು.

೭-೮. ಶ್ರುತಿ ಪುರಾಣಗಳಲ್ಲಿ ತಿಳಿಸಿರುವಂತೆ ಅದರ ಕ್ರಮವನ್ನು ಹೇಳುವೆನು. ಅಗ್ನಿಕುಂಡದ ಈಶಾನ್ಯದಿಕ್ಕಿನಲ್ಲಿ ಎರಡು ಗೇಣಗಲವೂ ಒಂದು ಗೇಣೆತ್ತರವೂ ಆಗಿ, ಚಚ್ಚೌಕವಾದ ಎರಡು ಅಂತಸ್ತಿನ ವೇದಿಕೆಯನ್ನು ದೇವತೆಗಳ ಸ್ಥಾಪನೆಗಾಗಿ ನಿರ್ಮಿಸಬೇಕು. ಅದು ಉತ್ತರಾಭಿಮುಖವಾಗಿರಬೇಕು.

ಅಗ್ನಿಪ್ರಣಯನಂ ಕೃತ್ವಾ ತಸ್ಯಾಮಾವಾಹಯೇತ್ಸುರಾನ್ ।
ದೇವತಾನಾಂ ತತಃ ಸ್ಥಾಪ್ಯಾ ವಿಂಶತಿರ್ದ್ವಾದಶಾಧಿಕಾ ॥ ೯ ॥

ಸೂರ್ಯಃ ಸೋಮಸ್ತಥಾ ಭೌಮೋ ಬುಧಜೀವಸಿತಾರ್ಕಜಾಃ ।
ರಾಹುಃ ಕೇತುರಿತಿ ಪ್ರೋಕ್ತಾ ಗ್ರಹಾ ಲೋಕಹಿತಾವಹಾಃ ॥೧೦॥

ಮಧ್ಯೇ ತು ಭಾಸ್ಕರಂ ವಿದ್ಯಾಲ್ಲೋಹಿತಂ ದಕ್ಷಿಣೇನ ತು ।
ಉತ್ತರೇಣ ಗುರುಂ ವಿದ್ಯಾದ್ಬುಧಂ ಪೂರ್ವೋತ್ತರೇಣ ತು ॥೧೧॥

ಪೂರ್ವೇಣ ಭಾರ್ಗವಂ ವಿದ್ಯಾತ್ಸೋಮಂ ದಕ್ಷಿಣಪೂರ್ವಕೇ ।
ಪಶ್ಚಿಮೇನ ಶನಿಂ ವಿದ್ಯಾದ್ರಾಹುಂ ಪಶ್ಚಿಮದಕ್ಷಿಣೇ ।
ಪಶ್ಚಿಮೋತ್ತರತಃ ಕೇತುಂ ಸ್ಥಾಪಯೇಚ್ಛುಕ್ಲತಂಡುಲೈಃ ॥೧೨॥

ಭಾಸ್ಕರಸ್ಯೇಶ್ವರಂ ವಿದ್ಯಾದುಮಾಂ ಚ ಶಶಿನಸ್ತಥಾ ।
ಸ್ಕಂದಮಂಗಾರಕಸ್ಯಾಪಿ ಬುಧಸ್ಯ ಚ ತಥಾ ಹರಿಂ ॥೧೩॥

---

೯. ಅಗ್ನಿಯನ್ನು ಸ್ಥಾಪಿಸಿದ ತರುವಾಯ ಆ ವೇದಿಕೆಯಲ್ಲಿ ದೇವತೆಗಳನ್ನು ಆವಾಹನೆಮಾಡಬೇಕು. ಅಲ್ಲಿ ಸ್ಥಾನವನ್ನು ಪಡೆಯಬೇಕಾದವರು ಮೂವತ್ತೆರಡು ಜನ ದೇವತೆಗಳು.

೧೦. ಸೂರ್ಯ, ಚಂದ್ರ, ಅಂಗಾರಕ, ಬುಧ, ಗುರು, ಶುಕ್ರ, ಶನಿ, ರಾಹು ಮತ್ತು ಕೇತುಗಳೆಂಬ ನವಗ್ರಹಗಳು ಲೋಕದ ಹಿತವನ್ನು ಸಾಧಿಸುವವರು.

೧೧-೧೨. ವೇದಿಕೆಯ ಮೇಲೆ ಬೆಳ್ಳಗಿರುವ ಅಕ್ಕಿಯನ್ನು ಹರಡಿ ಈ ಮುಂದೆ ಹೇಳುವಂತೆ ಆಯಾ ಸ್ಥಾನದಲ್ಲಿ ಗ್ರಹಗಳನ್ನು ಸ್ಥಾಪಿಸಬೇಕು. ನಡುವೆ ಸೂರ್ಯ, ದಕ್ಷಿಣದಲ್ಲಿ ಅಂಗಾರಕ, ಉತ್ತರದಲ್ಲಿ ಗುರು, ಆಗ್ನೇಯದಲ್ಲಿ ಬುಧ, ಪೂರ್ವದಲ್ಲಿ ಶುಕ್ರ, ನೈಋತ್ಯದಲ್ಲಿ ಚಂದ್ರ, ಪಶ್ಚಿಮದಲ್ಲಿ ಶನಿ, ವಾಯುವ್ಯದಲ್ಲಿ ರಾಹು, ಈಶಾನ್ಯದಲ್ಲಿ ಕೇತು.

೧೩. ನವಗ್ರಹಗಳಿಗೆ ಅಧಿದೇವತೆಗಳನ್ನು ಹೇಳುವೆನು. ಸೂರ್ಯನಿಗೆ ಈಶ್ವರ, ಚಂದ್ರನಿಗೆ ಪಾರ್ವತಿ, ಅಂಗಾರಕನಿಗೆ ಷಣ್ಮುಖ ಮತ್ತು ಬುಧನಿಗೆ ವಿಷ್ಣುವೆಂದರಿಯಬೇಕು.

ಬ್ರಹ್ಮಾಣಂ ಚ ಗುರೋರ್ವಿದ್ಯಾಚ್ಛುಕ್ರಸ್ಯಾಪಿ ಶಚೀಪತಿಂ ।
ಶನೈಶ್ಚರಸ್ಯ ತು ಯಮಂ ರಾಹೋಃ ಕಾಲಂ ತಥೈವ ಚ ॥೧೪॥

ಕೇತೋರ್ವೈ ಚಿತ್ರಗುಪ್ತಂ ಚ ಸರ್ವೇಷಾಮಧಿದೇವತಾಃ ।
ಅಗ್ನಿರಾಪಃ ಕ್ಷಿತಿರ್ವಿಷ್ಣುರಿಂದ್ರ ಐಂದ್ರೀ ಚ ದೇವತಾಃ ॥೧೫॥

ಪ್ರಜಾಪತಿಶ್ಚ ಸರ್ಪಾಶ್ಚ ಬ್ರಹ್ಮಾ ಪ್ರತ್ಯಧಿದೇವತಾಃ ।
ವಿನಾಯಕಂ ತಥಾ ದುರ್ಗಾಂ ವಾಯುರಾಕಾಶಮೇವ ಚ ।
ಆವಾಹಯೇದ್ವ್ಯಾಹೃತಿಭಿಸ್ತಥೈವಾಶ್ವಿಕುಮಾರಕೌ ॥೧೬॥

ಸಂಸ್ಮರೇದ್ರಕ್ತಮಾದಿತ್ಯಮಂಗಾರಕಸಮನ್ವಿತಂ ।
ಸೋಮಶುಕ್ರೌ ತಥಾ ಶ್ವೇತೌ ಬುಧಜೀವೌ ಚ ಪಿಂಗಲೌ ।
ಮಂದರಾಹೂ ತಥಾ ಕೃಷ್ಣೌ ಧೂಮ್ರಂ ಕೇತುಗಣಂ ವಿದುಃ ॥೧೭॥

ಗ್ರಹವರ್ಣಾನಿ ದೇಯಾನಿ ವಾಸಾಂಸಿ ಕುಸುಮಾನಿ ಚ ।
ಧೂಪಾಮೋದೋಽತ್ರ ಸುರಭಿರುಪರಿಷ್ಟಾದ್ವಿತಾನಕಂ ।
ಶೋಭನಂ ಸ್ಥಾಪಯೇತ್ಪ್ರಾಜ್ಞಃ ಫಲಪುಷ್ಪಸಮನ್ವಿತಂ ॥೧೮॥

---

೧೪. ಗುರುವಿಗೆ ಬ್ರಹ್ಮ, ಶುಕ್ರನಿಗೆ ಇಂದ್ರ, ಶನಿಗೆ ಯಮ, ರಾಹುವಿಗೆ ಕಾಲ, ಕೇತುವಿಗೆ ಚಿತ್ರಗುಪ್ತ. ಹೀಗೆ ಎಲ್ಲರಿಗೂ ಇವರು ಅಧಿದೇವತೆಗಳು.

೧೫. ಅಗ್ನಿ, ಜಲ, ಭೂಮಿ, ವಿಷ್ಣು, ಇಂದ್ರ, ಐಂದ್ರಿ, ಪ್ರಜಾಪತಿ, ಸರ್ಪ, ಬ್ರಹ್ಮ ಇವರು ಕ್ರಮವಾಗಿ ನವಗ್ರಹಗಳ ಪ್ರತ್ಯಧಿದೇವತೆಗಳು.

೧೬. ವಿನಾಯಕ, ದುರ್ಗಾ, ವಾಯು, ಆಕಾಶ, ಮತ್ತು ಅಶ್ವಿನೀ ದೇವತೆಗಳನ್ನು ವ್ಯಾಹೃತಿ ಮಂತ್ರಗಳಿಂದ ಆವಾಹನಮಾಡಬೇಕು.

೧೭. ಸೂರ್ಯನೂ ಅಂಗಾರಕನೂ ಕೆಂಪುಬಣ್ಣದವರು. ಚಂದ್ರಶುಕ್ರರು ಬಿಳಿಯ ಬಣ್ಣದವರು. ಬುಧನೂ ಬೃಹಸ್ಪತಿಯೂ ಪಿಂಗಳ ವರ್ಣದವರು. ಶನಿ ಮತ್ತು ರಾಹುಗಳು ಕಪ್ಪುಬಣ್ಣದವರು. ಕೇತುವು ಧೂಮ್ರವರ್ಣದವನು.

೧೮. ಆಯಾ ಗ್ರಹಗಳ ಬಣ್ಣವನ್ನು ಹೋಲುವ ವಸ್ತ್ರಗಳನ್ನೂ ಪುಷ್ಪಗಳನ್ನೂ ಧರಿಸಬೇಕು. ಒಳ್ಳೆಯ ಪರಿಮಳವನ್ನೀವ ಧೂಪವನ್ನು ಹಾಕಿ, ಮೇಲ್ಗಡೆಯಲ್ಲಿ ಅಂದವಾದ ಮೇಲ್ಗಟ್ಟನ್ನು ಕಟ್ಟಿ ಫಲಪುಷ್ಪಗಳನ್ನು ಸಮರ್ಪಿಸಬೇಕು.

ಗುಡೌದನಂ ರವೇರ್ದದ್ಯಾತ್ಸೋಮಾಯ ಘೃತಪಾಯಸಂ ।
ಅಂಗಾರಕಾಯ ಸಂಯಾವಂ ಬುಧಾಯ ಕ್ಷೀರಷಷ್ಟಿಕಂ ॥೧೯॥

ದಧ್ಯೋದನಂ ಚ ಜೀವಾಯ ಶುಕ್ರಾಯ ಚ ಗುಡೌದನಂ ।
ಶನೈಶ್ಚರಾಯ ಕೃಸರಾಮಜಾಮಾಂಸಂ ಚ ರಾಹವೇ ।
ಚಿತ್ರೌದನಂ ಚ ಕೇತುಭ್ಯಃ ಸರ್ವೈರ್ಭಕ್ಷ್ಯೈರಥಾರ್ಚಯೇತ್ ॥೨೦॥

ಪ್ರಾಗುತ್ತರೇಣ ತಸ್ಮಾಚ್ಚ ದಧ್ಯಕ್ಷತವಿಭೂಷಿತಂ ।
ಚೂತಪಲ್ಲವಸಂಛನ್ನಂ ಫಲವಸ್ತ್ರಯುಗಾನ್ವಿತಂ । ॥೨೧॥

ಪಂಚರತ್ನಸಮಾಯುಕ್ತಂ ಪಂಚಭಂಗಸಮನ್ವಿತಂ ।
ಸ್ಥಾಪಯೇದವ್ರಣಂ ಕುಂಭಂ ವರುಣಂ ತತ್ರ ವಿನ್ಯಸೇತ್ ॥೨೨॥

ಗಂಗಾದ್ಯಾಃ ಸರಿತಃ ಸರ್ವಾಃ ಸಮುದ್ರಾಂಶ್ಚ ಸರಾಂಸಿ ಚ ।
ಗಜಾಶ್ವರಥ್ಯಾವಲ್ಮೀಕಸಂಗಮಾಧ್ರದಗೋಕುಲಾತ್ ॥೨೩॥

---

೧೯. ಸೂರ್ಯನಿಗೆ ಬೆಲ್ಲದನ್ನವನ್ನೂ, ಚಂದ್ರನಿಗೆ ತುಪ್ಪ ಬೆರಸಿದ ಪಾಯಸವನ್ನೂ, ಅಂಗಾರಕನಿಗೆ ಗೋಧಿಯ ರೊಟ್ಟಿಯನ್ನೂ, ಬುಧನಿಗೆ ಕ್ಷೀರಾನ್ನವನ್ನೂ ನಿವೇದನ ಮಾಡಬೇಕು.

೨೦. ಗುರುವಿಗೆ ಮೊಸರನ್ನ, ಶುಕ್ರನಿಗೆ ಬೆಲ್ಲದನ್ನ, ಶನಿಗೆ ಚಿಗಳಿ, ರಾಹುವಿಗೆ ಆಡಿನ ಮಾಂಸ, ಕೇತುವಿಗೆ ಚಿತ್ರಾನ್ನ ಇವನ್ನು ಸಕಲ ಭಕ್ಷ್ಯಗಳ ಸಮೇತವಾಗಿ ನೈವೇದ್ಯಮಾಡಿ ಪೂಜಿಸಬೇಕು.

೨೧-೨೨. ಅದಕ್ಕೂ ಈಶಾನ್ಯದಲ್ಲಿ ಪಂಚರತ್ನ ಸಹಿತವಾದ, ಐದು ಕಡೆಗಳಲ್ಲಿ ವಕ್ರತ್ವವನ್ನು ಪಡೆದಿರುವ, ಬಿರುಕು ತೂತುಗಳಿಲ್ಲದ ಕಂಭವನ್ನು ಸ್ಥಾಪಿಸಿ ಮೊಸರು ಅಕ್ಷತೆಗಳಿಂದಲೂ, ಮಾವಿನ ಚಿಗರಿನಿಂದಲೂ ಶೃಂಗರಿಸಬೇಕು. ಅದಕ್ಕೆ ಎರಡು ವಸ್ತ್ರಗಳನ್ನು ಧರಿಸಿ ಎರಡು ಹಣ್ಣುಗಳನ್ನು ನೈವೇದ್ಯಕ್ಕಾಗಿ ಇರಿಸಬೇಕು. ಆ ಕುಂಭದಲ್ಲಿ ವರುಣನನ್ನೂ ಗಂಗಾದಿ ಪುಣ್ಯ ನದಿಗಳು, ಸಮುದ್ರಗಳು ಮತ್ತು ಸರೋವರಗಳನ್ನೂ ಆವಾಹನಮಾಡಬೇಕು.

೨೩-೨೪. ಓ ದ್ವಿಜೋತ್ತಮಾ, ಆನೆ ಕುದುರೆ ಸಂಚರಿಸುವ ಬೀದಿಗಳು, ಹುತ್ತ, ನದೀ ಸಂಗಮ, ನೀರಿನ ಮಡು, ದನದ ಕೊಟ್ಟಿಗೆ ಈ ಸ್ಥಳಗಳಿಂದ

ಮೃದಮಾನೀಯ ವಿಪ್ರೇಂದ್ರ ಸರ್ವೌಷಧಿಜಲಾನ್ವಿತಾಂ ।
ಸ್ನಾನಾರ್ಥಂ ವಿನ್ಯಸೇತ್ತತ್ರ ಯಜಮಾನಸ್ಯ ಧರ್ಮವಿತ್ ॥೨೪॥

ಸರ್ವೇ ಸಮುದ್ರಾಃ ಸರಿತಃ ಸರಾಂಸಿ ಚ ನದಾಸ್ತಥಾ ।
ಆಯಾಂತು ಯಜಮಾನಸ್ಯ ದುರಿತಕ್ಷಯಕಾರಕಾಃ ॥೨೫॥

ಏವಮಾವಾಹಯೇದೇತಾನಮರಾ‌ನ್ ಮುನಿಸತ್ತಮ ।
ಹೋಮಂ ಸಮಾರಭೇತ್ಸರ್ಪಿರ್ಯವವ್ರೀಹಿತಿಲಾದಿನಾ ॥೨೬॥

ಅರ್ಕಃ ಪಲಾಶಖದಿರಾವಪಾಮಾರ್ಗೋಽಥ ಪಿಪ್ಪಲಃ ।
ಔದುಂಬರಃ ಶಮೀ ದೂರ್ವಾ ಕುಶಾಶ್ಚ ಸಮಿಧಃ ಕ್ರಮಾತ್ ॥೨೭॥

ಏಕೈಕಸ್ಯಾಷ್ಟಕಶತಮಷ್ಟಾವಿಂಶತಿರೇವ ವಾ ।
ಹೋತವ್ಯಾ ಮಧುಸರ್ಪಿರ್ಭ್ಯಾಂ ದಧ್ನಾ ಚೈವ ಸಮನ್ವಿತಾಃ ॥೨೮॥

---

ಮಣ್ಣನ್ನು ತಂದು ಯಜಮಾನನ ಸ್ನಾನಕ್ಕಾಗಿ ಸಕಲವಿಧವಾದ ಮೂಲಿಕಾರಸ ಸಹಿತವಾಗಿ ಆ ಕುಂಭದಲ್ಲಿರಿಸಬೇಕು.

೨೫. "ಎಲ್ಲ ಸಮುದ್ರಗಳು, ನದಿಗಳು ಸರೋವರಗಳು ಮತ್ತು ಹೊಳೆಗಳು ಬರಲಿ; ಅವು ಯಜಮಾನನ ಪಾಪಗಳನ್ನು ಕಳೆಯಲಿ."

೨೬. ಎಲೈ ಮುನಿವರ್ಯನೇ, ದೇವತೆಗಳನ್ನು ಹೀಗೆ ಆವಾಹನಮಾಡಿ ತುಪ್ಪ, ಗೋಧಿ, ಬತ್ತ, ಎಳ್ಳು ಮುಂತಾದುವುಗಳಿಂದ ಹೋಮವನ್ನು ಪ್ರಾರಂಭಿಸಬೇಕು.

೨೭. ಎಕ್ಕ, ಮುತ್ತುಗ, ಕಗ್ಗಲಿ, ಉತ್ರಾಣಿ, ಬಸರಿ, ಅತ್ತಿ, ಬನ್ನಿ, ಗರಿಕೆ, ಧರ್ಭೆ ಇವು ಕ್ರಮವಾಗಿ ಉಪಯೋಗಿಸಬೇಕಾದ ಸಮಿತ್ತುಗಳು.

೨೮. ಜೇನುತುಪ್ಪ, ತುಪ್ಪ ಮತ್ತು ಮೊಸರುಗಳೊಡನೆ ಈ ಒಂದೊಂದರಲ್ಲೂ ನೂರೆಂಟು ಅಥವಾ ಇಪ್ಪತ್ತೆಂಟು ಸಮಿತ್ತುಗಳನ್ನು ಹೋಮಮಾಡಬೇಕು.

ಪ್ರಾದೇಶಮಾತ್ರಾ ಅಶಿಖಾ ಅಶಾಖಾ ಅಪಲಾಶಿನೀಃ ।
ಸಮಿಧಃ ಕಲ್ಪಯೇತ್ಪ್ರಾಜ್ಞಃ ಸರ್ವಕರ್ಮಸು ಸರ್ವದಾ ॥೨೯॥

ದೇವಾನಾಮಪಿ ಸರ್ವೇಷಾಮುಪಾಂಶು ಪರಮಾರ್ಥವಿತ್ ।
ಸ್ವೇನ ಸ್ವೇನೈವ ಮಂತ್ರೇಣ ಹೋತವ್ಯಾಃ ಸಮಿಧಃ ಪೃಥಕ್ ॥೩೦॥

ಹೋತವ್ಯಂ ಚ ಘೃತಾಭ್ಯಕ್ತಂ ಚರುಭಕ್ಷ್ಯಾದಿಕಂ ಪುನಃ ।
ಮಂತ್ರೈರ್ದಶಾಽಽಹುತೀರ್ಹುತ್ವಾ ಹೋಮಂ ವ್ಯಾಹೃತಿಭಿಸ್ತತಃ ॥೩೧॥

ಉದಙ್ಮುಖಾಃ ಪ್ರಾಙ್ಮುಖಾ ವಾ ಕುರ್ಯಾದ್ಬ್ರಾಹ್ಮಣಪುಂಗವಾಃ ।
ಮಂತ್ರವಂತಶ್ಚ ಕರ್ತವ್ಯಾಶ್ಚರವಃ ಪ್ರತಿದೈವತಂ ॥೩೨॥

ಹುತ್ವಾ ಚ ತಾಂಶ್ಚರೂನ್ ಸಮ್ಯಕ್ತತೋ ಹೋಮಂ ಸಮಾಚರೇತ್ ।
ಆಕೃಷ್ಣೇತಿ ಚ ಸೂರ್ಯಾಯ ಹೋಮಃ ಕಾರ್ಯೋ ದ್ವಿಜನ್ಮನಾ ॥೩೩॥

---

೨೯. ಶಾಸ್ತ್ರಜ್ಞನು ಸರ್ವಕರ್ಮಗಳಲ್ಲೂ ಉಪಯೋಗಿಸಬಹುದಾದ ಸಮಿತ್ತುಗಳು ಚೋಟುದ್ದವಿರಬೇಕು. ಅವು ಬಿಳಲಾಗಿರಬಾರದು. ಕೊಂಬೆಯೂ ಎಲೆಗಳೂ ಅವುಗಳಲ್ಲಿರಕೂಡದು.

೩೦. ಶಾಸ್ತ್ರಾರ್ಥವನ್ನು ಬಲ್ಲವನು ದೇವತೆಗಳಿಗೆಲ್ಲ ಅವರವರ ಮಂತ್ರಗಳನ್ನು ಉಚ್ಚರಿಸುತ್ತ ಬೇರೆಬೇರೆಯಾಗಿ ಸಮಿತ್ತುಗಳನ್ನು ಹೋಮಮಾಡಬೇಕು.

೩೧. ಅನ್ನ, ಭಕ್ಷ್ಯ ಮೊದಲಾದುವನ್ನು ತುಪ್ಪದೊಡನೆ ಬೆರಸಿ ಹೋಮ ಮಾಡಬೇಕು. ಮೊದಲಿನ ಹತ್ತು ಆಹುತಿಗಳನ್ನು ಆಯಾ ದೇವತೆಗಳ ಮಂತ್ರಗಳಿಂದಲೂ, ಮುಂದಿನವುಗಳನ್ನು ವ್ಯಾಹೃತಿ ಮಂತ್ರಗಳಿಂದಲೂ ಕೊಡಬೇಕು.

೩೨. ಬ್ರಾಹ್ಮಣೋತ್ತಮರು ಉತ್ತರಾಭಿಮುಖವಾಗಿ ಇಲ್ಲವೇ ಪೂರ್ವಾಭಿಮುಖವಾಗಿ ಕುಳಿತು ಕರ್ಮವನ್ನೆಸಗುವರು. ಚರುಹೋಮಮಾಡುವಾಗ ಪ್ರತಿ ದೇವತೆಗೂ ವಿಹಿತವಾದ ಮಂತ್ರಗಳನ್ನುಚ್ಚರಿಸಬೇಕು.

೩೩. ಶಾಸ್ತ್ರೋಕ್ತವಾಗಿ ಚರುಹೋಮವಾದ ತರುವಾಯ ಆಜ್ಯಹೋಮವನ್ನು ಮಾಡಬೇಕು. “ಆಕೃಷ್ಣ”ವೆಂಬ ಮಂತ್ರದಿಂದ ಸೂರ್ಯನನ್ನುದ್ದೇಶಿಸಿ ಆಹುತಿಯನ್ನು ಕೊಡಬೇಕು.

**ಆಪ್ಯಾಯಸ್ವೇತಿ ಸೋಮಾಯ ಮಂತ್ರೇಣ ಜುಹುಯಾತ್ಪುನಃ ।**
**ಅಗ್ನಿರ್ಮೂರ್ಧಾ ದಿವೋ ಮಂತ್ರ ಇತಿ ಭೌಮಾಯ ಕೀರ್ತಯೇತ್ ॥೩೪॥**

**ಅಗ್ನೇ ವಿವಸ್ವದುಷಸ ಇತಿ ಸೋಮಸುತಾಯ ವೈ ।**
**ಬೃಹಸ್ಪತೇ ಪರಿದೀಯಾ ರಥೇನೇತಿ ಗುರೋರ್ಮತಃ ॥೩೫॥**

**ಶುಕ್ರಂ ತೇ ಅನ್ಯದಿತಿ ಚ ಶುಕ್ರಸ್ಯಾಪಿ ನಿಗದ್ಯತೇ ।**
**ಶನೈಶ್ಚರಾಯೇತಿ ಪುನಃ ಶನ್ನೋ ದೇವೀತಿ ಹೋಮಯೇತ್ ॥೩೬॥**

**ಕಯಾನಶ್ಚಿತ್ರ ಆಭುವದಿತಿ ರಾಹೋರುದಾಹೃತಃ ।**
**ಕೇತುಂ ಕೃಣ್ವನ್ನಪಿ ಬ್ರೂಯಾತ್ಕೇತೂನಾಮಪಿ ಶಾಂತಯೇ ॥೩೭॥**

**ಆಪೋ ರಾಜೇತಿ ರುದ್ರಸ್ಯ ಬಲಿಹೋಮಂ ಸಮಾಚರೇತ್ ।**
**ಆಪೋ ಹಿ ಷ್ಠೇತ್ಯುಮಾಯಾಸ್ತು ಸ್ಯೋನೇತಿ ಸ್ವಾಮಿನಸ್ತಥಾ ॥೩೮॥**

---

೩೪. ಚಂದ್ರನಿಗೆ "ಆಪ್ಯಾಯಸ್ವ" ಎಂಬ ಮಂತ್ರದಿಂದಲೂ, ಅಂಗಾರಕನಿಗೆ "ಅಗ್ನಿರ್ಮೂರ್ಧಾ ದಿವಃ" ಎಂಬ ಮಂತ್ರದಿಂದಲೂ ಹೋಮಮಾಡಬೇಕು.

೩೫. ಬುಧನಿಗೆ "ಅಗ್ನೇ ವಿವಸ್ವದುಷಸ" ಎಂಬ ಮಂತ್ರವನ್ನೂ, ಗುರುವಿಗೆ "ಬೃಹಸ್ಪತೇ ಪರಿದೀಯಾ ರಥೇನ" ಎಂಬ ಮಂತ್ರವನ್ನೂ ಉಚ್ಚರಿಸಬೇಕು.

೩೬. "ಶುಕ್ರಂ ತೇ ಅನ್ಯತ್" ಎಂಬ ಮಂತ್ರವು ಶುಕ್ರದೇವತಾಕವಾದುದು. ಹಾಗೆಯೇ "ಶಂ ನೋ ದೇವಿ" ಎಂಬ ಮಂತ್ರವು ಶನಿಗೆ ಹೋಮಮಾಡುವಾಗ ಹೇಳತಕ್ಕುದು.

೩೭. ರಾಹುವನ್ನು ಉದ್ದೇಶಮಾಡಿದಾಗ "ಕಯಾನಶ್ಚಿತ್ರ ಆಭುವತ್" ಎಂಬ ಮಂತ್ರವನ್ನು ಹೇಳಬೇಕು. ಉತ್ಪಾತಗಳ ಶಾಂತಿಗಾಗಿ "ಕೇತುಂ ಕೃಣ್ವನ್ನಪಿ" ಎಂದು ಜಪಿಸಬೇಕು. ಇದೇ ಕೇತುಗ್ರಹದ ಮಂತ್ರ.

೩೮. "ಆಪೋ ರಾಜಾ" ಎಂಬ ಮಂತ್ರದಿಂದ ರುದ್ರನಿಗೆ ಬಲಿಹೋಮವನ್ನು ನಡೆಸಬೇಕು. "ಆಪೋ ಹಿ ಷ್ಠಾ" ಎಂಬುದು ಪಾರ್ವತಿಯನ್ನೂ, "ಸ್ಯೋನಾ" ಎಂಬುದು ಕುಮಾರಸ್ವಾಮಿಯನ್ನೂ ಉದ್ದೇಶಮಾಡಿದಾಗ ಹೇಳತಕ್ಕ ಮಂತ್ರಗಳು.

ವಿಷ್ಣೋರಿದಂ ವಿಷ್ಣುರಿತಿ ತಮೀಶೇತಿ ಸ್ವಯಂಭುವಃ ।
ಇಂದ್ರಮಿದ್ದೇವತಾತೇತಿ ಇಂದ್ರಾಯ ಜುಹುಯಾತ್ತತಃ ॥೩೯॥

ತಥಾ ಯಮಸ್ಯ ಚಾಽಽಯಂ ಗೌರಿತಿ ಹೋಮಃ ಪ್ರಕೀರ್ತಿತಃ ।
ಕಾಲಸ್ಯ ಬ್ರಹ್ಮಜಜ್ಞಾನಮಿತಿ ಮಂತ್ರಃ ಪ್ರಶಸ್ಯತೇ ॥೪೦॥

ಚಿತ್ರಗುಪ್ತಸ್ಯ ಚಾಜ್ಞಾತಮಿತಿ ಮಂತ್ರವಿದೋ ವಿದುಃ
ಅಗ್ನಿಂ ದೂತಂ ವೃಣೀಮಹ ಇತಿ ವಹ್ನೇರುದಾಹೃತಃ ॥೪೧॥

ಉದುತ್ತಮಂ ವರುಣಮಿತ್ಯಪಾಂ ಮಂತ್ರಃ ಪ್ರಕೀರ್ತಿತಃ ।
ಭೂಮೇಃ ಪೃಥಿವ್ಯಂತರಿಕ್ಷಮಿತಿ ವೇದೇಷು ಪಠ್ಯತೇ ॥೪೨॥

ಸಹಸ್ರಶೀರ್ಷಾ ಪುರುಷ ಇತಿ ವಿಷ್ಣೋರುದಾಹೃತಃ ।
ಇಂದ್ರಾಯೇಂದೋ ಮರುತ್ವತ ಇತಿ ಶುಕ್ರಸ್ಯ ಶಸ್ಯತೇ ॥೪೩॥

---

೩೯. "ಇದಂ ವಿಷ್ಣುಃ" ಎಂಬ ಮಂತ್ರವು ವಿಷ್ಣುವಿಗೂ, "ತಮೀಶಾ" ಎಂಬುದು ಬ್ರಹ್ಮನಿಗೂ, "ಇಂದ್ರಮಿದ್ದೇವತಾತ" ಎಂಬುದು ಇಂದ್ರನಿಗೂ ಹೋಮಮಾಡುವಾಗ ಹೇಳಬೇಕಾದುವು.

೪೦. "ಅಯಂ ಗೌಃ" ಎಂಬ ಮಂತ್ರದಿಂದ ಯಮನಿಗೆ ಹೋಮ ಮಾಡಬೇಕು. "ಬ್ರಹ್ಮಜಜ್ಞಾನಂ" ಎಂಬುದು ಕಾಲನನ್ನು ಉದ್ದೇಶಿಸಿದಾಗ ಜಪಿಸಬೇಕಾದುದು.

೪೧. "ಅಜ್ಞಾತಂ" ಎಂಬ ಮಂತ್ರವು ಚಿತ್ರಗುಪ್ತನ ಸಂಬಂಧವಾದುದೆಂದು ಮಂತ್ರಜ್ಞರು ಹೇಳುತ್ತಾರೆ. "ಅಗ್ನಿಂ ದೂತಂ ವೃಣೀಮಹೇ" ಎಂಬುದು ಅಗ್ನಿದೇವತಾಕವಾದ ಮಂತ್ರ.

೪೨. "ಉದುತ್ತಮಂ ವರುಣಂ" ಎಂಬುದು ಜಲದೇವತೆಯನ್ನುದ್ದೇಶಿಸಿದ ಮಂತ್ರ. "ಪೃಥಿವ್ಯಂತರಿಕ್ಷಂ" ಎಂಬ ಮಂತ್ರವು ಭೂದೇವತಾಕವಾದುದೆಂದು ವೇದಗಳಲ್ಲಿ ಹೇಳಿರುವುದು.

೪೩. "ಸಹಸ್ರಶೀರ್ಷಾ ಪುರುಷಃ" ಎಂಬುದು ವಿಷ್ಣುವನ್ನು ಕುರಿತು ಹೇಳುವ ಮಂತ್ರ "ಇಂದ್ರಾಯೇಂದೋ ಮರುತ್ವತ" ಎಂಬುದು ಇಂದ್ರನನ್ನು ಉದ್ದೇಶಿಸಿದಾಗ ಹೇಳತಕ್ಕುದು.

**ಉತ್ತಾನಪರ್ಣೇ ಸುಭಗೇ ಇತಿ ದೇವ್ಯಾಃ ಸಮಾಚರೇತ್ ।**
**ಪ್ರಜಾಪತೇಃ ಪುನರ್ಹೋಮಃ ಪ್ರಜಾಪತಿರಿತಿ ಸ್ಮೃತಃ ॥೪೪॥**

**ನಮೋಽಸ್ತು ಸರ್ಪೇಭ್ಯ ಇತಿ ಸರ್ಪಾಣಾಂ ಮಂತ್ರ ಉಚ್ಯತೇ ।**
**ಏಷಾ ಬ್ರಹ್ಮಾಯ ಋತ್ವಿಗ್ಭ್ಯ ಇತಿ ಬ್ರಹ್ಮಣ್ಯುದಾಹೃತಃ ॥೪೫॥**

**ವಿನಾಯಕಸ್ಯ ಚಾನೂನಮಿತಿ ಮಂತ್ರೋ ಬುಧೈಃ ಸ್ಮೃತಃ ।**
**ಜಾತವೇದಸೇ ಸುನವಾಮ ದುರ್ಗಾಮಂತ್ರೋಽಯಮುಚ್ಯತೇ ॥೪೬॥**

**ಆದಿಪ್ರತ್ನಸ್ಯ ರೇತಸ ಆಕಾಶಸ್ಯ ಉದಾಹೃತಃ ।**
**ಕ್ರಾಣಾ ಶಿಶುರ್ಮಹೀನಾಂ ಚ ವಾಯೋರ್ಮಂತ್ರಃ ಪ್ರಕೀರ್ತಿತಃ ॥೪೭॥**

**ಏಷೋ ಉಷಾ ಅಪೂರ್ವ್ಯಾ ಇತ್ಯಶ್ವಿನೋರ್ಮಂತ್ರ ಉಚ್ಯತೇ ।**
**ಪೂರ್ಣಾಹುತಿಸ್ತು ಮೂರ್ಧಾನಂ ದಿವ ಇತ್ಯಭಿಪಾತಯೇತ್ ॥೪೮॥**

---

೪೪. ಉತ್ತಾನಪರ್ಣೇ ಸುಭಗೇ'' ಎಂಬ ಮಂತ್ರವನ್ನು ಹೇಳಿ ದೇವಿಗೆ ಹೋಮವನ್ನು ಮಾಡಬೇಕು. ಪ್ರಜಾಪತಿಗೆ ಆಹುತಿ ಕೊಡುವಾಗ "ಪ್ರಜಾಪತಿಃ'' ಎಂಬ ಮಂತ್ರವನ್ನು ಉಚ್ಚರಿಸಬೇಕು.

೪೫. "ನಮೋಽಸ್ತು ಸರ್ಪೇಭ್ಯಃ'' ಎಂಬುದು ಸರ್ಪಗಳಿಗಾಗಿ ಹೋಮ ಮಾಡುವಾಗ ಹೇಳಬೇಕಾದ ಮಂತ್ರ. ''ಏಷ ಬ್ರಹ್ಮಾಯ ಋತ್ವಿಗ್ಭ್ಯಃ'' ಎಂಬ ಮಂತ್ರವನ್ನು ಬ್ರಹ್ಮನಿಗೆ ಆಹುತಿಕೊಡುವಾಗ ಜಪಿಸಬೇಕು.

೪೬. ''ಅನೂನಂ'' ಎಂಬುದು ವಿನಾಯಕನ ಮಂತ್ರವೆಂದು ಶಾಸ್ತ್ರಜ್ಞರು ಹೇಳಿದ್ದಾರೆ. ''ಜಾತವೇದಸೇ ಸುನವಾಮ'' ಎಂಬುದು ದುರ್ಗಾದೇವಿಯ ಮಂತ್ರವೆಂದು ಪ್ರಸಿದ್ಧವಾಗಿದೆ.

೪೭. ''ಆದಿಪ್ರತ್ನಸ್ಯ ರೇತಸಃ'' ಎಂಬುದು ಆಕಾಶವನ್ನು ಉದ್ದೇಶಿಸಿ ಹೇಳುವ ಮಂತ್ರವು. ''ಕ್ರಾಣಾ ಶಿಶುರ್ಮಹೀನಾಂ ಚ'' ಎಂಬ ಮಂತ್ರವು ವಾಯು ದೇವತಾಕವಾದುದು.

೪೮. "ಏಷೋ ಉಷಾ ಅಪೂರ್ವ್ಯಾಃ'' ಎಂಬುದನ್ನು ಅಶ್ವಿನೀದೇವತೆಗಳ ಮಂತ್ರವೆಂದು ಹೇಳುವರು. ''ಮೂರ್ಧಾನಂ ದಿವಃ'' ಎಂಬ ಮಂತ್ರದಿಂದ ಪೂರ್ಣಾಹುತಿಯನ್ನು ಕೊಡಬೇಕು.

**ಅಥಾಭಿಷೇಕಮಂತ್ರೇಣ ವಾದ್ಯಮಂಗಲಗೀತಕೈಃ ।**
**ಪೂರ್ಣಕುಂಭೇನ ತೇನೈವ ಹೋಮಾಂತೇ ಪ್ರಾಗುದಙ್ಮುಖಂ ॥೪೯॥**

**ಅವ್ಯಂಗಾವಯವೈರ್ಬ್ರಹ್ಮ ಹೇಮಸ್ರಗ್ದಾಮಭೂಷಿತೈಃ ।**
**ಯಜಮಾನಸ್ಯ ಕರ್ತವ್ಯಂ ಚತುರ್ಭಿಃ ಸ್ನಪನಂ ದ್ವಿಜೈಃ ॥೫೦॥**

**ಸುರಾಸ್ತ್ವಾಮಭಿಷಿಂಚಂತು ಬ್ರಹ್ಮವಿಷ್ಣುಮಹೇಶ್ವರಾಃ ।**
**ವಾಸುದೇವೋ ಜಗನ್ನಾಥಸ್ತಥಾ ಸಂಕರ್ಷಣೋ ವಿಭುಃ ।**
**ಪ್ರದ್ಯುಮ್ನಶ್ಚಾನಿರುದ್ಧಶ್ಚ ಭವಂತು ವಿಜಯಾಯ ತೇ ॥೫೧॥**

**ಆಖಂಡಲೋಽಗ್ನಿರ್ಭಗವಾನ್ಯಮೋ ವೈ ನಿರ್ಋತಿಸ್ತಥಾ ।**
**ವರುಣಃ ಪವನಶ್ಚೈವ ಧನಾಧ್ಯಕ್ಷಸ್ತಥಾ ಶಿವಃ ।**
**ಬ್ರಹ್ಮಣಾ ಸಹಿತಃ ಶೇಷೋ ದಿಕ್ಪಾಲಾಸ್ತ್ವಾಮವಂತು ತೇ ॥೫೨॥**

---

೪೯-೫೦. ಹೋಮವು ಮುಗಿದ ಬಳಿಕ ಮಂಗಲವಾದ್ಯಗಳೂ, ಗೀತಗಳೂ ನಡೆಯುತ್ತಿರಲು, ಯಜಮಾನನು ಪೂರ್ವಕ್ಕೆ ಅಥವಾ ಉತ್ತರಕ್ಕೆ ಅಭಿಮುಖವಾಗಿ ಕುಳಿತುಕೊಳ್ಳುವನು. ಸುವರ್ಣಹಾರಗಳಿಂದಲೂ ಪುಷ್ಪಮಾಲೆಗಳಿಂದಲೂ ಅಲಂಕೃತರಾದ, ಅಂಗಹೀನತೆಯೇನೂ ಇಲ್ಲದ ನಾಲ್ವರು ಬ್ರಾಹ್ಮಣರು ಅಭಿಷೇಕಮಂತ್ರವನ್ನು ಹೇಳುತ್ತ ಅದೇ ಕುಂಭೋದಕದಿಂದ ಯಜಮಾನನಿಗೆ ಸ್ನಾನವನ್ನು ಮಾಡಿಸುವರು.

೫೧. " ದೇವತೆಗಳು ನಿನಗೆ ಅಭಿಷೇಕಮಾಡಲಿ. ಬ್ರಹ್ಮ, ವಿಷ್ಣು, ಮಹೇಶ್ವರ ಎಂಬ ತ್ರಿಮೂರ್ತಿಗಳೂ, ಜಗತ್ಪತಿಯಾದ ವಾಸುದೇವನೂ, ಸರ್ವೇಶ್ವರನಾದ ಸಂಕರ್ಷಣನೂ, ಪ್ರದ್ಯುಮ್ನ ಮತ್ತು ಅನಿರುದ್ಧರೂ ನಿನಗೆ ವಿಜಯವನ್ನು ಕರುಣಿಸಲಿ.

೫೨. ಇಂದ್ರ, ಅಗ್ನಿ, ಪೂಜ್ಯನಾದ ಯಮ, ನಿರ್ಋತಿ, ವರುಣ, ವಾಯು, ಕುಬೇರ, ಈಶಾನ, ಬ್ರಹ್ಮ ಮತ್ತು ಆದಿಶೇಷರೆಂಬ ದಶದಿಕ್ಪಾಲಕರು ನಿನ್ನನ್ನು ರಕ್ಷಿಸಲಿ.

ಕೀರ್ತಿರ್ಲಕ್ಷ್ಮೀರ್ಧೃತಿರ್ಮೇಧಾ ಪುಷ್ಟಿಃ ಶ್ರದ್ಧಾ ಕ್ರಿಯಾ ಮತಿಃ ।
ಬುದ್ಧಿರ್ಲಜ್ಜಾ ವಪುಃ ಶಾಂತಿಸ್ತುಷ್ಟಿಃ ಕಾಂತಿಶ್ಚ ಮಾತರಃ ।
ಏತಾಸ್ತ್ವಾಮಭಿಷಿಂಚಂತು ಧರ್ಮಪತ್ನ್ಯಃ ಸಮಾಗತಾಃ ॥೫೩॥

ಆದಿತ್ಯಶ್ಚಂದ್ರಮಾ ಭೌಮೋ ಬುಧೋ ಜೀವಃ ಸಿತೋಽರ್ಕಜಃ ।
ಗ್ರಹಾಸ್ತ್ವಾಮಭಿಷಿಂಚಂತು ರಾಹುಃ ಕೇತುಶ್ಚ ತರ್ಪಿತಾಃ ॥೫೪॥

ದೇವದಾನವಗಂಧರ್ವಾ ಯಕ್ಷರಾಕ್ಷಸಪನ್ನಗಾಃ ।
ಋಷಯೋ ಮುನಯೋ ಗಾವೋ ದೇವಮಾತರ ಏವ ಚ ॥೫೫॥

ದೇವಪತ್ನ್ಯೋ ದ್ರುಮಾ ನಾಗಾ ದೈತ್ಯಾಶ್ಚಾಪ್ಸರಸಾಂ ಗಣಾಃ ।
ಅಸ್ತ್ರಾಣಿ ಸರ್ವಶಸ್ತ್ರಾಣಿ ರಾಜಾನೋ ವಾಹನಾನಿ ಚ ॥೫೬॥

ಔಷಧಾನಿ ಚ ರತ್ನಾನಿ ಕಾಲಸ್ಯಾವಯವಾಶ್ಚ ಯೇ ।
ಸರಿತಃ ಸಾಗರಾಃ ಶೈಲಾಸ್ತೀರ್ಥಾನಿ ಜಲದಾ ನದಾಃ ।
ಏತೇ ತ್ವಾಮಭಿಷಿಂಚಂತು ಸರ್ವಕಾಮಾರ್ಥಸಿದ್ಧಯೇ ॥೫೭॥

---

೫೩. ಕೀರ್ತಿ, ಲಕ್ಷ್ಮಿ, ಧೃತಿ, ಮೇಧೆ, ಪುಷ್ಟಿ, ಶ್ರದ್ಧೆ ಕ್ರಿಯೆ, ಮತಿ, ಬುದ್ಧಿ, ಲಜ್ಜೆ, ವಪು, ಶಾಂತಿ, ತುಷ್ಟಿ, ಕಾಂತಿ, ಬ್ರಾಹ್ಮಿ ಮೊದಲಾದ ಸಪ್ತಮಾತೃಕೆಯರು ಮತ್ತು ಧರ್ಮಪತ್ನಿಯರು ಇವರೆಲ್ಲರೂ ಬಂದು ನಿನಗೆ ಅಭಿಷೇಚನವನ್ನು ಮಾಡಲಿ.

೫೪. ಸೂರ್ಯ, ಚಂದ್ರ, ಅಂಗಾರಕ, ಬುಧ, ಗುರು, ಶುಕ್ರ, ಶನಿ, ರಾಹು ಮತ್ತು ಕೇತುಗಳೆಂಬ ನವಗ್ರಹಗಳು ಈ ಹೋಮದಿಂದ ತೃಪ್ತರಾಗಿ ನಿನಗೆ ಮಂಗಳ ಸ್ನಾನವನ್ನು ಮಾಡಿಸಲಿ.

೫೫-೫೭. ದೇವತೆಗಳು, ದಾನವರು, ಗಂಧರ್ವರು, ಯಕ್ಷರು, ರಾಕ್ಷಸರು ಪನ್ನಗರು, ಋಷಿಗಳು, ಮುನಿಗಳು, ಗೋವುಗಳು, ದೇವಮಾತೆಯರು, ದೇವಪತ್ನಿಯರು, ವೃಕ್ಷಗಳು, ಸರ್ಪಗಳು, ದೈತ್ಯರು, ಅಪ್ಸರಸ್ತ್ರೀಯರು, ಅಸ್ತ್ರಗಳು, ಸರ್ವಶಸ್ತ್ರಗಳು, ರಾಜರು, ವಾಹನಗಳು, ಔಷಧಗಳು, ರತ್ನಗಳು, ಕಾಲದ ಅವಯವಗಳು, ನದಿಗಳು, ಸಾಗರಗಳು, ಗಿರಿಗಳು, ಪುಣ್ಯತೀರ್ಥಗಳು ಇವೆಲ್ಲವೂ ನಿನಗೆ ಸಕಲೇಷ್ಟಾರ್ಥಗಳ ಸಿದ್ಧಿಗಾಗಿ ಅಭಿಷೇಕವನ್ನು ಮಾಡಲಿ.''

ತತಃ ಶುಕ್ಲಾಂಬರಧರಃ ಶುಕ್ಲಗಂಧಾನುಲೇಪನಃ ।
ಸರ್ವೌಷಧ್ಯೈಃ ಸರ್ವಗಂಧ್ಯೈಃ ಸ್ನಾಪಿತೋ ದ್ವಿಜಪುಂಗವೈಃ ॥೫೮॥

ಯಜಮಾನಃ ಸಪತ್ನೀಕಃ ಋತ್ವಿಜಃ ಸುಸಮಾಹಿತಾ ।
ದಕ್ಷಿಣಾಭಿಃ ಪ್ರಯತ್ನೇನ ಪೂಜಯೇದ್ಗತವಿಸ್ಮಯಃ ॥೫೯॥

ಸೂರ್ಯಾಯ ಕಪಿಲಾಂ ಧೇನುಂ ಶಂಖಂ ದದ್ಯಾತ್ತಥೇಂದವೇ ।
ರಕ್ತಂ ಧುರಂಧರಂ ದದ್ಯಾದ್ಭೌಮಾಯ ಚ ಕಕುದ್ಮಿನಂ ॥೬೦॥

ಬುಧಾಯ ಜಾತರೂಪಂ ತು ಗುರವೇ ಪೀತವಾಸಸೀ ।
ಶ್ವೇತಾಶ್ವಂ ದೈತ್ಯಗುರವೇ ಕೃಷ್ಣಾಂ ಗಾಮರ್ಕಸೂನವೇ ॥೬೧॥

ಆಯಸಂ ರಾಹವೇ ದದ್ಯಾತ್ಕೇತುಭ್ಯಶ್ಛಾಗಮುತ್ತಮಂ ।
ಸುವರ್ಣೇನ ಸಮಾ ಕಾರ್ಯಾ ಯಜಮಾನೇನ ದಕ್ಷಿಣಾ ॥೬೨॥

---

೫೮-೫೯. ಸಕಲಮೂಲಿಕೆಗಳಿಂದಲೂ, ಪರಿಮಳ ದ್ರವ್ಯಗಳಿಂದಲೂ ಬ್ರಾಹ್ಮಣೋತ್ತಮರು ಅಭಿಷೇಕಮಾಡಿದ ಮೇಲೆ ಯಜಮಾನನು ಶುಭ್ರವಸ್ತ್ರವನ್ನುಟ್ಟು, ಬಿಳಿಯ ಗಂಧವನ್ನು ಧರಿಸಿ, ಪತ್ನೀಸಹಿತನಾಗಿ, ಸಮಾಹಿತಚಿತ್ತರಾದ ಋತ್ವಿಕ್ಕುಗಳಿಗೆ ನಮ್ರಭಾವದಿಂದ ದಕ್ಷಿಣೆಯನ್ನಿತ್ತು ಪೂಜಿಸಬೇಕು.

೬೦. ನವಗ್ರಹಗಳ ತೃಪ್ತಿಗಾಗಿ ಬೇರೆ ಬೇರೆ ವಸ್ತುಗಳನ್ನು ದಾನಮಾಡಬೇಕು. ಸೂರ್ಯನಿಗಾಗಿ ಕಪಿಲವರ್ಣದ ಹಸುವನ್ನೂ, ಚಂದ್ರನಿಗಾಗಿ ಶಂಖವನ್ನೂ, ಅಂಗಾರಕನಿಗಾಗಿ ಬಲಶಾಲಿಯಾದ ಕೆಂಪುಬಣ್ಣದ ಎತ್ತನ್ನೂ ದಾನವಾಗಿ ಕೊಡಬೇಕು.

೬೧-೬೨. ಬುಧನಿಗೆ ಚಿನ್ನ, ಗುರುವಿಗೆ ಒಂದು ಜೊತೆ ಪೀತಾಂಬರ, ಶುಕ್ರನಿಗೆ ಬಿಳಿಯ ಕುದುರೆ, ಶನಿಗೆ ಕರಿಯ ಹಸು, ರಾಹುವಿಗೆ ಕಬ್ಬಿಣದ ಪಾತ್ರೆ, ಕೇತುವಿಗೆ ಆಡು ಇವು ತೃಪ್ತಿಯನ್ನು ಕೊಡುವ ದಾನವಸ್ತುಗಳು. ಯಜಮಾನನು ದಕ್ಷಿಣೆಯನ್ನು ಸುವರ್ಣರೂಪದಲ್ಲಿ ಕೊಡಬೇಕು.

**ಸರ್ವೇಷಾಮಥವಾ ಗಾವೋ ದಾತವ್ಯಾ ಹೇಮಭೂಷಿತಾಃ ।**
**ಸುವರ್ಣಮಥವಾ ದದ್ಯಾದ್ಗುರುರ್ವಾ ಯೇನ ತುಷ್ಯತಿ ।**
**ಸ್ವಮಂತ್ರೇಣೈವ ದಾತವ್ಯಾಃ ಸರ್ವಾಃ ಸರ್ವತ್ರ ದಕ್ಷಿಣಾಃ ॥೬೩॥**

**ಕಪಿಲೇ ಸರ್ವದೇವಾನಾಂ ಪೂಜನೀಯಾಸಿ ರೋಹಿಣೀ ।**
**ತೀರ್ಥದೇವಮಯೀ ಯಸ್ಮಾದತಃ ಶಾಂತಿಂ ಪ್ರಯಚ್ಛ ಮೇ ॥೬೪॥**

**ಪುಣ್ಯಸ್ತ್ವಂ ಶಂಖ ಪುಣ್ಯಾನಾಂ ಮಂಗಲಾನಾಂ ಚ ಮಂಗಲಂ ।**
**ವಿಷ್ಣುನಾ ವಿಧೃತಶ್ಚಾಸಿ ತತಃ ಶಾಂತಿಂ ಪ್ರಯಚ್ಛ ಮೇ ॥೬೫॥**

**ಧರ್ಮಸ್ತ್ವಂ ವೃಷರೂಪೇಣ ಜಗದಾನಂದಕಾರಕ ।**
**ಅಷ್ಟಮೂರ್ತೇರಧಿಷ್ಠಾನಮತಃ ಶಾಂತಿಂ ಪ್ರಯಚ್ಛ ಮೇ ॥೬೬॥**

---

೬೩. ಹಾಗಲ್ಲದಿದ್ದರೆ ಎಲ್ಲ ಗ್ರಹಗಳಿಗೂ ಸುವರ್ಣಾಲಂಕೃತವಾದ ಹಸುಗಳನ್ನೇ ದಾನಮಾಡಬಹುದು. ಅಥವಾ ಹಿರಣ್ಯವನ್ನೇ ಆದರೂ ಕೊಡಬಹುದು. ಅದೂ ಇಲ್ಲದಿದ್ದರೆ ಆಚಾರ್ಯನಿಗೆ ಯಾವುದು ಇಷ್ಟವೋ ಅದನ್ನು ಒಪ್ಪಿಸಬಹುದು. ಎಲ್ಲ ಸಂದರ್ಭಗಳಲ್ಲಿಯೂ ದಕ್ಷಿಣೆಯನ್ನು ಆಯಾ ದಾನಗಳ ಮಂತ್ರಗಳಿಂದಲೇ ಕೊಡಬೇಕು.

೬೪. "ಕಪಿಲವರ್ಣದ ಎಲೌ ಹಸುವೇ, ನೀನು ಸಕಲ ದೇವತೆಗಳಿಗೂ ಪೂಜ್ಯಳು ; ಸರ್ವತೀರ್ಥಸ್ವರೂಪಿಣಿ ; ಸಕಲದೇವತಾಮಯಿ. ಆದುದರಿಂದ ನನಗೆ ಶಾಂತಿಯನ್ನು ಕೊಡು.

೬೫. ಎಲೈ ಶಂಖವೇ, ನೀನು ಪುಣ್ಯಸ್ವರೂಪನು. ಮಂಗಳವಸ್ತುಗಳಲ್ಲೆಲ್ಲ ಮಂಗಳವೆನಿಸಿದವನು. ವಿಷ್ಣು ನಿನ್ನನ್ನು ಧರಿಸಿರುವನು. ಆದುದರಿಂದ ನನಗೆ ಶಾಂತಿಯನ್ನು ಕೊಡು.

೬೬. ಲೋಕಾನಂದಕರನೆನಿಸಿದ ಎಲೈ ವೃಷಭವೇ, ನೀನು ಧರ್ಮಪುರುಷನ ಸ್ವರೂಪವೆನಿಸಿರುವೆ ; ಈಶ್ವರನ ವಾಹನವಾಗಿದ್ದೀಯೆ. ಆದುದರಿಂದ ನನಗೆ ಶಾಂತಿಯನ್ನು ನೀಡು.

ಹಿರಣ್ಯಗರ್ಭಗರ್ಭಸ್ತ್ವಂ ಹೇಮಬೀಜಂ ವಿಭಾವಸೋಃ ।
ಅನಂತಪುಣ್ಯಫಲದಮತಃ ಶಾಂತಿಂ ಪ್ರಯಚ್ಛ ಮೇ ॥೬೭॥

ಪೀತವಸ್ತ್ರಯುಗಂ ಯಸ್ಮಾದ್ವಾಸುದೇವಸ್ಯ ವಲ್ಲಭಂ ।
ಪ್ರದಾನಾತ್ತಸ್ಯ ಮೇ ವಿಷ್ಣೋ ಹ್ಯತಃ ಶಾಂತಿಂ ಪ್ರಯಚ್ಛ ಮೇ ॥೬೮॥

ವಿಷ್ಣುಸ್ತ್ವಮಶ್ವರೂಪೇಣ ಯಸ್ಮಾದಮೃತಸಂಭವಃ ।
ಚಂದ್ರಾರ್ಕವಾಹನೋ ನಿತ್ಯಮತಃ ಶಾಂತಿಂ ಪ್ರಯಚ್ಛ ಮೇ ॥೬೯॥

ಯಸ್ಮಾತ್ತ್ವಂ ಪೃಥಿವೀ ಸರ್ವಾ ಧೇನುಃ ಕೇಶವಸನ್ನಿಭಾ ।
ಸರ್ವಪಾಪಹರಾ ನಿತ್ಯಮತಃ ಶಾಂತಿಂ ಪ್ರಯಚ್ಛ ಮೇ ॥೭೦॥

ಯಸ್ಮಾದಾಯಾಸಕರ್ಮಾಣಿ ತವಾಧೀನಾನಿ ಸರ್ವದಾ ।
ಲಾಂಗಲಾದ್ಯಾಯುಧಾದೀನಿ ತಸ್ಮಾಚ್ಛಾಂತಿಂ ಪ್ರಯಚ್ಛ ಮೇ ॥೭೧॥

---

೬೭. ಓ ಸುವರ್ಣವೇ, ನೀನು ಬ್ರಹ್ಮನ ಗರ್ಭದಲ್ಲಿ ಜನಿಸಿದವನು. ಅಗ್ನಿಯ ವೀರ್ಯವೆನಿಸಿಕೊಂಡಿರುವೆ. ಅಕ್ಷಯವಾದ ಪುಣ್ಯಫಲವನ್ನು ಕೊಡುವಾತನು. ಆದುದರಿಂದ ನನಗೆ ಶಾಂತಿಯನ್ನು ಕರುಣಿಸು.

೬೮. ಪೀತಾಂಬರಗಳೆರಡೂ ವಾಸುದೇವನಿಗೆ ಪ್ರಿಯವಾದುವು. ಅವುಗಳನ್ನು ದಾನವಾಗಿ ಕೊಡುತ್ತೇನೆ. ಎಲೈ ವಿಷ್ಣುವೇ, ಆದುದರಿಂದ ನೀನು ನನಗೆ ಶಾಂತಿಯನ್ನು ಕೊಡು.

೬೯. ಎಲೈ ಅಶ್ವವೇ, ನೀನು ಸಾಕ್ಷಾದ್ವಿಷ್ಣು ಸ್ವರೂಪನು. ಅಮೃತದಲ್ಲಿ ಉತ್ಪನ್ನನಾದವನು. ನಿತ್ಯವೂ ಚಂದ್ರಸೂರ್ಯರಿಗೆ ವಾಹನವಾಗಿರುವವನು. ಆದುದರಿಂದ ನನಗೆ ಶಾಂತಿಯನ್ನು ಕೊಡು.

೭೦. ಸಕಲ ಭೂಮಂಡಲಸ್ವರೂಪಳಾದ ಎಲೌ ಗೋಮಾತೆಯೇ, ನೀನು ಮಹಿಮೆಯಲ್ಲಿ ಕೇಶವನಿಗೆ ಸಮಾನಳು. ನಿತ್ಯವೂ ಸರ್ವಪಾಪವನ್ನೂ ಪರಿಹರಿಸುವವಳು. ನನಗೆ ಶಾಂತಿಯನ್ನು ಕರುಣಿಸು.

೭೧. ಎಲೈ ಕಬ್ಬಿಣವೇ, ಶ್ರಮಸಾಧ್ಯವಾದ ಕಾರ್ಯಗಳೆಲ್ಲ ಯಾವಾಗಲೂ ನಿನ್ನ ಅಧೀನವಾಗಿವೆ. ನೇಗಿಲು ಮೊದಲಾದ ಕೃಷಿಯ ಸಾಧನಗಳೂ, ಕತ್ತಿ ಮುಂತಾದ ಆಯುಧಗಳೂ ನಿನ್ನಿಂದಲೇ ಆಗುತ್ತವೆ. ಆದುದರಿಂದ ನನಗೆ ಶಾಂತಿಯನ್ನು ನೀಡು.

ಯಸ್ಮಾತ್ತ್ವಂ ಸರ್ವಯಜ್ಞಾನಾಮಂಗತ್ವೇನ ವ್ಯವಸ್ಥಿತಃ ।
ಯಾನಂ ವಿಭಾವಸೋರ್ನಿತ್ಯಮತಃ ಶಾಂತಿಂ ಪ್ರಯಚ್ಛ ಮೇ ॥೭೨॥

ಗವಾಮಂಗೇಷು ತಿಷ್ಠಂತಿ ಭುವನಾನಿ ಚತುರ್ದಶ ।
ಯಸ್ಮಾತ್ತಸ್ಮಾಚ್ಛ್ರಿಯೋ ಮೇ ಸ್ಯಾದಿಹ ಲೋಕೇ ಪರತ್ರ ಚ ॥೭೩॥

ಯಸ್ಮಾದಶೂನ್ಯಂ ಶಯನಂ ಕೇಶವಸ್ಯ ಚ ಸರ್ವದಾ ।
ಶಯ್ಯಾ ಮಮಾಪ್ಯಶೂನ್ಯಾಽಸ್ತು ದತ್ತಾ ಜನ್ಮನಿ ಜನ್ಮನಿ ॥೭೪॥

ಯಥಾ ರತ್ನೇಷು ಸರ್ವೇಷು ಸರ್ವೇ ದೇವಾಃ ಪ್ರತಿಷ್ಠಿತಾಃ ।
ತಥಾ ರತ್ನಾನಿ ಯಚ್ಛಂತು ರತ್ನದಾನೇನ ಮೇ ಸುರಾಃ ॥೭೫॥

ಯಥಾ ಭೂಮಿಪ್ರದಾನಸ್ಯ ಕಲಾಂ ನಾರ್ಹಂತಿ ಷೋಡಶೀಂ ।
ದಾನಾನ್ಯನ್ಯಾನಿ ಮೇ ಶಾಂತಿರ್ಭೂಮಿದಾನಾದ್ಭವತ್ವಿಹ ॥೭೬॥

---

೭೨. ಎಲೈ ಅಜವೇ, ನೀನು ಸಕಲಯಜ್ಞಗಳಿಗೂ ಅಂಗಭೂತವಾಗಿರುವೆ. ಅಗ್ನಿದೇವನಿಗೆ ನಿತ್ಯವಾಹನವೆನಿಸಿರುವೆ. ಆದಕಾರಣ ನನಗೆ ಶಾಂತಿಯನ್ನು ಕೊಡು.

೭೩. ಹಸುಗಳ ಅವಯವಗಳಲ್ಲಿ ಹದಿನಾಲ್ಕು ಲೋಕಗಳೂ ನೆಲೆಸಿವೆ. ಆದುದರಿಂದ ಅವುಗಳು ಈ ಲೋಕದಲ್ಲೂ ಪರಲೋಕದಲ್ಲೂ ನನಗೆ ಶ್ರೇಯಸ್ಸಾಧನಗಳಾಗಲಿ.

೭೪. ವಿಷ್ಣುವಿನ ಹಾಸಿಗೆಯು ಲಕ್ಷ್ಮಿಯಿಲ್ಲದೆ ಎಂದಿಗೂ ಬರಿದಾಗಿರದು. ಹಾಗೆಯೇ ಒಂದೊಂದು ಜನ್ಮದಲ್ಲಿಯೂ ನನ್ನ ಹಾಸಿಗೆಯೂ ಸಹ ಬರಿದಾಗದಿರಲಿ. ಇದನ್ನು ನಾನು ದಾನಮಾಡುತ್ತೇನೆ.

೭೫. ಸಕಲ ರತ್ನಗಳಲ್ಲಿಯೂ ದೇವತೆಗಳೆಲ್ಲ ನೆಲಸಿರುವರು. ನಾನು ಮಾಡುವ ರತ್ನದಾನದಿಂದ ಅವರು ತೃಪ್ತರಾಗಿ ನನಗೆ ಉತ್ತಮವಾದ ವಸ್ತುಗಳನ್ನು ಅನುಗ್ರಹಿಸಲಿ.

೭೬. ಮಿಕ್ಕ ದಾನಗಳು ಭೂದಾನದ ಹದಿನಾರನೆಯ ಒಂದು ಪಾಲಿಗೂ ಸರಿಯಾಗಲಾರವು. ಅಂತಹ ಭೂದಾನವನ್ನು ನಾನೀಗ ಮಾಡುತ್ತೇನೆ. ಆದರಿಂದ ನನಗೆ ಶಾಂತಿ ಲಭಿಸಲಿ.''

**ಏವಂ ಸಂಪೂಜಯೇದ್ಭಕ್ತ್ಯಾ ವಿತ್ತಶಾಠ್ಯೇನ ವರ್ಜಿತಃ ।**
**ರತ್ನಕಾಂಚನವಸ್ತ್ರಾಘ್ಯೈರ್ಧೂಪಮಾಲ್ಯಾನುಲೇಪನೈಃ ॥೭೭॥**

**ಅನೇನ ವಿಧಿನಾ ಯಸ್ತು ಗ್ರಹಪೂಜಾಂ ಸಮಾಚರೇತ್ ।**
**ಸರ್ವಾನ್ ಕಾಮಾನವಾಪ್ನೋತಿ ಪ್ರೇತ್ಯ ಸ್ವರ್ಗೇ ಮಹೀಯತೇ ॥೭೮॥**

**ಯಸ್ತು ಪೀಡಾಕರೋ ನಿತ್ಯಮಲ್ಪವಿತ್ತಸ್ಯ ವಾ ಗ್ರಹಃ ।**
**ತಂ ಚ ಯತ್ನೇನ ಸಂಪೂಜ್ಯ ಶೇಷಾನಪ್ಯರ್ಚಯೇದ್ಬುಧಃ ॥೭೯॥**

**ಗ್ರಹಾ ಗಾವೋ ನರೇಂದ್ರಾಶ್ಚ ಬ್ರಾಹ್ಮಣಾಶ್ಚ ವಿಶೇಷತಃ ।**
**ಪೂಜಿತಾಃ ಪೂಜಯಂತ್ಯೇತೇ ನಿರ್ದಹಂತ್ಯವಮಾನಿತಾಃ ॥೮೦॥**

**ಯಥಾ ಬಾಣಪ್ರಹಾರಾಣಾಂ ಕವಚಂ ಭವತಿ ವಾರಣಂ ।**
**ತದ್ವದ್ದೈವೋಪಘಾತಾನಾಂ ಶಾಂತಿರ್ಭವತಿ ವಾರಣಂ ॥೮೧॥**

---

೭೭. ಈ ರೀತಿಯಲ್ಲಿ ದ್ರವ್ಯಕ್ಕಾಗಿ ಕಾರ್ಪಣ್ಯಮಾಡದೆ ಸುವರ್ಣ, ರತ್ನ, ವಸ್ತ್ರ, ಗಂಧ, ಪುಷ್ಪ, ಧೂಪ ಇವುಗಳಿಂದ ಭಕ್ತಿಯೊಡನೆ ಸತ್ಕರಿಸಬೇಕು.

೭೮. ಈ ವಿಧಾನದಿಂದ ಗ್ರಹಪೂಜೆಯನ್ನು ಮಾಡುವಾತನು ಸಕಲೇಷ್ಟಾರ್ಥಗಳನ್ನೂ ಪಡೆಯುವನು. ಮರಣಾನಂತರ ಸ್ವರ್ಗದಲ್ಲಿ ಮಾನ್ಯನಾಗುವನು.

೭೯. ದ್ರವ್ಯಾನುಕೂಲತೆಯಿಲ್ಲದ ದರಿದ್ರನೇ ಆಗಿರಲಿ, ಮನುಷ್ಯನು ತನಗೆ ಪ್ರತಿಕೂಲವಾಗಿರುವ ಗ್ರಹವನ್ನು ನಿತ್ಯವೂ ಪ್ರಯತ್ನಪೂರ್ವಕವಾಗಿ ಆರಾಧಿಸಬೇಕು. ಉಳಿದವುಗಳನ್ನೂ ಸಹ ಪೂಜಿಸಬೇಕು. ಇದು ಪ್ರಾಜ್ಞನ ಲಕ್ಷಣ.

೮೦. ಗ್ರಹಗಳು, ಹಸುಗಳು, ರಾಜರು, ಮುಖ್ಯವಾಗಿ ಬ್ರಾಹ್ಮಣರು ಇವರು ತಮ್ಮನ್ನು ಗೌರವಿಸಿ ಸತ್ಕರಿಸಿದವರನ್ನು ಮನ್ನಿಸುವರು. ಅವಮಾನಮಾಡಿದವರನ್ನು ದಹಿಸುವರು.

೮೧. ಬಾಣ ಪ್ರಹಾರವು ತಗಲದಂತೆ ಕವಚವು ತಡೆಯುತ್ತದೆ. ಹಾಗೆಯೇ ದುರ್ದೈವದಿಂದ ಕೇಡಾಗದಂತೆ ಶಾಂತಿಯು ನಿವಾರಿಸುತ್ತದೆ.

ತಸ್ಮಾನ್ನ ದಕ್ಷಿಣಾಹೀನಂ ಕರ್ತವ್ಯಂ ಭೂತಿಮಿಚ್ಛತಾ ।
ಸಂಪೂರ್ಣಯಾ ದಕ್ಷಿಣಯಾ ಯಸ್ಮಾದೇಕೋಽಪಿ ತುಷ್ಯತಿ ॥೮೨॥

ಸದೈವಾಯುತಹೋಮೋಽಯಂ ನವಗ್ರಹಮುಖೇ ಸ್ಥಿತಃ ।
ವಿವಾಹೋತ್ಸವಯಜ್ಞೇಷು ಪ್ರತಿಷ್ಠಾದಿಷು ಕರ್ಮಸು ॥೮೩॥

ನಿರ್ವಿಘ್ನಾರ್ಥಂ ಮುನಿಶ್ರೇಷ್ಠ ತಥೋದ್ವೇಗಾದ್ಭುತೇಷು ಚ ।
ಕಥಿತೋಽಯುತಹೋಮೋಽಯಂ ಲಕ್ಷಹೋಮಮತಃ ಶೃಣು ॥೮೪॥

ಸರ್ವಕಾಮಾಪ್ತಯೇ ಯಸ್ಮಾಲ್ಲಕ್ಷಹೋಮಂ ವಿದುರ್ಬುಧಾಃ ।
ಪಿತೄಣಾಂ ವಲ್ಲಭಂ ಸಾಕ್ಷಾದ್ಭುಕ್ತಿಮುಕ್ತಿಫಲಪ್ರದಂ ॥೮೫॥

ಗ್ರಹತಾರಾಬಲಂ ಲಬ್ಧ್ವಾ ಕೃತ್ವಾ ಬ್ರಾಹ್ಮಣವಾಚನಂ ।
ಗೃಹಸ್ಯೋತ್ತರಪೂರ್ವೇಣ ಮಂಡಪಂ ಕಾರಯೇದ್ಬುಧಃ ॥೮೬॥

---

೮೨. ಆದುದರಿಂದ ಶ್ರೇಯಸ್ಸನ್ನು ಕೋರುವವನು ಯಾವ ಕರ್ಮವನ್ನಾಗಲಿ ದಕ್ಷಿಣೆಯಿಲ್ಲದೆ ಮಾಡಬಾರದು. ಕೊನೆಗೆ ಒಬ್ಬನಾದರೂ ತೃಪ್ತನಾಗುವಂತೆ ಸಂಪೂರ್ಣವಾದ ದಕ್ಷಿಣೆಯನ್ನು ಕೊಡಬೇಕು.

೮೩-೮೪. ನವಗ್ರಹ ಯಜ್ಞದಲ್ಲಿ ಯಾವಾಗಲೂ ಈ ಅಯುತಹೋಮವು ಎಂದರೆ ಹತ್ತು ಸಾವಿರ ಸಂಖ್ಯೆಯ ಹೋಮವು ಇದ್ದೇ ಇರುವುದು. ವಿವಾಹ ಮೊದಲಾದ ಉತ್ಸವಗಳು, ಯಜ್ಞಗಳು, ದೇವಾಲಯಾದಿಗಳ ಪ್ರತಿಷ್ಠಾ ಕರ್ಮಗಳು, ಉದ್ವೇಗ ಮತ್ತು ಉತ್ಪಾತಗಳಿಗಾಗಿ ಮಾಡುವ ಶಾಂತಿಕರ್ಮಗಳು ಇವುಗಳಲ್ಲೆಲ್ಲ ನಿರ್ವಿಘ್ನತೆಗಾಗಿ ಈ ಅಯುತ ಹೋಮವನ್ನು ಮಾಡಬೇಕೆಂದು ಶಾಸ್ತ್ರವು ಹೇಳುತ್ತದೆ. ಇನ್ನು ಮುಂದೆ ಲಕ್ಷಹೋಮದ ವಿಧಾನವನ್ನು ಕೇಳು.

೮೫. ಈ ಲಕ್ಷಹೋಮವು ಸಕಲೇಷ್ಟಾರ್ಥಗಳನ್ನೂ ಈಡೇರಿಸುವುದೆಂದು ಪ್ರಾಜ್ಞರು ಹೇಳುತ್ತಾರೆ. ಇದು ಪಿತೃಗಳಿಗೆ ಪ್ರಿಯಕರವಾದುದು. ಭೋಗಫಲವನ್ನೂ ಮೋಕ್ಷಫಲವನ್ನೂ ಸಾಕ್ಷಾತ್ತಾಗಿ ಕೊಡುವುದು.

೮೬. ಗ್ರಹಬಲವೂ ತಾರಾಬಲವೂ ಸರಿಯಾಗಿರುವ ಶುಭದಿವಸದಲ್ಲಿ ಬ್ರಾಹ್ಮಣರ ಅನುಗ್ರಹವನ್ನು ಪಡೆದು, ಆಸ್ತಿಕನಾದ ಯಜಮಾನನು ತನ್ನ ಮನೆಗೆ ಈಶಾನ್ಯ ದಿಕ್ಕಿನಲ್ಲಿ—ಪೂರ್ವ ಅಥವಾ ಉತ್ತರ ದಿಕ್ಕಿನಲ್ಲಾದರೂ ಆಗಬಹುದು—ಯಾಗ ಮಂಟಪವನ್ನು ನಿರ್ಮಾಣಮಾಡಬೇಕು.

ರುದ್ರಾಯತನಭೂಮೌ ವಾ ಚತುರಸ್ರಮುದಙ್ಮುಖಂ ।
ದಶಹಸ್ತಮಥಾಷ್ಟೌ ವಾ ಹಸ್ತಾನ್ಕುರ್ಯಾದ್ವಿಧಾನತಃ ॥೮೭॥

ಪ್ರಾಗುದಕ್ಪ್ಲವನಾಂ ಭೂಮಿಂ ಕಾರಯೇದ್ಯತ್ನತೋ ಬುಧಃ ।
ಪ್ರಾಗುತ್ತರಂ ಸಮಾಸಾದ್ಯ ಪ್ರದೇಶಂ ಮಂಡಪಸ್ಯ ತು ॥೮೮॥
ಶೋಭನಂ ಕಾರಯೇತ್ಕುಂಡಂ ಯಥಾವಲ್ಲಕ್ಷಣಾನ್ವಿತಂ ।
ಚತುರಸ್ರಂ ಸಮಂತಾತ್ತು ಯೋನಿವಕ್ತ್ರಂ ಸಮೇಖಲಂ ॥೮೯॥

ಚತುರಂಗುಲವಿಸ್ತಾರಾ ಮೇಖಲಾ ತದ್ವದುಚ್ಛ್ರಿತಾ ।
ಪ್ರಾಗುದಕ್ಪ್ಲವನಾ ಕಾರ್ಯಾ ಸರ್ವತಃ ಸಮವಸ್ಥಿತಾ ॥೯೦॥

ಶಾಂತ್ಯರ್ಥಂ ಸರ್ವಲೋಕಾನಾಂ ನವಗ್ರಹಮಖಃ ಸ್ಮೃತಃ ।
ಮಾನಹೀನಾಧಿಕಂ ಕುಂಡಮನೇಕಭಯದಂ ಭವೇತ್ ।
ಯಸ್ಮಾತ್ತಸ್ಮಾತ್ಸುಸಂಪೂರ್ಣಂ ಶಾಂತಿಕುಂಡಂ ವಿಧೀಯತೇ ॥೯೧॥

---

೮೭. ಇಲ್ಲವೇ ಈಶ್ವರನ ದೇವಸ್ಥಾನದಲ್ಲಾದರೂ ಮಂಟಪವನ್ನು ಕಟ್ಟಬಹುದು. ಅದು ಚೌಕವಾಗಿ ಉತ್ತರಾಭಿಮುಖವಾಗಿರಬೇಕು. ಎಂಟು ಅಥವಾ ಹತ್ತು ಮೊಳಗಳ ಅಳತೆಯಿರಬಹುದು.

೮೮. ನೆಲವು ಈಶಾನ್ಯಕ್ಕೆ ಇಳಿಜಾರಾಗಿರುವಂತೆ ಪ್ರಯತ್ನದಿಂದ ಏರ್ಪಡಿಸಬೇಕು. ಮಂಟಪದೊಳಗೆ ಈಶಾನ್ಯ ಪ್ರದೇಶದಲ್ಲಿ ಶಾಸ್ತ್ರೋಕ್ತವಾದ ಲಕ್ಷಣಗಳಿಂದ ಕೂಡಿದ, ಶುಭಕರವಾದ ಅಗ್ನಿಕುಂಡವನ್ನು ವಿರಚಿಸಬೇಕು.

೮೯-೯೦. ಕುಂಡವು ನಾಲ್ಕು ಕಡೆಗಳಲ್ಲಿಯೂ ಚೌಕನಾಗಿ ಮೇಖಲೆಗಳಿಂದಲೂ, (ಸುತ್ತುಗಟ್ಟುಗಳಿಂದಲೂ) ಯೋನಿಮುಖದಿಂದಲೂ (ಹೋಮ ಮಾಡುವಾಗ ನೆಲದ ಮೇಲೆ ಚೆಲ್ಲಿದ ತುಪ್ಪವು ಕುಂಡದೊಳಕ್ಕೆ ಹರಿದು ಹೋಗುವಂತೆ ಅರಳಿಯ ಎಲೆಯ ಆಕಾರವಾಗಿ ರಚಿಸಿರುವ ಒಂದು ಬಗೆಯ ಬಚ್ಚಲು) ಕೂಡಿರಬೇಕು. ಮೇಖಲೆಯು ನಾಲ್ಕು ಅಂಗುಲ ಅಗಲವೂ, ಅಷ್ಟೇ ಎತ್ತರವೂ ಇರಬೇಕು. ಅದನ್ನು ಈಶಾನ್ಯದ ಕಡೆಗೆ ಇಳಿಜಾರಾಗಿರುವಂತೆ ರಚಿಸಬೇಕು.

೯೧. ನವಗ್ರಹಯಜ್ಞವು ಸಕಲ ಲೋಕಗಳಿಗೂ ಶಾಂತಿಯನ್ನು ಕೊಡತಕ್ಕುದೆಂದು ಹೇಳಿದೆ. ಕುಂಡದ ಅಳತೆಯಲ್ಲಿಯೂ, ರಚನೆಯಲ್ಲಿಯೂ ಹೆಚ್ಚು ಕಡಿಮೆಯಾದರೆ ಹಲವು ಬಗೆಯ ಭೀತಿಯುಂಟಾಗುವುದು. ಆದುದರಿಂದ ಸಂಪೂರ್ಣವಾದ ಲಕ್ಷಣಗಳಿರುವಂತೆ ಅದನ್ನು ವಿರಚಿಸಬೇಕು.

ಅಸ್ಮಾದ್ದಶಗುಣಃ ಪ್ರೋಕ್ತೋ ಲಕ್ಷಹೋಮಃ ಸ್ವಯಂಭುವಾ ।
ಆಹುತೀಭಿಃ ಪ್ರಯತ್ನೇನ ದಕ್ಷಿಣಾಭಿಸ್ತಥೈವ ಚ ॥೯೨॥

ದ್ವಿಹಸ್ತವಿಸ್ತೃತಂ ತದ್ವಚ್ಚತುರ್ಹಸ್ತಾಯತಂ ಪುನಃ ।
ಲಕ್ಷಹೋಮೇ ಭವೇತ್ಕುಂಡಂ ಯೋನಿವಕ್ತ್ರಂ ತ್ರಿಮೇಖಲಂ ॥೯೩॥

ತಸ್ಯ ಚೋತ್ತರಪೂರ್ವೇಣ ವಿತಸ್ತಿತ್ರಯಸಂಸ್ಥಿತಂ ।
ಪ್ರಾಗುದಕ್ಪ್ಲವನಂ ತಚ್ಚ ಚತುರಸ್ರಂ ಸಮಂತತಃ ॥೯೪॥

ವಿಷ್ಕಂಭಾರ್ಧೋಚ್ಛ್ರಿತಂ ಪ್ರೋಕ್ತಂ ಸ್ಥಂಡಿಲಂ ವಿಶ್ವಕರ್ಮಣಾ ।
ಸಂಸ್ಥಾಪನಾಯ ದೇವಾನಾಂ ವಪ್ರತ್ರಯಸಮಾವೃತಂ ॥೯೫॥

ದ್ವ್ಯಂಗುಲೋ ಹ್ಯುಚ್ಛ್ರಿತೋ ವಪ್ರಃ ಪ್ರಥಮಃ ಸ ಉದಾಹೃತಃ ।
ಅಂಗುಲೋಚ್ಛ್ರಯಸಂಯುಕ್ತಂ ವಪ್ರದ್ವಯಮಥೋಪರಿ ॥೯೬॥

---

೯೨. ಲಕ್ಷಹೋಮವು ಅಯುತ ಹೋಮಕ್ಕಿಂತಲೂ ಆಹುತಿಗಳ ಸಂಖ್ಯೆಯಲ್ಲಿ ಹತ್ತುಪಾಲು ಅಧಿಕವಾಗಿರುವುದು. ದಕ್ಷಿಣೆಗಳ ವಿಷಯದಲ್ಲಿಯೂ ಹೀಗೆಯೇ ಇರುವಂತೆ ಪ್ರಯತ್ನಿಸಬೇಕು.

೯೩. ಲಕ್ಷ ಹೋಮದಲ್ಲಿ ಅಗ್ನಿಕುಂಡವು ಎರಡು ಮೊಳ ಅಗಲವೂ, ನಾಲ್ಕು ಮೊಳ ಉದ್ದವೂ ಇರುವುದು. ಅದಕ್ಕೆ ಒಂದು ಯೋನಿಮುಖವೂ, ಮೂರು ಮೇಖಲೆಗಳೂ ಇರುವುವು.

೯೪-೯೫. ಅದಕ್ಕೂ ಈಶಾನ್ಯದಲ್ಲಿ ದೇವತೆಗಳ ಸ್ಥಾಪನೆಗಾಗಿ ಮೂರು ಗೇಣಳತೆಯ ಚಚ್ಚೌಕವಾದ ಸ್ಥಲವನ್ನು ಏರ್ಪಡಿಸಬೇಕು. ಅದೂ ಸಹ ಈಶಾನ್ಯದ ಕಡೆಗೆ ಇಳಿಜಾರಾಗಿರಬೇಕು; ಮತ್ತು ಮೂರು ಅಂತಸ್ತುಗಳುಳ್ಳುದಾಗಿ ಬಾಗಿಲಿನ ಅಗಳಿಯ ಅರ್ಧದಷ್ಟು ಉನ್ನತವಾಗಿರಬೇಕು.

೯೬. ಮೊದಲನೆಯ ಅಂತಸ್ತು ಎರಡಂಗುಲ ಎತ್ತರವಾಗಿಯೂ ಅದರ ಮೇಲಣ ಎರಡೂ ಒಂದೊಂದಂಗುಲ ಎತ್ತರವಾಗಿಯೂ ಇರುವುವು.

ತ್ರ್ಯಂಗುಲಸ್ಯ ಚ ವಿಸ್ತಾರಃ ಸರ್ವೇಷಾಂ ಕಥ್ಯತೇ ಬುಧೈಃ ।
ದಶಾಂಗುಲೋಚ್ಛ್ರಿತಾ ಭಿತ್ತಿಃ ಸ್ಥಂಡಿಲೇ ಸ್ಯಾತ್ತಥೋಪರಿ ।
ತಸ್ಮಿನ್ನಾವಾಹಯೇದ್ದೇವಾನ್ ಪೂರ್ವವತ್ಪುಷ್ಪತಂಡುಲೈಃ ॥೯೭॥

ಆದಿತ್ಯಾಭಿಮುಖಾಃ ಸರ್ವಾಃ ಸಾಧಿಪ್ರತ್ಯಧಿದೇವತಾಃ ।
ಸ್ಥಾಪನೀಯಾ ಮುನಿಶ್ರೇಷ್ಠ ನೋತ್ತರೇಣ ಪರಾಙ್ಮುಖಾಃ ॥೯೮॥

ಗರುತ್ಮಾನಧಿಕಸ್ತತ್ರ ಸಂಪೂಜ್ಯಃ ಶ್ರಿಯಮಿಚ್ಛತಾ ।
ಸಾಮಧ್ವನಿಶರೀರಸ್ತ್ವಂ ವಾಹನಂ ಪರಮೇಷ್ಠಿನಃ ।
ವಿಷಪಾಪಹರೋ ನಿತ್ಯಮತಃ ಶಾಂತಿಂ ಪ್ರಯಚ್ಛ ಮೇ ॥೯೯॥

---

೯೭. ಎಲ್ಲ ಅಂತಸ್ತುಗಳ ಅಗಲವೂ ಮೂರು ಅಂಗುಲವಿರಬೇಕೆಂದು ಶಾಸ್ತ್ರಜ್ಞರು ಹೇಳುತ್ತಾರೆ. ದೇವತೆಗಳ ಆವಾಹನಕ್ಕಾಗಿ ನಿರ್ಮಿಸಿದ ಪ್ರದೇಶದ ಮೇಲ್ಗಡೆಯಲ್ಲಿ ಹತ್ತು ಅಂಗುಲ ಎತ್ತರದ ಗೋಡೆಯನ್ನು ಹಾಕಿ, ಅದರಲ್ಲಿ ಹಿಂದಿನಂತೆ ಪುಷ್ಪಗಳಿಂದಲೂ, ಅಕ್ಕಿಯ ಕಾಳುಗಳಿಂದಲೂ ಕ್ರಮವಾಗಿ ದೇವತೆಗಳನ್ನು ಆವಾಹನಮಾಡಬೇಕು.

೯೮. ಅಧಿದೇವತೆಗಳನ್ನೂ, ಪ್ರತ್ಯಧಿದೇವತೆಗಳನ್ನೂ ಸೂರ್ಯನಿಗೆ ಅಭಿಮುಖವಾಗಿ ಸ್ಥಾಪಿಸಬೇಕು. ಓ ಮುನಿವರ್ಯ್ಯಾ, ಉತ್ತರಕ್ಕಾಗಲಿ ಪಶ್ಚಿಮಕ್ಕಾಗಲಿ ಅಭಿಮುಖವಾಗಿರಬಾರದು.

೯೯. ಸಂಪತ್ಕಾಮನಾದವನು ಗುರುಡನನ್ನು ವಿಶೇಷರೀತಿಯಿಂದ ಪೂಜಿಸಬೇಕು. "ಎಲೈ ಗರುತ್ಮಂತನೇ, ನಿನ್ನ ಶರೀರವು ಸಾಮವೇದಮಯವಾದುದು. ನೀನು ವೈಕುಂಠಪತಿಯಾದ ವಿಷ್ಣುವಿನ ವಾಹನವಾಗಿರುವೆ; ವಿಷವನ್ನೂ, ಪಾಪವನ್ನೂ ಅನುದಿನವೂ ಪರಿಹರಿಸುವೆ. ಆದುದರಿಂದ ನನಗೆ ಶಾಂತಿಯನ್ನು ಕೊಡು" ಎಂದು ಪ್ರಾರ್ಥಿಸಬೇಕು.

**ಪೂರ್ವವತ್ಕುಂಭಮಾಮಂತ್ರ್ಯ ತದ್ವದ್ಧೋಮಂ ಸಮಾಚರೇತ್ ।**
**ಸಹಸ್ರಾಣಾಂ ಶತಂ ಹುತ್ವಾ ಸಮಿತ್ಸಂಖ್ಯಾಧಿಕಂ ಪುನಃ ।**
**ಘೃತಕುಂಭವಸೋರ್ಧಾರಾಂ ಪಾತಯೇದನಲೋಪರಿ** ॥೧೦೦॥

**ಔದುಂಬರೀಂ ತಥಾದ್ರಾಂ ಚ ಋಜ್ವೀಂ ಕೋಟರವರ್ಜಿತಾಂ ।**
**ಬಾಹುಮಾತ್ರಾಂ ಸ್ರುಚಂ ಕೃತ್ವಾ ತತಃ ಸ್ತಂಭದ್ವಯೋಪರಿ ।**
**ಘೃತಧಾರಾಂ ತಯಾ ಸಮ್ಯಗಗ್ನೇರುಪರಿ ಪಾತಯೇತ್** ॥೧೦೧॥

**ಶ್ರಾವಯೇತ್ಸೂಕ್ತಮಾಗ್ನೇಯಂ ವೈಷ್ಣವಂ ರೌದ್ರಮೈಂದವಂ ।**
**ಮಹಾವೈಶ್ವಾನರಂ ಸಾಮ ಜ್ಯೇಷ್ಠಸಾಮ ಚ ವಾಚಯೇತ್** ॥೧೦೨॥

**ಸ್ನಾನಂ ಚ ಯಜಮಾನಸ್ಯ ಪೂರ್ವವತ್ಸ್ವಸ್ತಿವಾಚನಂ ।**
**ದಾತವ್ಯಾ ಯಜಮಾನೇನ ಪೂರ್ವವದ್ದಕ್ಷಿಣಾಃ ಪೃಥಕ್** ॥೧೦೩॥

---

೧೦೦. ಪೂರ್ವದಂತೆಯೇ ಕುಂಭಗಳ ಸ್ಥಾಪನಾವಾಹಾನಾದಿಗಳನ್ನು ಮಾಡಿ ಹೋಮವನ್ನು ನಡೆಸಬೇಕು. ಒಂದು ಲಕ್ಷ ಆಜ್ಯ ಹೋಮವನ್ನೂ, ಅದರ ಮೇಲೆ ಗೊತ್ತಾದ ಸಂಖ್ಯೆಯ ಸಮಿದ್ಧೋಮವನ್ನೂ ಮಾಡಬೇಕು. ತರುವಾಯ ವಸ್ವಾದಿ ದೇವತೋದ್ದೇಶ್ಯಕವಾದ ಸಂಸ್ರಾವ ಹೋಮಕ್ಕಾಗಿ ಕುಂಭದಿಂದ ತುಪ್ಪವನ್ನು ಧಾರಾಕಾರವಾಗಿ ಅಗ್ನಿಯಲ್ಲಿ ಸುರಿಯಬೇಕು.

೧೦೧. ಹಸಿಯ ಅತ್ತಿಯ ಮರದಿಂದ ತೂತುಬಿರುಕುಗಳಿಲ್ಲದಂತೆ ನೇರವಾಗಿರುವ ತೋಳುದ್ದದ ದರ್ವಿಯನ್ನು ಮಾಡಿ, ಎರಡು ಕಂಬಗಳ ಮೇಲೆ ಘೃತಕುಂಭವನ್ನಿರಿಸಿ, ಅಗ್ನಿಗೆ ತುಪ್ಪದ ಧಾರೆಯು ದರ್ವಿಯ ಮೂಲಕ ಬೀಳುವಂತೆ ಸುರಿಯಬೇಕು.

೧೦೨. ಅಗ್ನಿಸೂಕ್ತ, ವಿಷ್ಣುಸೂಕ್ತ, ರುದ್ರಸೂಕ್ತ ಮತ್ತು ಸೋಮಸೂಕ್ತಗಳನ್ನೂ, ಮಹಾವೈಶ್ವಾನರ ಮತ್ತು ಜ್ಯೇಷ್ಠ ಸಾಮಗಳನ್ನೂ ಜಪಿಸಬೇಕು.

೧೦೩. ಋತ್ವಿಕ್ಕುಗಳು ಹಿಂದಿನಂತೆಯೇ ಯಜಮಾನನಿಗೆ ಸ್ನಾನವನ್ನು ಮಾಡಿಸಿ ಸ್ವಸ್ತಿವಾಚನವನ್ನು ಹೇಳುವರು. ಬಳಿಕ ಆತನು ಕಾಮಕ್ರೋಧಾದಿ ವಿಕಾರಗಳಿಲ್ಲದೆ ಶಾಂತಚಿತ್ತನಾಗಿ ಅವರಿಗೆ ಬೇರೆಬೇರೆಯಾಗಿ ದಕ್ಷಿಣೆಗಳನ್ನು ಕೊಡಬೇಕು.

**ಕಾಮಕ್ರೋಧವಿಹೀನೇನ ಋತ್ವಿಗ್ಭ್ಯಃ ಶಾಂತಚೇತಸಾ ।**
**ನವಗ್ರಹಮಖೇ ವಿಪ್ರಾಶ್ಚತ್ವಾರೋ ವೇದವೇದಿನಃ ॥೧೦೪॥**

**ಅಥವಾ ಋತ್ವಿಜೌ ಶಾಂತೌ ದ್ವಾವೇವ ಶ್ರುತಿಕೋವಿದೌ ।**
**ಕಾರ್ಯಾವಯುತಹೋಮೇ ತು ನ ಪ್ರಸಜ್ಯೇತ ವಿಸ್ತರೇ ॥೧೦೫॥**

**ತದ್ವಚ್ಚ ದಶ ಚಾಷ್ಟೌ ಚ ಲಕ್ಷಹೋಮೇ ತು ಋತ್ವಿಜಃ ।**
**ಕರ್ತವ್ಯಾಃ ಶಕ್ತಿತಸ್ತದ್ವಚ್ಚತ್ವಾರೋ ವಾ ವಿಮತ್ಸರಾಃ ॥೧೦೬॥**

**ನವಗ್ರಹಮಖಾತ್ಸರ್ವಂ ಲಕ್ಷಹೋಮೇ ದಶೋತ್ತರಂ ।**
**ಭಕ್ಷ್ಯಾನ್ನದ್ಯಾನ್ಮುನಿಶ್ರೇಷ್ಠ ಭೂಷಣಾನ್ಯಪಿ ಶಕ್ತಿತಃ ॥೧೦೭॥**

**ಶಯನಾನಿ ಸವಸ್ತ್ರಾಣಿ ಹೈಮಾನಿ ಕಟಕಾನಿ ಚ ।**
**ಕರ್ಣಾಂಗುಲಿಪವಿತ್ರಾಣಿ ಕಂಠಸೂತ್ರಾನಿ ಶಕ್ತಿವರ್ಾ ॥೧೦೮॥**

---

೧೦೪-೧೦೫. ಅಯುತ ಹೋಮದ (ಹತ್ತು ಸಾವಿರ ಹೋಮದ) ನವಗ್ರಹ ಯಜ್ಞದಲ್ಲಿ ವೇದಪಾರಂಗತರಾದ ನಾಲ್ವರು ಬ್ರಾಹ್ಮಣರನ್ನು ಋತ್ವಿಕ್ಕುಗಳನ್ನಾಗಿ ವರಿಸಬೇಕು. ಅಥವಾ ಶಾಂತಾತ್ಮರೂ, ವೇದಜ್ಞರೂ ಆದ ಇಬ್ಬರಾದರೂ ಸಾಕು. ಈ ಸಂಖ್ಯೆಯನ್ನು ಹೆಚ್ಚಿಸಬಾರದು.

೧೦೬. ಲಕ್ಷ ಹೋಮದಲ್ಲಾದರೋ ಹದಿನೆಂಟು ಜನ ಋತ್ವಿಕ್ಕುಗಳನ್ನು ವರಿಸಬೇಕು. ಅಥವಾ ತನ್ನ ಶಕ್ತಿಗೆ ತಕ್ಕಂತೆ ಮತ್ಸರರಹಿತರೂ, ಶುದ್ಧಮನಸ್ಕರೂ ಆಗಿರುವ ನಾಲ್ವರನ್ನಾದರೂ ಗೊತ್ತುಮಾಡಬಹುದು.

೧೦೭-೧೦೮. ನವಗ್ರಹ ಯಜ್ಞಕ್ಕಿಂತ ಲಕ್ಷ ಹೋಮದಲ್ಲಿ ಎಲ್ಲವೂ ಹತ್ತರಷ್ಟು ಹೆಚ್ಚಾಗಿರುವುದು. ಓ ನಾರದಾ, ಭಕ್ಷ್ಯಗಳನ್ನೂ ಭೂಷಣಗಳನ್ನೂ ತನ್ನ ಕೈಯಲ್ಲಾದಷ್ಟು ಮಟ್ಟಿಗೆ ದಾನಮಾಡಬೇಕು. ಶ್ರೀಮಂತನಾದವನು ಹಾಸಿಗೆಗಳು, ವಸ್ತ್ರಗಳು, ಚಿನ್ನದ ಬಳೆಗಳು, ಕುಂಡಲಗಳು, ಪವಿತ್ರಗಳು, ಕಂಠಸೂತ್ರಗಳು ಇವುಗಳನ್ನೂ ಕೊಡಬಹುದು.

**ನ ಕುರ್ಯಾದ್ದಕ್ಷಿಣಾಹೀನಂ ವಿತ್ತಶಾಠ್ಯೇನ ಮಾನವಃ।**
**ಅದದಲ್ಲೋಭತೋ ಮೋಹಾತ್ಕುಲಕ್ಷಯಮವಾಪ್ನುತೇ ॥೧೦೯॥**

**ಅನ್ನದಾನಂ ಯಥಾಶಕ್ತ್ಯಾ ಕರ್ತವ್ಯಂ ಭೂತಿಮಿಚ್ಛತಾ।**
**ಅನ್ನಹೀನಃ ಕೃತೋ ಯಸ್ಮಾದ್ದುರ್ಭಿಕ್ಷಫಲದೋ ಭವೇತ್ ॥೧೧೦॥**

**ಅನ್ನಹೀನೋ ದಹೇದ್ರಾಷ್ಟ್ರಂ ಮಂತ್ರಹೀನಸ್ತು ಋತ್ವಿಜಃ।**
**ಯಷ್ಟಾರಂ ದಕ್ಷಿಣಾಹೀನಂ ನಾಸ್ತಿ ಯಜ್ಞಸಮೋ ರಿಪುಃ ॥೧೧೧॥**

**ನ ವಾಪ್ಯಲ್ಪಧನಃ ಕುರ್ಯಾಲ್ಲಕ್ಷಹೋಮಂ ನರಃ ಕ್ವಚಿತ್।**
**ಯಸ್ಮಾತ್ಪೀಡಾಕರೋ ನಿತ್ಯಂ ಯಜ್ಞೇ ಭವತಿ ವಿಗ್ರಹಃ ॥೧೧೨॥**

**ತಮೇವ ಪೂಜಯೇದ್ಭಕ್ತ್ಯಾ ದ್ವೌ ವಾ ತ್ರೀನ್ ವಾ ಯಥಾವಿಧಿ।**
**ಏಕಮಪ್ಯರ್ಚಯೇದ್ಭಕ್ತ್ಯಾ ಬ್ರಾಹ್ಮಣಂ ವೇದಪಾರಗಂ।**
**ದಕ್ಷಿಣಾಭಿಃ ಪ್ರಯತ್ನೇನ ನ ಬಹೂನಲ್ಪವಿತ್ತವಾನ್ ॥೧೧೩॥**

---

೧೦೯. ದ್ರವ್ಯದಲ್ಲಿ ಕಾರ್ಪಣ್ಯಬುದ್ಧಿಯನ್ನಿಟ್ಟು, ತಕ್ಕಷ್ಟು ದಕ್ಷಿಣೆಯನ್ನು ಕೊಡದೆ ಕರ್ಮವನ್ನೆಸಗಬಾರದು. ಲೋಭದಿಂದಲೋ ಮೋಹದಿಂದಲೋ ಕೂಡಿ, ದಾನದಕ್ಷಿಣೆಗಳನ್ನು ಸರಿಯಾಗಿ ಕೊಡದಿರುವವನ ವಂಶವು ಕ್ಷಯಿಸುವುದು.

೧೧೦. ಸಂಪತ್ಕಾಮನಾದ ಯಜಮಾನನು ತನ್ನ ಕೈಯಲ್ಲಾದಷ್ಟು ಧಾರಾಳ ವಾಗಿ ಅನ್ನದಾನವನ್ನು ಮಾಡಬೇಕು. ಏಕೆಂದರೆ ಅನ್ನದಾನವಿಲ್ಲದೆ ಮಾಡಿದ ಕರ್ಮವು ದುರ್ಭಿಕ್ಷದ ಫಲವನ್ನು ಕೊಡುತ್ತದೆ.

೧೧೧. ಯಾಗದಲ್ಲಿ ಅನ್ನಲೋಪವಾದರೆ ರಾಷ್ಟ್ರವೂ, ಮಂತ್ರಲೋಪ ವಾದರೆ ಋತ್ವಿಕ್ಕುಗಳೂ, ದಕ್ಷಿಣೆಯಲ್ಲಿ ಲೋಪ ಬಂದರೆ ಯಜಮಾನನೂ ಕೇಡಿಗೆ ಗುರಿಯಾಗುವರು. ಆದಕಾರಣ ಯಜ್ಞಕ್ಕೆ ಸಮನಾದ ಶತ್ರುವಿಲ್ಲ.

೧೧೨. ಬಡವನು ಲಕ್ಷಹೋಮವನ್ನು ಮಾಡಲು ಎಂದಿಗೂ ಯತ್ನಿಸ ಬಾರದು. ಏಕೆಂದರೆ ಯಜ್ಞದಲ್ಲಿ ನ್ಯೂನತೆಯೊದಗಿದರೆ ಅದರಿಂದ ಯಾವಾಗಲೂ ಅನಿಷ್ಟವು ಸಂಭವಿಸುವುದು.

೧೧೩. ಶಾಸ್ತ್ರನಿಯಮವನ್ನನುಸರಿಸಿ ಒಬ್ಬನನ್ನೋ, ಇಬ್ಬರನ್ನೋ ಇಲ್ಲವೇ ಮೂವರನ್ನೋ ಭಕ್ತಿಯಿಂದ ಪೂಜಿಸಬೇಕು. ದ್ರವ್ಯಸೌಕರ್ಯವಿಲ್ಲದವನು ವೇದ ಪಾರಂಗತನಾದ ಒಬ್ಬ ಬ್ರಾಹ್ಮಣನನ್ನಾದರೂ, ದಕ್ಷಿಣಾದಿಗಳನ್ನು ಯಥೇಚ್ಛವಾಗಿ ಕೊಟ್ಟು ಪ್ರಯತ್ನದಿಂದ ಅರ್ಚಿಸಬೇಕು.

**ಲಕ್ಷಹೋಮಸ್ತು ಕರ್ತವ್ಯೋ ಯಥಾವಿತ್ತಂ ಭವೇದ್ಬಹು ।**
**ಯತಃ ಸರ್ವಾನವಾಪ್ನೋತಿ ಕುರ್ವನ್ ಕಾಮಾನ್ವಿಧಾನತಃ ॥೧೧೪॥**

**ಪೂಜ್ಯತೇ ಶಿವಲೋಕೇ ಚ ವಸ್ವಾದಿತ್ಯಮರುದ್ಗಣೈಃ ।**
**ಯಾವತ್ಕಲ್ಪಶತಾನ್ಯಷ್ಟಾವಥ ಮೋಕ್ಷಮವಾಪ್ನುಯಾತ್ ॥೧೧೫॥**

**ಸಕಾಮೋ ಯಸ್ತ್ವಿಮಂ ಕುರ್ಯಾಲ್ಲಕ್ಷಹೋಮಂ ಯಥಾವಿಧಿ ।**
**ಸ ತಂ ಕಾಮಮವಾಪ್ನೋತಿ ಪದಮಾನಂತ್ಯಮಶ್ನುತೇ ॥೧೧೬॥**

**ಪುತ್ರಾರ್ಥೀ ಲಭತೇ ಪುತ್ರಾನ್ ಧನಾರ್ಥೀ ಲಭತೇ ಧನಂ ।**
**ಭಾರ್ಯಾರ್ಥೀ ಶೋಭನಾಂ ಭಾರ್ಯಾಂ ಕುಮಾರೀ ಚ ಶುಭಂ ಪತಿಂ ॥೧೧೭॥**

---

೧೧೪. ತನ್ನ ದ್ರವ್ಯದ ಪ್ರಮಾಣಕ್ಕೆ ತಕ್ಕಂತೆ ಲಕ್ಷ ಹೋಮವನ್ನು ವಿಸ್ತರಿಸಿ ಮಾಡಬಹುದು. ಅದರಿಂದ ಅಪರಮಿತವಾದ ಫಲವು ಬರುವುದು. ಶಾಸ್ತ್ರೋಕ್ತ ವಿಧಾನದಿಂದ ಇದನ್ನು ಮಾಡಿದರೆ ಸಕಲೇಷ್ಟಾರ್ಥಗಳೂ ಕೈಗೂಡುವುವು.

೧೧೫. ಈ ನವಗ್ರಹ ಯಜ್ಞವನ್ನು ಮಾಡಿದಾತನು ಶಿವಲೋಕವನ್ನು ಸೇರಿ ಎಂಟು ನೂರು ಕಲ್ಪಗಳ ಕಾಲ ವಸುಗಳು, ಆದಿತ್ಯರು ಮೊದಲಾದ ದೇವಗಣ ಗಳಿಂದ ಪೂಜೆಯನ್ನು ಕೈಗೊಳ್ಳುವನು. ಆ ಬಳಿಕ ಮೋಕ್ಷವನ್ನೈದುವನು.

೧೧೬. ಯಾವುದಾದರೊಂದು ಫಲೋದ್ದೇಶದಿಂದ ಈ ಲಕ್ಷ ಹೋಮವನ್ನು ನಿಯಮಾನುಸಾರವಾಗಿ ಮಾಡುವಾತನ ಮನೋರಥಗಳೆಲ್ಲವೂ ಈಡೇರುವುವು; ಮತ್ತು ಅವನಿಗೆ ಶಾಶ್ವತವಾದ ಪದವಿಯು ಲಭಿಸುವುದು.

೧೧೭. ಪುತ್ರರನ್ನು ಅಪೇಕ್ಷಿಸಿದವನು ಪುತ್ರರನ್ನೂ, ಸಂಪತ್ತನ್ನು ಕೋರಿ ದವನು ಸಂಪತ್ತನ್ನೂ, ಪತ್ನಿಯನ್ನು ಬಯಸಿದವನು ಅನುರೂಪಳಾದ ಪತ್ನಿಯನ್ನೂ ಪಡೆಯುವರು. ಪತಿಯನ್ನು ಇಚ್ಛಿಸುವ ಕುಮಾರಿಗೆ ಲಕ್ಷಣಯುಕ್ತನಾದ ಪತಿಯು ದೊರೆಯುವನು.

ಭ್ರಷ್ಟರಾಜ್ಯಸ್ತಥಾ ರಾಜ್ಯಂ ಶ್ರೀಕಾಮಃ ಶ್ರಿಯಮಾಪ್ನುಯಾತ್ ।
ಯಂ ಯಂ ಪ್ರಾರ್ಥಯತೇ ಕಾಮಂ ಸ ವೈ ಭವತಿ ಪುಷ್ಕಲಃ ।
ನಿಷ್ಕಾಮಃ ಕುರುತೇ ಯಸ್ತು ಸ ಪರಂ ಬ್ರಹ್ಮ ಗಚ್ಛತಿ ॥೧೧೮॥

ಅಸ್ಮಾಚ್ಛತಗುಣಃ ಪ್ರೋಕ್ತಃ ಕೋಟಿಹೋಮಃ ಸ್ವಯಂಭುವಾ ।
ಆಹುತೀಭಿಃ ಪ್ರಯತ್ನೇನ ದಕ್ಷಿಣಾಭಿಃ ಫಲೇನ ಚ ॥೧೧೯॥

ಪೂರ್ವವದ್ಗ್ರಹದೇವಾನಾಮಾವಾಹನವಿಸರ್ಜನೇ ।
ಹೋಮಮಂತ್ರಾಸ್ತ ಏವೋಕ್ತಾಃ ಸ್ನಾನೇ ದಾನೇ ತಥೈವ ಚ ।
ಕುಂಡಮಂಡಪವೇದೀನಾಂ ವಿಶೇಷೋಽಯಂ ನಿಬೋಧ ಮೇ ॥೧೨೦॥

ಕೋಟಿಹೋಮೇ ಚತುರ್ಹಸ್ತಂ ಚತುರಸ್ರಂ ತು ಸರ್ವತಃ ।
ಯೋನಿವಕ್ತ್ರದ್ವಯೋಪೇತಂ ತದಪ್ಯಾಹುಸ್ತ್ರಿಮೇಖಲಂ ॥೧೨೧॥

---

೧೧೮. ರಾಜ್ಯವನ್ನು ಕಳೆದುಕೊಂಡವನು ರಾಜ್ಯವನ್ನೂ, ಐಶ್ವರ್ಯವನು ಪ್ರಾರ್ಥಿಸಿದವನು ಐಶ್ವರ್ಯವನ್ನೂ ಹೊಂದುವರು. ಯಾವ ಯಾವ ಕೋರಿಕೆ ಯುಂಟೋ ಅದೆಲ್ಲವೂ ಸಂಪೂರ್ಣವಾಗುವುದು. ಫಲಾಪೇಕ್ಷೆಯಿಲ್ಲದೆ ಇದನ್ನು ಮಾಡಿದವನು ಪರಬ್ರಹ್ಮಸಾನ್ನಿಧ್ಯವನ್ನೈದುವನು.

೧೧೯. ಕೋಟಿ ಹೋಮವು ಲಕ್ಷ ಹೋಮಕ್ಕಿಂತಲೂ ಆಹುತಿಗಳ ಸಂಖ್ಯೆ, ಸಾಧನಗಳ ಸಂಗ್ರಹ, ದಕ್ಷಿಣಾದ್ರವ್ಯ, ಫಲ ಇವುಗಳಲ್ಲಿ ನೂರು ಪಾಲು ಹೆಚ್ಚಾಗಿರು ವುದೆಂದು ಬ್ರಹ್ಮನು ಹೇಳಿದ್ದಾನೆ.

೧೨೦. ಗ್ರಹಗಳ ಮತ್ತು ದೇವತೆಗಳ ಆವಾಹನದ ಮತ್ತು ವಿಸರ್ಜನದ ಕ್ರಮವು ಹಿಂದಿನಂತೆಯೇ ಸರಿ. ಹೋಮ, ಸ್ನಾನ, ದಾನ ಇವುಗಳಲ್ಲೆಲ್ಲ ಆ ಮಂತ್ರ ಗಳನ್ನೇ ಹೇಳಬೇಕು. ಅಗ್ನಿಕುಂಡ, ಮಂಟಪ, ವೇದಿಕೆ ಇವುಗಳ ನಿರ್ಮಾಣದಲ್ಲಿ ಮಾತ್ರ ವಿಶೇಷವುಂಟು. ಅದನ್ನು ಹೇಳುವೆನು ಕೇಳು.

೧೨೧. ಕೋಟಿ ಹೋಮದಲ್ಲಿ ಅಗ್ನಿಕುಂಡವು ನಾಲ್ಕು ಮೊಳ ಅಳತೆಯು ಳ್ಳದಾಗಿ ಎಲ್ಲ ಕಡೆಯಲ್ಲೂ ಚೌಕವಾಗಿರುವುದು. ಅದಕ್ಕೆ ಯೋನಿಮುಖಗಳೆರಡು. ಮೇಖಲೆಗಳು ಮೂರು.

ದ್ವ್ಯಂಗುಲಾಭ್ಯುಚ್ಛ್ರಿತಾ ಕಾರ್ಯಾ ಪ್ರಥಮಾ ಮೇಖಲಾ ಬುಧೈಃ ।
ತ್ರ್ಯಂಗುಲಾಭ್ಯುಚ್ಛ್ರಿತಾ ತದ್ವದ್ದ್ವಿತೀಯಾ ಪರಿಕೀರ್ತಿತಾ ॥೧೨೨॥

ಉಚ್ಛ್ರಾಯವಿಸ್ತರಾಭ್ಯಾಂ ಚ ತೃತೀಯಾ ಚತುರಂಗುಲಾ ।
ದ್ವ್ಯಂಗುಲಶ್ಚೇತಿ ವಿಸ್ತಾರಃ ಪೂರ್ವಯೋರೇವ ಶಸ್ಯತೇ ॥೧೨೩॥

ವಿತಸ್ತಿಮಾತ್ರಾ ಯೋನಿಃ ಸ್ಯಾತ್ಷಟ್ಸಪ್ತಾಂಗುಲಿವಿಸ್ತೃತಾ ।
ಕೂರ್ಮಪೃಷ್ಠೋನ್ನತಾ ಮಧ್ಯೇ ಪಾರ್ಶ್ವಯೋಶ್ಚಾಂಗುಲೋಚ್ಛ್ರಿತಾ ॥

ಗಜೋಷ್ಠಸದೃಶೀ ತದ್ವದಾಯತಾ ಛಿದ್ರಸಂಯುತಾ ।
ಏತತ್ಸರ್ವೇಷು ಕುಂಡೇಷು ಯೋನಿಲಕ್ಷಣಮುಚ್ಯತೇ ॥೧೨೫॥

ಮೇಖಲೋಪರಿ ಸರ್ವತ್ರ ಅಶ್ವತ್ಥದಲಸನ್ನಿಭಂ ।
ವೇದೀ ಚ ಕೋಟಿಹೋಮೇ ಸ್ಯಾದ್ವಿತಸ್ತೀನಾಂ ಚತುಷ್ಟಯಂ ॥೧೨೬॥

---

೨೨೨-೨೨೩. ಮೊದಲನೆಯ ಮೇಖಲೆಯನ್ನು (ಸುತ್ತುಗಟ್ಟನ್ನು) ಎರಡಂಗುಲ ಎತ್ತರವಾಗಿರುವಂತೆ ನಿರ್ಮಿಸಬೇಕು. ಎರಡನೆಯದರ ಔನ್ನತ್ಯವು ಮೂರಂಗುಲ ಗಳಿರಬೇಕೆಂದು ಶಾಸ್ತ್ರದಲ್ಲಿ ಹೇಳಿದೆ. ಮೂರನೆಯದರ ಎತ್ತರವೂ ಅಗಲವೂ ನಾಲ್ಕಂಗುಲಗಳಿರುವುವು. ಒಂದನೆಯ ಮತ್ತು ಎರಡನೆಯ ಮೇಖಲೆಗಳ ಅಗಲವು ಎರಡಂಗುಲ.

೧೨೪. ಅಗ್ನಿಕುಂಡದ ಯೋನಿಯು ಒಂದು ಗೇಣುದ್ದವೂ, ಆರೇಳಂಗುಲ ಅಗಲವೂ ಇರುವುದು. ಮಧ್ಯದಲ್ಲಿ ಆಮೆಯ ಬೆನ್ನಿನಂತೆ ಉಬ್ಬಾಗಿ ಪಕ್ಕಗಳಲ್ಲಿ ಒಂದಂಗುಲದಷ್ಟು ಎತ್ತರವಾಗಿರಬೇಕು.

೧೨೫. ಯೋನಿಯು ಆನೆಯ ತುಟಿಗಳ ಆಕಾರವಾಗಿ ಅವುಗಳಂತೆ ಉದ್ದ ವಾಗಿಯೂ, ರಂಧ್ರಸಹಿತವಾಗಿಯೂ ಇರಬೇಕು. ಕುಂಡಗಳಲ್ಲೆಲ್ಲ ಯೋನಿಯ ಲಕ್ಷಣವು ಹೀಗೆಯೇ ಇರಬೇಕೆಂದು ಶಾಸ್ತ್ರಗಳಲ್ಲಿ ಹೇಳಿದೆ. ಯೋನಿಮುಖವನು ಮೇಖಲೆಯ ಮೇಲ್ಗಡೆಯಲ್ಲಿ ಅರಳಿಯೆಲೆಯ ಆಕಾರವಾಗಿ ವಿರಚಿಸಬೇಕು.

೧೨೬-೧೨೭. ಕೋಟಿಹೋಮದಲ್ಲಿ ದೇವತೆಗಳ ಸ್ಥಾಪನೆಗಾಗಿ ರಚಿಸ ಬೇಕಾದ ವೇದಿಕೆಯು ನಾಲ್ಕು ಗೇಣು ಅಗಲವಿರುವುದು. ಅದು ನಾಲ್ಕು ಕಡೆಯೂ

**ಚತುರಸ್ರಾ ಸಮಂತಾಚ್ಚ ತ್ರಿಭಿರ್ವಪ್ರೈಸ್ತು ಸಂಯುತಾ ।**
**ವಪ್ರಪ್ರಮಾಣಂ ಪೂರ್ವೋಕ್ತಂ ವೇದೀನಾಂ ಚ ತಥೋಚ್ಛ್ರಯಃ ॥೧೨೭॥**

**ತಥಾ ಷೋಡಶಹಸ್ತಃ ಸ್ಯಾನ್ಮಂಡಪಶ್ಚ ಚತುರ್ಮುಖಃ ।**
**ಪೂರ್ವದ್ವಾರೇ ಚ ಸಂಸ್ಥಾಪ್ಯ ಬಹ್ವೃಚಂ ವೇದಪಾರಗಂ ॥೧೨೮॥**

**ಯಜುರ್ವಿದಂ ತಥಾ ಯಾಮ್ಯೇ ಪಶ್ಚಿಮೇ ಸಾಮವೇದಿನಂ ।**
**ಅಥರ್ವವೇದಿನಂ ತದ್ವದುತ್ತರೇ ಸ್ಥಾಪಯೇದ್ಬುಧಃ ॥೧೨೯॥**

**ಅಷ್ಟೌ ತು ಹೋಮಕಾಃ ಕಾರ್ಯಾ ವೇದವೇದಾಂಗವೇದಿನಃ ।**
**ಏವಂ ದ್ವಾದಶವಿಪ್ರಾಃ ಸ್ಯುರ್ವಸ್ತ್ರಮಾಲ್ಯಾನುಲೇಪನೈಃ ।**
**ಪೂರ್ವವತ್ಪೂಜಯೇದ್ಭಕ್ತ್ಯಾ ವಸ್ತ್ರಾಭರಣಭೂಷಣೈಃ ॥೧೩೦॥**

**ರಾತ್ರಿಸೂಕ್ತಂ ಚ ರೌದ್ರಂ ಚ ಪಾವಮಾನಂ ಸುಮಂಗಲಂ ।**
**ಪೂರ್ವತೋ ಬಹ್ವೃಚಃ ಶಾಂತಿಂ ಪಠನ್ನಾಸ್ತೇ ಹ್ಯುದಙ್ಮುಖಃ ॥೧೩೧॥**

---

ಚೌಕವಾಗಿ ಮೂರು ಅಂತಸ್ತುಗಳಿಂದ ಕೂಡಿರುವುದು. ವೇದಿಕೆಯ ಮತ್ತು ವಪ್ರಗಳ (ಅಂತಸ್ತುಗಳ) ಪ್ರಮಾಣವನ್ನು ಹಿಂದೆಯೇ ಹೇಳಿದೆ.

೧೨೮. ಯಾಗಮಂಟಪವು ಹದಿನಾರು ಮೊಳದ ಅಳತೆಯಿಂದ ನಿರ್ಮಿತವಾಗಿ, ನಾಲ್ಕು ಕಡೆಯೂ ಬಾಗಿಲುಗಳಿಂದ ಕೂಡಿರಬೇಕು. ವೇದಪಾರಂಗತನಾದ ಋಗ್ವೇದಿಯನ್ನು ಪೂರ್ವದಿಕ್ಕಿನ ಬಾಗಿಲ ಬಳಿಯಲ್ಲಿ ಕುಳ್ಳಿರಿಸಬೇಕು.

೧೨೯. ಶಾಸ್ತ್ರಜ್ಞನಾದ ಯಜಮಾನನು ಯಜುರ್ವೇದಿಗೆ ದಕ್ಷಿಣದಿಕ್ಕಿನಲ್ಲಿಯೂ, ಸಾಮವೇದಿಗೆ ಪಶ್ಚಿಮದಿಕ್ಕಿನಲ್ಲಿಯೂ, ಅಥರ್ವವೇದಜ್ಞನಿಗೆ ಉತ್ತರದಿಕ್ಕಿನಲ್ಲಿಯೂ ಆಸನಗಳನ್ನು ಕೊಡಬೇಕು.

೧೩೦. ವೇದಗಳನ್ನೂ ವೇದಾಂಗಗಳನ್ನೂ ಬಲ್ಲ ಎಂಟು ಜನರನ್ನು ಹೋಮ ಕಾರ್ಯಕ್ಕೆ ನಿಯಮಿಸಬೇಕು. ಹೀಗೆ ಈ ಕೋಟಿಹೋಮದಲ್ಲಿ ಹನ್ನೆರಡು ಜನ ಬ್ರಾಹ್ಮಣರನ್ನು ಋತ್ವಿಕ್ಕುಗಳಾಗಿ ವರಿಸಬೇಕು. ಇವರನ್ನು ಹಿಂದಿನಂತೆ ಗಂಧಪುಷ್ಪ ವಸ್ತ್ರಾಭರಣಾದಿಗಳಿಂದ ಭಕ್ತಿಯೊಡನೆ ಪೂಜಿಸಬೇಕು.

೧೩೧. ಪೂರ್ವದಿಕ್ಕಿನ ಬಾಗಿಲ ಬಳಿಯಲ್ಲಿ ಕುಳಿತಿರುವ ಋಗ್ವೇದಿಯು ಉತ್ತರಾಭಿಮುಖವಾಗಿ ರಾತ್ರಿಸೂಕ್ತ, ರುದ್ರಸೂಕ್ತ, ಪವಮಾನಸೂಕ್ತ, ಸುಮಂಗಲ ಸೂಕ್ತ ಮತ್ತು ಶಾಂತಿ ಮಂತ್ರ ಇವುಗಳನ್ನು ಜಪಿಸುವನು.

ಶಾಕ್ತಂ ಶಾಕ್ರಂ ಚ ಸೌಮ್ಯಂ ಚ ಕೌಷ್ಮಾಂಡಂ ಶಾಂತಿಮೇವ ಚ ।
ಪಾಠಯೇದ್ದಕ್ಷಿಣದ್ವಾರಿ ಯಜುರ್ವೇದಿನಮುತ್ತಮಂ ॥೧೩೨॥
ಸುಪರ್ಣಮಥ ವೈರಾಜಮಾಗ್ನೇಯಂ ರುದ್ರಸಂಹಿತಾಂ ।
ಜ್ಯೇಷ್ಠಸಾಮ ತಥಾ ಶಾಂತಿಂ ಛಂದೋಗಃ ಪಶ್ಚಿಮೇ ಜಪೇತ್ ॥೧೩೩॥
ಶಾಂತಿಸೂಕ್ತಂ ಚ ಸೌರಂ ಚ ತಥಾ ಶಾಕುನಕಂ ಶುಭಂ ।
ಪೌಷ್ಟಿಕಂ ಚ ಮಹಾರಾಜ್ಯಮುತ್ತರೇಣಾಪ್ಯಥರ್ವವಿತ್ ॥೧೩೪॥
ಪಂಚಭಿಃ ಸಪ್ತಭಿರ್ವಾಪಿ ಹೋಮಃ ಕಾರ್ಯೋಽತ್ರ ಪೂರ್ವವತ್ ।
ಸ್ನಾನೇ ದಾನೇ ಚ ಮಂತ್ರಾಃ ಸ್ಯುಸ್ತ ಏವ ಮುನಿಸತ್ತಮ ॥೧೩೫॥
ವಸೋರ್ಧಾರಾವಿಧಾನಂ ಚ ಲಕ್ಷಹೋಮೇ ವಿಶಿಷ್ಯತೇ ।
ಅನೇನ ವಿಧಿನಾ ಯಸ್ತು ಕೋಟಿಹೋಮಂ ಸಮಾಚರೇತ್ ।
ಸರ್ವಾನ್ಕಾಮಾನವಾಪ್ನೋತಿ ತತೋ ವಿಷ್ಣುಪದಂ ವ್ರಜೇತ್ ॥೧೩೬॥

---

೧೩೨. ದಕ್ಷಿಣದಿಕ್ಕಿನ ಬಾಗಿಲ ಬಳಿಯಲ್ಲಿರುವ ಯಜುರ್ವೇದಜ್ಞನು ಶಕ್ತಿ ಸೂಕ್ತ, ಶಕ್ರಸೂಕ್ತ, ಸೋಮಸೂಕ್ತ, ಮತ್ತು ಕೂಷ್ಮಾಂಡಸೂಕ್ತಗಳನ್ನೂ ಶಾಂತಿ ಮಂತ್ರಗಳನ್ನೂ ಪಾರಾಯಣಮಾಡುವನು.

೧೩೩. ಪಶ್ಚಿಮದಲ್ಲಿರುವ ಸಾಮವೇದಿಯು ಸುವರ್ಣಸಾಮ, ವೈರಾಜ ಸಾಮ, ಆಗ್ನೇಯಸಾಮ, ರುದ್ರಸಂಹಿತಾಸಾಮ, ಮತ್ತು ಜ್ಯೇಷ್ಠಸಾಮಗಳನ್ನೂ ಶಾಂತಿಮಂತ್ರಗಳನ್ನೂ ಜಪಿಸುವನು.

೧೩೪. ಶಾಂತಿಸೂಕ್ತ, ಸೌರಸೂಕ್ತ, ಶಾಕುನಕಮಂತ್ರ, ಪೌಷ್ಟಿಕಮಂತ್ರ, ಮಹಾರಾಜ್ಯಮಂತ್ರ ಇವುಗಳನ್ನು ಉತ್ತರದಲ್ಲಿ ಕುಳಿತಿರುವ ಅಥರ್ವಣವೇದಜ್ಞನು ಪಠಿಸುವನು.

೧೩೫. ಐದು ಅಥವಾ ಏಳು ಜನ ಹೋತೃಗಳು ಹಿಂದೆ ಹೇಳಿರುವ ರೀತಿ ಯಲ್ಲಿ ಹೋಮವನ್ನು ನಡೆಸುವರು. ಓ ಮುನಿವರ್ಯಾ, ಸ್ನಾನಮಾಡುವಾಗಲೂ ದಾನಕೊಡುವಾಗಲೂ ಅದೇ ಮಂತ್ರಗಳನ್ನು ಹೇಳಬೇಕು.

೧೩೬. ವಸುಗಳನ್ನುದ್ದೇಶಿಸಿ ಮಾಡುವ ಸಂಸ್ರಾವಹೋಮದ ವಿಧಾನವು ಮಾತ್ರ ಲಕ್ಷಹೋಮದ ಒಂದು ವಿಶೇಷ ಲಕ್ಷಣ. ಈ ರೀತಿಯಾಗಿ ಕೋಟಿ ಹೋಮ ವನ್ನು ನಡೆಸುವವನು ಸಕಲಮನೋರಥಗಳನ್ನೂ ಪಡೆಯುವನು. ಬಳಿಕ ವಿಷ್ಣುವಿನ ಸಾನ್ನಿಧ್ಯವನ್ನೈದುವನು.

ಯಃ ಪಠೇಚ್ಛೃಣುಯಾದ್ವಾಪಿ ಗ್ರಹಯಜ್ಞತ್ರಯಂ ನರಃ ।
ಸರ್ವಪಾಪವಿಶುದ್ಧಾತ್ಮಾ ಪದಮಿಂದ್ರಸ್ಯ ಗಚ್ಛತಿ ॥೧೭೭॥

ಅಶ್ವಮೇಧಸಹಸ್ರಾಣಿ ದಶ ಚಾಷ್ಟೌ ಚ ಧರ್ಮವಿತ್ ।
ಕೃತ್ವಾ ಯತ್ಫಲಮಾಪ್ನೋತಿ ಕೋಟಿಹೋಮಾತ್ತದಶ್ನುತೇ ॥೧೩೮॥

ಬ್ರಹ್ಮಹತ್ಯಾಸಹಸ್ರಾಣಿ ಭ್ರೂಣಹತ್ಯಾರ್ಬುದಾನಿ ಚ ।
ಕೋಟಿಹೋಮೇನ ನಶ್ಯಂತಿ ಯಥಾವಚ್ಛಿವಭಾಷಿತಂ ॥೧೩೯॥

ವಶ್ಯಕರ್ಮಾಭಿಚಾರಾದಿ ತಥೈವೋಚ್ಚಾಟನಾದಿಕಂ ।
ನವಗ್ರಹಮುಖಂ ಕೃತ್ವಾ ತತಃ ಕಾಮ್ಯಂ ಸಮಾಚರೇತ್ ॥೧೪೦॥

ಅನ್ಯಥಾ ಫಲದಂ ಪುಂಸಾಂ ನ ಕಾಮ್ಯಂ ಜಾಯತೇ ಕ್ವಚಿತ್ ।
ತಸ್ಮಾದಯುತಹೋಮಸ್ಯ ವಿಧಾನಂ ಪೂರ್ವಮಾಚರೇತ್ ॥೧೪೧॥

---

೧೩೭. ಮೇಲೆ ಹೇಳಿದ ಮೂರು ಬಗೆಯ ಗ್ರಹಯಜ್ಞಗಳ ವಿಧಾನವನ್ನು ಯಾವನು ಪಠಿಸುವನೋ ಇಲ್ಲವೇ ಕೇಳುವನೋ ಆತನು ಸಕಲ ಪಾಪಗಳನ್ನೂ ಕಳೆದುಕೊಂಡು, ಶುದ್ಧಾತ್ಮನಾಗಿ ಇಂದ್ರನ ಸ್ಥಾನವನ್ನು ಸೇರುವನು.

೧೩೮. ಒಂದುಸಾವಿರದ ಹದಿನೆಂಟು ಅಶ್ವಮೇಧಯಾಗಗಳನ್ನು ಮಾಡಿದರೆ ಯಾವ ಪುಣ್ಯಫಲವು ಬರುತ್ತದೆಯೋ ಅದನ್ನು ಕೋಟಿ ಹೋಮಮಾಡಿದ ಧರ್ಮಜ್ಞನಾದ ಯಜಮಾನನು ಪಡೆಯುವನು.

೧೩೯. ಸಾವಿರಾರು ಬ್ರಹ್ಮಹತ್ಯೆಗಳಿಂದಲೂ, ಕೋಟಿಗಟ್ಟಲೆಯ ಭ್ರೂಣಹತ್ಯೆಗಳಿಂದಲೂ ಬಂದ ಪಾತಕವು, ಕೋಟಿಹೋಮವನ್ನು ಮಾಡುವುದರಿಂದ ಪರಿಹಾರವಾಗುವುದೆಂದು ಪರಮೇಶ್ವರನು ಹೇಳಿರುವನು.

೧೪೦. ಮೊದಲು ನವಗ್ರಹಯಜ್ಞವನ್ನು ಮಾಡಿ ಬಳಿಕ ವಶೀಕರಣ, ಆಭಿಚಾರಿಕ, ಭೂತೋಚ್ಚಾಟನ ಮುಂತಾದ ಕಾಮ್ಯಕರ್ಮಗಳನ್ನು ನಡೆಸಬೇಕು.

೧೪೧. ಇಲ್ಲದಿದ್ದರೆ ಕಾಮ್ಯಕರ್ಮವು ಮನುಜರಿಗೆ ಎಂದಿಗೂ ಫಲಪ್ರದವಾಗುವುದಿಲ್ಲ. ಆದುದರಿಂದ ಪ್ರಾರಂಭದಲ್ಲಿ ಅಯುತಹೋಮವನ್ನು ಆಚರಿಸಬೇಕು.

ವೃತ್ತಂ ವ್ರೋಚ್ಚಾಟನೇ ಕುಂಡಂ ತಥಾ ಚ ವಶಕರ್ಮಣಿ ।
ತ್ರಿಮೇಖಲಂ ಚೈಕವಕ್ತ್ರಮರತ್ನಿರ್ವಿಸ್ತರೇಣ ತು ॥೧೪೨॥

ಪಲಾಶಸಮಿಧಃ ಶಸ್ತಾ ಮಧುಗೋರೋಚನಾನ್ವಿತಾಃ ।
ಚಂದನಾಗುರುಣಾ ತದ್ವತ್ಕುಂಕುಮೇನಾಭಿಷಿಂಚಿತಾಃ ॥೧೪೩॥

ಹೋಮಯೇನ್ಮಧುಸರ್ಪಿರ್ಭ್ಯಾಂ ಬಿಲ್ವಾನಿ ಕಮಲಾನಿ ಚ ।
ಸಹಸ್ರಾಣಿ ದಶೈವೋಕ್ತಂ ಸರ್ವದೈವ ಸ್ವಯಂಭುವಾ ॥೧೪೪॥

ವಶ್ಯಕರ್ಮಣಿ ಬಿಲ್ವಾನಾಂ ಪದ್ಮಾನಾಂ ಚೈವ ಧರ್ಮವಿತ್ ।
ಸುಮಿತ್ರಿಯಾ ನ ಆಪ ಓಷಧಯ ಇತಿ ಹೋಮಯೇತ್ ॥೧೪೫॥

ನ ಚಾತ್ರ ಸ್ಥಾಪನಂ ಕಾರ್ಯಂ ನ ಚ ಕುಂಭಾಭಿಷೇಚನಂ ।
ಸ್ನಾನಂ ಸರ್ವೌಷಧೈಃ ಕೃತ್ವಾ ಶುಕ್ಲಪುಷ್ಪಾಂಬರೋ ಗೃಹೀ ॥೧೪೬॥

---

೧೪೨. ಭೂತೋಚ್ಚಾಟನದಲ್ಲೂ ವಶ್ಯಕರ್ಮದಲ್ಲೂ ಅಗ್ನಿಕುಂಡವು ವೃತ್ತಾಕಾರವಾಗಿದ್ದರೂ ಇರಬಹುದು. ಅದಕ್ಕೆ ಮೂರು ಮೇಖಲೆಗಳೂ, ಒಂದು ಯೋನಿ ಮುಖವೂ ಇರುವುವು. ಅದು ವಿಸ್ತಾರದಲ್ಲಿ ಒಂದು ಮೊಳವಿರುವುದು.

೧೪೩. ಈ ಕರ್ಮಗಳಿಗೆ ಮುತ್ತುಗದ ಸಮಿತ್ತುಗಳು ಪ್ರಶಸ್ತವಾದುವು. ಅವುಗಳಿಗೆ ಗೋರೋಚನ, ಶ್ರೀಗಂಧ, ಅಗಿಲುಗಂಧ, ಕೇಸರಿ ಇವುಗಳು ಮಿಶ್ರವಾದ ನೀರನ್ನು ಚಿಮುಕಿಸಬೇಕು.

೧೪೪. ಬಿಲ್ವಪತ್ರಗಳನ್ನೂ, ಕಮಲದಳಗಳನ್ನೂ ಜೇನು ಮತ್ತು ತುಪ್ಪ ಇವುಗಳ ಸಹಿತವಾಗಿ ಹೋಮಮಾಡಬೇಕು ಆಹುತಿಗಳ ಸಂಖ್ಯೆ ಯಾವಾಗಲೂ ಹತ್ತು ಸಾವಿರವೇ ಇರಬೇಕೆಂದು ಬ್ರಹ್ಮನು ಹೇಳಿರುವನು.

೧೪೫. ವಶ್ಯಕರ್ಮದಲ್ಲಿ ಬಿಲ್ವಪತ್ರಗಳನ್ನೂ ಕಮಲದಳಗಳನ್ನೂ "ಸುಮಿತ್ರಿಯಾ ನ ಆಪ ಓಷಧಯಃ ಸಂತು" ಎಂದರೆ "ಜಲವೂ ವನಸ್ಪತಿಗಳೂ ನಮಗೆ ಹಿತಕಾರಿಗಳಾಗಲಿ" ಎಂಬ ಮಂತ್ರದಿಂದ ಹೋಮಮಾಡಬೇಕು.

೧೪೬. ಈ ಕರ್ಮದಲ್ಲಿ ದೇವತಾಸ್ಥಾಪನವೂ, ಕುಂಭೋದಕದಿಂದ ಅಭಿಷೇಕವೂ ಇಲ್ಲ. ಸಕಲ ಮೂಲಿಕಾರಸಗಳಿಂದ ಸ್ನಾನಮಾಡಿ ಗೃಹಸ್ಥನು ಶುಭ್ರವಸ್ತ್ರವನ್ನೂ ಪುಷ್ಪವನ್ನೂ ಧರಿಸಬೇಕು.

**ಕಂಠಸೂತ್ರೈಃ ಸಕನಕೈರ್ವಿಪ್ರಾನ್ ಸಮಭಿಪೂಜಯೇತ್ ।**
**ಸೂಕ್ಷ್ಮವಸ್ತ್ರಾಣಿ ದೇಯಾನಿ ಶುಕ್ಲಾ ಗಾವಃ ಸಕಾಂಚನಾಃ ॥೧೪೭॥**

**ಅವಶ್ಯಾನಿ ವಶೀಕುರ್ಯಾತ್ಸರ್ವಶತ್ರುಬಲಾನ್ಯಪಿ ।**
**ಅಮಿತ್ರಾಣ್ಯಪಿ ಮಿತ್ರಾಣಿ ಹೋಮೋಽಯಂ ಪಾಪನಾಶನಃ ॥೧೪೮॥**

**ವಿದ್ವೇಷಣೇಽಭಿಚಾರೇ ಚ ತ್ರಿಕೋಣಂ ಕುಂಡಮಿಷ್ಯತೇ ।**
**ದ್ವಿಮೇಖಲಂ ಕೋಣಮುಖಂ ಹಸ್ತಮಾತ್ರಂ ಚ ಸರ್ವಶಃ ॥೧೪೯॥**

**ಹೋಮಂ ಕುರ್ಯುಸ್ತತೋ ವಿಪ್ರಾ ರಕ್ತಮಾಲ್ಯಾನುಲೇಪನಾಃ ।**
**ನಿವೀತಲೋಹಿತೋಷ್ಣೀಷಾ ಲೋಹಿತಾಂಬರಧಾರಿಣಃ ॥೧೫೦॥**

**ನವವಾಯಸರಕ್ತಾಢ್ಯಪಾತ್ರತ್ರಯಸಮನ್ವಿತಾಃ ।**
**ಸಮಿಧೋ ವಾಮಹಸ್ತೇನ ಶ್ಯೇನಾಸ್ಥಿಬಲಸಂಯುತಾಃ ।**
**ಹೋತವ್ಯಾ ಮುಕ್ತಕೇಶೈಸ್ತು ಧ್ಯಾಯದ್ಭಿರಶಿವಂ ರಿಪೌ ॥೧೫೧॥**

---

೧೪೭. ಸುವರ್ಣನಿರ್ಮಿತಗಳಾದ ಕಂಠಸೂತ್ರಗಳನ್ನಿತ್ತು ಬ್ರಾಹ್ಮಣರನ್ನು ಸತ್ಕರಿಸಬೇಕು. ಸೂಕ್ಷ್ಮವಾದ ವಸ್ತ್ರಗಳನ್ನೂ, ಚಿನ್ನದ ಒಡವೆಗಳಿಂದ ಅಲಂಕರಿಸಿದ ಬಿಳಿಯ ಹಸುಗಳನ್ನೂ ದಾನಮಾಡಬೇಕು.

೧೪೮. ಈ ಹೋಮದಿಂದ ವಶವಾಗದಿರುವ ಶತ್ರುಸೈನ್ಯಗಳೆಲ್ಲವೂ ವಶವಾಗುವುವು. ಶತ್ರುಗಳೂ ಮಿತ್ರರಾಗುವರು. ಪಾಪವೆಲ್ಲವೂ ಪರಿಹಾರವಾಗುವುದು.

೧೪೯. ಶತ್ರುನಾಶ, ಮಾಟ ಮೊದಲಾದ ಕರ್ಮಗಳಲ್ಲಿ ಅಗ್ನಿಕುಂಡವು ತ್ರಿಕೋಣಾಕಾರವಾಗಿರುವುದು. ಇದಕ್ಕೆ ಎರಡು ಮೇಖಲೆಗಳೂ, (ಸುತ್ತುಗಟ್ಟುಗಳೂ) ಕೋಣರೂಪವಾದ ಯೋನಿಮುಖವೂ ಇರುವುವು. ಎಲ್ಲ ಪಕ್ಕಗಳೂ ಒಂದೊಂದು ಮೊಳದ ಅಳತೆಯಿರುವುವು.

೧೫೦-೧೫೧. ಬಳಿಕ ಬ್ರಾಹ್ಮಣರು ಹೋಮವನ್ನು ಮಾಡುವರು. ಅವರು ಮುಡಿದ ಹೂ, ಲೇಪಿಸಿದ ಗಂಧ, ತೊಟ್ಟ ರುಮಾಲು, ಉಟ್ಟ ಪಂಚೆ ಇವೆಲ್ಲವೂ ಕೆಂಪು ಬಣ್ಣದವು. ಯಜ್ಞೋಪವೀತವು ನಿವೀತವಾಗಿರುವುದು. ಕಾಗೆಯ ಹೊಸ ರಕ್ತವನ್ನು ಮೂರು ಪಾತ್ರೆಗಳಲ್ಲಿ ತುಂಬಿ ಮುಂದುಗಡೆ ಇಟ್ಟುಕೊಂಡಿರುವರು. ಗಿಡಗನ ಮೂಳೆ, ರಕ್ತ ಅಥವಾ ವೀರ್ಯದಿಂದ ಮಿಶ್ರವಾದ ಸಮಿತ್ತುಗಳನ್ನು ಆ ರಕ್ತದ ಪಾತ್ರೆಗಳಲ್ಲಿ ಅದ್ದಿ ಎಡಗೈಯಿಂದ ಹೋಮಮಾಡುವರು. ತಲೆಯನ್ನು ಕೆದರಿಕೊಂಡು ಶತ್ರುಗಳಿಗೆ ಅಶುಭವನ್ನು ಕೋರುತ್ತಿರುವರು.

**ದುರ್ಮಿತ್ರಿಯಾಸ್ತಸ್ಮೈ ಸಂತು ತಥಾ ಹುಂ ಫಡಿತೀತಿ ಚ ।**
**ಶ್ಯೇನಾಭಿಚಾರಮಂತ್ರೇಣ ಕ್ಷುರಂ ಸಮಭಿಮಂತ್ರ್ಯ ಚ** ॥೧೫೨॥

**ಪ್ರತಿರೂಪಂ ರಿಪೋಃ ಕೃತ್ವಾ ಕ್ಷುರೇಣ ಪರಿಕರ್ತಯೇತ್ ।**
**ರಿಪುರೂಪಸ್ಯ ಶಕಲಾನ್ಯಥೈವಾಗ್ನೌ ವಿನಿಃಕ್ಷಿಪೇತ್** ॥೧೫೩॥

**ಗ್ರಹಯಜ್ಞವಿಧಾನಾಂತೇ ಸದೈವಾಭಿಚರನ್ ಪುನಃ ।**
**ವಿದ್ವೇಷಣಂ ತಥಾ ಕುರ್ವನ್ನೇತದೇವ ಸಮಾಚರೇತ್** ॥೧೫೪॥

**ಇಹೈವ ಫಲದಂ ಪುಂಸಾಮೇತನ್ನಾಮುತ್ರ ಶೋಭನಂ ।**
**ತಸ್ಮಾಚ್ಛಾಂತಿಕಮೇವಾತ್ರ ಕರ್ತವ್ಯಂ ಭೂತಿಮಿಚ್ಛತಾ** ॥೧೫೫॥

**ಗ್ರಹಯಜ್ಞತ್ರಯಂ ಕುರ್ಯಾದ್ಯಸ್ತ್ವಕಾಮ್ಯೇನ ಮಾನವಃ ।**
**ಸ ವಿಷ್ಣೋಃ ಪದಮಾಪ್ನೋತಿ ಪುನರಾವೃತ್ತಿದುರ್ಲಭಂ** ॥೧೫೬॥

---

೧೫೨-೧೫೩. "ದುರ್ಮಿತ್ರಿಯಾಸ್ತಸ್ಮೈ ಸಂತು, ಹುಂ, ಫಟ್" ಇವು ಹೋಮಕಾಲದಲ್ಲಿ ಉಚ್ಚರಿಸಬೇಕಾದ ಮಂತ್ರಗಳು. ಬಳಿಕ ಶತ್ರುವಿನ ಆಕೃತಿಯನ್ನು ನಿರ್ಮಿಸಿ, ಶ್ಯೇನಾಭಿಚಾರಮಂತ್ರದಿಂದ ಚೂರಿಯನ್ನು ಅಭಿಮಂತ್ರಿಸಿ, ಒಂದೊಂದು ಅವಯವವಾಗಿ ಕತ್ತರಿಸುತ್ತ ಆ ಶಕಲಗಳನ್ನು ಅಗ್ನಿಯಲ್ಲಿ ಹಾಕಬೇಕು.

೧೫೪. ಗ್ರಹಯಜ್ಞವಿಧಾನದ ಅನಂತರದಲ್ಲಿ ಅಭಿಚಾರಕರ್ಮವನ್ನು ನಡೆಸಲಿ, ಶತ್ರುನಾಶಕ ಕರ್ಮವನ್ನು ಮಾಡಲಿ ಇದೇ ವಿಧಿಯನ್ನು ಅನುಸರಿಸಬೇಕು.

೧೫೫. ಈ ಕರ್ಮವು ಮಾನವರಿಗೆ ಇಹದಲ್ಲಿ ಮಾತ್ರ ಫಲವನ್ನು ಕೊಡಬಲ್ಲುದು. ಪರಲೋಕದಲ್ಲಿ ಯಾವ ಶ್ರೇಯಸ್ಸನ್ನೂ ಉಂಟುಮಾಡಲಾರದು. ಆದುದರಿಂದ ಶ್ರೇಯಸ್ಸನ್ನು ಕೋರುವವನು ಶಾಂತಿಕರ್ಮವನ್ನು ಮಾತ್ರ ಮಾಡಬೇಕು.

೧೫೬. ಮೇಲೆ ಹೇಳಿದ ಮೂರು ಬಗೆಯ ಗ್ರಹಯಜ್ಞಗಳನ್ನೂ ನಿಷ್ಕಾಮಬುದ್ಧಿಯಿಂದ ಮಾಡುವ ಮನುಷ್ಯನು ವಿಷ್ಣುವಿನ ಸಾನ್ನಿಧ್ಯವನ್ನೈದುವನು. ಅವನಿಗೆ ಪುನರ್ಜನ್ಮವಿಲ್ಲ.

ಯ ಇದಂ ಶೃಣುಯಾನ್ನಿತ್ಯಂ ಶ್ರಾವಯೇದ್ವಾಪಿ ಮಾನವಃ ।
ನ ತಸ್ಯ ಗ್ರಹಪೀಡಾ ಸ್ಯಾನ್ನ ಚ ಬಂಧುಜನಕ್ಷಯಃ ॥೧೫೭॥

ಗ್ರಹಯಜ್ಞತ್ರಯಂ ಗೇಹೇ ಲಿಖಿತಂ ಯತ್ರ ತಿಷ್ಠತಿ ।
ನ ಪೀಡಾ ತತ್ರ ಬಾಲಾನಾಂ ನ ರೋಗೋ ನ ಚ ಬಂಧನಂ ॥೧೫೮॥

ಅಶೇಷಯಜ್ಞಫಲದಂ ನಿಶ್ಶೇಷಾಘವಿನಾಶನಂ ।
ಕೋಟಿಹೋಮಂ ವಿದುಃ ಪ್ರಾಜ್ಞಾ ಭುಕ್ತಿಮುಕ್ತಿಫಲಪ್ರದಂ ॥೧೫೯॥
ಅಶ್ವಮೇಧಫಲಂ ಪ್ರಾಹುರ್ಲಕ್ಷಹೋಮಂ ಸುರೋತ್ತಮಾಃ ।
ದ್ವಾದಶಾಹಮುಖಸ್ತದ್ವನ್ನವಗ್ರಹಮುಖಃ ಸ್ಮೃತಃ ॥೧೬೦॥

ಇತಿ ಕಥಿತಮಿದಾನೀಮುತ್ಸವಾನಂದಹೇತೋಃ
ಸಕಲಕಲುಷಹಾರೀ ದೇವಯಜ್ಞಾಭಿಷೇಕಃ ।

---

೧೫೭. ಯಾವನು ಇದನ್ನು ನಿತ್ಯವೂ ಕೇಳುವನೋ ಅಥವಾ ಇತರರಿಗೆ ಹೇಳುವನೋ ಆ ಮನುಷ್ಯನಿಗೆ ಗ್ರಹಗಳಿಂದ ಬಾಧೆಯುಂಟಾಗದು; ಬಂಧುಜನರ ವಿನಾಶ ಸಂಭವಿಸದು.

೧೫೮. ಈ ಮೂರು ವಿಧದ ಗ್ರಹಯಜ್ಞಗಳ ವಿಧಾನವನ್ನು ಬರೆದ ಪುಸ್ತಕವು ಯಾವ ಮನೆಯಲ್ಲಿರುತ್ತದೆಯೋ ಅಲ್ಲಿ ಮಕ್ಕಳಿಗೆ ಬಾಲಗ್ರಹ ಬಾಧೆಯುಂಟಾಗುವುದಿಲ್ಲ. ರೋಗ, ಬಂಧನ ಇವು ತಲೆಹಾಕುವುದಿಲ್ಲ.

೧೫೯. ಕೋಟಿ ಹೋಮವು ಸಕಲ ಯಜ್ಞಗಳ ಫಲವನ್ನೂ ಕೊಡುವುದು; ಪಾಪಗಳನ್ನು ನಿಶ್ಶೇಷವಾಗಿ ತೊಲಗಿಸುವುದು. ಭೋಗಫಲವನ್ನೂ ಮೋಕ್ಷಫಲವನ್ನೂ ನೀಡುವುದು.

೧೬೦. ಲಕ್ಷ ಹೋಮವು ಅಶ್ವಮೇಧಯಾಗದ ಫಲವನ್ನು ಕೊಡುವುದೆಂದು ಸುರಶ್ರೇಷ್ಠರು ಹೇಳುವರು. ನವಗ್ರಹ ಯಜ್ಞವನ್ನು ಹನ್ನೆರಡು ದಿನಗಳ ಯಾಗವೆಂದು ಗಣಿಸುತ್ತಾರೆ.

೧೬೧. ಮಾನವರ ಸಂತೋಷಕ್ಕೂ ಆನಂದಕ್ಕೂ ಕಾರಣವೆನಿಸಿ, ಎಲ್ಲ ಪಾಪಗಳನ್ನೂ ಪರಿಹರಿಸಬಲ್ಲ ದೇವಯಜ್ಞಾಭಿಷೇಕವನ್ನು—ದೇವತೆಗಳ ಆವಾಹನ, ಗ್ರಹಯಜ್ಞವಿಧಾನ, ತದಂಗವಾದ ಸ್ನಾನಕ್ರಮ ಇವುಗಳನ್ನು—ಮೇಲೆ ಹೇಳಿದಂತೆ

**ಪರಿಪಠತಿ ಯ ಇತ್ಥಂ ಯಃ ಶೃಣೋತಿ ಪ್ರಸಂಗಾತ್**
**ಅಭಿಭವತಿ ಸ ಶತ್ರೂನಾಯುರಾರೋಗ್ಯಯುಕ್ತಃ ॥೧೬೧॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ನವಗ್ರಹಹೋಮಶಾಂತಿವಿಧಾನಂ ನಾಮ ತ್ರಿನವತಿತಮೋಽಧ್ಯಾಯಃ**

---

ವಿವರಿಸಿದುದಾಯಿತು. ಇದನ್ನು ಓದುವವನೂ, ಪ್ರಸಂಗವಶದಿಂದ ಕೇಳುವವನೂ ಶತ್ರುಗಳನ್ನು ಗೆಲ್ಲುವರು. ಆಯುರಾರೋಗ್ಯಗಳನ್ನು ಪಡೆಯುವರು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ನವಗ್ರಹಯಜ್ಞದ ವಿಧಾನವನ್ನು ಹೇಳಿದೆ.

ಇದರಲ್ಲಿ ಮೂರು ವಿಧವುಂಟು; ಅಯುತಹೋಮ, (ಹತ್ತು ಸಾವಿರ ಹೋಮ) ಲಕ್ಷ ಹೋಮ ಮತ್ತು ಕೋಟಿ ಹೋಮವೆಂದು. ಅಗ್ನಿಕುಂಡ, ಯಾಗ ಮಂಟಪ, ದೇವತೆಗಳ ಸ್ಥಾಪನೆಗಾಗಿ ವೇದಿಕೆ ಇವು ಎಲ್ಲಕ್ಕೂ ಆವಶ್ಯಕ. ಆದರೆ ಪ್ರಮಾಣದಲ್ಲಿ ಮಾತ್ರ ವ್ಯತ್ಯಾಸವಿರುವುದು.

ಸೂರ್ಯಾದಿ ನವಗ್ರಹಗಳನ್ನೂ ಅವುಗಳ ಅಧಿದೇವತೆ ಮತ್ತು ಪ್ರತ್ಯಧಿದೇವತೆ ಗಳನ್ನೂ ಆವಾಹನಮಾಡಬೇಕು. ಕುಂಭವನ್ನು ಸ್ಥಾಪಿಸಿ ,ಸಕಲ ಪುಣ್ಯತೀರ್ಥ ಗಳನ್ನೂ ಅದರಲ್ಲಿ ಆವಾಹಿಸಬೇಕು. ಸಮಿದ್ಧೋಮ, ಚರುಹೋಮ, ಆಜ್ಯಹೋಮ ಇವು ನಡೆದ ಬಳಿಕ ಪೂರ್ಣಾಹುತಿಯನ್ನು ಕೊಡಬೇಕು.

ಬಳಿಕ ಋತ್ವಿಜರು ಅಭಿಷೇಕಮಂತ್ರಗಳನ್ನು ಹೇಳುತ್ತ ಕುಂಭೋದಕದಿಂದ ಯಜಮಾನನಿಗೆ ಸ್ನಾನಮಾಡಿಸುವರು. ಅವನು ಶುಭ್ರವಸ್ತ್ರವನ್ನುಟ್ಟು, ಅವರಿಗೆ ದಾನದಕ್ಷಿಣೆಗಳನ್ನು ಕೊಟ್ಟು ಸತ್ಕರಿಸುವನು. ನವಗ್ರಹಗಳ ತೃಪ್ತಿಗಾಗಿ ಅವರಿಗೆ ಪ್ರಿಯವೆಂದು ಶಾಸ್ತ್ರಗಳಲ್ಲಿ ಹೇಳಿರುವ ವಸ್ತುಗಳನ್ನು ದಾನವಾಗಿ ಕೊಡಬೇಕು.

ಲಕ್ಷ ಹೋಮ ಮತ್ತು ಕೋಟಿಹೋಮಗಳ ವಿಧಿಯೂ ಸಹ ಇದೇ ರೀತಿ ಯಾಗಿರುವುದು. ಮಾಟ, ಶೂನ್ಯ, ವಶೀಕರಣ, ಶತ್ರುನಾಶ ಮುಂತಾದ ಆಭಿಚಾರಿಕ ಕರ್ಮಗಳಲ್ಲೂ ಲಕ್ಷ ಹೋಮವನ್ನು ಮಾಡುವರು. ಆದರೆ ಅವುಗಳ ವಿಧಾನವು

ಬೇರೆ ರೀತಿಯಾಗಿರುವುದು. ಈ ಕರ್ಮಗಳು ಯಜಮಾನನ ಕೋರಿಕೆಯನ್ನು ಈಡೇರಿಸಿದರೂ, ಅವನಿಗೆ ಪರಲೋಕದಲ್ಲಿ ಯಾವ ಶ್ರೇಯಸ್ಸನ್ನೂ ಕೊಡಲಾರವು. ಆದುದರಿಂದ ನವಗ್ರಹ ಯಜ್ಞವನ್ನು ಶಾಂತಿರೂಪವಾಗಿ, ನಿಷ್ಕಾಮಬುದ್ಧಿಯಿಂದ ಮಾಡುವುದೇ ಲೇಸು.

ಈ ಗ್ರಹಯಜ್ಞವಿಧಿಯಿಂದ ಸಕಲ ಯಜ್ಞಗಳ ಫಲವೂ ದೊರೆಯುವುದು. ಪಾಪವು ಪರಿಹಾರವಾಗುವುದು. ಸ್ವರ್ಗಾದಿಸುಖವೂ, ಮೋಕ್ಷವೂ ಲಭಿಸುವುವು.

ಶ್ರೀಮತ್ಸ್ಯಮಹಾಪುರಾಣದಲ್ಲಿ ನವಗ್ರಹಹೋಮ ಶಾಂತಿವಿಧಾನವೆಂಬ
ತೊಂಬತ್ತಮೂರನೆಯ ಅಧ್ಯಾಯವು ಮುಗಿದುದು.



# ಅಥ ಚತುರ್ನವತಿತಮೋಽಧ್ಯಾಯಃ

॥ ಶಿವ ಉವಾಚ ॥

ಪದ್ಮಾಸನಃ ಪದ್ಮಕರಃ ಪದ್ಮಗರ್ಭಸಮದ್ಯುತಿಃ ।
ಸಪ್ತಾಶ್ವಃ ಸಪ್ತರಜ್ಜುಶ್ಚ ದ್ವಿಭುಜಃ ಸ್ಯಾತ್ಸದಾ ರವಿಃ ॥ ೧ ॥

ಶ್ವೇತಃ ಶ್ವೇತಾಂಬರಧರಃ ಶ್ವೇತಾಶ್ವಃ ಶ್ವೇತವಾಹನಃ ।
ಗದಾಪಾಣಿರ್ದ್ವಿಬಾಹುಶ್ಚ ಕರ್ತವ್ಯೋ ವರದಃ ಶಶೀ ॥ ೨ ॥

ರಕ್ತಮಾಲ್ಯಾಂಬರಧರಃ ಶಕ್ತಿಶೂಲಗದಾಧರಃ ।
ಚತುರ್ಭುಜಃ ಶ್ವೇತರೋಮಾ ವರದಃ ಸ್ಯಾದ್ಧರಾಸುತಃ ॥ ೩ ॥

---

೧. ಪರಮೇಶ್ವರನು ಹೇಳಿದನು.—ಸೂರ್ಯನು ಪದ್ಮದ ಮೇಲೆ ಕುಳಿತು ಕೈಯಲ್ಲಿ ಪದ್ಮವನ್ನು ಹಿಡಿದುಕೊಂಡಿರುವನು. ಅವನ ದೇಹದ ಕಾಂತಿಯು ತಾವರೆಯ ಒಳಭಾಗದ ಕಾಂತಿಯನ್ನು ಹೋಲುವುದು. ಅವನಿಗೆ ಕೈಗಳೆರಡು. ಅವನ ತೇರಿಗೆ ಏಳು ಕುದುರೆಗಳನ್ನು ಹೂಡಿದೆ. ಒಂದೊಂದಕ್ಕೂ ಒಂದೊಂದು ಹಗ್ಗವನ್ನು ಕಟ್ಟಿದೆ. ಈ ರೀತಿಯಲ್ಲಿ ಸೂರ್ಯದೇವನ ಆಕೃತಿಯನ್ನು ಕಲ್ಪಿಸಬೇಕು.

೨. ದೇಹವು ಬೆಳ್ಳಗೆ ಶೋಭಿಸುತ್ತಿರಲು, ಬಿಳಿಯ ಬಟ್ಟೆಯನ್ನುಟ್ಟು, ಬಿಳಿಯ ಕುದುರೆಯನ್ನೇರಿ, ಗದೆಯನ್ನು ಹಿಡಿದು, ಭುಜದ್ವಯ ಸಹಿತನಾಗಿ ವರವನ್ನು ಕರುಣಿಸುತ್ತಿರುವಂತೆ ಶ್ವೇತವಾಹನನೆನಿಸಿದ ಚಂದ್ರನ ಮೂರ್ತಿಯನ್ನು ನಿರ್ಮಿಸಬೇಕು.

೩. ಭಕ್ತರ ಅಭೀಷ್ಟಗಳನ್ನು ಸಲ್ಲಿಸುವ ಅಂಗಾರಕನು ಕೆಂಪು ಹೂವನ್ನು ಮುಡಿದು, ಕೆಂಪು ಬಣ್ಣದ ವಸ್ತ್ರವನ್ನು ಧರಿಸಿ ಶಕ್ತಿ, ಶೂಲ ಮತ್ತು ಗದೆಗಳನ್ನು ಹಿಡಿದಿರುವನು. ಅವನಿಗೆ ನಾಲ್ಕು ತೋಳುಗಳಿವೆ; ಮತ್ತು ಅವನ ಕೂದಲು ಬೆಳ್ಳಗಿದೆ.

**ಪೀತಮಾಲ್ಯಾಂಬರಧರಃ ಕರ್ಣಿಕಾರಸಮದ್ಯುತಿಃ ।**
**ಖಡ್ಗಚರ್ಮಗದಾಪಾಣಿಃ ಸಿಂಹಸ್ಥೋ ವರದೋ ಬುಧಃ** ॥ ೪ ॥

**ದೇವದೈತ್ಯಗುರೂ ತದ್ವತ್ಪೀತಶ್ವೇತೌ ಚತುರ್ಭುಜೌ ।**
**ದಂಡಿನೌ ವರದೌ ಕಾರ್ಯೌ ಸಾಕ್ಷಸೂತ್ರಕಮಂಡಲೂ** ॥ ೫ ॥

**ಇಂದ್ರನೀಲದ್ಯುತಿಃ ಶೂಲೀ ವರದೋ ಗೃಧ್ರವಾಹನಃ ।**
**ಬಾಣಬಾಣಾಸನಧರಃ ಕರ್ತವ್ಯೋಽರ್ಕಸುತಸ್ತಥಾ** ॥ ೬ ॥

**ಕರಾಲವದನಃ ಖಡ್ಗಚರ್ಮಶೂಲೀ ವರಪ್ರದಃ ।**
**ನೀಲಸಿಂಹಾಸನಸ್ಥಶ್ಚ ರಾಹುರತ್ರ ಪ್ರಶಸ್ಯತೇ** ॥ ೭ ॥

---

೪. ಭಕ್ತರ ಇಷ್ಟವನ್ನು ಈಡೇರಿಸುವ ಬುಧನು ಬಿಳಿಯ ಹೂವನ್ನು ಮುಡಿದು ಪೀತಾಂಬರವನ್ನುಟ್ಟಿರುವನು. ಅವನ ಮೈ ಬಣ್ಣದಲ್ಲಿ ಬೆಟ್ಟದಾವರೆಯನ್ನು ಹೋಲುವುದು. ಕತ್ತಿಗುರಾಣಿಗಳನ್ನು ಕೈಯಲ್ಲಿ ಹಿಡಿದು ಅವನು ಸಿಂಹದ ಮೇಲೆ ಕುಳಿತಿರುವನು.

೫. ದೇವತೆಗಳ ಗುರು ಬೃಹಸ್ಪತಿ; ದೈತ್ಯರ ಗುರು ಶುಕ್ರ. ಮೊದಲನೆಯವನ ಬಣ್ಣ ಹಳದಿ; ಎರಡನೆಯವನದು ಬಿಳುಪು. ಇಬ್ಬರಿಗೂ ನಾಲ್ಕು ತೋಳುಗಳು. ದಂಡ, ಜಪಸರ ಮತ್ತು ಕಮಂಡಲುಗಳನ್ನು ಧರಿಸಿ ವರದಹಸ್ತದಿಂದ ಇಬ್ಬರೂ ಶೋಭಿಸುತ್ತಿರುವರು.

೬. ಸೂರ್ಯಪುತ್ರನಾದ ಶನಿಯು ಇಂದ್ರನೀಲ ರತ್ನದಂತಹ ಮೈಬಣ್ಣದವನು. ಅವನ ವಾಹನವು ಹದ್ದು. ಅವನು ಬಿಲ್ಲುಬಾಣಗಳನ್ನೂ, ಶೂಲಾಯುಧವನ್ನೂ ಹಿಡಿದು ವರದ ಹಸ್ತದಿಂದ ಶೋಭಿಸುತ್ತಿರುವನು. ಈ ರೀತಿಯಾಗಿ ಅವನ ಮೂರ್ತಿಯನ್ನು ನಿರ್ಮಿಸಬೇಕು.

೭. ಭಯಂಕರಮುಖನಾಗಿ, ಕೈಗಳಲ್ಲಿ ಕತ್ತಿ, ಗುರಾಣಿ ಮತ್ತು ಶೂಲಾಯುಧಗಳನ್ನು ಹಿಡಿದು, ನೀಲರತ್ನದ ಸಿಂಹಾಸನವನ್ನೇರಿ ವರವನ್ನು ಕರುಣಿಸುತ್ತ ರಾಹುವು ಕುಳಿತಿರುವನೆಂದು ಶಾಸ್ತ್ರಜ್ಞರು ಹೇಳುತ್ತಾರೆ.

**ಧೂಮ್ರಾ ದ್ವಿಬಾಹವಃ ಸರ್ವೇ ಗದಿನೋ ವಿಕೃತಾನನಾಃ ।**
**ಗೃಧ್ರಾಸನಗತಾ ನಿತ್ಯಂ ಕೇತವಃ ಸ್ಯುರ್ವರಪ್ರದಾಃ ॥ ೮ ॥**
**ಸರ್ವೇ ಕಿರೀಟಿನಃ ಕಾರ್ಯಾ ಗ್ರಹಾ ಲೋಕಹಿತಾವಹಾಃ ।**
**ಸ್ವಾಂಗುಲೇನೋಚ್ಛ್ರಿತಾಃ ಸರ್ವೇ ಶತಮಷ್ಟೋತ್ತರಂ ಸದಾ ॥ ೯ ॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಗ್ರಹರೂಪಾಖ್ಯಾನಂ**
**ನಾಮ ಚತುರ್ನವತಿತಮೋಽಧ್ಯಾಯಃ**

---

೮. ಕೇತುವು ಹಲವು ರೂಪಗಳನ್ನು ತಾಳಿರುವನು. ಎಲ್ಲರೂ ಧೂಮ್ರವರ್ಣದವರು. ಗದೆಯನ್ನು ಧರಿಸಿ ಗೃಧ್ರಾಸನದಲ್ಲಿ ಕುಳಿತಿರುವರು. ಅವರ ಮುಖವು ವಿಕಾರವಾಗಿರುವುದು. ಅವರು ವರದ ಹಸ್ತವನ್ನು ನೀಡಿ ಭಕ್ತರ ಕೋರಿಕೆಯನ್ನು ಈಡೇರಿಸುವರು.

೯. ಗ್ರಹಗಳೆಲ್ಲರೂ ಲೋಕದ ಹಿತವನ್ನು ಮಾಡತಕ್ಕವರು. ಪೂಜಾರ್ಥವಾಗಿ ಅವರ ಪ್ರತಿಮೆಗಳನ್ನು ಕಲ್ಪಿಸುವಾಗ ಎಲ್ಲರಿಗೂ ಕಿರೀಟಗಳನ್ನು ಧರಿಸಬೇಕು. ಪ್ರತಿಕೃತಿಗಳ ಎತ್ತರವು ಯಜಮಾನನ ಕೈಯಲ್ಲಿ ಒಂದು ಬೆರಳಿನಷ್ಟು ಇದ್ದರೆ ಸಾಕು. ಒಬ್ಬೊಬ್ಬರ ಸ್ತೋತ್ರವನ್ನೂ ನೂರೆಂಟು ಸಾರಿ ಜಪಿಸಬೇಕು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯವುನವಗ್ರಹಗಳಲ್ಲಿ ಒಬ್ಬೊಬ್ಬರ ಆಕಾರವನ್ನೂ, ವಾಹನಾದಿಗಳನ್ನೂ ತಿಳಿಸುತ್ತದೆ.

ಪೂಜಾರ್ಥವಾಗಿ ಅವರ ಪ್ರತಿಮೆಗಳನ್ನು ನಿರ್ಮಾಣಮಾಡುವುದಕ್ಕೂ, ಮನಸ್ಸಿನಲ್ಲಿ ಮೂರ್ತಿಕಲ್ಪನೆಯನ್ನು ಮಾಡುವುದಕ್ಕೂ ಈ ಜ್ಞಾನವು ಆವಶ್ಯಕ.

ಶ್ರೀಮತ್ಸ್ಯಮಹಾಪುರಾಣದಲ್ಲಿ ಗ್ರಹರೂಪಾಖ್ಯಾನವೆಂಬ
ತೊಂಬತ್ತನಾಲ್ಕನೆಯ ಅಧ್ಯಾಯವು ಮುಗಿದುದು.

# ಅಥ ಪಂಚನವತಿತಮೋಽಧ್ಯಾಯಃ

॥ ನಾರದ ಉವಾಚ ॥

ಭಗವನ್ ಭೂತಭವ್ಯೇಶ ತಥಾನ್ಯದಪಿ ಯಚ್ಛ್ರುತಂ ।
ಭುಕ್ತಿಮುಕ್ತಿಫಲಾಯಾಲಂ ತತ್ಪುನರ್ವಕ್ತುಮರ್ಹಸಿ ॥ ೧ ॥

ಏವಮುಕ್ತೋಽಬ್ರವೀಚ್ಛಂಭುರಯಂ ವಾಙ್ಮಯಪಾರಗಃ ।
ಮತ್ಸಮಸ್ತಪಸಾ ಬ್ರಹ್ಮನ್ ಪುರಾಣಶ್ರುತಿವಿಸ್ತರೈಃ ॥ ೨ ॥

ಧರ್ಮೋಽಯಂ ವೃಷರೂಪೇಣ ನಂದೀ ನಾಮ ಗಣಾಧಿಪಃ ।
ಧರ್ಮಾನ್ ಮಾಹೇಶ್ವರಾನ್ ವಕ್ಷ್ಯತ್ಯತಃ ಪ್ರಭೃತಿ ನಾರದ ॥ ೩ ॥

---

೧. ನಾರದಮುನಿ ಹೇಳಿದನು.—ಕಳೆದು ಹೋದ ಮತ್ತು ಮುಂದೆ ಬರಲಿರುವ ಸಕಲಲೋಕಗಳ ಅಧೀಶ್ವರನಾದ ಓ ಭಗವಂತಾ, ಸ್ವರ್ಗಾದಿಸುಖವನ್ನೂ ಮೋಕ್ಷಫಲವನ್ನೂ ಕೊಡಬಲ್ಲ ಮತ್ತಾವುದಾದರೂ ವ್ರತವನ್ನು ನೀನು ಕೇಳಿದ್ದರೆ ಅದನ್ನು ನನಗೆ ತಿಳಿಸು.

೨-೩. ನಾರದಮಹರ್ಷಿಯು ಹೀಗೆ ಪ್ರಾರ್ಥಿಸಲು ಮಹೇಶ್ವರನು ಉತ್ತರವಿತ್ತನು. "ಓ ನಾರದಾ, ಇಗೋ! ಈ ನಂದಿಕೇಶ್ವರನು ಗಣಾಧಿಪತಿಯೆನಿಸಿರುವನು. ವೃಷಭ ರೂಪದಿಂದ ಬಂದಿರುವ ಸಾಕ್ಷಾದ್ಧರ್ಮಸ್ವರೂಪನೇ ಇವನು. ಈತನು ಸಕಲ ಶಾಸ್ತ್ರಪಾರಂಗತನು; ತಪಸ್ಸಿನಲ್ಲಿ ನನಗೆ ಸಮಾನನಾಗಿರುವನು. ವೇದಪುರಾಣಾದಿಗಳನ್ನು ನನ್ನಷ್ಟೇ ವಿಸ್ತಾರವಾಗಿ ತಿಳಿದಿರುವನು. ಎಲೈ ಬಹ್ಮಜ್ಞಾನಿಯೇ, ಇನ್ನು ಮುಂದೆ ಮಹೇಶ್ವರ ಧರ್ಮಗಳನ್ನು ಈತನೇ ನಿನಗೆ ಹೇಳುವನು."

॥ ಮತ್ಸ್ಯ ಉವಾಚ ॥

ಇತ್ಯುಕ್ತ್ವಾ ದೇವದೇವೇಶಸ್ತತ್ರೈವಾಂತರಧೀಯತ ।
ನಾರದೋಽಪಿ ಹಿ ಶುಶ್ರೂಷುರಪೃಚ್ಛನ್ನಂದಿಕೇಶ್ವರಂ ।
ಆದಿಷ್ಟಸ್ತ್ವಂ ಶಿವೇನೇಹ ವದ ಮಾಹೇಶ್ವರಂ ವ್ರತಂ ॥ ೪ ॥

॥ ನಂದಿಕೇಶ್ವರ ಉವಾಚ ॥

ಶೃಣುಷ್ವಾವಹಿತೋ ಬ್ರಹ್ಮನ್ ವಕ್ಷ್ಯೇ ಮಾಹೇಶ್ವರಂ ವ್ರತಂ ।
ತ್ರಿಷು ಲೋಕೇಷು ವಿಖ್ಯಾತಾ ನಾಮ್ನಾ ಶಿವಚತುರ್ದಶೀ ॥ ೫ ॥

ಮಾರ್ಗಶೀರ್ಷತ್ರಯೋದಶ್ಯಾಂ ಸಿತಾಯಾಮೇಕಭೋಜನಃ ।
ಪ್ರಾರ್ಥಯೇದ್ದೇವದೇವೇಶಂ ತ್ವಾಮಹಂ ಶರಣಂ ಗತಃ ॥ ೬ ॥

ಚತುರ್ದಶ್ಯಾಂ ನಿರಾಹಾರಃ ಸಮ್ಯಗಭ್ಯರ್ಚ್ಯ ಶಂಕರಂ ।
ಸುವರ್ಣವೃಷಭಂ ದತ್ವಾ ಭೋಕ್ಷ್ಯಾಮಿ ಚ ಪರೇಽಹನಿ ॥ ೭ ॥

---

೪. ಮತ್ಸ್ಯರೂಪಿಯಾದ ಭಗವಂತನು ಹೇಳಿದನು.—ಹೀಗೆ ಹೇಳಿ ದೇವಾಧಿದೇವನಾದ ಪರಮೇಶ್ವರನು ಅಲ್ಲೇ ಮಾಯವಾದನು. ನಾರದನೂ ಸಹ ತನ್ನ ಪ್ರಶ್ನೆಗೆ ಉತ್ತರವನ್ನು ತಿಳಿದುಕೊಳ್ಳಬೇಕೆಂಬ ಅಪೇಕ್ಷೆಯಿಂದ "ಎಲೈ ನಂದಿಕೇಶ್ವರನೇ, ಈಶ್ವರನು ನಿನಗೆ ಅಪ್ಪಣೆಮಾಡಿದ್ದಾನೆ. ಮಾಹೇಶ್ವರವ್ರತವನ್ನು ನನಗೆ ತಿಳಿಸು" ಎಂದು ಕೇಳಿದನು.

೫. ನಂದಿಕೇಶ್ವರನು ಹೇಳಿದನು.—ಎಲೈ ಬ್ರಹ್ಮಜ್ಞನೇ, ಗಮನವಿಟ್ಟು ಕೇಳು. ಮಾಹೇಶ್ವರವ್ರತವನ್ನು ಹೇಳುವೆನು. ಶಿವಚತುರ್ದಶಿಯೆಂಬುದು ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾಗಿರುವುದು.

೬-೭. ಮಾರ್ಗಶೀರ್ಷಮಾಸದ ಶುಕ್ಲಪಕ್ಷ ತ್ರಯೋದಶಿಯ ದಿವಸ ಒಪ್ಪೊತ್ತು ಊಟಮಾಡಿ, ದೇವದೇವನಾದ ಮಹೇಶ್ವರನನ್ನಿಂತು ಪ್ರಾರ್ಥಿಸಬೇಕು. "ನಿನ್ನನ್ನು ನಾನು ಮರೆಹೊಕ್ಕಿರುವೆನು. ಚತುರ್ದಶಿಯಲ್ಲಿ ಉಪವಾಸಮಾಡುವೆನು. ಮಂಗಳಮೂರ್ತಿಯಾದ ನಿನ್ನನ್ನು ಭಕ್ತಿಯಿಂದ ಪೂಜಿಸಿ ಸುವರ್ಣವೃಷಭವನ್ನು ದಾನಕೊಡುವೆನು. ಮಾರನೆಯ ದಿನ ಭೋಜನಮಾಡುವೆನು".

ಏವಂ ನಿಯಮವತ್ಸುಪ್ತ್ವಾ ಪ್ರಾತರುತ್ಥಾಯ ಮಾನವಃ ।
ಕೃತಸ್ನಾನಜಪಃ ಪಶ್ಚಾದುಮಯಾ ಸಹ ಶಂಕರಂ ।
ಪೂಜಯೇತ್ಕಮಲೈಃ ಶುಭ್ರೈರ್ಗಂಧಮಾಲ್ಯಾನುಲೇಪನೈಃ ॥ ೮ ॥

ಪಾದೌ ನಮಃ ಶಿವಾಯೇತಿ ಶಿರಃ ಸರ್ವಾತ್ಮನೇ ನಮಃ ।
ತ್ರಿನೇತ್ರಾಯೇತಿ ನೇತ್ರಾಣಿ ಲಲಾಟಂ ಹರಯೇ ನಮಃ ॥ ೯ ॥

ಮುಖಮಿಂದುಮುಖಾಯೇತಿ ಶ್ರೀಕಂಠಾಯೇತಿ ಕಂಧರಾಂ ।
ಸದ್ಯೋಜಾತಾಯ ಕರ್ಣೌ ತು ವಾಮದೇವಾಯ ವೈ ಭುಜೌ ॥೧೦॥

ಅಘೋರಹೃದಯಾಯೇತಿ ಹೃದಯಂ ಚಾಭಿಪೂಜಯೇತ್ ।
ಸ್ತನೌ ತತ್ಪುರುಷಾಯೇತಿ ತಥೇಶಾನಾಯ ಚೋದರಂ ॥೧೧॥

---

೮. ಯಜಮಾನನು ಹೀಗೆ ಸಂಕಲ್ಪಮಾಡಿಕೊಂಡು ಮಲಗಬೇಕು. ಬೆಳಗ್ಗೆ ಎದ್ದು ಸ್ನಾನವನ್ನೂ ಜಪವನ್ನೂ ಮುಗಿಸಿ, ಪಾರ್ವತೀಸಹಿತನಾದ ಪರಮೇಶ್ವರನನ್ನು ಕಮಲಗಳಿಂದಲೂ, ಶುಭ್ರವರ್ಣದ ಗಂಧಪುಷ್ಪಾದಿಗಳಿಂದಲೂ ಪೂಜಿಸಬೇಕು.

೯. ಶಿವನಿಗೆ ನಮಸ್ಕಾರವೆಂದು ಪಾದಗಳನ್ನೂ, ಸರ್ವಾತ್ಮನಾದವನಿಗೆ ನಮಸ್ಕಾರವೆಂದು ಶಿರಸ್ಸನ್ನೂ, ತ್ರಿನೇತ್ರನಿಗೆ ನಮಸ್ಕಾರವೆಂದು ನೇತ್ರಗಳನ್ನೂ, ಹರಿಗೆ ನಮಸ್ಕಾರವೆಂದು ಹಣೆಯನ್ನೂ ಅರ್ಚಿಸಬೇಕು.

೧೦. ಚಂದ್ರನಂತೆ ಮುಖವುಳ್ಳವನಿಗೆ ನಮಸ್ಕಾರವೆಂದು ಮುಖವನ್ನೂ, ಶ್ರೀಕಂಠನಿಗೆ ನಮಸ್ಕಾರವೆಂದು ಕಂಠವನ್ನೂ, ಸದ್ಯೋಜಾತನಿಗೆ ನಮಸ್ಕಾರವೆಂದು ಕರ್ಣಗಳನ್ನೂ, ವಾಮದೇವನಿಗೆ ನಮಸ್ಕಾರವೆಂದು ಭುಜಗಳನ್ನೂ ಪುಷ್ಪಗಳಿಂದ ಅರ್ಚಿಸಬೇಕು.

೧೧. ಅಘೋರಹೃದಯನಿಗೆ ನಮಸ್ಕಾರವೆಂದು ಹೃದಯದಲ್ಲಿಯೂ, ತತ್ಪುರುಷನಿಗೆ ನಮಸ್ಕಾರವೆಂದು ಸ್ತನಪ್ರದೇಶದಲ್ಲಿಯೂ, ಈಶಾನನಿಗೆ ನಮಸ್ಕಾರವೆಂದು ಉದರದಲ್ಲಿಯೂ ಪುಷ್ಪಗಳನ್ನು ಸಮರ್ಪಿಸಬೇಕು.

ಪಾರ್ಶ್ವೌ ಚಾನಂತಧರ್ಮಾಯ ಜ್ಞಾನಭೂತಾಯ ವೈ ಕಟಿಂ ।
ಊರೂ ಚಾನಂತವೈರಾಗ್ಯಸಿಹ್ಮಾಯೇತ್ಯಭಿಪೂಜಯೇತ್ ॥೧೨॥

ಅನಂತೈಶ್ವರ್ಯನಾಥಾಯ ಜಾನುನೀ ಚಾರ್ಚಯೇದ್ಬುಧಃ ।
ಪ್ರಧಾನಾಯ ನಮೋ ಜಂಘೇ ಗುಲ್ಫೌ ವ್ಯೋಮಾತ್ಮನೇ ನಮಃ ॥೧೩॥

ವ್ಯೋಮಕೇಶಾತ್ಮರೂಪಾಯ ಕೇಶಾನ್ ಪೃಷ್ಠಂ ಚ ಪೂಜಯೇತ್ ।
ನಮಃ ಪುಷ್ಟ್ಯೈ ನಮಸ್ತುಷ್ಟ್ಯೈ ಪಾರ್ವತೀಂ ಚಾಪಿ ಪೂಜಯೇತ್ ॥೧೪॥

ತತಸ್ತು ವೃಷಭಂ ಹೈಮಮುದಕುಂಭಸಮನ್ವಿತಂ ।
ಭಕ್ಷ್ಯೈರ್ನಾನಾವಿಧೈರ್ಯುಕ್ತಂ ಬ್ರಾಹ್ಮಣಾಯ ನಿವೇದಯೇತ್ ॥೧೫॥

---

೧೨. ಅನಂತಧರ್ಮನಿಗೆ ನಮಸ್ಕಾರವೆಂದು ಪಾರ್ಶ್ವಗಳನ್ನೂ, ಜ್ಞಾನಭೂತನಿಗೆ ನಮಸ್ಕಾರವೆಂದು ನಡುವನ್ನೂ, ಅನಂತವೈರಾಗ್ಯಸಿಹ್ಮನಿಗೆ ನಮಸ್ಕಾರವೆಂದು ತೊಡೆಗಳನ್ನೂ ಪೂಜಿಸಬೇಕು.

೧೩. ಅಪರಿಮಿತವಾದ ಐಶ್ವರ್ಯಕ್ಕೆ ಅಧಿಪತಿಯಾದವನಿಗೆ ನಮಸ್ಕಾರವೆಂದು ಮೊಣಕಾಲುಗಳನ್ನೂ, ಆಕಾಶಸ್ವರೂಪನಿಗೆ ನಮಸ್ಕಾರವೆಂದು ಹಿಮ್ಮಡಿಗಳನ್ನೂ ಅರ್ಚಿಸಬೇಕು.

೧೪. ವ್ಯೋಮಕೇಶನಿಗೆ ನಮಸ್ಕಾರವೆಂದು ಕೇಶಗಳನ್ನೂ, ಆತ್ಮರೂಪನಿಗೆ ನಮಸ್ಕಾರವೆಂದು ಪೃಷ್ಠವನ್ನೂ ಪೂಜಿಸಬೇಕು. ಪುಷ್ಟಿಗೆ ನಮಸ್ಕಾರ, ತುಷ್ಟಿಗೆ ನಮಸ್ಕಾರ ಎಂದು ಸ್ತುತಿಸಿ ಪಾರ್ವತಿಯನ್ನೂ ಸಹ ಅರ್ಚಿಸಬೇಕು.

೧೫. ಬಳಿಕ ಜಲಕುಂಭಸಹಿತವಾಗಿ ಸುವರ್ಣವೃಷಭವನ್ನು ಬ್ರಾಹ್ಮಣನಿಗೆ ದಾನಮಾಡಬೇಕು. ಅದು ಬಿಳಿಯ ವಸ್ತ್ರದಿಂದಲೂ, ಪುಷ್ಪಗಳಿಂದಲೂ ಅಲಂಕೃತವಾಗಿ ಬಗೆಬಗೆಯ ಭಕ್ಷ್ಯಗಳೊಡನೆಯೂ ಪಂಚರತ್ನಗಳೊಡನೆಯೂ ಕೂಡಿರಬೇಕು.

**ಪ್ರೀಯತಾಂ ದೇವದೇವೋಽತ್ರ ಸದ್ಯೋಜಾತಃ ಪಿನಾಕಧೃತ್ ।**
**ತತೋ ವಿಪ್ರಾನ್ ಸಮಾಹೂಯ ತರ್ಪಯೇದ್ಭಕ್ತಿತಃ ಶುಭಾನ್ ।**
**ಪೃಷದಾಜ್ಯಂ ಚ ಸಂಪ್ರಾಶ್ಯ ಸ್ವಪೇದ್ಭೂಮಾವುದಙ್ಮುಖಃ ॥೧೬॥**

**ಪಂಚದಶ್ಯಾಂ ಚ ಸಂಪೂಜ್ಯ ವಿಪ್ರಾನ್ ಭುಂಜೀತ ವಾಗ್ಯತಃ ।**
**ತದ್ವತ್ಕೃಷ್ಣಚತುರ್ದಶ್ಯಾಮೇತತ್ಸರ್ವಂ ಸಮಾಚರೇತ್ ॥೧೭॥**

**ಚತುರ್ದಶೀಷು ಸರ್ವಾಸು ಕುರ್ಯಾತ್ಪೂರ್ವವದರ್ಚನಂ ।**
**ಯೇ ತು ಮಾಸೇ ವಿಶೇಷಾಃ ಸ್ಯುಸ್ತಾನ್ನಿಬೋಧ ಕ್ರಮಾದಿಹ ॥೧೮॥**

**ಮಾರ್ಗಶೀರ್ಷಾದಿಮಾಸೇಷು ಕ್ರಮಾದೇತದುದೀರಯೇತ್ ।**
**ಶಂಕರಾಯ ನಮಸ್ತೇಽಸ್ತು ನಮಸ್ತೇ ಕರವೀರಕ ॥೧೯॥**

**ತ್ರ್ಯಂಬಕಾಯ ನಮಸ್ತೇಽಸ್ತು ಮಹೇಶ್ವರಮತಃ ಪರಂ ।**
**ನಮಸ್ತೇಽಸ್ತು ಮಹಾದೇವ ಸ್ಥಾಣವೇ ಚ ತತಃ ಪರಂ ॥೨೦॥**

---

೧೬. ದೇವದೇವನೂ ಪಿನಾಕಧಾರಿಯೂ ಆದ ಪರಮೇಶ್ವರನು ಈ ದಾನದಿಂದ ತೃಪ್ತನಾಗಲೆಂದು ಅನುಸಂಧಾನಮಾಡಬೇಕು. ತರುವಾಯ ಗುಣಶಾಲಿಗಳಾದ ಬ್ರಾಹ್ಮಣರನ್ನು ಕರೆದು, ಅನ್ನವಸ್ತ್ರಾದಿಗಳಿಂದ ಭಕ್ತಿಯೊಡನೆ ತೃಪ್ತಿಪಡಿಸಬೇಕು. ತಾನೂ ಸಹ ಮೊಸರು ಬೆರೆತ ತುಪ್ಪವನ್ನು ಪ್ರಾಶನಮಾಡಿ, ಉತ್ತರಮುಖವಾಗಿ ನೆಲದ ಮೇಲೆ ಮಲಗಬೇಕು.

೧೭. ಹುಣ್ಣಿಮೆಯ ದಿನ ಬ್ರಾಹ್ಮಣರನ್ನು ಪೂಜಿಸಿ ಮೌನದಿಂದ ಭೋಜನ ಮಾಡಬೇಕು. ಹೀಗೆಯೇ ಕೃಷ್ಣಪಕ್ಷದ ಚತುರ್ದಶಿಯ ದಿನವೂ ಇದೆಲ್ಲವನ್ನೂ ನಡೆಸಬೇಕು.

೧೮. ಎಲ್ಲ ಚತುರ್ದಶಿಗಳಲ್ಲಿಯೂ ಮೇಲಿನಂತೆಯೇ ಪೂಜೆಯನ್ನು ಮಾಡಬೇಕು. ಆದರೆ ಒಂದೊಂದು ತಿಂಗಳಿನಲ್ಲಿಯೂ ಗಮನಿಸಬೇಕಾದ ಕೆಲವು ವೈಲಕ್ಷಣ್ಯಗಳುಂಟು. ಅವುಗಳನ್ನು ಕ್ರಮವಾಗಿ ಹೇಳುವೆನು ಕೇಳಿರಿ.

೧೯-೨೧. ಮಾರ್ಗಶೀರ್ಷದಿಂದ ಪ್ರಾರಂಭಿಸಿ ಒಂದೊಂದು ತಿಂಗಳಿನಲ್ಲಿಯೂ ಕ್ರಮವಾಗಿ ಹೀಗೆ ಹೇಳಬೇಕು. ಶಂಕರನೇ, ನಿನಗೆ ನಮಸ್ಕಾರ. ಕರವೀರನೇ ನಿನಗೆ ನಮಸ್ಕಾರ. ಓ ತ್ರ್ಯಂಬಕಾ, ನಿನಗೆ ನಮಸ್ಕಾರ. ಮಹೇಶ್ವರಾ, ನಿನಗೆ

**ನಮಃ ಪಶುಪತೇ ನಾಥ ನಮಸ್ತೇ ಶಂಭವೇ ಪುನಃ ।**
**ನಮಸ್ತೇ ಪರಮಾನಂದ ನಮಃ ಸೋಮಾರ್ಧಧಾರಿಣೇ** ॥೨೧॥
**ನಮೋ ಭೀಮಾಯ ಇತ್ಯೇವಂ ತ್ವಾಮಹಂ ಶರಣಂ ಗತಃ ।**
**ಗೋಮೂತ್ರಂ ಗೋಮಯಂ ಕ್ಷೀರಂ ದಧಿ ಸರ್ಪಿಃ ಕುಶೋದಕಂ** ॥೨೨॥
**ಪಂಚಗವ್ಯಂ ತತೋ ಬಿಲ್ವಂ ಕರ್ಪೂರಂ ಚಾಗುರುಂ ಯವಾಃ ।**
**ತಿಲಾಃ ಕೃಷ್ಣಾಶ್ಚ ವಿಧಿವತ್ಪ್ರಾಶನಂ ಕ್ರಮಶಃ ಸ್ಮೃತಂ ।**
**ಪ್ರತಿಮಾಸಂ ಚತುರ್ದಶ್ಯೋರೇಕೈಕಂ ಪ್ರಾಶನಂ ಸ್ಮೃತಂ** ॥೨೩॥
**ಮಂದಾರಮಾಲತೀಭಿಶ್ಚ ತಥಾ ಧತ್ತೂರಕೈರಪಿ ।**
**ಸಿಂದುವಾರೈರಶೋಕೈಶ್ಚ ಮಲ್ಲಿಕಾಭಿಶ್ಚ ಪಾಟಲೈಃ** ॥೨೪॥
**ಅರ್ಕಪುಷ್ಪೈಃ ಕದಂಬೈಶ್ಚ ಶತಪತ್ರ್ಯಾ ತಥೋತ್ಪಲೈಃ ।**
**ಏಕೈಕೇನ ಚತುರ್ದಶ್ಯೋರರ್ಚಯೇತ್ಪಾರ್ವತೀಪತಿಂ** ॥೨೫॥

---

ನಮಸ್ಕಾರ. ಮಹಾದೇವಾ, ನಿನಗೆ ನಮಸ್ಕಾರ. ಓ ಸ್ಥಾಣೂ, ನಿನಗೆ ನಮಸ್ಕಾರ. ಸ್ವಾಮೀ, ಪಶುಪತೀ, ನಿನಗೆ ನಮಸ್ಕಾರ. ಎಲೈ ಶಂಭೂ, ನಿನಗೆ ನಮಸ್ಕಾರ. ಪರಮಾನಂದಸ್ವರೂಪಾ, ನಿನಗೆ ನಮಸ್ಕಾರ. ಬಾಲಚಂದ್ರಶೇಖರಾ, ನಿನಗೆ ನಮಸ್ಕಾರ. ಓ ಭೀಮಾ, ನಿನಗೆ ನಮಸ್ಕಾರ; ನಿನ್ನನ್ನು ನಾನು ಮರೆಹೊಕ್ಕಿರುವೆನು. ಎಂದು ಒಂದೊಂದು ತಿಂಗಳಿನಲ್ಲೂ ಒಂದೊಂದು ಹೆಸರಿನಿಂದ ಪರಮೇಶ್ವರನನ್ನು ನಮಸ್ಕರಿಸಬೇಕು.

೨೨-೨೩. ಪ್ರತಿಯೊಂದು ತಿಂಗಳಿನ ಎರಡು ಪಕ್ಷಗಳ ಚತುರ್ದಶಿಗಳಲ್ಲಿಯೂ ಈ ಮುಂದಿನ ವಸ್ತುಗಳಲ್ಲೊಂದೊಂದನ್ನು ಕ್ರಮವಾಗಿ ಪ್ರಾಶನಮಾಡಬೇಕು. ಅವು ಯಾವುವೆಂದರೆ:—ಗೋಮೂತ್ರ, ಗೋಮಯ, ಗೋಕ್ಷೀರ, ಮೊಸರು, ತುಪ್ಪ, ದರ್ಭೋದಕ, ಪಂಚಗವ್ಯ, ಬಿಲ್ವಪತ್ರ, ಪಚ್ಚಕರ್ಪೂರ, ಅಗಿಲುಗಂಧ. ಯವಧಾನ್ಯ ಮತ್ತು ಕರಿಯ ಎಳ್ಳು.

೨೪-೨೫. ಮಾರ್ಗಶಿರಮಾಸದಿಂದ ಹಿಡಿದು ಒಂದೊಂದು ತಿಂಗಳ ಎರಡು ಚತುರ್ದಶಿಗಳಲ್ಲಿಯೂ ಈ ಕೆಳಗಿನ ಹೂಗಳಲ್ಲೊಂದರಿಂದ ಕ್ರಮವಾಗಿ ಪಾರ್ವತೀಪತಿಯನ್ನು ಅರ್ಚಿಸಬೇಕು. ಪಾರಿಜಾತ, ಇರುವಂತಿಗೆ, ಉಮ್ಮತ್ತಿ, ಲಕ್ಕಿ, ಅಶೋಕ, ಮಲ್ಲಿಗೆ, ಪಾದರಿ, ಎಕ್ಕ, ಕದಂಬ, ನೂರೆಸಳಿನ ತಾವರೆ ಮತ್ತು ನೈದಿಲೆ.

ಪುನಶ್ಚ ಕಾರ್ತಿಕೇ ಮಾಸೇ ಸಂಪ್ರಾಪ್ತೇ ತರ್ಪಯೇದ್ದ್ವಿಜಾನ್ ।
ಅನ್ನೈರ್ನಾನಾವಿಧೈರ್ಭಕ್ಷ್ಯೈರ್ವಸ್ತ್ರಮಾಲ್ಯವಿಭೂಷಣೈಃ ॥೨೬॥

ಕೃತ್ವಾ ನೀಲವೃಷೋತ್ಸರ್ಗಂ ಶ್ರುತ್ಯುಕ್ತವಿಧಿನಾ ನರಃ ।
ಉಮಾಮಹೇಶ್ವರಂ ಹೈಮಂ ವೃಷಭಂ ಚ ಗವಾ ಸಹ ॥೨೭॥

ಮುಕ್ತಾಫಲಾಷ್ಟಕಯುತಂ ಸಿತನೇತ್ರಪಟಾವೃತಾಂ ।
ಸರ್ವೋಪಸ್ಕರಸಂಯುಕ್ತಾಂ ಶಯ್ಯಾಂ ದದ್ಯಾತ್ಸಕುಂಭಕಾಂ ॥೨೮॥

ತಾಮ್ರಪಾತ್ರೋಪರಿ ಪುನಃ ಶಾಲಿತಂಡುಲಸಂಯುತಂ ।
ಸ್ಥಾಪ್ಯ ವಿಪ್ರಾಯ ಶಾಂತಾಯ ವೇದವ್ರತಪರಾಯ ಚ ॥೨೯॥

ಜ್ಯೇಷ್ಠಸಾಮವಿದೇ ದೇಯಂ ನವಕವ್ರತಿನೇ ಕ್ವಚಿತ್ ।
ಗುಣಜ್ಞೇ ಶ್ರೋತ್ರಿಯೇ ದದ್ಯಾದಾಚಾರ್ಯೇ ತತ್ವವೇದಿನಿ ॥೩೦॥

---

೨೬. ಮತ್ತೆ ಕಾರ್ತಿಕಮಾಸವು ಬರಲು ಬಗೆಬಗೆಯ ಭಕ್ಷ್ಯಭೋಜನಗಳಿಂದಲೂ, ಗಂಧಪುಷ್ಪ ವಸ್ತ್ರಗಳಿಂದಲೂ ಬ್ರಾಹ್ಮಣರನ್ನು ತೃಪ್ತಿಪಡಿಸಬೇಕು.

೨೭-೨೮. ವೇದೋಕ್ತವಿಧಾನದಿಂದ ನೀಲ ವೃಷಭವನ್ನು ಉತ್ಸರ್ಜನ ಮಾಡಿ, ಸುವರ್ಣನಿರ್ಮಿತವಾದ ಉಮಾಮಹೇಶ್ವರ ವಿಗ್ರಹವನ್ನೂ, ಗೋಸಹಿತವಾದ ವೃಷಭವದ್ನೂ ದಾನಮಾಡಬೇಕು. ಇದರೊಡನೆ ಎಂಟು ಮುತ್ತುಗಳು, ಬಿಳಿಯ ನವಿರುಬಟ್ಟೆಯನ್ನು ಹಾಸಿದ, ಸಕಲ ಪರಿಕರಸಹಿತವಾದ ಹಾಸಿಗೆ, ಪೂರ್ಣಕುಂಭ ಇವುಗಳನ್ನೂ ಸಹ ಕೊಡಬೇಕು.

೨೯-೩೦. ಮೇಲೆ ಹೇಳಿದ ಕುಂಭದಲ್ಲಿ ಅಕ್ಕಿಯನ್ನು ತುಂಬಿ, ಅದನ್ನು ತಾಮ್ರದ ಪಾತ್ರೆಯ ಮೇಲಿರಿಸಿ ಶಾಂತನೂ, ವೇದವ್ರತಪರಾಯಣನೂ, ಜ್ಯೇಷ್ಠ ಸಾಮವನ್ನು ಬಲ್ಲವನೂ, ನವವಿಧವ್ರತವನ್ನು ಆಚರಿಸುವವನೂ, ಗುಣಜ್ಞನೂ ಆದ ಶ್ರೋತ್ರಿಯನಿಗೆ ದಾನಮಾಡಬೇಕು. ಒಂದು ವೇಳೆ ತತ್ವಜ್ಞಾನಿಯಾದ ಆಚಾರ್ಯನಿಗಾದರೂ ಕೊಡಬಹುದು.

ಅವ್ಯಂಗಾಂಗಾಯ ಸೌಮ್ಯಾಯ ಸದಾ ಕಲ್ಯಾಣಕಾರಿಣೇ।
ಸಪತ್ನೀಕಾಯ ಸಂಪೂಜ್ಯ ವಸ್ತ್ರಮಾಲ್ಯವಿಭೂಷಣೈಃ ॥೩೧॥

ಗುರೌ ಸತಿ ಗುರೋರ್ದೇಯಂ ತದಭಾವೇ ದ್ವಿಜಾತಯೇ।
ನ ವಿತ್ತಶಾಠ್ಯಂ ಕುರ್ವೀತ ಕುರ್ವನ್ ದೋಷಾತ್ಪತತ್ಯಧಃ ॥೩೨॥

ಅನೇನ ವಿಧಿನಾ ಯಸ್ತು ಕುರ್ಯಾಚ್ಛಿವಚತುರ್ದಶೀಂ।
ಸೋಽಶ್ವಮೇಧಸಹಸ್ರಸ್ಯ ಫಲಂ ಪ್ರಾಪ್ನೋತಿ ಮಾನವಃ ॥೩೩॥

ಬ್ರಹ್ಮಹತ್ಯಾದಿಕಂ ಕಿಂಚಿದ್ಯದತ್ರಾಮುತ್ರ ವಾ ಕೃತಂ।
ಪಿತೃಭಿರ್ಭ್ರಾತೃಭಿರ್ವಾಪಿ ತತ್ಸರ್ವಂ ನಾಶಮಾಪ್ನುಯಾತ್ ॥೩೪॥

ದೀರ್ಘಾಯುರಾರೋಗ್ಯಕುಲಾನ್ನವೃದ್ಧಿ
ರತ್ರಾಕ್ಷಯಾಽಮುತ್ರ ಚತುರ್ಭುಜತ್ವಂ।

---

೩೧. ದಾನತೆಗೆದುಕೊಳ್ಳುವ ಬ್ರಾಹ್ಮಣನು ಅಂಗಹೀನನಲ್ಲದವನೂ, ಸೌಮ್ಯನೂ, ಸದಾ ಮಂಗಳಕಾರಿಯೂ ಆಗಿರಬೇಕು. ದಾನಕೊಡುವ ಮೊದಲು ಆತನನ್ನೂ ಆತನ ಪತ್ನಿಯನ್ನೂ ಪುಷ್ಪವಸ್ತ್ರಾಭರಣಗಳಿಂದ ಪೂಜಿಸಬೇಕು.

೩೨. ಆಚಾರ್ಯನಿದ್ದರೆ ಆತನಿಗೆ, ಇಲ್ಲದಿದ್ದರೆ ಹಿಂದೆ ಹೇಳಿದಂತೆ ಯೋಗ್ಯನಾದ ಬ್ರಾಹ್ಮಣನಿಗೆ ಕೊಡಬೇಕು. ದ್ರವ್ಯದ ವಿಷಯದಲ್ಲಿ ಕಾರ್ಪಣ್ಯವನ್ನು ಮಾಡಬಾರದು ; ಮಾಡಿದರೆ ದೋಷಕ್ಕೆ ಗುರಿಯಾಗಿ ಪತಿತನಾಗುವನು.

೩೩. ಈ ವಿಧಿಯಿಂದ ಶಿವಚತುರ್ದಶೀವ್ರತವನ್ನು ಮಾಡುವ ಮನಷ್ಯನಿಗೆ ಸಾವಿರ ಅಶ್ವಮೇಧಯಾಗಗಳ ಫಲವು ಬರುವುದು.

೩೪. ಬ್ರಹ್ಮಹತ್ಯ ಮೊದಲಾದ ಪಾಪವೇನಾದರೂ ಇದ್ದರೆ—ಈ ಜನ್ಮದಲ್ಲಾಗಿರಲಿ, ಬೇರೆ ಜನ್ಮದಲ್ಲಾಗಿರಲಿ ; ಹೆತ್ತವರು ಮಾಡಿರಲಿ, ಒಡಹುಟ್ಟಿದವರು ಮಾಡಿರಲಿ.— ಅದೆಲ್ಲವೂ ನಾಶವಾಗುವುದು.

೩೫. ಈ ವ್ರತವನ್ನು ಮಾಡಿದವನಿಗೆ ಈ ಲೋಕದಲ್ಲಿ ದೀರ್ಘಾಯುಸ್ಸು, ಆರೋಗ್ಯ, ವಂಶಾಭಿವೃದ್ಧಿ, ಅನ್ನಾದಿಭೋಗಗಳು ಇವೆಲ್ಲವೂ ಅಪರಿಮಿತವಾಗಿ ಹೆಚ್ಚುವುವು. ಪರಲೋಕದಲ್ಲಿ ದೇವತ್ವವು ಪ್ರಾಪ್ತವಾಗಿ ನಾಲ್ಕು ತೋಳುಗಳು

ಗಣಾಧಿಪತ್ಯಂ ದಿವಿ ಕಲ್ಪಕೋಟಿ
ಶತಾನ್ಯುಷಿತ್ವಾ ಪದಮೇತಿ ಶಂಭೋಃ ॥೩೫॥

ನ ಬೃಹಸ್ಪತಿರಪ್ಯನಂತಮಸ್ಯಾಃ
ಫಲಮಿಂದ್ರೋ ನ ಪಿತಾಮಹೋಽಪಿ ವಕ್ತುಂ ।
ನ ಚ ಸಿದ್ಧಗಣೋಽಪ್ಯಲಂ ನ ಚಾಹಂ
ಯದಿ ಜಿಹ್ವಾಯುತಕೋಟಿಯೋಽಪಿ ವಕ್ತ್ರೇ ॥೩೬॥

ಭವತ್ಯಮರವಲ್ಲಭಃ ಪಠತಿ ಯಃ ಸ್ಮರೇದ್ವಾ ಸದಾ
ಶೃಣೋತ್ಯಪಿ ವಿಮತ್ಸರಃ ಸಕಲಪಾಪನಿರ್ಮೋಚನೀಂ ।
ಇಮಾಂ ಶಿವಚತುರ್ದಶೀಮಮರಕಾಮಿನೀಕೋಟಯಃ
ಸ್ತುವಂತಿ ತಮನಿಂದಿತಂ ಕಿಮು ಸಮಾಚರೇದ್ಯಃ ಸದಾ ॥೩೭॥

---

ಮೂಡುವುವು. ಗಣಗಳ ಆಧಿಪತ್ಯವು ದೊರಕುವುದು. ಆತನು ಅನಂತ ಕಲ್ಪಗಳ ಕಾಲ ಸ್ವರ್ಗದಲ್ಲಿ ವಾಸಿಸಿ ಈಶ್ವರನ ಸಾನ್ನಿಧ್ಯವನ್ನು ಸೇರುವನು.

೩೬. ಈ ಶಿವಚತುರ್ದಶೀವ್ರತದಿಂದ ಬರುವ ಫಲವನ್ನು ಹೇಳಲು ಬೃಹಸ್ಪತಿಗಾಗಲಿ, ಸಾಕ್ಷಾಚ್ಚತುರ್ಮುಖನಿಗಾಗಲಿ ಶಕ್ತಿಯಿಲ್ಲ. ಸಿದ್ಧರ ಕೈಯಲ್ಲಿ ಸಹ ಆಗದು. ಕೊನೆಗೆ ನಾನೂ ಕೂಡ ಅಶಕ್ತನೇ ಸರಿ. ಒಂದು ವೇಳೆ ಬಾಯಲ್ಲಿ ಕೋಟಿ ಗಟ್ಟಲೆಯಾಗಿ ನಾಲಗೆಗಳಿದ್ದುವೆಂದು ತಿಳಿ; ಆಗಲೂ ಸಹ ಇದು ಅಸಾಧ್ಯವಾದ ಸಂಗತಿ.

೩೭. ಸಕಲ ಪಾಪನಾಶಕವಾದ ಈ ಶಿವಚತುರ್ದಶೀವ್ರತದ ವಿಧಾನವನ್ನು ಪಠಿಸುವ, ಇಲ್ಲವೇ ಸ್ಮರಿಸುವ ಮನುಷ್ಯನು ಅಮರೇಂದ್ರನ ಪದವಿಯನ್ನು ಪಡೆಯುವನು. ಇದನ್ನು ನಿರ್ಮಲವಾದ ಮನಸ್ಸಿನಿಂದ ಕೇಳುವಾತನನ್ನು ದೇವತಾಸ್ತ್ರೀಯರು ಕೋಟಿಸಂಖ್ಯೆಯಲ್ಲಿ ಬಂದು ಸ್ತುತಿಸುವರು. ಅವನು ನಿರ್ದೋಷಿಯೆನಿಸುವನು. ಹೀಗಿರುವಾಗ ಈ ವ್ರತವನ್ನು ಎಡೆಬಿಡದೆ ಆಚರಿಸುವವನ ವಿಚಾರದಲ್ಲೇನು ಹೇಳಬೇಕು.

ಯಾ ವಾಽಥ ನಾರೀ ಕುರುತೇಽತಿಭಕ್ತ್ಯಾ
ಭರ್ತಾರಮಾಪೃಚ್ಛ್ಯ ಸುತಾನ್ ಗುರೂನ್ವಾ।
ಸಾಽಪಿ ಪ್ರಸಾದಾತ್ಪರಮೇಶ್ವರಸ್ಯ
ಪರಂ ಪದಂ ಯಾತಿ ಪಿನಾಕಪಾಣೇಃ ॥೩೮॥

ಇತಿ ಶ್ರೀಮತ್ಸ್ಯೇ ಮಹಾಪುರಾಣೇ ಶಿವಚತುರ್ದಶೀವ್ರತಂ
ನಾಮ ಪಂಚನವತಿತಮೋಽಧ್ಯಾಯಃ

---

೩೮. ಪತಿಯ, ಮಕ್ಕಳ, ಇಲ್ಲವೇ ಗುರುಗಳ ಒಪ್ಪಿಗೆಯನ್ನು ಪಡೆದು ಬಹು ಭಕ್ತಿಯಿಂದ ಈ ವ್ರತವನ್ನು ಮಾಡುವ ನಾರಿಯೂ ಸಹ ಪರಮೇಶ್ವರನ ಪ್ರಸಾದ ದಿಂದ ಕೈಲಾಸವನ್ನು ಸೇರುವಳು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಶಿವಚತುರ್ದಶಿಯೆಂಬ ಮಾಹೇಶ್ವರ ವ್ರತದ ವಿಧಿಯು ಹೇಳಲ್ಪಟ್ಟಿದೆ.

ಮಾರ್ಗಶೀರ್ಷಮಾಸದ ಶುಕ್ಲಚತುರ್ದಶಿಯ ದಿನ ಪಾರ್ವತೀ ಸಮೇತನಾದ ಪರಮೇಶ್ವರನನ್ನು ಶಾಸ್ತ್ರೋಕ್ತ ಕ್ರಮದಿಂದ ಪೂಜಿಸಬೇಕು. ಬಳಿಕ ಕೃಷ್ಣಪಕ್ಷದ ಚತುರ್ದಶಿಯಲ್ಲಿಯೂ ಹೀಗೆಯೇ ಅರ್ಚಿಸಬೇಕು. ಪುಷ್ಪ, ಪ್ರಾಶನ ಮತ್ತು ಪ್ರಾರ್ಥನೆ ಇವು ಒಂದೊಂದು ತಿಂಗಳಿನಲ್ಲೂ ವ್ಯತ್ಯಾಸವಾಗುತ್ತಿರುವುವು. ವರ್ಷಾಂತದಲ್ಲಿ ಉಮಾಮಹೇಶ್ವರನ ಸುವರ್ಣಪ್ರತಿಮೆಯನ್ನೂ, ಸಕಲಪರಿಕರ ಸಹಿತವಾದ ಶಯನವನ್ನೂ, ಗೋಸಮೇತವಾದ ವೃಷಭವನ್ನೂ ದಾನಮಾಡಿ ಬ್ರಾಹ್ಮಣರ ಪೂಜೆಯನ್ನು ನಡೆಸಬೇಕು.

ಇದರಿಂದ ಬ್ರಹ್ಮಹತ್ಯಾದಿ ಸಕಲ ಪಾತಕಗಳೂ ಪರಿಹಾರವಾಗುವುವು. ಪರಮೇಶ್ವರನ ಸಾನ್ನಿಧ್ಯವು ಲಭಿಸುವುದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಶಿವಚತುರ್ದಶೀವ್ರತವೆಂಬ
ತೊಂಬತ್ತೈದನೆಯ ಅಧ್ಯಾಯವು ಮುಗಿದುದು.

## ಅಥ ಷಣ್ಣವತಿತಮೋಽಧ್ಯಾಯಃ

॥ ನಂದಿಕೇಶ್ವರ ಉವಾಚ ॥

ಫಲತ್ಯಾಗಸ್ಯ ಮಾಹಾತ್ಮ್ಯಂ ಯದ್ಭವೇಚ್ಛೃಣು ನಾರದ।
ಯದಕ್ಷಯಂ ಪರಂ ಲೋಕೇ ಸರ್ವಕಾಮಫಲಪ್ರದಂ ॥ ೧ ॥
ಮಾರ್ಗಶೀರ್ಷೇ ಶುಭೇ ಮಾಸಿ ತೃತೀಯಾಯಾಂ ಮುನೇ ವ್ರತಂ ।
ದ್ವಾದಶ್ಯಾಮಥವಾಷ್ಟಮ್ಯಾಂ ಚತುರ್ದಶ್ಯಾಮಥಾಪಿ ವಾ ।
ಆರಭೇಚ್ಛುಕ್ಲಪಕ್ಷಸ್ಯ ಕೃತ್ವಾ ಬ್ರಾಹ್ಮಣವಾಚನಂ ॥ ೨ ॥
ಅನ್ಯೇಷ್ವಪಿ ಹಿ ಮಾಸೇಷು ಪುಣ್ಯೇಷು ಮುನಿಸತ್ತಮ
ಸದಕ್ಷಿಣಂ ಪಾಯಸೇನ ಭೋಜಯೇಚ್ಛಕ್ತಿತೋ ದ್ವಿಜಾನ್ ॥ ೩ ॥
ಅಷ್ಟಾದಶಾನಾಂ ಧಾನ್ಯಾನಾಮನ್ಯಚ್ಚ ಫಲಮೂಲಕಂ।
ವರ್ಜಯೇದಬ್ದಮೇಕಂ ತು ಋತೇ ಔಷಧಕಾರಣಂ।
ಸವೃಷಂ ಕಾಂಚನಂ ರುದ್ರಂ ಧರ್ಮರಾಜಂ ಚ ಕಾರಯೇತ್ ॥ ೪ ॥

---

೧. ನಂದಿಕೇಶ್ವರನು ಹೇಳಿದನು.—ಫಲದಾನದ ಮಾಹಾತ್ಮ್ಯವೇನೆಂಬುದನ್ನು ಹೇಳುವೆನು ಕೇಳು. ಓ ನಾರದಾ, ಅದು ಅಕ್ಷಯಪಲವನ್ನು ಕೊಡುವ ಅತಿಶ್ರೇಷ್ಠವಾದ ವ್ರತವು. ಸಕಲೇಷ್ಟಾರ್ಥಗಳನ್ನೂ ಕೈಗೂಡಿಸುವಂತಹುದು.

೨. ಶುಭಕರವಾದ ಮಾರ್ಗಶೀರ್ಷಮಾಸದಲ್ಲಿ ಶುಕ್ಲಪಕ್ಷದ ತೃತೀಯೆ, ದ್ವಾದಶಿ, ಅಷ್ಟಮಿ ಅಥವಾ ಚತುರ್ದಶಿಯ ದಿನ ಬ್ರಾಹ್ಮಣಾನುಗ್ರಹವನ್ನು ಪಡೆದು ಈ ವ್ರತವನ್ನು ಆರಂಭಿಸಬೇಕು.

೩. ಎಲೈ ಮುನಿಶ್ರೇಷ್ಠನೇ, ಪುಣ್ಯಕರವಾದ ಮಿಕ್ಕ ತಿಂಗಳಲ್ಲೂ ಸಹ ಪಾಯಸದ ಊಟದಿಂದ ಬ್ರಾಹ್ಮಣರನ್ನು ತೃಪ್ತಿಪಡಿಸಿ, ತನ್ನ ಶಕ್ತಿಗೆ ತಕ್ಕಂತೆ ದಕ್ಷಿಣೆಯನ್ನು ಕೊಡಬೇಕು.

೪. ಹದಿನೆಂಟು ಬಗೆಯ ಧಾನ್ಯಗಳಲ್ಲಿ ಯಾವುದಾದರೂ ಒಂದನ್ನೂ, ಹಾಗೆಯೇ ಹಣ್ಣು, ಗೆಣಸು ಇವುಗಳಲ್ಲೊಂದೊಂದನ್ನೂ ಒಂದು ವರ್ಷಕಾಲ ಸೇವಿಸದೆ ಇರಬೇಕು. ಆದರೆ ಔಷಧಕ್ಕೆ ಬೇಕಾದುದನ್ನು ಮಾತ್ರ ಬಿಡಬಾರದು. ವೃಷಭಾರೂಢನಾದ ಪರಮೇಶ್ವರನ ಮತ್ತು ಯಮಧರ್ಮರಾಜನ ಸುವರ್ಣ ಪ್ರತಿಮೆಗಳನ್ನು ಮಾಡಿಸಬೇಕು.

ಕೂಷ್ಮಾಂಡಂ ಮಾತುಲಿಂಗಂ ಚ ವಾರ್ತಾಕಂ ಪನಸಂ ತಥಾ ।
ಆಮ್ರಾತಕಂ ಕಪಿತ್ಥಾನಿ ಕಲಿಂಗಮಥ ವಾಲುಕಂ ॥ ೫ ॥

ಶ್ರೀಫಲಾಶ್ವತ್ಥಬದರಂ ಜಂಬೀರಂ ಕದಲೀಫಲಂ ।
ಕಾಶ್ಮರಂ ದಾಡಿಮಂ ಶಕ್ತ್ಯಾ ಕಾಲಧೌತಾನಿ ಷೋಡಶ ॥ ೬ ॥

ಮೂಲಕಾಮಲಕಂ ಜಂಬೂತಿಂತಿಡೀಕರಮರ್ದಕಂ ।
ಕಂಕೋಲ್ಲೈಲಾಕತುಂಡೀರಕರೀರಕುಟಜಂ ಶಮೀ ॥ ೭ ॥

ಔದುಂಬರಂ ನಾರಿಕೇಲಂ ದ್ರಾಕ್ಷಾಥ ಬೃಹತೀದ್ವಯಂ ।
ರೌಪ್ಯಾಣಿ ಕಾರಯೇಚ್ಛಕ್ತ್ಯಾ ಫಲಾನೀಮಾನಿ ಷೋಡಶ ॥ ೮ ॥

ತಾಮ್ರಂ ಕಾಲಫಲಂ ಕುರ್ಯಾದಗಸ್ತಿಫಲಮೇವ ಚ ।
ಪಿಂಡಾರಕಾಶ್ಮರ್ಯಫಲಂ ತಥಾ ಸೂರಣಕಂದಕಂ ॥ ೯ ॥

ರಕ್ತಾಲುಕಾಕಂದಕಂ ಚ ಕನಕಾಹ್ವಂ ಚ ಚಿರ್ಭಟಂ ।
ಚಿತ್ರವಲ್ಲೀಫಲಂ ತದ್ವತ್ಕೂಟಶಾಲ್ಮಲಿಜಂ ಫಲಂ ॥೧೦॥

---

೫-೬. ಬೂದಿಗುಂಬಳ, ಮಾದಲ, ಬದನೆ, ಹಲಸು ಅಂಬಟೆ, ಬೇಲ, ಕಮರಿಕೆ, ಕಿರಿಗುಂಬಳ, ಬಿಲ್ವ, ಅರಳಿ, ಎಲಚಿ, ನಿಂಬೆ, ಬಾಳೆ, ಕುಂಬಳ, ದಾಳಿಂಬೆ ಈ ಹದಿನಾರು ಜಾತಿಯ ಹಣ್ಣುಗಳನ್ನೂ ತನ್ನ ಶಕ್ತ್ಯನುಸಾರವಾಗಿ ಚಿನ್ನದಿಂದ ಮಾಡಿಸಬೇಕು.

೭-೮. ಮೂಲಂಗಿ, ನೆಲ್ಲಿ, ನೇರಿಳೆ, ಹುಣಿಸೆ, ಕಮರಿಕೆ, ಕಂಕೋಲ, ಏಲಕ್ಕಿ, ತುಂಡೀರ, ಬಿದಿರುಕಳಲೆ, ಬೆಟ್ಟದಾವರೆ, ಬನ್ನಿ, ಅತ್ತಿ, ತೆಂಗು, ದ್ರಾಕ್ಷಿ, ಹೆಗ್ಗುಳ್ಳ, ಕಿರಿಗುಳ್ಳ, ಈ ಹದಿನಾರು ಬಗೆಯ ಫಲಗಳನ್ನೂ ತನ್ನ ಯೋಗ್ಯತೆಗೆ ತಕ್ಕಂತೆ ಬೆಳ್ಳಿಯಿಂದ ಮಾಡಿಸಬೇಕು.

೯-೧೧. ತಾಲಫಲ, ಅಗಸ್ತಿಫಲ, ಹುಳಿಬೇಲ, ಶಿವನೀಕಾಯಿ, ಚೂರ್ಣ ಗೆಡ್ಡೆ, ರಕ್ತಾಲುವೆಂಬ ಗೆಡ್ಡೆ, ಉಮ್ಮತ್ತಿ ಕಾಯಿ, ಕಕ್ಕರಿಕೆಕಾಯಿ, ಏರುವಂಗದ ಕಾಯಿ, ಬೂರುಗದ ಕಾಯಿ, ಮಾವಿನ ಕಾಯಿ, ಅವರೆ, ಹಿಪ್ಪೆಯ ಕಾಯಿ, ಆಲದ

ಆಮ್ರನಿಷ್ಪಾವಮಧುಕವಟಮುದ್ಗಪಟೋಲಕಂ ।
ತಾಮ್ರಾಣಿ ಷೋಡಶೈತಾನಿ ಕಾರಯೇಚ್ಛಕ್ತಿತೋ ನರಃ ॥೧೧॥

ಉದಕುಂಭದ್ವಯಂ ಕುರ್ಯಾದ್ಧಾನ್ಯೋಪರಿ ಸವಸ್ತ್ರಕಂ ।
ತತಶ್ಚ ಕಾರಯೇಚ್ಛಯ್ಯಾಂ ಯಥೋಪರಿ ಸುವಾಸಸೀ ॥೧೨॥

ಭಕ್ಷ್ಯಪಾತ್ರತ್ರಯೋಪೇತಂ ಯಮರುದ್ರವೃಷಾನ್ವಿತಂ ।
ಧೇನ್ವಾ ಸಹೈವ ಶಾಂತಾಯ ವಿಪ್ರಾಯಾಥ ಕುಟುಂಬಿನೇ ।
ಸಪತ್ನೀಕಾಯ ಸಂಪೂಜ್ಯ ಪುಣ್ಯೇಽಹ್ನಿ ವಿನಿವೇದಯೇತ್ ॥೧೩॥

ಯಥಾ ಫಲೇಷು ಸರ್ವೇಷು ವಸಂತ್ಯಮರಕೋಟಯಃ ।
ತಥಾ ಸರ್ವಫಲತ್ಯಾಗವ್ರತಾದ್ಭಕ್ತಿಃ ಶಿವೇಽಸ್ತು ಮೇ ॥೧೪॥

ಯಥಾ ಶಿವಶ್ಚ ಧರ್ಮಶ್ಚ ಸದಾನಂತಫಲಪ್ರದೌ ।
ತದ್ಯುಕ್ತಫಲದಾನೇನ ತೌ ಸ್ಯಾತಾಂ ಮೇ ವರಪ್ರದೌ ॥೧೫॥

---

ಹಣ್ಣು, ಹೆಸರು, ಪಡವಲಕಾಯಿ, ಈ ಹದಿನಾರನ್ನೂ ಯಥಾಶಕ್ತಿ ತಾಮ್ರದಿಂದ ಮಾಡಿಸಬೇಕು.

೧೨. ಧಾನ್ಯದ ಮೇಲೆ ಜಲಪೂರ್ಣವಾದ ಎರಡು ಕಲಶಗಳನ್ನು ಇರಿಸಿ ವಸ್ತ್ರದಿಂದ ಅಲಂಕರಿಸಬೇಕು. ಹಿಂದೆ ಹೇಳಿರುವಂತೆ ಸಕಲಪರಿಕರಸಹಿತವಾದ ಹಾಸಿಗೆಯನ್ನೂ, ಒಂದು ಜೊತೆ ಪಂಚೆಯನ್ನೂ ಸಿದ್ಧಪಡಿಸಬೇಕು.

೧೩. ಭಕ್ಷ್ಯಗಳನ್ನು ತುಂಬಿದ ಮೂರುಪಾತ್ರೆಗಳು, ಯಮ, ರುದ್ರ, ವೃಷಭ ಇವರ ಪ್ರತಿಮೆಗಳು ಇವೆಲ್ಲವನ್ನೂ ಶಾಂತನೂ, ಕುಟುಂಬಿಯೂ, ಸಪತ್ನೀಕನೂ ಆದ ಬ್ರಾಹ್ಮಣನಿಗೆ ಶುಭದಿವಸದಲ್ಲಿ ಸತ್ಕಾರಪೂರ್ವಕವಾಗಿ ದಾನಮಾಡಬೇಕು. ಇದರ ಸಂಗಡಲೇ ಕರೆಯುವ ಹಸುವನ್ನೂ ಸಹ ಕೊಡಬೇಕು.

೧೪. "ಎಲ್ಲ ಫಲಗಳಲ್ಲಿಯೂ ಕೋಟಿ ಸಂಖ್ಯೆಯ ದೇವತೆಗಳು ವಾಸಮಾಡುತ್ತಾರೆ. ಈ ಸರ್ವ ಫಲತ್ಯಾಗವೆಂಬ ವ್ರತದಿಂದ ಈಶ್ವರನಲ್ಲಿ ನನಗೆ ಭಕ್ತಿಯು ಸ್ಥಿರವಾಗಿ ನಿಲ್ಲಲಿ.

೧೫. ಪರಮೇಶ್ವರನೂ, ಯಮಧರ್ಮರಾಜನೂ ಯಾವಾಗಲೂ ಅನಂತವಾದ ಫಲವನ್ನು ಕೊಡತಕ್ಕವರು. ಅವರ ಪ್ರತಿಮೆಗಳ ಸಹಿತವಾಗಿ ನಾನು ಮಾಡಿದ ಈ ಫಲದಾನದಿಂದ ಅವರಿಬ್ಬರೂ ತೃಪ್ತರಾಗಿ ನನಗೆ ವರವನ್ನು ಕರುಣಿಸಲಿ.

ಯಥಾ ಫಲಾನ್ಯನಂತಾನಿ ಶಿವಭಕ್ತೇಷು ಸರ್ವದಾ ।
ತಥಾನಂತಫಲಾವಾಪ್ತಿರಸ್ತು ಜನ್ಮನಿ ಜನ್ಮನಿ ॥೧೬॥

ಯಥಾ ಭೇದಂ ನ ಪಶ್ಯಾಮಿ ಶಿವವಿಷ್ಣ್ವರ್ಕಪದ್ಮಜಾನ್ ।
ತಥಾ ಮಮಾಸ್ತು ವಿಶ್ವಾತ್ಮಾ ಶಂಕರಃ ಶಂಕರಃ ಸದಾ ॥೧೭॥

ಇತಿ ದತ್ವಾ ಚ ತತ್ಸರ್ವಮಲಂಕೃತ್ಯ ಚ ಭೂಷಣೈಃ ।
ಶಕ್ತಿಶ್ಚೇಚ್ಛಯನಂ ದದ್ಯಾತ್ಸರ್ವೋಪಸ್ಕರಸಂಯುತಂ ॥೧೮॥

ಅಶಕ್ತಸ್ತು ಫಲಾನ್ಯೇವ ಯಥೋಕ್ತಾನಿ ವಿಧಾನತಃ ।
ತಥೋದಕುಂಭಸಂಯುಕ್ತೌ ಶಿವಧರ್ಮೌ ಚ ಕಾಂಚನೌ ॥೧೯॥

ವಿಪ್ರಾಯ ದತ್ವಾ ಭುಂಜೀತ ವಾಗ್ಯತಸ್ತೈಲವರ್ಜಿತಂ ।
ಅನ್ಯಾನಪಿ ಯಥಾಶಕ್ತ್ಯಾ ಭೋಜಯೇಚ್ಛಕ್ತಿತೋ ದ್ವಿಜಾನ್ ॥೨೦॥

---

೧೬. ಈಶ್ವರನ ಭಕ್ತರಿಗೆ ಯಾವಾಗಲೂ ಅಪರಿಮಿತವಾದ ಫಲಗಳು ಒದಗುವುವು. ಹಾಗೆಯೇ ನನಗೂ ಒಂದೊಂದು ಜನ್ಮದಲ್ಲಿಯೂ ಅನಂತವಾದ ಫಲಗಳು ಲಭಿಸಲಿ.

೧೭. ಈಶ್ವರ, ವಿಷ್ಣು, ಸೂರ್ಯ, ಬ್ರಹ್ಮ ಇವರಲ್ಲಿ ನನಗೆ ಭೇದಬುದ್ಧಿಯಿಲ್ಲ. ಆದಕಾರಣ ಸರ್ವರೂಪಿಯಾದ ಶಂಕರನು ಯಾವಾಗಲೂ ನನಗೆ ಶುಭವನ್ನು ಕೊಡಲಿ."

೧೮. ಹೀಗೆ ಹೇಳಿ, ಬ್ರಾಹ್ಮಣ ದಂಪತಿಗಳನ್ನು ಭೂಷಣಾದಿಗಳಿಂದ ಅಲಂಕರಿಸಿ ಇದೆಲ್ಲವನ್ನೂ ದಾನಮಾಡಬೇಕು. ಶಕ್ತಿಯಿದ್ದರೆ ಸಕಲೋಪಸ್ಕರಸಹಿತವಾಗಿ ಶಯ್ಯಾದಾನವನ್ನೂ ಮಾಡಬಹುದು.

೧೯-೨೦. ದ್ರವ್ಯಾನುಕೂಲ್ಯವಿಲ್ಲದವನು ಮೇಲೆ ಹೇಳಿದ ಹಣ್ಣುಗಳನ್ನೇ ಪ್ರತ್ಯಕ್ಷವಾಗಿ ಶಾಸ್ತ್ರವಿಧಿಯಿಂದ ದಾನಮಾಡಬಹುದು. ಈಶ್ವರನ ಮತ್ತು ಧರ್ಮರಾಜನ ಸುವರ್ಣಪ್ರತಿಮೆಗಳನ್ನು ಜಲಕುಂಭದೊಡನೆ ಬ್ರಾಹ್ಮಣನಿಗೆ ಕೊಡಬೇಕು. ಬಳಿಕ ಎಣ್ಣೆಯನ್ನು ಉಪಯೋಗಿಸದೆ ಮೌನವ್ರತದಿಂದ ತಾನು ಭೋಜನಮಾಡುವುದಲ್ಲದೆ, ಶಕ್ತಿಗೆ ತಕ್ಕಂತೆ ಬ್ರಾಹ್ಮಣರಿಗೂ ಭೋಜನವನ್ನು ಮಾಡಿಸಬೇಕು.

ಏತದ್ಭಾಗವತಾನಾಂ ತು ಸೌರವೈಷ್ಣವಯೋಗಿನಾಂ ।
ಶುಭಂ ಸರ್ವಫಲತ್ಯಾಗವ್ರತಂ ವೇದವಿದೋ ವಿದುಃ ॥೨೧॥

ನಾರೀಭಿಶ್ಚ ಯಥಾಶಕ್ತ್ಯಾ ಕರ್ತವ್ಯಂ ದ್ವಿಜಪುಂಗವ ।
ಏತಸ್ಮಾನ್ನಾಪರಂ ಕಿಂಚಿದಿಹ ಲೋಕೇ ಪರತ್ರ ಚ ।
ವ್ರತಮಸ್ತಿ ಮುನಿಶ್ರೇಷ್ಠ ಯದನಂತಫಲಪ್ರದಂ ॥೨೨॥

ಸೌವರ್ಣರೌಪ್ಯತಾಮ್ರೇಷು ಯಾವಂತಃ ಪರಮಾಣವಃ ।
ಭವಂತಿ ಚೂರ್ಣ್ಯಮಾನೇಷು ಫಲೇಷು ಮುನಿಸತ್ತಮ ।
ತಾವದ್ಯುಗಸಹಸ್ರಾಣಿ ರುದ್ರಲೋಕೇ ಮಹೀಯತೇ ॥೨೩॥

ಏತತ್ಸಮಸ್ತಕಲುಷಾಪಹರಂ ಜನಾನಾ
ಮಾಜೀವನಾಯ ಮನುಜೇಷು ಚ ಸರ್ವದಾ ಸ್ಯಾತ್ ।
ಜನ್ಮಾಂತರೇಷ್ವಪಿ ನ ಪುತ್ರವಿಯೋಗದುಃಖ
ಮಾಪ್ನೋತಿ ಧಾಮ ಚ ಪುರಂದರಲೋಕಜುಷ್ಟಂ ॥೨೪॥

---

೨೧. ಭಾಗವತರು, ಸೂರ್ಯಭಕ್ತರು, ವೈಷ್ಣವರು, ಯೋಗಿಗಳು ಇವರೆಲ್ಲರಿಗೂ ಈ ಸರ್ವಫಲತ್ಯಾಗವೆಂಬ ವ್ರತವು ಶುಭಪ್ರದವಾದುದೆಂದು ವೇದಜ್ಞರು ಭಾವಿಸುತ್ತಾರೆ.

೨೨. ಬ್ರಾಹ್ಮಣೋತ್ತಮನಾದ ಓ ನಾರದಾ, ಸ್ತ್ರೀಯರೂ ಸಹ ಇದನ್ನು ತಮ್ಮ ಶಕ್ತಿಗನುಸಾರವಾಗಿ ನಡೆಸಬೇಕು. ಎಲೈ ಮುನಿಶ್ರೇಷ್ಠನೇ, ಈ ಲೋಕದಲ್ಲಿಯೂ ಬೇರೆ ಲೋಕಗಳಲ್ಲಿಯೂ ಇದಕ್ಕಿಂತ ಅತಿಶಯವಾದ ಫಲವನ್ನು ಕೊಡಬಲ್ಲ ಮತ್ತೊಂದು ವ್ರತವಿಲ್ಲ.

೨೩. ಓ ಋಷಿವರ್ಯಾ, ಚಿನ್ನ, ಬೆಳ್ಳಿ ಮತ್ತು ತಾಮ್ರದಿಂದ ಮಾಡಿಸಿ ದಾನವಾಗಿ ಕೊಟ್ಟ ಆ ಹಣ್ಣುಗಳನ್ನು ಪುಡಿಮಾಡಿದರೆ ಎಷ್ಟು ಪರಮಾಣುಗಳಾಗುವುವೋ ಅಷ್ಟು ಸಹಸ್ರಯುಗಗಳ ಕಾಲ, ಈ ವ್ರತವನ್ನು ನಡೆಸಿದ ಯಜಮಾನನು ರುದ್ರಲೋಕದಲ್ಲಿ ಪೂಜಿತನಾಗುವನು.

೨೪. ಈ ವ್ರತವು ಜನಗಳ ಸಕಲಪಾಪಗಳನ್ನೂ ಕಳೆಯುವುದು. ಯಾವಾಗಲೂ ಅವರ ಉತ್ತಮವಾದ ಜೀವನಕ್ಕೆ ಸಾಧನವಾಗುವುದು. ಇದನ್ನು ನೆರವೇರಿಸಿದಾತನು ಜನ್ಮಾಂತರಗಳಲ್ಲಿ ಸಹ ಪುತ್ರವಿಯೋಗ ದುಃಖವನ್ನು ಅನುಭವಿಸನು. ಮತ್ತು ಆತನು ಇಂದ್ರಲೋಕವೇ ಮೊದಲಾದ ಶುಭಸ್ಥಾನಗಳನ್ನು ಪಡೆಯುವನು.

ಯೋ ವಾ ಶೃಣೋತಿ ಪುರುಷೋಽಲ್ಪಧನಃ ಪಠೇದ್ವಾ
ದೇವಾಲಯೇಷು ಭವನೇಷು ಚ ಧಾರ್ಮಿಕಾಣಾಂ ।
ಪಾಪೈರ್ವಿಯುಕ್ತವಪುರತ್ರ ಪುರಂ ಮುರಾರೇ
ರಾನಂದಕೃತ್ಪದಮುಪೈತಿ ಮುನೀಂದ್ರ ಸೋಽಪಿ ॥೨೫॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸರ್ವಫಲತ್ಯಾಗಮಾಹಾತ್ಮ್ಯಂ
ನಾಮ ಷಣ್ಣವತಿತಮೋಽಧ್ಯಾಯಃ

---

೨೫. ದರಿದ್ರನಾದವನು ಈವ್ರತದ ವಿಧಾನವನ್ನು ಕೇಳಲಿ; ದೇವಸ್ಥಾನಗಳಲ್ಲೋ, ಧಾರ್ಮಿಕರ ಮನೆಗಳಲ್ಲೋ ಓದಲಿ; ಅವನೂ ಸಹ ಸಕಲ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುವನು. ಓ ಮುನೀಂದ್ರಾ, ಅಷ್ಟೇ ಅಲ್ಲ; ಅವನು ಆನಂದಪ್ರದವಾದ ವಿಷ್ಣುಸಾನ್ನಿಧ್ಯವನ್ನೈದುವನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಸಕಲ ಫಲಗಳ ದಾನದ ಮಹಾತ್ಮ್ಯವನ್ನೂ, ಆ ದಾನದ ವಿಧಿಯನ್ನೂ ಹೇಳಿದೆ.

ಮಾರ್ಗಶಿರಮಾಸದಲ್ಲಿ ಶುಕ್ಲಪಕ್ಷದ ತೃತೀಯೆ, ದ್ವಾದಶಿ, ಅಷ್ಟಮಿ, ಅಥವಾ ಚತುರ್ದಶಿಯ ದಿನ ಬ್ರಾಹ್ಮಣರ ಅನುಗ್ರಹವನ್ನು ಪಡೆದು ಚಿನ್ನ, ಬೆಳ್ಳಿ ಮತ್ತು ತಾಮ್ರಗಳಿಂದ ಮಾಡಿದ ವಿಧವಿಧವಾದ ಫಲಗಳನ್ನೂ, ಜಲಪೂರ್ಣವಾದ ಕುಂಭವನ್ನೂ ದಾನಮಾಡಬೇಕು. ಇದರ ಜೊತೆಯಲ್ಲಿ ಪ್ರತಿಮಾದಾನ, ಶಯ್ಯಾದಾನ, ಗೋದಾನ ಮತ್ತು ವಸ್ತ್ರದಾನಗಳೂ ನಡೆಯಬೇಕು. ಬ್ರಾಹ್ಮಣರ ಪೂಜೆಯೂ, ಭೋಜನವೂ ಇದರ ಅಂಗವಾಗಿವೆ.

ಈ ವ್ರತದಿಂದ ಪರಮೇಶ್ವರನು ತೃಪ್ತನಾಗಿ ಸಕಲ ಮನೋರಥಗಳನ್ನೂ ಈಡೇರಿಸುವನು. ಬಡವನಾದವನು ಈ ವ್ರತದ ವಿಧಾನವನ್ನು ಓದಬಹುದು. ಅಥವಾ ಕೇಳಬಹುದು. ಅವನಿಗೂ ಸಹ ಸಕಲವಿಧವಾದ ಶ್ರೇಯಸ್ಸೂ ಉಂಟಾಗುವುದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಸರ್ವಫಲತ್ಯಾಗಮಾಹಾತ್ಮ್ಯವೆಂಬ
ತೊಂಬತ್ತಾರನೆಯ ಅಧ್ಯಾಯವು ಮುಗಿದುದು.

# ಅಥ ಸಪ್ತನವತಿತಮೋಽಧ್ಯಾಯಃ

॥ ನಾರದ ಉವಾಚ ॥

ಯದಾರೋಗ್ಯಕರಂ ಪುಂಸಾಂ ಯದನಂತಫಲಪ್ರದಂ ।
ಯಚ್ಛಾಂತಯೇ ಚ ಮರ್ತ್ಯಾನಾಂ ವದ ನಂದೀಶ ತದ್ವ್ರತಂ ॥ ೧ ॥

॥ ನಂದಿಕೇಶ್ವರ ಉವಾಚ ॥

ಯತ್ತದ್ವಿಶ್ವಾತ್ಮನೋ ಧಾಮ ಪರಂ ಬ್ರಹ್ಮ ಸನಾತನಂ ।
ಸೂರ್ಯಾಗ್ನಿಚಂದ್ರಸೂರ್ಯೇಣ ತತ್ತ್ರಿಧಾ ಜಗತಿ ಸ್ಥಿತಂ ॥ ೨ ॥

ತದಾರಾಧ್ಯ ಪುಮಾನ್ವಿಪ್ರ ಪ್ರಾಪ್ನೋತಿ ಕುಶಲಂ ಸದಾ ।
ತಸ್ಮಾದಾದಿತ್ಯವಾರೇಣ ಸದಾ ನಕ್ತಾಶನೋ ಭವೇತ್ ॥ ೩ ॥

ಯದಾ ಹಸ್ತೇನ ಸಂಯುಕ್ತಮಾದಿತ್ಯಸ್ಯ ಚ ವಾಸರಂ ।
ತದಾ ಶನಿದಿನೇ ಕುರ್ಯಾದೇಕಭಕ್ತಂ ವಿಮತ್ಸರಃ ॥ ೪ ॥

---

೧. ನಾರದಮುನಿ ಹೇಳಿದನು.—ಓ ನಂದೀಶ್ವರಾ, ಮನುಷ್ಯರಿಗೆ ಆರೋಗ್ಯವನ್ನೂ, ಅನಂತಫಲವನ್ನೂ, ಶಾಂತಿಯನ್ನೂ ಕೊಡುವ ಉತ್ತಮವಾದ ವ್ರತವು ಯಾವುದು ? ಹೇಳು.

೨. ನಂದಿಕೇಶ್ವರನು ಹೇಳಿದನು.—ವಿಶ್ವರೂಪನಾದ ಪರಬ್ರಹ್ಮನ ಸನಾತನವೆನಿಸಿದ ತೇಜಸ್ಸು ಉಂಟಷ್ಟೆ. ಅದು ಸೂರ್ಯ, ಅಗ್ನಿ ಮತ್ತು ಚಂದ್ರರ ರೂಪದಿಂದ ಜಗತ್ತಿನಲ್ಲಿ ಮೂರು ಬಗೆಯಾಗಿ ನೆಲೆಸಿರುವುದು.

೩. ಓ ದ್ವಿಜವರ್ಯಾ, ಆ ತೇಜಸ್ಸನ್ನು ಪೂಜಿಸಿದರೆ ಮನುಜನು ಸದಾ ಕುಶಲವನ್ನು ಪಡೆಯುವನು. ಆದುದರಿಂದ ಪ್ರತಿ ಭಾನುವಾರವೂ ಹಗಲು ಹೊತ್ತಿನಲ್ಲಿ ಉಪವಾಸಮಾಡಿ ರಾತ್ರಿಯಲ್ಲಿ ಭೋಜನಮಾಡಬೇಕು.

೪. ಹಸ್ತ ನಕ್ಷತ್ರದೊಡನೆ ಭಾನುವಾರವು ಕೂಡಿ ಬಂದರೆ, ಶನಿವಾರದ ದಿನ ಒಂದೇ ಹೊತ್ತು ಊಟಮಾಡಿ ನಿರ್ಮಲಮನಸ್ಕನಾಗಿರಬೇಕು.

ನಕ್ತಮಾದಿತ್ಯವಾರೇಣ ಭೋಜಯಿತ್ವಾ ದ್ವಿಜೋತ್ತಮಾನ್ ।
ಪತ್ರೈರ್ದ್ವಾದಶಸಂಯುಕ್ತಂ ರಕ್ತಚಂದನಪಂಕಜಂ ॥ ೫ ॥

ವಿಲಿಖ್ಯ ವಿನ್ಯಸೇತ್ಸೂರ್ಯಂ ನಮಸ್ಕಾರೇಣ ಪೂರ್ವತಃ ।
ದಿವಾಕರಂ ತಥಾಗ್ನೇಯೇ ವಿವಸ್ವಂತಮತಃ ಪರಂ ॥ ೬ ॥

ಭಗಂ ತು ನೈರ್ಋತೇ ದೇವಂ ವರುಣಂ ಪಶ್ಚಿಮೇ ದಲೇ ।
ಮಹೇಂದ್ರಮನಿಲೇ ತದ್ವದಾದಿತ್ಯಂ ಚ ತಥೋತ್ತರೇ ॥ ೭ ॥

ಶಾಂತಮೀಶಾನಭಾಗೇ ತು ನಮಸ್ಕಾರೇಣ ವಿನ್ಯಸೇತ್ ।
ಕರ್ಣಿಕಾಪೂರ್ವಪತ್ರೇ ತು ಸೂರ್ಯಸ್ಯ ತುರಗಾನ್ನ್ಯಸೇತ್ ॥ ೮ ॥

ದಕ್ಷಿಣೇಽರ್ಯಮನಾಮಾನಂ ಮಾರ್ತಂಡಂ ಪಶ್ಚಿಮೇ ದಲೇ ।
ಉತ್ತರೇ ತು ರವಿಂ ದೇವಂ ಕರ್ಣಿಕಾಯಾಂ ಚ ಭಾಸ್ಕರಂ ॥ ೯ ॥

ರಕ್ತಪುಷ್ಪೋದಕೇನಾರ್ಘ್ಯಂ ಸತಿಲಾರುಣಚಂದನಂ ।
ತಸ್ಮಿನ್ ಪದ್ಮೇ ತತೋ ದದ್ಯಾದಿಮಂ ಮಂತ್ರಮುದೀರಯೇತ್ ॥೧೦॥

---

೫. ಭಾನುವಾರದ ದಿನ ಯಜಮಾನನು ನಕ್ತವ್ರತವನ್ನು (ಹಗಲು ಉಪವಾಸವಿದ್ದು ರಾತ್ರಿಯಲ್ಲಿ ಭೋಜನಮಾಡು ವ್ರತವನ್ನು) ಆಚರಿಸಿ, ಸದ್ಗುಣಿಗಳಾದ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ರಕ್ತಚಂದನದಿಂದ ಹನ್ನೆರಡೆಸಳಿನ ತಾವರೆಯನ್ನು ಬರೆದು, ಪೂರ್ವದಿಕ್ಕಿನಲ್ಲಿ ಸೂರ್ಯನನ್ನು ನಮಸ್ಕಾರದೊಡನೆ ವಿನ್ಯಾಸ ಮಾಡಬೇಕು.

೬-೮. ಆಗ್ನೇಯದಲ್ಲಿ ದಿವಾಕರ, ದಕ್ಷಿಣದಲ್ಲಿ ವಿವಸ್ವಂತ, ನೈರ್ಋತ್ಯದಲ್ಲಿ ಭಗ, ಪಶ್ಚಿಮದಲ್ಲಿ ವರುಣದೇವ, ವಾಯುವ್ಯದಲ್ಲಿ ಮಹೇಂದ್ರ, ಉತ್ತರದಲ್ಲಿ ಆದಿತ್ಯ, ಈಶಾನ್ಯದಲ್ಲಿ ಶಾಂತ ಇವರನ್ನು ಆವಾಹನಮಾಡಬೇಕು. ಕರ್ಣಿಕೆಯ ಪೂರ್ವ ಪತ್ರದಲ್ಲಿ ಸೂರ್ಯನ ಕುದುರೆಗಳನ್ನು ವಿನ್ಯಾಸಮಾಡಬೇಕು.

೯. ದಕ್ಷಿಣದಲ್ಲಿ ಅರ್ಯಮನನ್ನೂ, ಪಶ್ಚಿಮದಲದಲ್ಲಿ ಮಾರ್ತಂಡನನ್ನೂ, ಉತ್ತರದಲ್ಲಿ ರವಿದೇವನನ್ನೂ, ನಡುವೆ ಕರ್ಣಿಕೆಯಲ್ಲಿ ಭಾಸ್ಕರನನ್ನೂ ಸ್ಥಾಪನ ಮಾಡಬೇಕು.

೧೦. ಹೀಗೆ ಪದ್ಮದಲ್ಲಿ ಸೂರ್ಯದೇವನನ್ನು ಆವಾಹನಮಾಡಿದ ಬಳಿಕ ಎಳ್ಳು, ಕೆಂಪು ಗಂಧ, ಕೆಂಪು ಹೂ ಇವುಗಳ ಸಹಿತವಾಗಿ ಅರ್ಘ್ಯೋದಕವನ್ನು ಸಮರ್ಪಿಸಬೇಕು. ಈ ಮುಂದಿನ ಮಂತ್ರವನ್ನು ಉಚ್ಚರಿಸಬೇಕು.

**ಕಾಲಾತ್ಮಾ ಸರ್ವಭೂತಾತ್ಮಾ ವೇದಾತ್ಮಾ ವಿಶ್ವತೋಮುಖಃ |**
**ಯಸ್ಮಾದಗ್ನೀಂದ್ರರೂಪಸ್ತ್ವಮತಃ ಪಾಹಿ ದಿವಾಕರ ||೧೧||**

**ಅಗ್ನಿಮೀಳೇ ನಮಸ್ತುಭ್ಯಮಿಷೇ ತ್ವೋರ್ಜೇ ಚ ಭಾಸ್ಕರಃ |**
**ಅಗ್ನ ಆಯಾಹಿ ವರದ ನಮಸ್ತೇ ಜ್ಯೋತಿಷಾಂ ಪತೇ ||೧೨||**

**ಅರ್ಘ್ಯಂ ದತ್ವಾ ವಿಸೃಜ್ಯಾಥ ನಿಶಿ ತೈಲವಿವರ್ಜಿತಂ |**
**ಭುಂಜೀತ ವತ್ಸರಾಂತೇ ತು ಕಾಂಚನಂ ಕಮಲೋತ್ತಮಂ |**
**ಪುರುಷಂ ಚ ಯಥಾಶಕ್ತ್ಯಾ ಕಾರಯೇದ್ದ್ವಿಭುಜಂ ತಥಾ ||೧೩||**

**ಸುವರ್ಣಶೃಂಗೀಂ ಕಪಿಲಾಂ ಮಹಾರ್ಘ್ಯಾಂ**
**ರೌಪ್ಯೈಃ ಖುರೈಃ ಕಾಂಸ್ಯದೋಹಾಂ ಸವತ್ಸಾಂ |**
**ಪೂರ್ಣೇ ಗುಡಸ್ಯೋಪರಿ ತಾಮ್ರಪಾತ್ರೇ**
**ನಿಧಾಯ ಪದ್ಮಂ ಪುರುಷಂ ಚ ದದ್ಯಾತ್ ||೧೪||**

---

೧೧. "ಎಲೈ ಸೂರ್ಯನೇ, ನೀನು ಕಾಲರೂಪನು, ಸರ್ವಭೂತಾಂತರಾತ್ಮನು, ವೇದಸ್ವರೂಪನು, ಎಲ್ಲ ಕಡೆಗೂ ಮುಖವಿರತಕ್ಕವನು, ಅಗ್ನಿ ಮತ್ತು ಇಂದ್ರರ ಸ್ವರೂಪನಾದವನು. ಆದುದರಿಂದ ನನ್ನನ್ನು ಸಲಹು.

೧೨. ಅಗ್ನಿಮೀಳೇ ಎಂಬ ಋಗ್ವೇದ ಮಂತ್ರದಿಂದ ನಿನ್ನನ್ನು ನಮಸ್ಕರಿಸುತ್ತೇನೆ. ಓ ಭಾಸ್ಕರಾ, ಇಷೇ ತ್ವೋರ್ಜೇ ತ್ವಾ ಎಂಬ ಯಜುರ್ವೇದಮಂತ್ರವೂ ಸಹ ನಿನ್ನ ಸ್ತೋತ್ರರೂಪವೇ ಆಗಿದೆ. ವರವನ್ನು ಕರುಣಿಸುವ ಎಲೈ ದೇವಾ, ಅಗ್ನ ಆಯಾಹಿ ಎಂಬ ಸಾಮವೇದದ ಮಂತ್ರದಿಂದ ನಿನ್ನನ್ನು ನಮಿಸುತ್ತೇನೆ. ತೇಜೋರೂಪಗಳ ಅಧೀಶ್ವರನೇ, ನಿನಗೆ ನಮಸ್ಕಾರ."

೧೩. ಮತ್ತೆ ಅರ್ಘ್ಯವನ್ನಿತ್ತು ಉದ್ವಾಸನಮಾಡಬೇಕು. ರಾತ್ರಿಯಲ್ಲಿ ಎಣ್ಣೆಯನ್ನು ಹಾಕಿಕೊಳ್ಳದೆ ಊಟಮಾಡಬೇಕು. ವರ್ಷದ ಕೊನೆಯಲ್ಲಿ ಅಂದವಾದ ಕಮಲವನ್ನೂ, ಎರಡು ತೋಳುಗಳುಳ್ಳ ಸೂರ್ಯನಾರಾಯಣನ ವಿಗ್ರಹವನ್ನೂ ತನ್ನ ಶಕ್ತಿಗೆ ತಕ್ಕಂತೆ ಚಿನ್ನದಿಂದ ಮಾಡಿಸಬೇಕು.

೧೪. ಚಿನ್ನದ ಒಡವೆಗಳಿಂದ ಕೊಂಬುಗಳನ್ನೂ, ಬೆಳ್ಳಿಯ ಒಡವೆಗಳಿಂದ ಗೊರಸುಗಳನ್ನೂ ಅಲಂಕರಿಸಿದ, ಕರುವಿನೊಡಗೂಡಿದ ಒಳ್ಳೆಯ ಹಸುವನ್ನು ದಾನ ಮಾಡಬೇಕು. ಹಾಗೆಯೇ ಬೆಲ್ಲದ ಮೇಲೆ ತಾಮ್ರದ ಪೂರ್ಣಪಾತ್ರೆಯನ್ನಿಟ್ಟು, ಅದರಲ್ಲಿ ಪದ್ಮವನ್ನೂ ಪುರುಷನನ್ನೂ ಇರಿಸಿ ದಾನವಾಗಿ ಕೊಡಬೇಕು.

ಸಂಪೂಜ್ಯ ರಕ್ತಾಂಬರಮಾಲ್ಯಧೂಪೈಃ
ದ್ವಿಜಂ ಚ ರಕ್ತೈರಥ ಹೇಮಶೃಂಗೈಃ ।
ಸಂಕಲ್ಪಯಿತ್ವಾ ಪುರುಷಂ ಸಪದ್ಮಂ
ದದ್ಯಾದನೇಕವ್ರತದಾನಕಾಯ ।
ಅವ್ಯಂಗರೂಪಾಯ ಜಿತೇಂದ್ರಿಯಾಯ
ಕುಟುಂಬಿನೇ ದೇಯಮನುದ್ಧತಾಯ ॥೧೫॥

ನಮೋ ನಮಃ ಪಾಪವಿನಾಶನಾಯ
ವಿಶ್ವಾತ್ಮನೇ ಸಪ್ತತುರಂಗಮಾಯ ।
ಸಾಮರ್ಗ್ಯಜುರ್ಧಾಮನಿಧೇ ವಿಧಾತ್ರೇ
ಭವಾಬ್ಧಿಪೋತಾಯ ಜಗತ್ಸವಿತ್ರೇ ॥೧೬॥

ಇತ್ಯನೇನ ವಿಧಿನಾ ಸಮಾಚರೇ
ದಬ್ದಮೇಕಮಿಹ ಯಸ್ತು ಮಾನವಃ ।
ಸೋಽಧಿರೋಹತಿ ವಿನಷ್ಟಕಲ್ಮಷಃ
ಸೂರ್ಯಧಾಮ ಧೃತಚಾಮರಾವಲಿಃ ॥೧೭॥

---

೧೫. ಚಿನ್ನದ ಹಣಸುಗಳನ್ನು (ಕೊಂಬಿನ ಮುಸುಕು) ಹಸುವಿಗೆ ಹಾಕಿ, ರಕ್ತವಸ್ತ್ರ, ಪುಷ್ಪ, ಧೂಪ ಇವುಗಳಿಂದ ಅದನ್ನೂ ಬ್ರಾಹ್ಮಣನನ್ನೂ ಪೂಜಿಸಿ, ಸುವರ್ಣಪದ್ಮ, ಪುರುಷಪ್ರತಿಮೆ ಮತ್ತು ಹಸು ಇವುಗಳನ್ನು ಸಂಕಲ್ಪಪೂರ್ವಕವಾಗಿ ದಾನಮಾಡಬೇಕು. ಪ್ರತಿಗ್ರಹಮಾಡುವ ಬ್ರಾಹ್ಮಣನಾದರೋ ತಾನೂ ಸ್ವತಃ ಹಲವು ವ್ರತಗಳನ್ನು ಮಾಡಿ ದಾನ ಕೊಟ್ಟಿರುವವನಾಗಬೇಕು ; ಮತ್ತು ಅಂಗಹೀನ ನಲ್ಲದವನೂ, ಜಿತೇಂದ್ರಿಯನೂ, ಕುಟುಂಬಿಯೂ, ನಮ್ರಸ್ವಭಾವದವನೂ ಆಗಿರ ಬೇಕು.

೧೬. "ಪಾಪಪರಿಹಾರಕನೂ, ವಿಶ್ವಾತ್ಮನೂ, ಏಳು ಕುದುರೆಗಳ ತೇರನ್ನೇರಿ ದವನೂ ಆದ ಸೂರ್ಯನಿಗೆ ನಮಸ್ಕಾರ. ಋಗ್ಯಜುಸ್ಸಾಮಗಳೆಂಬ ಮೂರು ವೇದಗಳ ನಿಧಿಯೂ, ಜಗನ್ನಿಯಾಮಕನೂ, ಸಂಸಾರವೆಂಬ ಸಾಗರದಿಂದ ಪಾರುಮಾಡು ವವನೂ, ಜಗತ್ಕಾರಣನೂ ಆದ ತೇಜೋನಿಧಿಗೆ ನಮಸ್ಕಾರ."

೧೭. ಈ ರೀತಿಯಲ್ಲಿ ಒಂದು ವರ್ಷಕಾಲ ಈ ವ್ರತವನ್ನು ಮಾಡುವಂತಹ ಮನುಷ್ಯನು ಸಕಲದೋಷಗಳಿಂದಲೂ ದೂರನಾಗಿ ಸೂರ್ಯಮಂಡಲವನ್ನೈದುವನು. ದೇವತೆಗಳು ಅವನಿಗೆ ಚಾಮರವನ್ನು ಬೀಸಿ ಗೌರವವನ್ನೀಯುವರು.

**ಧರ್ಮಸಂಕ್ಷಯಮವಾಪ್ಯ ಭೂಪತಿಃ**
**ಶೋಕದುಃಖಭಯರೋಗವರ್ಜಿತಃ ।**
**ದ್ವೀಪಸಪ್ತಕಪತಿಃ ಪುನಃ ಪುನ**
**ರ್ಧರ್ಮಮೂರ್ತಿರಮಿತೌಜಸಾ ಯುತಃ ॥೧೮॥**

**ಯಾ ಚ ಭರ್ತೃಗುರುದೇವತತ್ಪರಾ**
**ವೇದಮೂರ್ತಿದಿನನಕ್ತಮಾಚರೇತ್ ।**
**ಸಾಽಪಿ ಲೋಕಮಮರೇಶವಂದಿತಾ**
**ಯಾತಿ ನಾರದ ರವೇರ್ನ ಸಂಶಯಃ ॥೧೯॥**

**ಯಃ ಪಠೇದಪಿ ಶೃಣೋತಿ ಮಾನವಃ**
**ಪಠ್ಯಮಾನಮಥವಾಽನುಮೋದತೇ ।**
**ಸೋಽಪಿ ಶಕ್ರಭುವನಸ್ಥಿತೋಽಮರ್ತ್ಯೈಃ**
**ಪೂಜ್ಯತೇ ವಸತಿ ಚಾಕ್ಷಯಂ ದಿವಿ ॥೨೦॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಆದಿತ್ಯವಾರಕಲ್ಪೋ**
**ನಾಮ ಸಪ್ತನವತಿತಮೋಽಧ್ಯಾಯಃ**

---

೧೮. ಪುಣ್ಯಫಲವೆಲ್ಲ ತೀರಿ ಬಂದಿರುವ ರಾಜನು ಈ ವ್ರತವನ್ನು ಮಾಡಿದರೆ ಆತನ ಶೋಕ, ದುಃಖ, ಭಯ, ರೋಗ ಇವೆಲ್ಲವೂ ತೊಲಗುವುವು. ಅವನು ಮರಳಿ ಮರಳಿ ಸಪ್ತದ್ವೀಪಗಳ ಅಧಿಪತಿಯಾಗಿ ಜನಿಸುವನು. ಧರ್ಮಮೂರ್ತಿಯೆನಿಸಿ ಕೊಂಡು ಅತಿಶಯವಾದ ಪರಾಕ್ರಮದಿಂದ ಶೋಭಿಸುವನು.

೧೯. ಪತಿ, ಗುರು ಮತ್ತು ದೇವತೆಗಳಲ್ಲಿ ಭಕ್ತಿಯಿಂದಿದ್ದು, ಭಾನುವಾರದ ದಿನ ನಕ್ತವ್ರತವನ್ನು—ಹಗಲಿನಲ್ಲಿ ಉಪವಾಸವಿದ್ದು ರಾತ್ರಿ ಭೋಜನಮಾಡುವ ವ್ರತವನ್ನು—ಆಚರಿಸುವ ನಾರೀಮಣಿಯು ದೇವೇಂದ್ರನಿಗೂ ಸಹ ಪೂಜ್ಯಳಾಗುವಳು. ಓ ನಾರದಾ, ಆಕೆಯು ಸೂರ್ಯಲೋಕವನ್ನೈದುವಳು ; ಸಂಶಯವಿಲ್ಲ .

೨೦. ಈ ವ್ರತ ವಿಧಾನವನ್ನು ತಾನೇ ಓದಲಿ, ಇಲ್ಲವೇ ಇತರರು ಓದುತ್ತಿದ್ದರೆ ತನ್ನ ಸಮ್ಮತಿಯನ್ನು ಅದಕ್ಕೆ ಸೂಚಿಸಲಿ ; ಅಂತಹ ಮನುಜನೂ ಸಹ ಇಂದ್ರಲೋಕದಲ್ಲಿ ವಾಸಿಸುವನು.

## ಅಧ್ಯಾಯ ೯೭

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಆದಿತ್ಯವಾರ ಕಲ್ಪವನ್ನು ಹೇಳಿದೆ.

ಹಸ್ತನಕ್ಷತ್ರಸಹಿತವಾಗಿ ಭಾನುವಾರವು ಬಂದರೆ ಮೊದಲನೆಯ ದಿನವೇ ಏಕಭುಕ್ತದಿಂದಿದ್ದು, ಮರುದಿನ ಎಂದರೆ ಭಾನುವಾರದ ದಿನ ಈ ವ್ರತವನ್ನು ಮಾಡಬೇಕು. ಹನ್ನೆರಡು ಎಸಳಿನ ತಾವರೆಯನ್ನು ರಕ್ತಚಂದನದಿಂದ ಬರೆದು, ಅದರಲ್ಲಿ ಸೂರ್ಯದೇವನನ್ನು ಆವಾಹನಮಾಡಿ ಪೂಜಿಸಬೇಕು. ವರ್ಷವು ಪೂರ್ಣವಾಗುವವರೆಗೆ ಹೀಗೆಯೇ ನಡೆಸಿ, ವತ್ಸರಾಂತದಲ್ಲಿ ಚಿನ್ನದಿಂದ ಮಾಡಿದ ಕಮಲವನ್ನೂ, ಸೂರ್ಯದೇವನ ಪ್ರತಿಮೆಯನ್ನೂ ಗೋಸಹಿತವಾಗಿ ದಾನಮಾಡಬೇಕು. ಇದರಿಂದ ಸಮಸ್ತಪಾಪಗಳೂ ಪರಿಹಾರವಾಗುವುವಲ್ಲದೆ ಅನಂತವಾದ ಶುಭಫಲಗಳು ಲಭಿಸುವುವು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಆದಿತ್ಯವಾರದ ಕಲ್ಪವೆಂಬ
ತೊಂಬತ್ತೇಳನೆಯ ಅಧ್ಯಾಯವು ಮುಗಿದುದು.



# ಅಥಾಷ್ಟನವತಿತಮೋಽಧ್ಯಾಯಃ

॥ ನಂದಿಕೇಶ್ವರ ಉವಾಚ ॥

ಅಥಾನ್ಯದಪಿ ವಕ್ಷ್ಯಾಮಿ ಸಂಕ್ರಾಂತ್ಯುದ್ಯಾಪನೇ ಫಲಂ ।
ಯದಕ್ಷಯಂ ಪರೇ ಲೋಕೇ ಸರ್ವಕಾಮಫಲಪ್ರದಂ ॥ ೧ ॥

ಅಯನೇ ವಿಷುವೇ ವಾಪಿ ಸಂಕ್ರಾಂತಿವ್ರತಮಾಚರೇತ್ ।
ಪೂರ್ವೇದ್ಯುರೇಕಭಕ್ತೇನ ದಂತಧಾವನಪೂರ್ವಕಂ ।
ಸಂಕ್ರಾಂತಿವಾಸರೇ ಪ್ರಾತಸ್ತಿಲೈಃ ಸ್ನಾನಂ ವಿಧೀಯತೇ ॥ ೨ ॥

ರವಿಸಂಕ್ರಮಣೇ ಭೂಮೌ ಚಂದನೇನಾಷ್ಟಪತ್ರಕಂ ।
ಪದ್ಮಂ ಸಕರ್ಣಿಕಂ ಕುರ್ಯಾತ್ತಸ್ಮಿನ್ನಾವಾಹಯೇದ್ರವಿಂ ॥ ೩ ॥

ಕರ್ಣಿಕಾಯಾಂ ನ್ಯಸೇತ್ಸೂರ್ಯಮಾದಿತ್ಯಂ ಪೂರ್ವತಸ್ತತಃ ।
ನಮ ಉಷ್ಣಾರ್ಚಿಷೇ ಯಾಮ್ಯೇ ನಮೋ ಋಙ್ಮಂಡಲಾಯ ಚ ॥ ೪ ॥

---

೧. ನಂದಿಕೇಶ್ವರನು ಹೇಳಿದನು.—ಸೂರ್ಯಸಂಕ್ರಮಣದ ಉದ್ಯಾಪನವ್ರತದಿಂದ ಬರುವ ಫಲವನ್ನು ಹೇಳುವೆನು ಕೇಳು. ಈ ವ್ರತವು ಪರಲೋಕದಲ್ಲಿ ಅಕ್ಷಯ ಫಲವನ್ನು ಕೊಡುವುದು. ಸಕಲೇಷ್ಟಾರ್ಥಗಳನ್ನೂ ಸಲ್ಲಿಸುವುದು.

೨. ಉತ್ತರಾಯಣ, ದಕ್ಷಿಣಾಯನ, ಚಿತ್ರವಿಷು ಅಥವಾ ತುಲಾವಿಷು ಪುಣ್ಯಕಾಲಗಳಲ್ಲಿ ಸಂಕ್ರಾಂತಿವ್ರತವನ್ನು ನಡೆಸಬೇಕು. ಮೊದಲನೆಯ ದಿನ ಒಂದೇ ಹೊತ್ತು ಊಟಮಾಡಿ, ಸಂಕ್ರಮಣದ ದಿನ ಪ್ರಾತಃಕಾಲದಲ್ಲಿ ಹಲ್ಲುಗಳನ್ನು ಬೆಳಗಿದ ತರುವಾಯ ತಿಲಸ್ನಾನವನ್ನು ಮಾಡಬೇಕು.

೩. ಸೂರ್ಯಸಂಕ್ರಮಣದ ದಿವಸ ನೆಲದ ಮೇಲೆ ಕೆಂಪು ಗಂಧದಿಂದ ಕರ್ಣಿಕಾಸಹಿತವಾದ ಅಷ್ಟದಳ ಪದ್ಮವನ್ನು ಬರೆದು, ಅದರಲ್ಲಿ ಸೂರ್ಯನನ್ನು ಆವಾಹನಮಾಡಬೇಕು.

೪. ಕರ್ಣಿಕೆಯಲ್ಲಿ ಸೂರ್ಯನನ್ನೂ, ಪೂರ್ವದಲ್ಲಿ ಆದಿತ್ಯನನ್ನೂ ಆವಾಹನ ಮಾಡಬೇಕು. ಆಗ್ನೇಯದಲ್ಲಿ ಉಷ್ಣಕಿರಣನಿಗೆ ನಮಸ್ಕಾರವೆಂದೂ, ದಕ್ಷಿಣದಲ್ಲಿ ಋಗ್ವೇದಮಂಡಲನಿಗೆ ನಮಸ್ಕಾರವೆಂದೂ ಪ್ರಾರ್ಥಿಸಬೇಕು.

ನಮಃ ಸವಿತ್ರೇ ನೈಋತ್ಯೇ ವಾರುಣೇ ತಪನಃ ಪುನಃ ।
ವಾಯವ್ಯೇ ತು ಭಗಂ ನ್ಯಸ್ಯ ಪುನಃ ಪುನರಥಾರ್ಚಯೇತ್ ॥ ೫ ॥

ಮಾರ್ತಂಡಮುತ್ತರೇ ವಿಷ್ಣುಮೀಶಾನೇ ವಿನ್ಯಸೇತ್ಸದಾ ।
ಗಂಧಮಾಲ್ಯಫಲೈರ್ಭಕ್ಷ್ಯೈಃ ಸ್ಥಂಡಿಲೇ ಪೂಜಯೇತ್ತತಃ ॥ ೬ ॥

ದ್ವಿಜಾಯ ಸೋದಕುಂಭಂ ಚ ಘೃತಪಾತ್ರಂ ಹಿರಣ್ಮಯಂ ।
ಕಮಲಂ ಚ ಯಥಾಶಕ್ತ್ಯಾ ಕಾರಯಿತ್ವಾ ನಿವೇದಯೇತ್ ॥ ೭ ॥

ಚಂದನೋದಕಪುಷ್ಪೈಶ್ಚ ದೇವಾಯಾರ್ಘ್ಯಂ ನ್ಯಸೇದ್ಭುವಿ ।
ವಿಶ್ವಾಯ ವಿಶ್ವರೂಪಾಯ ವಿಶ್ವಧಾಮ್ನೇ ಸ್ವಯಂಭುವೇ ।
ನಮೋಽನಂತ ನಮೋ ಧಾತ್ರೇ ಋಕ್ಸಾಮಯಜುಷಾಂ ಪತೇ ॥ ೮ ॥

---

೫. ಸವಿತೃವಿಗೆ ನಮಸ್ಕಾರವೆಂದು ನೈಋತ್ಯದಲ್ಲಿ, ತಪನನಿಗೆ ನಮಸ್ಕಾರವೆಂದು ಪಶ್ಚಿಮದಲ್ಲಿ, ಭಗನಿಗೆ ನಮಸ್ಕಾರವೆಂದು ವಾಯುವ್ಯದಲ್ಲಿ ಆವಾಹಿಸಿ ಪುನಃ ಅರ್ಚನಮಾಡಬೇಕು.

೬. ಉತ್ತರದಲ್ಲಿ ಮಾರ್ತಂಡನನ್ನೂ, ಈಶಾನ್ಯದಲ್ಲಿ ವಿಷ್ಣುವನ್ನೂ ಸ್ಥಾಪನ ಮಾಡಿ ಗಂಧಪುಷ್ಪ ಫಲಗಳಿಂದಲೂ, ಬಗೆಬಗೆಯ ಭಕ್ಷ್ಯಗಳಿಂದಲೂ ಪೂಜಿಸಬೇಕು.

೭. ಜಲಪೂರ್ಣವಾದ ಕುಂಭ, ತುಪ್ಪವನ್ನು ತುಂಬಿದ ಪಾತ್ರೆ, ಚಿನ್ನದ ತಾವರೆ ಇವುಗಳನ್ನು ತನ್ನ ಶಕ್ತಿಗೆ ತಕ್ಕಂತೆ ಬ್ರಾಹ್ಮಣನಿಗೆ ದಾನಮಾಡಬೇಕು.

೮. ಗಂಧೋದಕದಿಂದಲೂ, ಪುಷ್ಪಗಳಿಂದಲೂ ಸೂರ್ಯದೇವನಿಗೆ ಅರ್ಘ್ಯವನ್ನು ಸಮರ್ಪಿಸಬೇಕು. "ಎಲ್ಲವೂ ನೀನೇ. ಎಲ್ಲ ರೂಪವೂ ನಿನ್ನದು. ಜಗತ್ತೆಲ್ಲ ನಿನ್ನ ವಾಸಸ್ಥಾನ. ನೀನು ಸ್ವೇಚ್ಛೆಯಿಂದ ಜನಿಸಿದವನು, ಅನಂತನು, ಸೃಷ್ಟಿಕರ್ತನು, ಋಗ್ಯಜುಸ್ಸಾಮಗಳೆಂಬ ವೇದಗಳ ಅಧಿಪತಿ. ಇಂತಹ ಮಹಾಮಹಿಮನಾದ ನಿನಗೆ ನಮಸ್ಕಾರ."

ಅನೇನ ವಿಧಿನಾ ಸರ್ವಂ ಮಾಸಿ ಮಾಸಿ ಸಮಾಚರೇತ್ ।
ವತ್ಸರಾಂತೇಽಥವಾ ಕುರ್ಯಾತ್ಸರ್ವಂ ದ್ವಾದಶಧಾ ನರಃ ॥೯॥

ಸಂವತ್ಸರಾಂತೇ ಘೃತಪಾಯಸೇನ
ಸಂತರ್ಪ್ಯ ವಹ್ನಿಂ ದ್ವಿಜಪುಂಗವಾಂಶ್ಚ ।
ಕುಂಭಾನ್ ಪುನರ್ದ್ವಾದಶ ಧೇನುಯುಕ್ತಾನ್
ಸರತ್ನಹೈರಣ್ಮಯ ಪದ್ಮಯುಕ್ತಾನ್ ॥೧೦॥

ಪಯಸ್ವಿನೀಃ ಶೀಲವತೀಶ್ಚ ದದ್ಯಾತ್
ಹೈಮೈಃ ಶೃಂಗೈ ರೌಪ್ಯಖುರೈಶ್ಚ ಯುಕ್ತಾಃ ।
ಗಾವೋಽಷ್ಟ ವಾ ಸಪ್ತ ಸಕಾಂಸ್ಯದೋಹಾ
ಮಾಲ್ಯಾಂಬರಾ ವಾ ಚತುರೋಽಪ್ಯಶಕ್ತಃ ।
ದೌರ್ಗತ್ಯಯುಕ್ತಃ ಕಪಿಲಾಮಥೈಕಾಂ
ನಿವೇದಯೇದ್ಬ್ರಾಹ್ಮಣಪುಂಗವಾಯ ॥೧೧॥

---

೯. ಪ್ರತಿ ತಿಂಗಳೂ ಈ ವಿಧಾನದಿಂದ ಎಲ್ಲವನ್ನೂ ನಡೆಸಬೇಕು. ಅಥವಾ ವರ್ಷಾಂತದಲ್ಲಿ ಹನ್ನೆರಡು ವಿಧವಾಗಿ ಮಾಡಿದರೂ ಮಾಡಬಹುದು.

೧೦. ವರ್ಷದ ಕೊನೆಯಲ್ಲಿ ತುಪ್ಪದಿಂದಲೂ ಪಾಯಸದಿಂದಲೂ ಅಗ್ನಿಯನ್ನೂ ಬ್ರಾಹ್ಮಣರನ್ನೂ ತೃಪ್ತಿಪಡಿಸಬೇಕು. (ಎಂದರೆ ಹೋಮವನ್ನೂ ಬ್ರಾಹ್ಮಣ ಭೋಜನವನ್ನೂ ನಡೆಸಬೇಕೆಂದು ಅಭಿಪ್ರಾಯ) ಬಳಿಕ ಹಸುಗಳು, ರತ್ನಖಚಿತವಾದ ಸುವರ್ಣಕಮಲಗಳು ಇವುಗಳೊಡನೆ ಹನ್ನೆರಡು ಕುಂಭಗಳನ್ನು ದಾನ ಮಾಡಬೇಕು.

೧೧. ಹಸುಗಳು ಚೆನ್ನಾಗಿ ಹಾಲುಕರೆಯತಕ್ಕುವೂ, ಸಾಧುಸ್ವಭಾವದವೂ ಆಗಿರಬೇಕು. ಅವುಗಳ ಕೊಂಬನ್ನು ಚಿನ್ನದಿಂದಲೂ, ಗೊರಸನ್ನು ಬೆಳ್ಳಿಯಿಂದಲೂ ಅಲಂಕರಿಸಿ, ಹೂಮಾಲೆಯನ್ನೂ ವಸ್ತ್ರವನ್ನೂ ಧರಿಸಬೇಕು. ದಾನಕೊಡಬೇಕಾದ ಹಸುಗಳ ಸಂಖ್ಯೆ ಎಂಟು, ಏಳು ಅಥವಾ ನಾಲ್ಕು ಇರಬಹುದು. ಏನೇನೂ ಗತಿಯಿಲ್ಲದವನಾಗಿದ್ದರೆ ಕೊನೆಗೆ ಒಂದು ಕಪಿಲವರ್ಣದ ಹಸುವನ್ನೂ ಅದರೊಡನೆ ಹಾಲುಕರೆಯುವ ಪಾತ್ರೆಯನ್ನೂ ದಾನಮಾಡಬೇಕು.

ಹೈಮೀಂ ಚ ದದ್ಯಾತ್ಪೃಥಿವೀಂ ಸಶೇಷಾ
ಮಾಕಾರ್ಯ ರೂಪ್ಯಾಮಥವಾ ಚ ತಾಮ್ರೀಂ।
ಪೈಷ್ಟೀಮಶಕ್ತಃ ಪ್ರತಿಮಾಂ ವಿಧಾಯ
ಸೌವರ್ಣಸೂರ್ಯೇಣ ಸಮಂ ಪ್ರದದ್ಯಾತ್।
ನ ವಿತ್ತಶಾಠ್ಯಂ ಪುರುಷೋಽತ್ರ ಕುರ್ಯಾತ್
ಕುರ್ವನ್ನಧೋ ಯಾತಿ ನ ಸಂಶಯೋಽತ್ರ ॥೧೨॥

ಯಾವನ್ಮಹೇಂದ್ರಪ್ರಮುಖೈರ್ನಗೇಂದ್ರೈಃ
ಪೃಥ್ವೀಹ ಸಪ್ತಾಬ್ಧಿಯುತೇಹ ತಿಷ್ಠೇತ್।
ತಾವತ್ಸ ಗಂಧರ್ವಗಣೈರಶೇಷೈಃ
ಸಂಪೂಜ್ಯತೇ ನಾರದ ನಾಕಪೃಷ್ಠೇ ॥೧೩॥

ತತಸ್ತು ಕರ್ಮಕ್ಷಯಮಾಪ್ಯ ಸಪ್ತ
ದ್ವೀಪಾಧಿಪಃ ಸ್ಯಾತ್ಕುಲಶೀಲಯುಕ್ತಃ।
ಸೃಷ್ಟೇರ್ಮುಖೇಽವ್ಯಂಗವಪುಃ ಸಭಾರ್ಯಃ
ಪ್ರಭೂತಪುತ್ರಾನ್ವಯವಂದಿತಾಂಘ್ರಿಃ ॥೧೪॥

---

೧೨. ಆದಿಶೇಷಸಹಿತವಾದ ಭೂಮಿಯ ಪ್ರತಿಮೆಯನ್ನು ಚಿನ್ನದಿಂದ, ಬೆಳ್ಳಿಯಿಂದ, ತಾಮ್ರದಿಂದ ಅಥವಾ ಶಕ್ತಿಯಿಲ್ಲದಿದ್ದರೆ ಹಿಟ್ಟನಿಂದ ಮಾಡಿಸಿ, ಸುವರ್ಣಮಯವಾದ ಸೂರ್ಯವಿಗ್ರಹದೊಡನೆ ದಾನಮಾಡಬೇಕು. ಈ ವಿಷಯದಲ್ಲಿ ಮಾತ್ರ ಮನುಷ್ಯನು ಜಿಪುಣತನವನ್ನು ತೋರಬಾರದು. ತೋರಿದರೆ ದುರ್ಗತಿ ಗಿಳಿಯುವನು. ಸಂದೇಹವಿಲ್ಲ.

೧೩. ಓ ನಾರದಾ, ಮಹೇಂದ್ರಾದಿಕುಲಪರ್ವತಗಳಿಂದಲೂ, ಲವಣಾದಿ ಸಪ್ತಸಾಗರಗಳಿಂದಲೂ ಸಹಿತವಾದ ಈ ಭೂಮಂಡವು ಎಲ್ಲಿಯ ವರೆಗೆ ಇರುವುದೋ ಅಲ್ಲಿಯ ವರೆಗೂ, ಈ ಸಂಕ್ರಾಂತಿವ್ರತವನ್ನು ಮಾಡಿದ ಮನುಜನು ಗಂಧರ್ವರೆಲ್ಲ ರಿಂದಲೂ ಪೂಜಿತನಾಗಿ ಸ್ವರ್ಗದಲ್ಲಿ ವಾಸಿಸುವನು.

೧೪. ತರುವಾಯ ಕರ್ಮವೆಲ್ಲವೂ ನಶಿಸಲು, ಒಳ್ಳೆಯ ಕುಲಶೀಲಗಳಿಂದ ಕೂಡಿ ಸಪ್ತದ್ವೀಪಗಳ ಅಧಿಪತಿಯೆನಿಸುವನು. ಸೃಷ್ಟಿಯ ಪ್ರಾರಂಭದಲ್ಲಿ ಅವನು ಸುಂದರ ರೂಪದಿಂದ ಜನಿಸುವನು. ಅನುರೂಪಳಾದ ಪತ್ನಿಯೊಡಗೂಡುವನು. ಎಷ್ಟೋಜನ ಪುತ್ರಪೌತ್ರಾದಿಗಳಿಂದ ಪಾದಸೇವೆಯನ್ನು ಕೈಗೊಳ್ಳುವನು.

**ಇತಿ ಪಠತಿ ಶೃಣೋತಿ ವಾಽಥ ಭಕ್ತ್ಯಾ**
**ವಿಧಿಮಖಿಲಂ ರವಿಸಂಕ್ರಮಸ್ಯ ಪುಣ್ಯಂ ।**
**ಮತಿಮಪಿ ಚ ದದಾತಿ ಸೋಽಪಿ ದೇವೈ**
**ರಮರಪತೇರ್ಭವನೇ ಪ್ರಪೂಜ್ಯತೇ ಚ ॥೧೫॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸಂಕ್ರಾಂತ್ಯುದ್ಯಾಪನವಿಧಿ-**
**ರ್ನಾಮಾಷ್ಟನವತಿತಮೋಽಧ್ಯಾಯಃ**

---

೧೫. ಪುಣ್ಯಕರವಾದ ಈ ಸೂರ್ಯ ಸಂಕ್ರಾಂತಿವ್ರತದ ವಿಧಾನವನ್ನು ಓದಲಿ, ಭಕ್ತಿಯಿಂದ ಕೇಳಲಿ, ಇಲ್ಲವೇ ಇತರರಿಗೆ ಇದರಲ್ಲಿ ಬುದ್ಧಿ ಹುಟ್ಟುವಂತೆ ಪ್ರೇರಿಸಲಿ ಮನುಷ್ಯನು ದೇವೇಂದ್ರನ ದಿವ್ಯ ಮಂದಿರದಲ್ಲಿ ಮನ್ನಣೆಯನ್ನು ಪಡೆಯುವನು.

**ಅಧ್ಯಾಯದ ಸಾರಾಂಶ**

ಈ ಅಧ್ಯಾಯದಲ್ಲಿ ಸಂಕ್ರಾಂತ್ಯುದ್ಯಾಪನವ್ರತವನ್ನು ವಿವರಿಸಿದೆ.

ಉತ್ತರಾಯಣ, ದಕ್ಷಿಣಾಯನ, ಚಿತ್ರವಿಷು, ತುಲಾವಿಷು ಈ ಪುಣ್ಯಕಾಲಗಳಲ್ಲೊಂದರಲ್ಲಿ ಈ ವ್ರತವನ್ನು ಪ್ರಾರಂಭಿಸಿ ಪ್ರತಿ ಸಂಕ್ರಮಣದಲ್ಲಿಯೂ ನಡೆಸುತ್ತ ಬರಬೇಕು. ಚಂದನದಿಂದ ಅಷ್ಟದಳ ಪದ್ಮವನ್ನು ಬರೆದು, ಸೂರ್ಯನನ್ನು ಅದರಲ್ಲಿ ಆವಾಹನಮಾಡಿ ಗಂಧಪುಷ್ಪಗಳಿಂದ ಪೂಜಿಸಬೇಕು. ವರ್ಷಾಂತದಲ್ಲಿ ಕುಂಭದಾನ, ಗೋದಾನ, ಪ್ರತಿಮಾದಾನ, ಸುವರ್ಣಕಮಲದಾನ ಮುಂತಾದುವುಗಳನ್ನು ಶಕ್ತಿಯಿದ್ದಷ್ಟು ನಡೆಸಬೇಕು. ಇದರಿಂದ ಅಕ್ಷಯಫಲಪ್ರಾಪ್ತಿಯೂ ಶುಭಲೋಕವಾಸವೂ ಉಂಟಾಗಿ ಮನುಷ್ಯನು ಸಕಲ ವಿಧವಾದ ಶ್ರೇಯಸ್ಸನ್ನೂ ಪಡೆಯುವನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಸಂಕ್ರಾಂತ್ಯುದ್ಯಾಪನವಿಧಿಯೆಂಬ
ತೊಂಬತ್ತೆಂಟನೆಯ ಅಧ್ಯಾಯವು ಮುಗಿದುದು.

## ಅಥ ನವನವತಿತಮೋಽಧ್ಯಾಯಃ

॥ ನಂದಿಕೇಶ್ವರ ಉವಾಚ ॥

ಶೃಣು ನಾರದ ವಕ್ಷ್ಯಾಮಿ ವಿಷ್ಣೋರ್ವ್ರತಮನುತ್ತಮಂ ।
ವಿಭೂತಿದ್ವಾದಶೀ ನಾಮ ಸರ್ವದೇವನಮಸ್ಕೃತಂ ॥ ೧ ॥

ಕಾರ್ತಿಕೇ ಚೈತ್ರವೈಶಾಖೇ ಮಾರ್ಗಶೀರ್ಷೇ ಚ ಫಾಲ್ಗುನೇ ।
ಆಷಾಢೇ ವಾ ದಶಮ್ಯಾಂ ತು ಶುಕ್ಲಾಯಾಂ ಲಘುಭುಙ್ನರಃ ।
ಕೃತ್ವಾ ಸಾಯಂತನೀಂ ಸಂಧ್ಯಾಂ ಗೃಹ್ಣೀಯಾನ್ನಿಯಮಂ ಬುಧಃ ॥ ೨ ॥

ಏಕಾದಶ್ಯಾಂ ನಿರಾಹಾರಃ ಸಮಭ್ಯರ್ಚ್ಯ ಜನಾರ್ದನಂ ।
ದ್ವಾದಶ್ಯಾಂ ದ್ವಿಜಸಂಯುಕ್ತಃ ಕರಿಷ್ಯೇ ಭೋಜನಂ ವಿಭೋ ॥ ೩ ॥

ತದವಿಘ್ನೇನ ಮೇ ಯಾತು ಸಫಲಂ ಸ್ಯಾಚ್ಚ ಕೇಶವ ।
ನಮೋ ನಾರಾಯಣಾಯೇತಿ ವಾಚ್ಯಂ ಚ ಸ್ವಪತಾ ನಿಶಿ ॥ ೪ ॥

---

೧. ನಂದಿಕೇಶ್ವರನು ಹೇಳಿದನು.—ಎಲೈ ನಾರದನೇ, ಅತಿ ಶ್ರೇಷ್ಠವಾದ ವೈಷ್ಣವ ವ್ರತವೊಂದನ್ನು ಹೇಳುವೆನು ಕೇಳು. ಅದಕ್ಕೆ ವಿಭೂತಿದ್ವಾದಶಿಯೆಂದು ಹೆಸರು. ಅದು ಸಕಲ ದೇವತೆಗಳಿಂದಲೂ ಗೌರವವನ್ನು ಪಡೆದಿರತಕ್ಕದು.

೨. ಕಾರ್ತಿಕ, ಚೈತ್ರ, ವೈಶಾಖ, ಮಾರ್ಗಶೀರ್ಷ, ಫಾಲ್ಗುನ ಅಥವಾ ಆಷಾಢಮಾಸಗಳಲ್ಲಿ ಶುಕ್ಲಪಕ್ಷದ ದಶಮಿಯ ದಿನ ಮಿತವಾಗಿ ಭೋಜನಮಾಡಿ, ಸಾಯಂಕಾಲದ ಸಂಧ್ಯಾವಂದನವಾದ ಬಳಿಕ ಶಾಸ್ತ್ರಜ್ಞನಾದ ಯಜಮಾನನು ನಿಯಮವನ್ನು ಕೈಗೊಳ್ಳಬೇಕು.

೩. "ದೇವಾ, ಜನಾರ್ದನಾ, ಏಕಾದಶಿಯಲ್ಲಿ ಉಪವಾಸಮಾಡಿ ನಿನ್ನನ್ನು ಪೂಜಿಸುವೆನು. ದ್ವಾದಶಿಯ ದಿನ ಬ್ರಾಹ್ಮಣರೊಡಗೂಡಿ ಪಾರಣೆಮಾಡುವೆನು.

೪. ಓ ಕೇಶವಾ, ಈ ನನ್ನ ಮನೋರಥವು ನಿರ್ವಿಘ್ನವಾಗಿ ನೆರವೇರಲಿ; ವ್ರತವು ಸಫಲವಾಗಲಿ" ಎಂದು ಪ್ರಾರ್ಥಿಸಿ, ರಾತ್ರಿಯಲ್ಲಿ ನಮೋ ನಾರಾಯಣಾಯ ಎಂದು ಧ್ಯಾನಿಸುತ್ತ ಮಲಗಬೇಕು. "ಶ್ರಿಯಃಪತಿಯಾದ ನಾರಾಯಣನಿಗೇ ನಾನು ಶೇಷಭೂತನು ; ಸ್ವತಂತ್ರನಲ್ಲ" ಎಂಬ ಅರ್ಥವು ಮನಸ್ಸಿನಲ್ಲಿರಬೇಕು.

ತತಃ ಪ್ರಭಾತ ಉತ್ಥಾಯ ಕೃತಸ್ನಾನಜಪಃ ಶುಚಿಃ ।
ಪೂಜಯೇತ್ಪುಂಡರೀಕಾಕ್ಷಂ ಶುಕ್ಲಮಾಲ್ಯಾನುಲೇಪನೈಃ ॥ ೫ ॥

ವಿಭೂತಯೇ ನಮಃ ಪಾದಾವಶೋಕಾಯ ಚ ಜಾನುನೀ ।
ನಮಶ್ಶಿವಾಯೇತ್ಯೂರೂ ಚ ವಿಶ್ವಮೂರ್ತೇರ್ ನಮಃ ಕಟಿಂ ॥ ೬ ॥

ಕಂದರ್ಪಾಯ ನಮೋ ಮೇಢ್ರಮಾದಿತ್ಯಾಯ ನಮಃ ಕರೌ ।
ದಾಮೋದರಾಯೇತ್ಯುದರಂ ವಾಸುದೇವಾಯ ಚ ಸ್ತನೌ ॥ ೭ ॥

ಮಾಧವಾಯೇತ್ಯುರೋ ವಿಷ್ಣೋಃ ಕಂಠಮುತ್ಕಂಠಿನೇ ನಮಃ ।
ಶ್ರೀಧರಾಯ ಮುಖಂ ಕೇಶಾರ್ ಕೇಶವಾಯೇತಿ ನಾರದ ॥ ೮ ॥

---

೫. ಬಳಿಕ ಪ್ರಾತಃಕಾಲದಲ್ಲೆದ್ದು, ಸ್ನಾನವನ್ನೂ ಜಪವನ್ನೂ ಮಾಡಿ ಶುದ್ಧನಾಗಿ, ಶುಭ್ರವರ್ಣದ ಗಂಧಪುಷ್ಪಗಳಿಂದ ಪುಂಡರೀಕಾಕ್ಷನನ್ನು ಪೂಜಿಸಬೇಕು.

೬. ಸಕಲ ಸಂಪತ್ಸ್ವರೂಪನಿಗೆ ನಮಸ್ಕಾರವೆಂದು ಪಾದಗಳನ್ನೂ, ಶೋಕರಹಿತನಿಗೆ ನಮಸ್ಕಾರವೆಂದು ಮೊಣಕಾಲುಗಳನ್ನೂ, ಮಂಗಳಮೂರ್ತಿಗೆ ನಮಸ್ಕಾರವೆಂದು ತೊಡೆಗಳನ್ನೂ ವಿಶ್ವರೂಪನಿಗೆ ನಮಸ್ಕಾರವೆಂದು ನಡುವನ್ನೂ ಅರ್ಚಿಸಬೇಕು.

೭. ಕಂದರ್ಪನಿಗೆ ನಮಸ್ಕಾರವೆಂದು ಮೇಢ್ರಾವಯವವನ್ನೂ, ಆದಿತ್ಯನಿಗೆ ನಮಸ್ಕಾರವೆಂದು ಕೈಗಳನ್ನೂ, ದಾಮೋದರನಿಗೆ ನಮಸ್ಕಾರವೆಂದು ಉದರವನ್ನೂ, ವಾಸುದೇವನಿಗೆ ನಮಸ್ಕಾರವೆಂದು ಸ್ತನಗಳನ್ನೂ ಪೂಜಿಸಬೇಕು.

೮. ಓ ನಾರದಾ, ಮಾಧವನಿಗೆ ನಮಸ್ಕಾರವೆಂದು ವಿಷ್ಣುವಿನ ಎದೆಯನ್ನೂ, ಭಕ್ತರಕ್ಷಣದಲ್ಲಿ ಆಸಕ್ತನಾದವನಿಗೆ ನಮಸ್ಕಾರವೆಂದು ಕುತ್ತಿಗೆಯನ್ನೂ, ಶ್ರೀಧರನಿಗೆ ನಮಸ್ಕಾರವೆಂದು ಮುಖವನ್ನೂ, ಕೇಶವನಿಗೆ ನಮಸ್ಕಾರವೆಂದು ಕೇಶಗಳನ್ನೂ ಅರ್ಚಿಸಬೇಕು.

ಪೃಷ್ಠಂ ಶಾರ್ಙ್ಗಧರಾಯೇತಿ ಶ್ರವಣೌ ವರದಾಯ ವೈ ।
ಸ್ವನಾಮ್ನಾ ಶಂಖಚಕ್ರಾಸಿಗದಾಜಲಜಪಾಣಯೇ ।
ಶಿರಃ ಸರ್ವಾತ್ಮನೇ ಬ್ರಹ್ಮನ್ನಮ ಇತ್ಯಭಿಪೂಜಯೇತ್ ॥ ೯ ॥

ಮತ್ಸ್ಯಮುತ್ಪಲಸಂಯುಕ್ತಂ ಹೈಮಂ ಕೃತ್ವಾ ತು ಶಕ್ತಿತಃ ।
ಉದಕುಂಭಸಮಾಯುಕ್ತಮಗ್ರತಃ ಸ್ಥಾಪಯೇದ್ಬುಧಃ ॥೧೦॥

ಗುಡಪಾತ್ರಂ ತಿಲೈರ್ಯುಕ್ತಂ ಸಿತವಸ್ತ್ರಾಭಿವೇಷ್ಟಿತಂ ।
ರಾತ್ರೌ ಜಾಗರಣಂ ಕುರ್ಯಾದಿತಿಹಾಸಕಥಾದಿನಾ ॥೧೧॥

ಪ್ರಭಾತಾಯಾಂ ತು ಶರ್ವರ್ಯಾಂ ಬ್ರಾಹ್ಮಣಾಯ ಕುಟುಂಬಿನೇ ।
ಸಕಾಂಚನೋತ್ಪಲಂ ದೇವಂ ಸೋದಕುಂಭಂ ನಿವೇದಯೇತ್ ॥೧೨॥

---

೯. ಶಾರ್ಙ್ಗವೆಂಬ ಬಿಲ್ಲನ್ನು ಧರಿಸಿದಾತನಿಗೆ ನಮಸ್ಕಾರವೆಂದು ಪೃಷ್ಠವನ್ನೂ, ವರವನ್ನು ಕರುಣಿಸುವವನಿಗೆ ನಮಸ್ಕಾರವೆಂದು ಕಿವಿಗಳನ್ನೂ, ಶಂಖ, ಚಕ್ರ, ಖಡ್ಗ, ಗದೆ ಮತ್ತು ಪದ್ಮಗಳನ್ನು ಧರಿಸಿದವನಿಗೆ ನಮಸ್ಕಾರವೆಂದು ಬಾಹುಗಳನ್ನೂ, ಓ ಪರಬ್ರಹ್ಮಸ್ವರೂಪಾ, ಸರ್ವಾತ್ಮನಾದ ನಿನಗೆ ನಮಸ್ಕಾರವೆಂದು ಶಿರಸ್ಸನ್ನೂ ಪೂಜಿಸಬೇಕು.

೧೦-೧೧. ವ್ರತವಿಧಾನವನ್ನರಿತ ಯಜಮಾನನು ಚಿನ್ನದಿಂದ ಮಾಡಿದ ನೈದಿಲೆ ಹೂವನ್ನೂ, ಮತ್ಸ್ಯವನ್ನೂ ಜಲಕುಂಭದಲ್ಲಿರಿಸಿ ಮುಂಭಾಗದಲ್ಲಿಡಬೇಕು. ಎಳ್ಳನ್ನೂ ಬೆಲ್ಲವನ್ನೂ ತುಂಬಿದ ಪಾತ್ರೆಯನ್ನು ಅದರ ಬಳಿಯಲ್ಲಿರಿಸಿ ಬಿಳಿಯ ವಸ್ತ್ರವನ್ನು ಧರಿಸಬೇಕು. ಇತಿಹಾಸಪುರಾಣಾದಿಕಥೆಗಳನ್ನು ಕೇಳುತ್ತ ರಾತ್ರಿಯಲ್ಲಿ ಜಾಗರಣಮಾಡಬೇಕು.

೧೨. ಪ್ರಾತಃಕಾಲವಾದ ಬಳಿಕ ಚಿನ್ನದ ನೈದಿಲೆ, ಉದಕಕುಂಭ ಇವುಗಳೊಡನೆ ಮಹಾವಿಷ್ಣುವಿನ ಮತ್ಸ್ಯಮೂರ್ತಿಯನ್ನು ಕುಟುಂಬಿಯಾದ ಬ್ರಾಹ್ಮಣನಿಗೆ ದಾನಮಾಡಬೇಕು.

**ಯಥಾ ನ ಮುಚ್ಯಸೇ ದೇವ ಸದಾ ಸರ್ವವಿಭೂತಿಭಿಃ ।**
**ತಥಾ ಮಾಮುದ್ಧರಾಶೇಷದುಃಖಸಂಸಾರಕರ್ದಮಾತ್ ॥೧೩॥**

**ದಶಾವತಾರರೂಪಾಣಿ ಪ್ರತಿಮಾಸಂ ಕ್ರಮಾನ್ಮುನೇ ।**
**ದತ್ತಾತ್ರೇಯಂ ತಥಾ ವ್ಯಾಸಮುತ್ಪಲೇನ ಸಮನ್ವಿತಂ ।**
**ದದ್ಯಾದೇವಂ ಸಮಾ ಯಾವತ್ಪಾಷಂಡಾನಭಿವರ್ಜಯೇತ್ ॥೧೪॥**

**ಸಮಾಪ್ಯೈವಂ ಯಥಾಶಕ್ತ್ಯಾ ದ್ವಾದಶ ದ್ವಾದಶೀಃ ಪುನಃ ।**
**ಸಂವತ್ಸರಾಂತೇ ಲವಣಪರ್ವತೇನ ಸಮನ್ವಿತಾಂ ।**
**ಶಯ್ಯಾಂ ದದ್ಯಾನ್ಮುನಿಶ್ರೇಷ್ಠ ಗುರವೇ ಧೇನುಸಂಯುತಾಂ ॥೧೫॥**

**ಗ್ರಾಮಂ ಚ ಶಕ್ತಿಮಾನ್ ದದ್ಯಾತ್ ಕ್ಷೇತ್ರಂ ವಾ ಭವನಾನ್ವಿತಂ ।**
**ಗುರುಂ ಸಂಪೂಜ್ಯ ವಿಧಿವದ್ವಸ್ತ್ರಾಲಂಕಾರಭೂಷಣೈಃ ॥೧೬॥**

---

೧೩. "ದೇವಾ, ಸಕಲವಿಧವಾದ ಸಂಪತ್ತುಗಳೂ ನಿನ್ನನ್ನು ಎಡೆಬಿಡದೆ ಆಶ್ರಯಿಸಿಕೊಂಡಿವೆ. ಅವುಗಳನ್ನು ನೀನು ಸಲಹುತ್ತಿರುವಂತೆಯೇ ದುಃಖಮಯವಾದ ಈ ಸಂಸಾರವೆಂಬ ಕೆಸರಿನಲ್ಲಿ ಮುಳುಗುತ್ತಿರುವ ನನ್ನನ್ನೂ ಮೇಲಕ್ಕೆತ್ತಿ ರಕ್ಷಿಸು."

೧೪. ಓ ಮುನಿವರ್ಯಾ, ವಿಷ್ಣುವಿನ ದಶಾವತಾರದ ಪ್ರತಿಮೆಗಳು, ದತ್ತಾತ್ರೇಯಮೂರ್ತಿ, ವ್ಯಾಸಮಹಾಮುನಿಯ ವಿಗ್ರಹ ಇವುಗಳಲ್ಲೊಂದೊಂದನ್ನು ಪ್ರತಿಯೊಂದು ತಿಂಗಳಿನಲ್ಲೂ ಕ್ರಮವಾಗಿ ನೈದಿಲೆಯೊಡನೆ ವರ್ಷವು ಪೂರ್ಣವಾಗುವ ವರೆಗೆ ದಾನಮಾಡಬೇಕು. ಈ ಕಾಲದಲ್ಲಿ ಧರ್ಮದ್ರೋಹಿಗಳ ಸಂಸರ್ಗವೊದಗದಂತೆ ಎಚ್ಚರಿಕೆಯಿಂದಿರಬೇಕು.

೧೫. ಹೀಗೆ ಹನ್ನೆರಡು ದ್ವಾದಶೀವ್ರತಗಳನ್ನು ತನ್ನ ಶಕ್ತಿಯಿದ್ದಂತೆ ನಡೆಸಿ, ಸಂವತ್ಸರಾಂತದಲ್ಲಿ ಗುರುವಿಗೆ ಲವಣಪರ್ವತದೊಡನೆ (ಉಪ್ಪಿನಿಂದ ಮಾಡಿದ ಪರ್ವತದ ಆಕೃತಿ) ಶಯ್ಯಾದಾನವನ್ನು ಮಾಡಬೇಕು. ಓ ಮಹರ್ಷೀ, ಅದರೊಡನೆ ಹಸುವನ್ನೂ ಕೊಡಬೇಕು.

೧೬. ಐಶ್ವರ್ಯವಂತನಾದರೆ ವಸ್ತ್ರಾಲಂಕಾರಭೂಷಣಗಳಿಂದ ಗುರುವನ್ನು ಶಾಸ್ತ್ರೋಕ್ತವಾಗಿ ಪೂಜಿಸಿ ಗ್ರಾಮ, ಭೂಮಿ, ಮನೆ ಮುಂತಾದುವುಗಳನ್ನು ದಾನ ಮಾಡಬಹುದು.

ಅನ್ಯಾನಪಿ ಯಥಾಶಕ್ತ್ಯಾ ಭೋಜಯಿತ್ವಾ ದ್ವಿಜೋತ್ತಮಾನ್ ।
ತರ್ಪಯೇದ್ವಸ್ತ್ರಗೋದಾನೈ ರತ್ನೌಘಧನಸಂಚಯೈಃ ।
ಅಲ್ಪವಿತ್ತೋ ಯಥಾಶಕ್ತ್ಯಾ ಸ್ತೋಕಂ ಸ್ತೋಕಂ ಸಮಾಚರೇತ್ ॥೧೭॥

ಯಶ್ಚಾಪ್ಯತೀವ ನಿಸ್ಸ್ವಃ ಸ್ಯಾದ್ಭಕ್ತಿಮಾನ್ ಮಾಧವಂ ಪ್ರತಿ ।
ಪುಷ್ಪಾರ್ಚನವಿಧಾನೇನ ಸ ಕುರ್ಯಾದ್ವತ್ಸರದ್ವಯಂ ॥೧೮॥

ಅನೇನ ವಿಧಿನಾ ಯಸ್ತು ವಿಭೂತಿದ್ವಾದಶೀವ್ರತಂ ।
ಕುರ್ಯಾತ್ಪಾಪವಿನಿರ್ಮುಕ್ತಃ ಪಿತೄಣಾಂ ತಾರಯೇಚ್ಛತಂ ॥೧೯॥

ಜನ್ಮನಾಂ ಶತಸಾಹಸ್ರಂ ನ ಶೋಕಫಲಭಾಗ್ಭವೇತ್ ।
ನ ಚ ವ್ಯಾಧಿರ್ಭವೇತ್ತಸ್ಯ ನ ದಾರಿದ್ರ್ಯಂ ನ ಬಂಧನಂ ।
ವೈಷ್ಣವೋ ವಾಥ ಶೈವೋ ವಾ ಭವೇಜ್ಜನ್ಮನಿ ಜನ್ಮನಿ ॥೨೦॥

---

೧೭. ಅಲ್ಲದೆ ಉಳಿದ ಬ್ರಾಹ್ಮಣರನ್ನೂ ಸಹ ಭೋಜನದಿಂದ ತೃಪ್ತಿಪಡಿಸಿ, ಶಕ್ತಿಯಿದ್ದಷ್ಟು ಮಟ್ಟಿಗೆ ವಸ್ತ್ರದಾನವನ್ನೂ ಗೋದಾನವನ್ನೂ ಮಾಡಿ ಧನ ಕನಕ ರತ್ನಗಳನ್ನು ಕೊಡಬೇಕು. ದರಿದ್ರನು ತನ್ನ ಯೋಗ್ಯತೆಗೆ ತಕ್ಕಂತೆ ಸ್ವಲ್ಪ ಸ್ವಲ್ಪ ಕೊಡಬಹುದು.

೧೮. ವಿಷ್ಣುವಿನಲ್ಲಿ ಭಕ್ತಿಯು ಬಹಳವಾಗಿದ್ದು ದ್ರವ್ಯಾನುಕೂಲ್ಯವು ಮಾತ್ರ ಏನೇನೂ ಇಲ್ಲದಿದ್ದರೆ ಅಂತಹವನು ಪುಷ್ಪಾರ್ಚನ ವಿಧಿಯಿಂದಲೇ ಈ ವ್ರತವನ್ನು ಎರಡು ವರ್ಷಗಳ ಕಾಲ ನಡೆಸಬೇಕು.

೧೯. ಈ ವಿಧಾನವನ್ನನುಸರಿಸಿ ವಿಭೂತಿದ್ವಾದಶೀವ್ರತವನ್ನು ಮಾಡುವಾತನು ಪಾಪರಹಿತನೆನಿಸುವನು. ನೂರು ತಲೆಗಳ ವರೆಗೆ ಅವನ ಪಿತೃಗಳು ಸದ್ಗತಿಯನ್ನೈದುವರು.

೨೦. ಲಕ್ಷ ಜನ್ಮಗಳನ್ನೆತ್ತಲಿ ಆತನಿಗೆ ದುಃಖವೆಂಬುದೇ ಬಾರದು. ರೋಗ, ಬಡತನ, ಬಂಧನ ಇವೊಂದೂ ಅವನ ಬಳಿ ಸುಳಿಯದು. ಪ್ರತಿಯೊಂದು ಜನ್ಮದಲ್ಲಿಯೂ ಆತನು ವಿಷ್ಣುಭಕ್ತನೋ ಶಿವಭಕ್ತನೋ ಆಗುವನು.

**ಯಾವದ್ಯುಗಸಹಸ್ರಾಣಾಂ ಶತಮಷ್ಟೋತ್ತರಂ ಭವೇತ್ ।**
**ತಾವತ್ಸ್ವರ್ಗೇ ವಸೇದ್ಬ್ರಹ್ಮನ್ ಭೂಪತಿಶ್ಚ ಪುನರ್ಭವೇತ್ ॥೨೧॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ವಿಷ್ಣುವ್ರತಂ ನಾಮ**
**ನವನವತಿತಮೋಽಧ್ಯಾಯಃ**

---

೨೧. ಓ ಬ್ರಾಹ್ಮಣೋತ್ತಮಾ, ಒಂದುನೂರೆಂಟು ಸಾವಿರ ಯುಗಗಳ ವರೆಗೆ ಅವನು ಸ್ವರ್ಗದಲ್ಲಿ ವಾಸಿಸುವನು. ಬಳಿಕ ರಾಜನಾಗಿ ಮತ್ತೆ ಹುಟ್ಟುವನು.

### ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ವಿಭೂತಿ ದ್ವಾದಶಿಯೆಂಬ ವಿಷ್ಣುವ್ರತವನ್ನು ವಿವರಿಸಿದೆ.

ಕಾರ್ತಿಕ, ಮಾರ್ಗಶಿರ, ಫಾಲ್ಗುನ, ಚೈತ್ರ, ವೈಶಾಖ, ಆಷಾಢ ಈ ತಿಂಗಳು ಗಳಲ್ಲೊಂದರಲ್ಲಿ ಶುಕ್ಲಪಕ್ಷದ ದಶಮಿಯ ದಿನ ಲಘುಭೋಜನವನ್ನು ಮಾಡಿ, ಏಕಾದಶಿಯಲ್ಲಿ ಪುಂಡರೀಕಾಕ್ಷನನ್ನು ಪೂಜಿಸಬೇಕು. ಪಾದಾದಿಕೇಶಾಂತವಾಗಿ ಆಯಾ ಮಂತ್ರಗಳಿಂದ ಅರ್ಚನೆಯನ್ನು ಮಾಡಬೇಕು. ರಾತ್ರಿ ಜಾಗರಣೆಯಿದ್ದು, ಮರುದಿನ ಬೆಳಗ್ಗೆ ಕುಟುಂಬಿಯಾದ ಬ್ರಾಹ್ಮಣನಿಗೆ ಉದಕುಂಭಸಹಿತವಾಗಿ ಸುವರ್ಣಮತ್ಸ್ಯವನ್ನು ದಾನವಾಗಿ ಕೊಡಬೇಕು. ಪ್ರತಿಯೊಂದು ತಿಂಗಳೂ ಹೀಗೆಯೇ ವ್ರತವನ್ನು ಮಾಡುತ್ತ ವಿಷ್ಣುವಿನ ದಶಾವತಾರ ಮೂರ್ತಿಗಳು, ದತ್ತಾತ್ರೇಯ ಪ್ರತಿಮೆ, ವ್ಯಾಸವಿಗ್ರಹ ಇವುಗಳಲ್ಲೊಂದೊಂದನ್ನು ಕ್ರಮವಾಗಿ ದಾನ ಮಾಡುತ್ತ ಬರಬೇಕು. ಸಂವತ್ಸರಾಂತದಲ್ಲಿ ಶಯ್ಯಾದಾನ, ವಸ್ತ್ರದಾನ, ಗೋದಾನ ಮೊದಲಾದುವುಗಳನ್ನು ತನ್ನ ಶಕ್ತಿಯಿದ್ದಂತೆ ನಡೆಸಬಹುದು. ಈ ವ್ರತವನ್ನು ಮಾಡಿದವನಿಗೆ ಬರುವ ಪುಣ್ಯವು ಅಷ್ಟಿಷ್ಟಲ್ಲ. ನೂರು ತಲೆಗಳ ವರೆಗೆ ಅವನ ಪಿತೃಗಳು ಸದ್ಗತಿಯನ್ನು ಪಡೆಯುವರು. ಅವನು ಅನಂತಕಾಲ ಸ್ವರ್ಗದಲ್ಲಿ ಸುಖಿಸುತ್ತಿದ್ದು ಭೂಲೋಕದಲ್ಲಿ ಮರಳಿ ರಾಜನಾಗಿ ಜನಿಸುವನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ವಿಷ್ಣುವ್ರತವೆಂಬ ತೊಂಬತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

## ಅಥ ಶತತಮೋಽಧ್ಯಾಯಃ

॥ ನಂದಿಕೇಶ್ವರ ಉವಾಚ ॥

ಪುರಾ ರಥಂತರೇ ಕಲ್ಪೇ ರಾಜಾಽಽಸೀತ್ಪುಷ್ಪವಾಹನಃ ।
ನಾಮ್ನಾ ಲೋಕೇಷು ವಿಖ್ಯಾತಸ್ತೇಜಸಾ ಸೂರ್ಯಸನ್ನಿಭಃ ॥ ೧ ॥

ತಪಸಾ ತಸ್ಯ ತುಷ್ಟೇನ ಚತುರ್ವಕ್ತ್ರೇಣ ನಾರದ ।
ಕಮಲಂ ಕಾಂಚನಂ ದತ್ತಂ ಯಥಾಕಾಮಗಮಂ ಮುನೇ ॥ ೨ ॥

ಲೋಕೈಃ ಸಮಸ್ತೈರ್ನಗರವಾಸಿಭಿಃ ಸಹಿತೋ ನೃಪಃ ।
ದ್ವೀಪಾನಿ ಸುರಲೋಕಂ ಚ ಯಥೇಷ್ಟಂ ವ್ಯಚರತ್ತದಾ ॥ ೩ ॥

ಕಲ್ಪಾದೌ ಸಪ್ತಮಂ ದ್ವೀಪಂ ತಸ್ಯ ಪುಷ್ಕರವಾಸಿನಃ ।
ಲೋಕೇ ಚ ಪೂಜಿತಂ ಯಸ್ಮಾತ್ಪುಷ್ಕರದ್ವೀಪಮುಚ್ಯತೇ ॥ ೪ ॥

---

೧. ನಂದಿಕೇಶ್ವರನು ಹೇಳಿದನು.—ಹಿಂದೆ ರಥಂತರಕಲ್ಪದಲ್ಲಿ ಪುಷ್ಪವಾಹನನೆಂಬ ದೊರೆಯಿದ್ದನು. ಅವನ ಕೀರ್ತಿಯು ಎಲ್ಲ ಲೋಕಗಳಲ್ಲಿಯೂ ಹರಡಿದ್ದಿತು. ಅವನು ತೇಜಸ್ಸಿನಲ್ಲಿ ಸೂರ್ಯನಿಗೆ ಸಮನಾಗಿದ್ದನು.

೨. ಓ ನಾರದಾ, ಚತುರ್ಮುಖಬ್ರಹ್ಮನು ಅವನ ತಪಸ್ಸಿಗೆ ಮೆಚ್ಚಿ ಅವನಿಗೆ ಸುವರ್ಣಮಯವಾದ ಕಮಲವೊಂದನ್ನು ಕರುಣಿಸಿದನು. ಇಷ್ಟ ಬಂದ ಕಡೆಗೆ ಹೋಗುವ ಸಾಮರ್ಥ್ಯವು ಅದಕ್ಕಿದ್ದಿತು.

೩. ಆ ರಾಜನು ತನ್ನ ನಗರದಲ್ಲಿ ವಾಸಿಸುತ್ತಿದ್ದ ಎಲ್ಲ ಜನರೊಡನೆಯೂ ಆ ಕಮಲದಲ್ಲಿ ಕುಳಿತು, ದ್ವೀಪಗಳಲ್ಲಿಯೂ ದೇವಲೋಕದಲ್ಲಿಯೂ ತನ್ನ ಮನಸ್ಸು ಬಂದಂತೆ ಸಂಚರಿಸುತ್ತಿದ್ದನು.

೪. ಕಮಲದಲ್ಲಿ ಕುಳಿತು ಸಂಚರಿಸುತ್ತಿದ್ದ ಆ ರಾಜನು ಕಲ್ಪದ ಆದಿಯಲ್ಲಿ ಏಳನೆಯ ದ್ವೀಪದಲ್ಲಿ ವಾಸಿಸುತ್ತಿದ್ದನು. ಆದಕಾರಣ ಆ ದ್ವೀಪಕ್ಕೆ ಪುಷ್ಕರ ದ್ವೀಪವೆಂಬ ಖ್ಯಾತಿಯೂ, ಲೋಕಪೂಜ್ಯತೆಯೂ ಬಂದುವು.

ದೇವೇನ ಬ್ರಹ್ಮಣಾ ದತ್ತಂ ಯಾನಮಸ್ಯ ಯತೋಽಂಬುಜಂ ।
ಪುಷ್ಪವಾಹನಮಿತ್ಯಾಹುಸ್ತಸ್ಮಾತ್ತಂ ದೇವದಾನವಾಃ ॥ ೫ ॥

ನಾಗಮ್ಯಮಸ್ಯಾಸ್ತಿ ಜಗತ್ತ್ರಯೇಽಪಿ
ಬ್ರಹ್ಮಾಂಬುಜಸ್ಥಸ್ಯ ತಪೋಽನುಭಾವಾತ್ ।
ಪತ್ನೀ ಚ ತಸ್ಯಾಪ್ರತಿಮಾ ಮುನೀಂದ್ರ
ನಾರೀಸಹಸ್ರೈರಭಿತೋಽಭಿನಂದ್ಯಾ ।
ನಾಮ್ನಾ ಚ ಲಾವಣ್ಯವತೀ ಬಭೂವ
ಸಾ ಪಾರ್ವತೀವೇಷ್ಟತಮಾ ಭವಸ್ಯ ॥ ೬ ॥

ತಸ್ಯಾತ್ಮಜಾನಾಮಯುತಂ ಬಭೂವ
ಧರ್ಮಾತ್ಮನಾಮುಗ್ರ್ಯಧನುರ್ಧರಾಣಾಂ ।
ತದಾತ್ಮನಃ ಸರ್ವಮವೇಕ್ಷ್ಯ ರಾಜಾ
ಮುಹುರ್ಮುಹುಃ ವಿಸ್ಮಯಮಾಸಸಾದ ।
ಸೋಽಭ್ಯಾಗತಂ ವೀಕ್ಷ್ಯ ಮುನಿಪ್ರವೀರಂ
ಪ್ರಾಚೇತಸಂ ವಾಕ್ಯಮಿದಂ ಬಭಾಷೇ ॥ ೭ ॥

---

೫. ಪೂಜ್ಯನಾದ ಬ್ರಹ್ಮನು ಅವನಿಗೆ ಕಮಲವನ್ನು ವಾಹನವಾಗಿ ಕೊಟ್ಟ ಕಾರಣ, ದೇವತೆಗಳೂ ದಾನವರೂ ಅವನನ್ನು ಪುಷ್ಪವಾಹನನೆಂದು ಕರೆಯುವರು.

೬. ತಪಸ್ಸಿನ ಮಹಿಮೆಗೆ ಮೆಚ್ಚಿ ಬ್ರಹ್ಮದೇವನು ಅನುಗ್ರಹಿಸಿದ ತಾವರೆಯಲ್ಲಿ ಆ ರಾಜನು ಕುಳಿತರೆ ಮೂರು ಲೋಕದಲ್ಲಿಯೂ ಅವನಿಗೆ ಸಂಚರಿಸುವುದಕ್ಕಾಗದ ಸ್ಥಳವಾವುದೂ ಇರಲಿಲ್ಲ. ಎಲೈ ನಾರದನೇ, ಅವನ ಪತ್ನಿಯು ರೂಪಲಾವಣ್ಯಗಳಲ್ಲಿ ಅಸಮಾನಳೆನಿಸಿದ್ದಳು. ಸಾವಿರಾರು ಜನ ನಾರೀಮಣಿಯರು ಆಕೆಯನ್ನು ಓಲೈಸುತ್ತಿದ್ದರು. ಅವಳ ಹೆಸರು ಲಾವಣ್ಯವತಿ. ಈಶ್ವರನಿಗೆ ಪಾರ್ವತಿಯು ಹೇಗೋ ಹಾಗೆ ಪುಷ್ಪವಾಹನನಿಗೆ ಆಕೆಯು ಪ್ರಿಯತಮೆಯೆನಿಸಿದ್ದಳು.

೭. ಆತನಿಗೆ ಧರ್ಮಾತ್ಮರೂ, ಉತ್ತಮ ಧನುರ್ಧಾರಿಗಳೂ ಆದ ಹತ್ತು ಸಾವಿರ ಜನ ಮಕ್ಕಳು ಜನಿಸಿದರು. ಈ ಸುಖಸೌಭಾಗ್ಯವೆಲ್ಲವೂ ತನಗೆ ಒದಗಿದುದನ್ನು ಕಂಡು ಆ ರಾಜನು ಅಡಿಗಡಿಗೆ ಆಶ್ಚರ್ಯಪಡುತ್ತಿದ್ದನು. ಮುನಿಶ್ರೇಷ್ಠನಾದ ಪ್ರಾಚೇತಸನು ಒಮ್ಮೆ ಆತನ ಬಳಿಗೆ ಬರಲು, ಅವನು ಆ ಋಷಿಯನ್ನಿಂತು ಕೇಳಿದನು.

## ಅಧ್ಯಾಯ ೧೧೦

॥ ರಾಜೋವಾಚ ॥

ಕಸ್ಮಾದ್ವಿಭೂತಿರಮಲಾಽಮರಮರ್ತ್ಯಪೂಜ್ಯಾ
 ಜಾತಾ ಚ ಸರ್ವವಿಜಿತಾಮರಸುಂದರೀಣಾಂ ।
ಭಾರ್ಯಾ ಮಮಾಲ್ಪತಪಸಾ ಪರಿತೋಷಿತೇನ
 ದತ್ತಂ ಮಮಾಂಬುಜಗೃಹಂ ಚ ಮುನೀಂದ್ರ ಧಾತ್ರಾ ॥ ೮ ॥

ಯಸ್ಮಿನ್ ಪ್ರವಿಷ್ಟಮಪಿ ಕೋಟಿಶತಂ ನೃಪಾಣಾಂ
 ಸಾಮಾತ್ಯಕುಂಜರರಥೌಘಜನಾವೃತಾನಾಂ ।
ನೋ ಲಕ್ಷ್ಯತೇ ಕ್ವ ಗತಮಂಬರಮಧ್ಯ ಇಂದು
 ಸ್ತಾರಾಗಣೈರಿವ ಗತಃ ಪರಿತಃ ಸ್ಫುರದ್ಭಿಃ ॥ ೯ ॥

ತಸ್ಮಾತ್ಕಿಮನ್ಯಜನನೀಜಠರೋದ್ಭವೇನ
 ಧರ್ಮಾದಿಕಂ ಕೃತಮಶೇಷಫಲಾಪ್ತಿಹೇತುಃ ।
ಭಗವನ್ಮಯಾಽಥ ತನಯೈರಥವಾಽನಯಾಪಿ
 ಭದ್ರಂ ಯದೇತದಖಿಲಂ ಕಥಯ ಪ್ರಚೇತಃ ॥೧೦॥

---

೮. "ಓ ಮುನಿವರ್ಯಾ, ದೇವತೆಗಳೂ ಮನುಷ್ಯರೂ ಗೌರವಿಸುವಂತಹ ವಿಪುಲವಾದ ಸಂಪತ್ತು ನನಗೆ ದೊರೆತಿದೆ. ಗುಣರೂಪಗಳಿಂದ ದೇವತಾಸ್ತ್ರೀಯರೆಲ್ಲ ರನ್ನೂ ಮೀರಿಸುವ ಪತ್ನಿಯಿದ್ದಾಳೆ. ನಾನು ಮಾಡಿದ ಅಲ್ಪವಾದ ತಪಸ್ಸಿನಿಂದ ಪ್ರಸನ್ನನಾಗಿ ಬ್ರಹ್ಮದೇವನು ನನಗೆ ಕಮಲಗೃಹವನ್ನೂ ಕರುಣಿಸಿದ್ದಾನೆ. ಇದೆಲ್ಲಕ್ಕೂ ಕಾರಣವೇನು?

೯. ಈ ಕಮಲಗೃಹದಲ್ಲಿ ಮಂತ್ರಿಗಳು, ಆನೆಗಳು, ತೇರುಗಳು, ಪರಿಜನ ಗಳು ಇವರೊಡಗೂಡಿ ನೂರಾರು ಕೋಟಿ ರಾಜರು ಪ್ರವೇಶಿಸಿದರೂ ಅವರೆಲ್ಲಿ ಹೋದರೆಂಬುದು ಸಹ ಸ್ಪಷ್ಟವಾಗಿ ಕಾಣುವುದಿಲ್ಲ. ಸುತ್ತಲೂ ಮಿಣುಗುಟ್ಟುತ್ತಿ ರುವ ನಕ್ಷತ್ರಗಳ ನಡುವೆ ಆಕಾಶದಲ್ಲಿ ಚಂದ್ರನು ಹೊಳೆಯುವಂತೆ ಅಸ್ಪಷ್ಟವಾಗಿ ಅವರ ತೇಜಸ್ಸು ಮಾತ್ರ ತೋರಿಬರುವುದು.

೧೦. ಈ ಸಕಲ ಸುಖಲಾಭಕ್ಕೆ ಕಾರಣವಾದ ಧರ್ಮಾದಿಸತ್ಕಾರ್ಯವನ್ನು ಬೇರೆ ಜನ್ಮದಲ್ಲಿ ನಾನೇನಾದರೂ ಮಾಡಿದ್ದೇನೇ? ಎಲೈ ಪೂಜ್ಯನೇ, ನನ್ನ ಮಕ್ಕಳೇ ನಾದರೂ ಮಾಡಿದ್ದರೇ? ಅಥವಾ ಈ ನನ್ನ ಪತ್ನಿಯು ನಡೆಸಿದ್ದಳೇ? ಓ ಪ್ರಾಚೇ ತಸಾ, ಏತರಿಂದ ಈ ಶುಭಫಲವೆಲ್ಲವೂ ದೊರಕಿದೆ? ಹೇಳು."

ಮುನಿರಭ್ಯಧಾದಥ ಭವಾಂತರಿತಂ ಸಮೀಕ್ಷ್ಯ
ಪೃಥ್ವೀಪತೇಃ ಪ್ರಸಭಮುದ್ಭುತಹೇತುವೃತ್ತಂ ।
ಜನ್ಮಾಽಭವತ್ತವ ತು ಲುಬ್ಧಕುಲೇಽತಿಘೋರೇ
ಜಾತಸ್ತ್ವಮಪ್ಯನುದಿನಂ ಕಿಲ ಪಾಪಕಾರೀ ॥೧೧॥

ವಪುರಪ್ಯಭೂತ್ತವ ಪುನಃ ಪರುಷಾಂಗಸಂಧಿ
ದುರ್ಗಂಧಿಸತ್ತ್ವಭುಜಗಾವರಣಂ ಸಮಂತಾತ್ ।
ನ ಚ ತೇ ಸುಹೃನ್ನ ಸುತಬಂಧುಜನೋ ನ ತಾತಃ
ತ್ವಾದೃಕ್ಸ್ವಸಾ ನ ಜನನೀ ಚ ತದಾಽಭಿಶಸ್ತಾ ॥೧೨॥

ಅಭಿಸಂಗತಾ ಪರಮಭೀಷ್ಟತಮಾ
ವಿಮುಖೀ ಮಹೀಶ ತವ ಯೋಷಿದಿಯಂ ।
ಅಭೂದನಾವೃಷ್ಟಿರತೀವ ರೌದ್ರಾ
ಕದಾಚಿದಾಹಾರನಿಮಿತ್ತಮಸ್ಮಿನ್
ಕ್ಷುತ್ಪೀಡಿತೇನಾಥ ತದಾ ನ ಕಿಂಚಿ
ದಾಸಾದಿತಂ ಧಾನ್ಯಫಲಾಮಿಷಾದ್ಯಂ ॥೧೩॥

---

೧೧. ಬಳಿಕ ಮುನಿಯು ರಾಜನ ಜನ್ಮಾಂತರದ ವೃತ್ತಾಂತವನ್ನರಿತು, ಆತನಿಗೆ ಅನಿರೀಕ್ಷಿತವಾದ ಆಶ್ಚರ್ಯವುಂಟಾಗುತ್ತಿರಲು ಇಂತೆಂದು ಹೇಳಿದನು. ಎಲೈ ಭೂಪಾಲಕಾ, ನೀನು ಘೋರವಾದ ಬೇಡರ ಕುಲದಲ್ಲಿ ಹುಟ್ಟಿದ್ದೆ. ದಿನದಿನವೂ ಪಾಪಕಾರ್ಯಗಳನ್ನು ಮಾಡುತ್ತಿದ್ದೆ.

೧೨. ನಿನ್ನ ದೇಹವಾದರೋ ಬಹಳ ವಿರೂಪವಾಗಿತ್ತು. ಅವಯುವಗಳ ಸಂಧಿಗಳು ಒರಟೊರಟಾಗಿದ್ದುವು. ನಿನ್ನ ವಾಸಸ್ಥಳದ ಸುತ್ತಲೂ ದುರ್ಗಂಧಮಯವಾದ ಪ್ರಾಣಿಗಳೂ ಹಾವುಗಳೂ ತುಂಬಿದ್ದುವು. ನಿನಗೆ ಸ್ನೇಹಿತರೂ, ಮಕ್ಕಳೂ, ನೆಂಟರಿಷ್ಟರೂ, ತಂದೆಯೂ, ಒಡಹುಟ್ಟಿದವಳೂ, ತಾಯಿಯೂ ಯಾರೂ ಇರಲಿಲ್ಲ.

೧೩. ರಾಜಾ, ಈಗ ನಿನಗೆ ಪರಮಪ್ರಿಯಳಾಗಿರುವ ಈ ಪತ್ನಿಯೂ ಸಹ ಆಗ ಪ್ರತಿಕೂಲೆಯೇ ಆಗಿದ್ದಳು. ಒಂದು ಸಾರಿ ಮಳೆಯಿಲ್ಲದೆ ಬಹು ಭಯಂಕರವಾದ ಕ್ಷಾಮವೊದಗಿತು. ನೀನು ಹಸಿವಿನಿಂದ ಬಳಲಿ ಆಹಾರವನ್ನು ಹುಡುಕುತ್ತ ಹೊರಟೆ. ಧಾನ್ಯ, ಫಲ, ಮಾಂಸ ಮುಂತಾದುದೇನೂ ಸಿಕ್ಕಲಿಲ್ಲ.

ಅಥಾಭಿದೃಷ್ಟಂ ಮಹದಂಬುಜಾಢ್ಯಂ
ಸರೋವರಂ ಪಂಕಪರೀತರೋಧಃ ।
ಪದ್ಮಾನ್ಯಥಾದಾಯ ತತೋ ಬಹೂನಿ
ಗತಃ ಪುರಂ ವೈದಿಶನಾಮಧೇಯಂ ॥೧೪॥

ತನ್ಮೌಲ್ಯಲಾಭಾಯ ಪುರಂ ಸಮಸ್ತಂ
ಭ್ರಾಂತಂ ತ್ವಯಾಽಶೇಷಮಹಸ್ತದಾಽಽಸೀತ್ ।
ಕ್ರೇತಾ ನ ಕಶ್ಚಿತ್ಕಮಲೇಷು ಜಾತಃ
ಕ್ಲಾಂತೋ ಭೃಶಂ ಕ್ಷುತ್ಪರಿಪೀಡಿತಶ್ಚ ॥೧೫॥

ಉಪವಿಷ್ಟಸ್ತ್ವಮೇಕಸ್ಮಿನ್ ಸಭಾರ್ಯೋ ಭವನಾಂಗಣೇ ।
ಅಥ ಮಂಗಲಶಬ್ದಶ್ಚ ತ್ವಯಾ ರಾತ್ರೌ ಮಹಾಞ್ಶ್ರುತಃ ॥೧೬॥

ಸಭಾರ್ಯಸ್ತತ್ರ ಗತವಾನ್ ಯತ್ರಾಽಸೌ ಮಂಗಲಧ್ವನಿಃ ।
ತತ್ರ ಮಂಡಪಮಧ್ಯಸ್ಥಾ ವಿಷ್ಣೋರರ್ಚಾವಲೋಕಿಕಾ ॥೧೭॥

---

೧೪. ಬಳಿಕ ಲೆಕ್ಕವಿಲ್ಲದಷ್ಟು ತಾವರೆಗಳಿಂದ ತುಂಬಿದ ಸರೋವರವೊಂದನ್ನು ನೀನು ಕಂಡೆ. ಅದರ ದಡದ ಬಳಿಯಲ್ಲಿ ಸುತ್ತಲೂ ಕೆಸರು ತುಂಬಿತ್ತು. ಬೇಕಾದಷ್ಟು ಹೂಗಳನ್ನು ಕಿತ್ತುಕೊಂಡು ವೈದಿಶವೆಂಬ ಪಟ್ಟಣಕ್ಕೆ ನೀನು ತೆರಳಿದೆ.

೧೫. ಅದನ್ನು ಮಾರಿ ದುಡ್ಡು ಸಂಪಾದಿಸಬೇಕೆಂಬ ಉದ್ದೇಶದಿಂದ ಆ ನಗರದಲ್ಲೆಲ್ಲ ನೀನು ಅಲೆದೆ. ಹಗಲೆಲ್ಲವೂ ಹೀಗೆಯೇ ಕಳೆಯಿತು. ಆ ತಾವರೆಗಳನ್ನು ಕೊಂಡುಕೊಳ್ಳುವವನು ಒಬ್ಬನೂ ಸಿಕ್ಕಲಿಲ್ಲ. ನೀನು ಬಹಳ ಬಳಲಿದೆ. ಹಸಿವಿನಿಂದ ತುಂಬ ಸಂಕಟಪಟ್ಟೆ.

೧೬. ಒಂದಾನೊಂದು ಮನೆಯ ಅಂಗಳದಲ್ಲಿ ನೀನು ನಿನ್ನ ಪತ್ನಿಯೊಡನೆ ಕುಳಿತುಕೊಂಡೆ. ಆ ರಾತ್ರಿಯಲ್ಲಿ ಅತಿಶಯವಾದ ಮಂಗಲಧ್ವನಿಯು ನಿನಗೆ ಕೇಳಬಂದಿತು.

೧೭. ಮಂಗಲಶಬ್ದವಾಗುತ್ತಿದ್ದ ಸ್ಥಳಕ್ಕೆ ನೀನು ಪತ್ನಿಯೊಡನೆ ಹೋದೆ. ಮಂಟಪದ ಮಧ್ಯದಲ್ಲಿದ್ದ ಮಹಾವಿಷ್ಣುವಿನ ಅರ್ಚಾವಿಗ್ರಹವನ್ನು ನೀವು ಕಂಡಿರಿ.

ವೇಶ್ಯಾಽನಂಗವತೀ ನಾಮ ವಿಭೂತಿದ್ವಾದಶೀವ್ರತಂ ।
ಸಮಾಪ್ಯ ಮಾಘಮಾಸಸ್ಯ ದ್ವಾದಶ್ಯಾಂ ಲವಣಾಚಲಂ ॥೧೮॥

ನಿವೇದಯಂತೀ ಗುರವೇ ಶಯ್ಯಾಂ ಚೋಪಸ್ಕರಾನ್ವಿತಾಂ ।
ಅಲಂಕೃತ್ಯ ಹೃಷೀಕೇಶಂ ಸೌವರ್ಣಾಮರಪಾದಪಂ ॥೧೯॥

ತಾಂ ತು ದೃಷ್ಟ್ವಾ ತತಸ್ತಾಭ್ಯಾಮಿದಂ ಚ ಪರಿಚಿಂತಿತಂ ।
ಕಿಮೇಭಿಃ ಕಮಲೈಃ ಕಾರ್ಯಂ ವರಂ ವಿಷ್ಣುರಲಂಕೃತಃ ॥೨೦॥

ಇತಿ ಭಕ್ತಿಸ್ತದಾ ಜಾತಾ ದಂಪತ್ಯೋಽಸ್ತು ನರಾಧಿಪ ।
ತತ್ಪ್ರಸಂಗಾತ್ಸಮಭ್ಯರ್ಚ್ಯ ಕೇಶವಂ ಲವಣಾಚಲಂ ।
ಶಯ್ಯಾ ಚ ಪುಷ್ಪಪ್ರಕರೈಃ ಪೂಜಿತಾ ಭೂಶ್ಚ ಸರ್ವತಃ ॥೨೧॥

ಅಥಾನಂಗವತೀ ತುಷ್ಟಾ ತಯೋರ್ಧನಶತತ್ರಯಂ ।
ದೀಯತಾಮಾದಿದೇಶಾಥ ಕಲಧೌತಶತತ್ರಯಂ ॥೨೨॥

---

೧೮-೧೯. ಅನಂಗವತಿಯೆಂಬ ವೇಶ್ಯೆಯು ವಿಭೂತಿ ದ್ವಾದಶೀವ್ರತವನ್ನು ಮುಗಿಸಿ, ಮಾಘಮಾಸದ ದ್ವಾದಶಿಯಲ್ಲಿ ವಿಷ್ಣುವಿನ ಮಂಗಳಮೂರ್ತಿಯನ್ನು ಅಲಂಕರಿಸಿ, ಲವಣಾಚಲವನ್ನೂ, ಸುವರ್ಣಮಯವಾದ ಕಲ್ಪವೃಕ್ಷವನ್ನೂ ಸಕಲ ಪರಿಕರ ಸಹಿತವಾದ ಶಯನವನ್ನೂ ಗುರುವಿಗೆ ದಾನಮಾಡುತ್ತಿದ್ದಳು.

೨೦. ಅದನ್ನು ಕಂಡು ಅವರಿಬ್ಬರೂ ಹೀಗೆ ಯೋಚಿಸಿದರು. "ಈ ತಾವರೆಗಳನ್ನು ನಾವೇನು ಮಾಡಬೇಕು? ವಿಷ್ಣುವಿಗೆ ಅಲಂಕಾರಮಾಡಿದರೆ ಸಾರ್ಥಕವಾದೀತು."

೨೧. ಓ ರಾಜಾ, ಹೀಗೆ ಆ ದಂಪತಿಗಳಿಗೆ ಭಕ್ತಿ ಹುಟ್ಟಿತು. ಆ ಸಂದರ್ಭದಲ್ಲಿ ಅವರು ವಿಷ್ಣುವನ್ನೂ, ಲವಣಪರ್ವತವನ್ನೂ, ಶಯನವನ್ನೂ, ಪೂಜಾಭೂಮಿಯನ್ನೂ ತಾವರೆಹೂವುಗಳಿಂದ ಅರ್ಚಿಸಿದರು.

೨೨. ಬಳಿಕ ಅನಂಗವತಿಯು ಸಂತೋಷಪಟ್ಟು ಅವರಿಗೆ ಮುನ್ನೂರು ಬೆಳ್ಳಿಯ ನಾಣ್ಯಗಳನ್ನೂ, ಮುನ್ನೂರು ಚಿನ್ನದ ನಾಣ್ಯಗಳನ್ನೂ ಕೊಡುವಂತೆ ಅಪ್ಪಣೆಮಾಡಿದಳು.

ನ ಗೃಹೀತಂ ತತಸ್ತಾಭ್ಯಾಂ ಬಹುಸತ್ತ್ವಾವಲಂಬನಾತ್ ।
ಅನಂಗವತ್ಯಾ ಚ ಪುನಸ್ತಯೋರನ್ನಂ ಚತುರ್ವಿಧಂ
ಆನೀಯ ವ್ಯಾಹೃತಂ ಚಾತ್ರ ಭುಜ್ಯತಾಮಿತಿ ಭೂಪತೇ ॥೨೩॥

ತಾಭ್ಯಾಂ ತು ತದಪಿ ತ್ಯಕ್ತಂ ಭೋಕ್ಷ್ಯಾವೋ ವೈ ವರಾನನೇ ।
ಪ್ರಸಂಗಾದುಪವಾಸೇನ ತವಾದ್ಯ ಸುಖಮಾವಯೋಃ ॥೨೪॥

ಜನ್ಮಪ್ರಭೃತಿ ಪಾಪಿಷ್ಠೌ ಕುಕರ್ಮಾಣೌ ದೃಢವ್ರತೇ ।
ತತ್ಪ್ರಸಂಗಾತ್ತಯೋರ್ಮಧ್ಯೇ ಧರ್ಮಲೇಶಸ್ತು ತೇಽನಘ ॥೨೫॥

ಇತಿ ಜಾಗರಣಂ ತಾಭ್ಯಾಂ ತತ್ಪ್ರಸಂಗಾದನುಷ್ಠಿತಂ ।
ಪ್ರಭಾತೇ ಚ ತಯಾ ದತ್ತಾ ಶಯ್ಯಾ ಸಲವಣಾಚಲಾ ॥೨೬॥

---

೨೩. ಅತಿಶಯವಾದ ಸತ್ತ್ವಗುಣವಿದ್ದುದರಿಂದ ಅವರಿಬ್ಬರೂ ಆ ಧನವನ್ನು ತೆಗೆದುಕೊಳ್ಳಲಿಲ್ಲ. ಅನಂಗವತಿಯೂ ಸಹ ಅವರಿಗೆ ಭಕ್ಷ್ಯ, ಭೋಜ್ಯ, ಲೇಹ್ಯ ಮತ್ತು ಚೋಷ್ಯಗಳೆಂಬ ನಾಲ್ಕು ಬಗೆಯ ಆಹಾರಪದಾರ್ಥಗಳನ್ನು ತಂದುಕೊಟ್ಟು "ಇಲ್ಲಿಯೇ ಊಟಮಾಡಿರಿ" ಎಂದು ಹೇಳಿದಳು.

೨೪. "ಎಲೌ ಮಂಗಳಮುಖೀ, ಆಗಲಿ ತಿನ್ನುವೆವು. ನೀನೀಗ ಉಪವಾಸ ವಿರುವೆ. ನಮಗೂ ಇದೇ ಸುಖವಾಗಿ ತೋರುತ್ತದೆ" ಎಂದು ಹೇಳಿ ಅವರು ಅದನ್ನೂ ತೆಗೆದುಕೊಳ್ಳಲಿಲ್ಲ.

೨೫. "ಹುಟ್ಟಿದಂದಿನಿಂದ ನಾವಿಬ್ಬರೂ ಪಾಪಿಷ್ಠರಾಗಿದ್ದೇವೆ. ಓ ದೃಢ ವ್ರತೇ, ಹೀನಕರ್ಮವನ್ನೇ ಮಾಡುತ್ತಿದ್ದೇವೆ" ಎಂದು ಹೇಳಿದರು. ನಿರ್ದುಷ್ಟ ನಾದ ಎಲೈ ರಾಜಾ, ಅವಳ ಸಂಬಂಧದಿಂದ ನಿನಗೂ ಸಹ ಸ್ವಲ್ಪಮಟ್ಟಿಗೆ ಧರ್ಮವು ಬಂದಿತು.

೨೬. ಅವಳ ಸಹವಾಸದಿಂದ ಅವರೂ ಜಾಗರಣಮಾಡಿದರು. ಬಳಿಕ ಪ್ರಾತಃಕಾಲದಲ್ಲಿ ಆ ವೇಶ್ಯೆಯು ಶಯನವನ್ನೂ ಲವಣಪರ್ವತವನ್ನೂ ದಾನ ಮಾಡಿದಳು.

ಗ್ರಾಮಾಶ್ಚ ಗುರವೇ ಭಕ್ತ್ಯಾ ವಿಪ್ರೇಷು ದ್ವಾದಶೈವ ತು ।
ವಸ್ತ್ರಾಲಂಕಾರಸಂಯುಕ್ತಾ ಗಾವಶ್ಚ ಕರಕಾನ್ವಿತಾಃ ॥೨೭॥

ಭೋಜನಂ ಚ ಸುಹೃನ್ಮಿತ್ರದೀನಾಂಧಕೃಪಣೈಃ ಸಮಂ ।
ತಚ್ಚ ಲುಬ್ಧಕದಾಂಪತ್ಯಂ ಪೂಜಯಿತ್ವಾ ವಿಸರ್ಜಿತಂ ॥೨೮॥

ಸ ಭವಾಂಲ್ಲುಬ್ಧಕೋ ಜಾತಃ ಸಪತ್ನೀಕೋ ನೃಪೇಶ್ವರಃ ।
ಪುಷ್ಕರಪ್ರಕರಾತ್ತಸ್ಮಾತ್ಕೇಶವಸ್ಯ ಚ ಪೂಜನಾತ್ ॥೨೯॥

ವಿನಷ್ಟಾಶೇಷಪಾಪಸ್ಯ ತವ ಪುಷ್ಕರಮಂದಿರಂ ।
ತಸ್ಯ ಸತ್ತ್ವಸ್ಯ ಮಾಹಾತ್ಮ್ಯಾದಲ್ಪೇನ ತಪಸಾ ನೃಪ ॥೩೦॥

ಯಥಾಕಾಮಗಮಂ ಜಾತಂ ಲೋಕನಾಥಶ್ಚತುರ್ಮುಖಃ ।
ಸಂತುಷ್ಟಸ್ತವ ರಾಜೇಂದ್ರ ಬ್ರಹ್ಮರೂಪೀ ಜನಾರ್ದನಃ ॥೩೧॥

---

೨೭. ಗುರುವಿಗೆ ಭಕ್ತಿಯಿಂದ ಗ್ರಾಮಗಳನ್ನೂ ಸಹ ಕೊಟ್ಟಳು. ವಸ್ತ್ರಾಲಂಕಾರಸಹಿತವಾದ ಹನ್ನೆರಡು ಹಸುಗಳನ್ನು ಗಿಂಡಿಗಳೊಡನೆ ದಾನಮಾಡಿದಳು.

೨೮. ಸ್ನೇಹಿತರು, ಗೆಳತಿಯರು, ದೀನರು, ಅಂಧರು, ಕೃಪಣರು ಇವರೆಲ್ಲರಿಗೂ ಭೋಜನವನ್ನು ಮಾಡಿಸಿದಳು. ಬಳಿಕ ಆ ಬೇಡರ ದಂಪತಿಗಳನ್ನು ಆದರದಿಂದ ಪೂಜಿಸಿ ಕಳುಹಿಸಿಕೊಟ್ಟಳು.

೨೯. ಆ ಬೇಡರವನೇ ನೀನು. ಅವನ ಹೆಂಡತಿಯೇ ನಿನ್ನ ರಾಣಿ. ತಾವರೆ ಹೂಗಳಿಂದ ಮಹಾವಿಷ್ಣುವನ್ನು ಪೂಜಿಸಿದ ಕಾರಣ ಈಗ ಚಕ್ರವರ್ತಿಯಾಗಿರುವೆ.

೩೦-೩೧. ಓ ರಾಜಾ, ನಿನ್ನ ಆ ಸತ್ತ್ವಗುಣದ ಮಹಿಮೆಯಿಂದ ಪಾಪಗಳೆಲ್ಲವೂ ಪರಿಹಾರವಾದುವು. ಆದಕಾರಣ ಸ್ವಲ್ಪ ತಪಸ್ಸಿನಿಂದಲೇ ಕಾಮಚಾರಿಯಾದ ಕಮಲಗೃಹವು ನಿನಗೆ ಲಭಿಸಿತು. ಚತುರ್ಮುಖಬ್ರಹ್ಮರೂಪನೂ ಜಗತ್ಪತಿಯೂ ಆದ ಜನಾರ್ದನನು ನಿನ್ನಲ್ಲಿ ಪ್ರಸನ್ನನಾದನು.

**ಸಾಪ್ಯನಂಗವತೀ ವೇಶ್ಯಾ ಕಾಮದೇವಸ್ಯ ಸಾಂಪ್ರತಂ |**
**ಪತ್ನೀ ಸಪತ್ನೀ ಸಂಜಾತಾ ರತ್ಯಾಃ ಪ್ರೀತಿರಿತಿ ಶ್ರುತಾ |**
**ಲೋಕೇಷ್ವಾನಂದಜನನೀ ಸಕಲಾಮರಪೂಜಿತಾ ||೩೨||**

**ತಸ್ಮಾದುತ್ಸೃಜ್ಯ ರಾಜೇಂದ್ರ ಪುಷ್ಕರಂ ತನ್ಮಹೀತಲೇ |**
**ಗಂಗಾತಟಂ ಸಮಾಶ್ರಿತ್ಯ ವಿಭೂತಿದ್ವಾದಶೀವ್ರತಂ |**
**ಕುರು ರಾಜೇಂದ್ರ ನಿರ್ವಾಣಮವಶ್ಯಂ ಸಮವಾಪ್ಸ್ಯಸಿ ||೩೩||**

**|| ನಂದಿಕೇಶ್ವರ ಉವಾಚ ||**

**ಇತ್ಯುಕ್ತ್ವಾ ಸ ಮುನಿರ್ಬ್ರಹ್ಮಂಸ್ತತ್ರೈವಾಂತರಧೀಯತ |**
**ರಾಜಾ ಯಥೋಕ್ತಂ ಚ ಪುನರಕರೋತ್ಪುಷ್ಪವಾಹನಃ ||೩೪||**

**ಇದಮಾಚರತೋ ಬ್ರಹ್ಮನ್ನಖಂಡವ್ರತಮಾಚರೇತ್ |**
**ಯಥಾಕಥಂಚಿತ್ಕಮಲೈರ್ದ್ವಾದಶ ದ್ವಾದಶೀರ್ಮುನೇ ||೩೫||**

---

೩೨. ಅನಂಗವತಿಯೆಂಬ ವೇಶ್ಯೆಯೂ ಸಹ ಈಗ ಮನ್ಮಥನ ಪತ್ನಿಯಾಗಿ ರತಿಯ ಸವತಿಯೆನಿಸಿಕೊಂಡಿರುವಳು. ಅವಳಿಗೆ ಲೋಕದಲ್ಲಿ ಪ್ರೀತಿಯೆಂಬ ಪ್ರಖ್ಯಾತಿ ಬಂದಿದೆ. ಅವಳು ಎಲ್ಲ ಜನರಿಗೂ ಆನಂದವನ್ನು ಬೀರುತ್ತಿರುವಳು. ದೇವತೆಗಳೆಲ್ಲರೂ ಅವಳನ್ನು ಗೌರವಿಸುತ್ತಿರುವರು.

೩೩. ಓ ರಾಜೇಂದ್ರಾ, ಆದುದರಿಂದ ನಿನ್ನ ಕಮಲಗೃಹವನ್ನು ನೆಲದ ಮೇಲೆ ಬಿಟ್ಟು, ಗಂಗಾನದಿಯ ತೀರದಲ್ಲಿ ವಿಭೂತಿ ದ್ವಾದಶೀವ್ರತವನ್ನು ಮಾಡು. ನಿನಗೆ ಮೋಕ್ಷವು ತಪ್ಪದೆ ಸಿಕ್ಕುವುದು.

೩೪. ನಂದಿಕೇಶ್ವರನು ಹೇಳಿದನು.—ಬ್ರಹ್ಮನಿಷ್ಠನಾದ ಎಲೈ ನಾರದ ಮುನಿಯೇ, ಹೀಗೆ ಹೇಳಿ ಆ ಮಹರ್ಷಿಯು ಅಲ್ಲಿಯೇ ಅದೃಶ್ಯನಾದನು. ರಾಜನಾದ ಪುಷ್ಪವಾಹನನೂ ಸಹ ಮುನಿ ಹೇಳಿದಂತೆ ವ್ರತವನ್ನು ಮಾಡಿದನು.

೩೫-೩೬. ಎಲೈ ಬ್ರಾಹ್ಮಣೋತ್ತಮನೇ, ಇದನ್ನು ಮಾಡಬೇಕೆನ್ನುವವನು ಅಖಂಡವ್ರತವನ್ನು ಆಚರಿಸಬೇಕು. ಎಂದರೆ ಹೇಗಾದರೂ ಮಾಡಿ ಕಮಲಗಳಿಂದ

**ಕರ್ತವ್ಯಾಃ ಶಕ್ತಿತೋ ದೇಯಾ ವಿಪ್ರೇಭ್ಯೋ ದಕ್ಷಿಣಾನಘ ।**
**ನ ವಿತ್ತಶಾಠ್ಯಂ ಕುರ್ವೀತ ಭಕ್ತ್ಯಾ ತುಷ್ಯತಿ ಕೇಶವಃ ॥೩೬॥**

**ಇತಿ ಕಲುಷವಿದಾರಣಂ ಜನಾನಾ**
**ಮಪಿ ಪಠತೀಹ ಶೃಣೋತಿ ಚಾಥ ಭಕ್ತ್ಯಾ ।**
**ಮತಿಮಪಿ ಚ ದದಾತಿ ದೇವಲೋಕೇ**
**ವಸತಿ ಸ ಕೋಟಿಶತಾನಿ ವತ್ಸರಾಣಾಂ ॥೩೭॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ನಂದಿನಾರದಸಂವಾದೇ ವಿಭೂತಿ ದ್ವಾದಶೀವ್ರತಂ ನಾಮ ಶತತಮೋಽಧ್ಯಾಯಃ**

---

ಹನ್ನೆರಡು ದ್ವಾದಶಿಗಳಲ್ಲಿಯೂ ವಿಷ್ಣುವನ್ನು ಅರ್ಚಿಸಬೇಕು. ಬ್ರಾಹ್ಮಣರಿಗೆ ತನ್ನ ಶಕ್ತಿಗೆ ತಕ್ಕಂತೆ ದಕ್ಷಿಣೆಯನ್ನು ಕೊಡಬೇಕು. ದ್ರವ್ಯದಲ್ಲಿ ಕಾರ್ಪಣ್ಯವನ್ನು ಮಾಡ ಬಾರದು. ಭಕ್ತಿಯಿಂದ ಕೇಶವನು ಪ್ರಸನ್ನನಾಗುವನು.

೩೭. ಮಾನವರ ಪಾಪರಾಶಿಯನ್ನು ನಿರ್ಮೂಲಮಾಡುವ ಈ ವಿಭೂತಿ ದ್ವಾದಶೀವ್ರತದ ಮಾಹಾತ್ಮ್ಯವನ್ನು ಭಕ್ತಿಯಿಂದ ಪಠಿಸಲಿ, ಕೇಳಲಿ, ಅಥವಾ ಇತರರಿಗೆ ಇದರಲ್ಲಿ ಬುದ್ಧಿ ಹುಟ್ಟುವಂತೆ ಮಾಡಲಿ ಆ ಮನುಷ್ಯನು ನೂರಾರು ಕೋಟಿ ವರ್ಷಗಳ ಕಾಲ ದೇವಲೋಕದಲ್ಲಿ ವಾಸಮಾಡುವನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ವಿಭೂತಿದ್ವಾದಶೀವ್ರತದ ಮಾಹಾತ್ಮ್ಯವನ್ನು ವರ್ಣಿಸಿದೆ.

ರಥಂತರ ಕಲ್ಪದಲ್ಲಿ ಪುಷ್ಪವಾಹನನೆಂಬ ರಾಜನಿದ್ದನು. ಅವನಿಗೆ ಸಕಲ ಸಂಪತ್ತುಗಳೂ ಸಮೃದ್ಧವಾಗಿದ್ದುವು. ತನಗೆ ಇಷ್ಟೊಂದು ಸುಖಭೋಗಗಳು ದೊರೆಯಲು ಕಾರಣವೇನೆಂದು ಅವನಿಗೇ ಆಶ್ಚರ್ಯವಾಗಿತ್ತು. ಒಂದು ದಿನ ಅವನ ಬಳಿಗೆ ಬಂದ ಪ್ರಾಚೇತಸಮುನಿಯನ್ನು ಈ ವಿಷಯವಾಗಿ ಪ್ರಶ್ನಿಸಿದನು. ಋಷಿಯು ಇಂತು ಉತ್ತರವಿತ್ತನು.

"ಒಂದು ಸಾರಿ ಅನಾವೃಷ್ಟಿಯಿಂದ ಅತಿಭಯಂಕರವಾದ ಕ್ಷಾಮವೊದಗಿತು. ಒಬ್ಬಾನೊಬ್ಬ ಬೇಡನು ಆಹಾರವಿಲ್ಲದೆ ಬಳಲಿ, ಬೆಂಡಾಗಿ, ಕೊನೆಗೆ ಒಂದು

ಸರೋವರದಲ್ಲಿ ಬೆಳೆದಿದ್ದ ತಾವರೆಹೂಗಳನ್ನು ಕಿತ್ತುಕೊಂಡು, ಮಾರುವುದಕ್ಕಾಗಿ ಹತ್ತಿರದಲ್ಲಿದ್ದ ಪಟ್ಟಣಕ್ಕೆ ಹೋದನು. ಸಾಯಂಕಾಲದ ವರೆಗೆ ಅಲೆದಾಡಿದರೂ ಹೂಗಳನ್ನು ಯಾರೂ ಕೊಂಡುಕೊಳ್ಳಲಿಲ್ಲ. ಅವನು ಆಯಾಸಗೊಂಡು ಹೆಂಡತಿ ಯೊಡನೆ ಒಂದು ಕಡೆ ಕುಳಿತನು.

ಅನಂಗವತಿಯೆಂಬ ವೇಶ್ಯೆಯು ವಿಭೂತಿದ್ವಾದಶೀವ್ರತವನ್ನು ಮಾಡು ತ್ತಿದ್ದಳು. ಅಲ್ಲಿನ ಮಂಗಳವಾದ್ಯದ ಧ್ವನಿಯನ್ನು ಕೇಳಿ ಬೇಡರವನು ಅಲ್ಲಿಗೆ ಹೋದನು. ಅವನ ಮನಸ್ಸಿನಲ್ಲಿ ಭಕ್ತಿ ಮೂಡಿತು. ತನ್ನಲ್ಲಿದ್ದ ಹೂಗಳನ್ನು ಪೂಜೆ ಗಾಗಿ ಒಪ್ಪಿಸಿದನು. ಅದರ ಫಲವಾಗಿ ಆ ದಂಪತಿಗಳಿಬ್ಬರೂ ಮರುಹುಟ್ಟಿನಲ್ಲಿ ರಾಜನೂ ರಾಣಿಯೂ ಆದರು. ಅವರೇ ಆ ಪುಷ್ಪವಾಹನ ಮತ್ತು ಲಾವಣ್ಯವತಿ ಯೆಂಬ ರಾಜದಂಪತಿಗಳು. ವ್ರತವನ್ನು ನಡೆಸಿದ ಅನಂಗವತಿಯು ಮನ್ಮಥನ ಪತ್ನಿ ಯಾಗಿ ಪ್ರೀತಿಯೆಂದು ಪ್ರಖ್ಯಾತಳಾದಳು.''

ತನ್ನ ಪೂರ್ವವೃತ್ತಾಂತವನ್ನು ಕೇಳಿದ ಬಳಿಕ ಪುಷ್ಪವಾಹನನು ಗಂಗಾತೀರ ದಲ್ಲಿ ವಿಭೂತಿದ್ವಾದಶೀವ್ರತವನ್ನು ಅತಿಸಂಭ್ರಮದಿಂದ ನೆರವೇರಿಸಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ವಿಭೂತಿದ್ವಾದಶೀವ್ರತವೆಂಬ
ನೂರನೆಯ ಅಧ್ಯಾಯವು ಮುಗಿದುದು.



## ಅಷ್ಟೈಕಾಧಿಕ ಶತತಮೋಽಧ್ಯಾಯಃ

॥ ನಂದಿಕೇಶ್ವರ ಉವಾಚ ॥

ಅಥಾತಃ ಸಂಪ್ರವಕ್ಷ್ಯಾಮಿ ವ್ರತಷಷ್ಟಿಮನುತ್ತಮಾಂ ।
ರುದ್ರೇಣಾಭಿಹಿತಾಂ ದಿವ್ಯಾಂ ಮಹಾಪಾತಕನಾಶಿನೀಂ ॥ ೧ ॥

ನಕ್ತಮಬ್ದಂ ಚರಿತ್ವಾ ತು ಗವಾ ಸಾರ್ಧಂ ಕುಟುಂಬಿನೇ ।
ಹೈಮಂ ಚಕ್ರಂ ತ್ರಿಶೂಲಂ ಚ ದದ್ಯಾದ್ವಿಪ್ರಾಯ ವಾಸಸೀ ॥ ೨ ॥

ಶಿವರೂಪಸ್ತತೋಽಸ್ಮಾಭಿಃ ಶಿವಲೋಕೇ ಸ ಮೋದತೇ ।
ಏತದ್ದೇವವ್ರತಂ ನಾಮ ಮಹಾಪಾತಕನಾಶನಂ ॥ ೩ ॥

ಯಸ್ತ್ವೇಕಭಕ್ತೇನ ಸಮಾಂ ಶಿವಂ ಹೈಮವೃಷಾನ್ವಿತಂ ।
ಧೇನುಂ ತಿಲಮಯೀಂ ದದ್ಯಾತ್ಸ ಪದಂ ಯಾತಿ ಶಾಂಕರಂ ।
ಏತದ್ರುದ್ರವ್ರತಂ ನಾಮ ಪಾಪಶೋಕವಿನಾಶನಂ ॥ ೪ ॥

---

೧. ನಂದಿಕೇಶ್ವರನು ಹೇಳಿದನು.—ಇನ್ನು ಮುಂದೆ ಅತಿಶ್ರೇಷ್ಠವೆನಿಸಿದ ಅರವತ್ತು ವ್ರತಗಳ ವಿಧಾನವನ್ನು ಹೇಳುವೆನು. ಇವು ಪರಮೇಶ್ವರನು ಹೇಳಿದ ದಿವ್ಯವ್ರತಗಳು. ಮಹಾಪಾತಕಗಳನ್ನೂ ಕೂಡ ಪರಿಹರಿಸುವಂತಹವು.

೨. ನಕ್ತವ್ರತವನ್ನು—ಹಗಲು ಉಪವಾಸವಿದ್ದು ರಾತ್ರಿಯಲ್ಲಿ ಭೋಜನ ಮಾಡುವ ವ್ರತವನ್ನು—ಒಂದು ವರ್ಷಕಾಲ ನಡೆಸಿ, ಕುಟುಂಬಿಯಾದ ಬ್ರಾಹ್ಮಣನಿಗೆ ಗೋದಾನಸಹಿತವಾಗಿ ಚಿನ್ನದ ಚಕ್ರವನ್ನೂ, ತ್ರಿಶೂಲವನ್ನೂ, ಒಂದು ಜೋಡಿ ವಸ್ತ್ರವನ್ನೂ ಕೊಡಬೇಕು.

೩. ಬಳಿಕ ಆತನು ಶಿವಸ್ವರೂಪನಾಗಿ ಶಿವಲೋಕದಲ್ಲಿ ನಮ್ಮೆಲ್ಲರೊಡನೆ ಆನಂದಿಸುವನು. ಇದಕ್ಕೆ ದೇವವ್ರತವೆಂದು ಹೆಸರು. ಇದು ಮಹಾಪಾತಕಗಳನ್ನು ಕಳೆಯತಕ್ಕುದು.

೪. ಒಂದು ವರ್ಷಕಾಲ ಏಕಭೋಜನವ್ರತದಲ್ಲಿದ್ದು, ಚಿನ್ನದ ಬಸವ ಮತ್ತು ಎಳ್ಳಿನ ಹಸುಗಳೊಡನೆ ಈಶ್ವರನ ವಿಗ್ರಹವನ್ನು ದಾನಮಾಡುವಾತನು ಶಂಕರನ ಸಾನ್ನಿಧ್ಯವನ್ನೈದುವನು. ಇದು ಪಾಪವನ್ನೂ ದುಃಖವನ್ನೂ ಪರಿಹರಿಸುವ ರುದ್ರವ್ರತವೆನಿಸಿಕೊಳ್ಳುವುದು.

ಯಸ್ತು ನೀಲೋತ್ಪಲಂ ಹೈಮಂ ಶರ್ಕರಾಪಾತ್ರಸಂಯುತಂ ।
ಏಕಾಂತರಿತನಕ್ತಾಶೀ ಸಮಾಂತೇ ವೃಷಸಂಯುತಂ ।
ಸ ವೈಷ್ಣವಂ ಪದಂ ಯಾತಿ ಲೀಲಾವ್ರತಮಿದಂ ಸ್ಮೃತಂ ॥ ೫ ॥

ಆಷಾಢಾದಿಚತುರ್ಮಾಸಮಭ್ಯಂಗಂ ವರ್ಜಯೇನ್ನರಃ ।
ಭೋಜನೋಪಸ್ಕರಂ ದದ್ಯಾತ್ಸ ಯಾತಿ ಭವನಂ ಹರೇಃ ।
ಜನೇ ಪ್ರೀತಿಕರಂ ನೄಣಾಂ ಪ್ರೀತಿವ್ರತಮಿಹೋಚ್ಯತೇ ॥ ೬ ॥

ವರ್ಜಯಿತ್ವಾ ಮಧೌ ಯಸ್ತು ದಧಿಕ್ಷೀರಘೃತೈಕ್ಷವಂ ।
ದದ್ಯಾದ್ವಸ್ತ್ರಾಣಿ ಸೂಕ್ಷ್ಮಾಣಿ ರಸಪಾತ್ರೈಶ್ಚ ಸಂಯುತಂ ॥ ೭ ॥

ಸಂಪೂಜ್ಯ ವಿಪ್ರಮಿಥುನಂ ಗೌರೀ ಮೇ ಪ್ರೀಯತಾಮಿತಿ ।
ಏತದ್ಗೌರೀವ್ರತಂ ನಾಮ ಭವಾನೀಲೋಕದಾಯಕಂ ॥ ೮ ॥

---

೫. ದಿನಬಿಟ್ಟು ದಿನ ರಾತ್ರಿಭೋಜನದ ವ್ರತವನ್ನು ಕೈಗೊಂಡು, ವರ್ಷದ ಕೊನೆಯಲ್ಲಿ ಸಕ್ಕರೆಯ ಪಾತ್ರೆಯನ್ನೂ, ವೃಷಭಸಹಿತವಾಗಿ ಚಿನ್ನದ ನೈದಿಲೆಯನ್ನೂ ದಾನಮಾಡುವಾತನು ವಿಷ್ಣುಲೋಕವನ್ನು ಸೇರುವನು. ಇದಕ್ಕೆ ಲೀಲಾವ್ರತವೆಂದು ಹೆಸರು.

೬. ಆಷಾಢ ಮೊದಲಾಗಿ ನಾಲ್ಕು ತಿಂಗಳು ಅಭ್ಯಂಜನವನ್ನು ಬಿಟ್ಟು, ಭೋಜನಕ್ಕೆ ಬೇಕಾದ ಸಕಲ ಸಂಭಾರಗಳನ್ನೂ ದಾನಕೊಡುವ ಮನುಜನಿಗೆ ಹರಿಯ ಸಾನ್ನಿಧ್ಯವು ಲಭಿಸುವುದು. ಇದಕ್ಕೆ ಪ್ರೀತಿವ್ರತವೆಂದು ಹೆಸರು. ಇದು ಜನರಲ್ಲಿ ಪ್ರೀತಿಯನ್ನು ಹುಟ್ಟಿಸುವಂತಹುದು.

೭-೮. ವಸಂತರುತುವಿನಲ್ಲಿ ಮೊಸರು, ಹಾಲು, ತುಪ್ಪ ಮತ್ತು ಬೆಲ್ಲಗಳನ್ನು ತೊರೆದು, ಬ್ರಾಹ್ಮಣ ದಂಪತಿಗಳನ್ನು ಪೂಜಿಸಿ, ರಸ ದ್ರವ್ಯಗಳನ್ನು ತುಂಬಿದ ಪಾತ್ರೆಗಳೊಡನೆ ಸೂಕ್ಷ್ಮವಸ್ತ್ರಗಳನ್ನು ದಾನಮಾಡಬೇಕು. "ಗೌರೀ ದೇವಿಯು ನನ್ನಲ್ಲಿ ಪ್ರಸನ್ನಳಾಗಲಿ" ಎಂದು ಅನುಸಂಧಾನಮಾಡಬೇಕು. ಇದರಿಂದ ಪಾರ್ವತೀ ಲೋಕವು ಲಭಿಸುವುದು. ಇದನ್ನು ಗೌರೀವ್ರತವೆನ್ನುವರು.

ಪುಷ್ಯಾದೌ ಯಸ್ತ್ರಯೋದಶ್ಯಾಂ ಕೃತ್ವಾ ನಕ್ತಂ ಮಧೌ ಪುನಃ ।
ಅಶೋಕಂ ಕಾಂಚನಂ ದದ್ಯಾದಿಕ್ಷುಯುಕ್ತಂ ದಶಾಂಗುಲಂ ॥ ೯ ॥

ವಿಪ್ರಾಯ ವಸ್ತ್ರಸಂಯುಕ್ತಂ ಪ್ರದ್ಯುಮ್ನಃ ಪ್ರೀಯತಾಮಿತಿ ।
ಕಲ್ಪಂ ವಿಷ್ಣುಪದೇ ಸ್ಥಿತ್ವಾ ವಿಶೋಕಃ ಸ್ಯಾತ್ಪುನರ್ನರಃ ।
ಏತತ್ಕಾಮವ್ರತಂ ನಾಮ ಸದಾ ಶೋಕವಿನಾಶನಂ ॥೧೦॥

ಆಷಾಢಾದಿವ್ರತಂ ಯಸ್ತು ವರ್ಜಯೇನ್ನಖಕರ್ತನಂ ।
ವಾರ್ತಾಕಂ ಚ ಚತುರ್ಮಾಸಂ ಮಧುಸರ್ಪಿರ್ಘಟಾನ್ವಿತಂ ॥೧೧॥

ಕಾರ್ತಿಕ್ಯಾಂ ತತ್ಪುನರ್ಹೈಮಂ ಬ್ರಾಹ್ಮಣಾಯ ನಿವೇದಯೇತ್ ।
ಸ ರುದ್ರಲೋಕಮಾಪ್ನೋತಿ ಶಿವವ್ರತಮಿದಂ ಸ್ಮೃತಂ ॥೧೨॥

ವರ್ಜಯೇದ್ಯಸ್ತು ಪುಷ್ಪಾಣಿ ಹೇಮಂತಶಿಶಿರಾವೃತೂ ।
ಪುಷ್ಪತ್ರಯಂ ಚ ಫಾಲ್ಗುನ್ಯಾಂ ಕೃತ್ವಾ ಶಕ್ತ್ಯಾ ಚ ಕಾಂಚನಂ ॥೧೩॥

---

೯-೧೦. ಪುಷ್ಯಮಾಸದ ಶುಕ್ಲಪಕ್ಷದ ತ್ರಯೋದಶಿಯಲ್ಲೂ, ಪುನಃ ಚೈತ್ರ ಶುಕ್ಲ ತ್ರಯೋದಶಿಯಲ್ಲೂ ನಕ್ತವ್ರತವನ್ನು ಆಚರಿಸಬೇಕು. ಹತ್ತು ಅಂಗುಲ ಎತ್ತರವಿರುವ ಚಿನ್ನದ ಅಶೋಕ ವೃಕ್ಷವನ್ನು ಕಬ್ಬು ಮತ್ತು ವಸ್ತ್ರಗಳ ಸಹಿತವಾಗಿ ಬ್ರಾಹ್ಮಣನಿಗೆ ದಾನಮಾಡಿ "ಪ್ರದ್ಯುಮ್ನನು ಪ್ರೀತನಾಗಲಿ" ಎಂದು ಪ್ರಾರ್ಥಿಸಬೇಕು. ಈ ಮನುಷ್ಯನು ಒಂದು ಕಲ್ಪಕಾಲ ವಿಷ್ಣುಲೋಕದಲ್ಲಿ ವಾಸಿಸಿ, ಮರಳಿ ಶೋಕರಹಿತನಾಗಿ ಜನಿಸುವನು. ಇದಕ್ಕೆ ಕಾಮವ್ರತವೆಂದು ಹೆಸರು. ಇದು ಸದಾ ಶೋಕವನ್ನು ನಾಶಮಾಡುವುದು.

೧೧-೧೨. ಆಷಾಢ ಮೊದಲಾದ ನಾಲ್ಕು ತಿಂಗಳಲ್ಲಿ ಉಗುರು ತೆಗೆಯಬಾರದು. ಬದನೆಯ ಕಾಯಿ, ಜೇನುತುಪ್ಪ, ತುಪ್ಪ ಇವುಗಳನ್ನು ಸೇವಿಸಬಾರದು. ಕಾರ್ತಿಕಮಾಸದ ಹುಣ್ಣಿಮೆಯ ದಿನ ಚಿನ್ನದ ಬದನೆಯ ಕಾಯಿಯನ್ನೂ, ತುಪ್ಪ ಮತ್ತು ಜೇನುತುಪ್ಪಗಳ ಕುಂಭಗಳನ್ನೂ ಬ್ರಾಹ್ಮಣನಿಗೆ ದಾನಮಾಡಬೇಕು. ಇದಕ್ಕೆ ರುದ್ರವ್ರತವೆಂದು ಹೆಸರು. ಇದನ್ನು ಮಾಡಿದವನು ರುದ್ರಲೋಕದಲ್ಲಿ ವಾಸಿಸುವನು

೧೩-೧೪. ಹೇಮಂತ ಮತ್ತು ಶಿಶಿರರ್ತುಗಳಲ್ಲಿ ಹೂಗಳನ್ನು ಮುಡಿಯಬಾರದು. ಫಾಲ್ಗುನಮಾಸದ ಹುಣ್ಣಿಮೆಯ ದಿನ ಮೂರು ಬಗೆಯ ಹೂಗಳನ್ನು

ದದ್ಯಾದ್ದ್ವಿಕಾಲವೇಲಾಯಾಂ ಪ್ರೀಯೇತಾಂ ಶಿವಕೇಶವೌ ।
ದತ್ವಾ ಪರಂ ಪದಂ ಯಾತಿ ಸೌಮ್ಯವ್ರತಮಿದಂ ಸ್ಮೃತಂ ॥೧೪॥

ಫಾಲ್ಗುನ್ಯಾದಿತೃತೀಯಾಯಾಂ ಲವಣಂ ಯಸ್ತು ವರ್ಜಯೇತ್ ।
ಸಮಾಂತೇ ಶಯನಂ ದದ್ಯಾದ್ಗೃಹಂ ಚೋಪಸ್ಕರಾನ್ವಿತಂ ॥೧೫॥

ಸಂಪೂಜ್ಯ ವಿಪ್ರಮಿಥುನಂ ಭವಾನೀ ಪ್ರೀಯತಾಮಿತಿ ।
ಗೌರೀಲೋಕೇ ವಸೇತ್ಕಲ್ಪಂ ಸೌಭಾಗ್ಯವ್ರತಮುಚ್ಯತೇ ॥೧೬॥

ಸಂಧ್ಯಾಮೌನಂ ತತಃ ಕೃತ್ವಾ ಸಮಾಂತೇ ಘೃತಕುಂಭಕಂ ।
ವಸ್ತ್ರಯುಗ್ಮಂ ತಿಲಾನ್ ಘಂಟಾಂ ಬ್ರಾಹ್ಮಣಾಯ ನಿವೇದಯೇತ್ ॥೧೭॥

ಸಾರಸ್ವತಂ ಪದಂ ಯಾತಿ ಪುನರಾವೃತ್ತಿದುರ್ಲಭಂ ।
ಏತತ್ಸಾರಸ್ವತಂ ನಾಮ ರೂಪವಿದ್ಯಾಪ್ರದಾಯಕಂ ॥೧೮॥

---

ಚಿನ್ನದಿಂದ ಮಾಡಿಸಿ, "ಶಿವನೂ ಕೇಶವನೂ ಪ್ರೀತರಾಗಲಿ" ಎಂದು ಪ್ರಾರ್ಥಿಸಿ ಮಧ್ಯಾಹ್ನದ ವೇಳೆಯಲ್ಲಿ ದಾನಮಾಡಬೇಕು. ಇದಕ್ಕೆ ಸೌಮ್ಯವ್ರತವೆಂದು ಹೆಸರು. ಇದರಿಂದ ಪರಮಪದಲಾಭವುಂಟಾಗುವುದು.

೧೫-೧೬. ಫಾಲ್ಗುಣಮಾಸದಿಂದ ಪ್ರಾರಂಭಿಸಿ ಪ್ರತಿಯೊಂದು ತಿಂಗಳ ತದಿಗೆಯಲ್ಲೂ ಉಪ್ಪನ್ನು ಹಾಕಿಕೊಳ್ಳದೆ ಊಟಮಾಡಬೇಕು. ವರ್ಷಾಂತದಲ್ಲಿ ಬ್ರಾಹ್ಮಣ ದಂಪತಿಗಳನ್ನು ಪೂಜಿಸಿ, "ಪಾರ್ವತಿಯು ತೃಪ್ತಳಾಗಲೆಂದು" ಅನುಸಂಧಾನಮಾಡಿ, ಸಕಲ ಸಾಮಗ್ರೀಸಹಿತವಾಗಿ ಗೃಹವನ್ನೂ, ಶಯನವನ್ನೂ ದಾನವಾಗಿ ಕೊಡಬೇಕು. ಇದರಿಂದ ಒಂದು ಕಲ್ಪಕಾಲ ಗೌರೀಲೋಕದಲ್ಲಿ ವಾಸವು ಲಭಿಸುವುದು. ಸೌಭಾಗ್ಯವ್ರತವೆಂದು ಇದಕ್ಕೆ ಹೆಸರು.

೧೭. ಬಳಿಕ ಸಂಧ್ಯಾಕಾಲದಲ್ಲಿ ಮೌನವ್ರತವನ್ನು ಪ್ರಾರಂಭಿಸಿ, ವರ್ಷದ ಕೊನೆಯಲ್ಲಿ ಘೃತಕುಂಭವನ್ನೂ, ವಸ್ತ್ರಯುಗ್ಮವನ್ನೂ, ಎಳ್ಳನ್ನೂ, ಘಂಟೆಯನ್ನೂ ಬ್ರಾಹ್ಮಣನಿಗೆ ದಾನವಾಗಿ ಕೊಡಬೇಕು.

೧೮. ಇದರಿಂದ ಸರಸ್ವತಿಯ ಸಾನ್ನಿಧ್ಯವು ಲಭಿಸುವುದು. ಪುನರ್ಜನ್ಮವು ತಪ್ಪುವುದು. ಇದಕ್ಕೆ ಸಾರಸ್ವತವ್ರತವೆಂದು ಹೆಸರು. ಇದು ರೂಪವನ್ನೂ ವಿದ್ಯೆಯನ್ನೂ ಕೊಡುವುದು.

**ಲಕ್ಷ್ಮೀಮಭ್ಯರ್ಚ್ಯ ಪಂಚಮ್ಯಾಮುಪವಾಸೀ ಭವೇನ್ನರಃ ।**
**ಸಮಾಂತೇ ಹೇಮಕಮಲಂ ದದ್ಯಾದ್ಧೇಮುಸಮನ್ವಿತಂ ॥೧೯॥**

**ಸ ವೈಷ್ಣವಂ ಪದಂ ಯಾತಿ ಲಕ್ಷ್ಮೀವಾಞ್ಜನ್ಮಜನ್ಮನಿ ।**
**ಏತತ್ಸಂಪದ್ವ್ರತಂ ನಾಮ ಸದಾ ಪಾಪವಿನಾಶನಂ ॥೨೦॥**

**ಕೃತ್ವೋಪಲೇಪನಂ ಶಂಭೋರಗ್ರತಃ ಕೇಶವಸ್ಯ ಚ ।**
**ಯಾವದಬ್ದಂ ಪುನರ್ದದ್ಯಾದ್ಧೇನುಂ ಜಲಘಟಾನ್ವಿತಂ ॥೨೧॥**

**ಜನ್ಮಾಯುತಂ ಸ ರಾಜಾ ಸ್ಯಾತ್ತತಃ ಶಿವಪುರಂ ವ್ರಜೇತ್ ।**
**ಏತದಾಯುರ್ವ್ರತಂ ನಾಮ ಸರ್ವಕಾಮಪ್ರದಾಯಕಂ ॥೨೨॥**

**ಅಶ್ವತ್ಥಂ ಭಾಸ್ಕರಂ ಗಂಗಾಂ ಪ್ರಣಮ್ಯೈಕತ್ರ ವಾಗ್ಯತಃ ।**
**ಏಕಭಕ್ತಂ ನರಃ ಕುರ್ಯಾದಬ್ದಮೇಕಂ ವಿಮತ್ಸರಃ ॥೨೩॥**

---

೧೯-೨೦. ಪಂಚಮಿಯ ದಿವಸ ಲಕ್ಷ್ಮೀಪೂಜೆಯನ್ನು ಮಾಡಿ ಉಪವಾಸ ವಿರಬೇಕು. ವರ್ಷವೆಲ್ಲ ಹೀಗೆ ಮಾಡಿ, ಕೊನೆಯಲ್ಲಿ ಗೋಸಹಿತವಾಗಿ ಸುವರ್ಣ ಕಮಲವನ್ನು ದಾನಮಾಡಬೇಕು. ಈ ವ್ರತವನ್ನು ಆಚರಿಸುವವನಿಗೆ ವಿಷ್ಣು ಸಾಯುಜ್ಯವು ಲಭಿಸುವುದು. ಪ್ರತಿಯೊಂದು ಜನ್ಮದಲ್ಲಿಯೂ ಅವನು ಶ್ರೀಮಂತ ನಾಗಿ ಜನಿಸುವನು. ಇದಕ್ಕೆ ಸಂಪದ್ವ್ರತವೆಂದು ಹೆಸರು. ಇದು ಪಾಪವನ್ನು ನಾಶಮಾಡುವುದು.

೨೧. ಈಶ್ವರನ ಮತ್ತು ವಿಷ್ಣುವಿನ ಮುಂಭಾಗದಲ್ಲಿ ತಪ್ಪದೆ ಸಾರಿಸಿ ರಂಗೋಲೆಯನ್ನು ಇಡುತ್ತ ಬರಬೇಕು. ವರ್ಷದ ಕೊನೆಯಲ್ಲಿ ಜಲಕುಂಭಸಹಿತ ವಾಗಿ ಗೋದಾನವನ್ನು ಮಾಡಬೇಕು.

೨೨. ಅವನು ಹತ್ತುಸಾವಿರ ಜನ್ಮಗಳ ವರೆಗೂ ರಾಜನಾಗಿ ಹುಟ್ಟುವನು. ಬಳಿಕ ಕೈಲಾಸವನ್ನು ಸೇರುವನು. ಇದಕ್ಕೆ ಆಯುರ್ವ್ರತವೆಂದು ಹೆಸರು. ಇದು ಸಕಲವಾದ ಇಷ್ಟಾರ್ಥಗಳನ್ನೂ ಕೊಡುವುದು.

೨೩. ಅರಳಿಯ ಮರ, ಸೂರ್ಯ, ಗಂಗಾನದಿ ಈ ಮೂರನ್ನೂ ನಮಸ್ಕರಿಸಿ, ಮೌನವ್ರತವನ್ನು ತಾಳಿ, ಒಂದೇ ಕಡೆ ವಾಸಿಸುತ್ತ ಒಪ್ಪೊತ್ತು ಊಟಮಾಡಬೇಕು. ಶುದ್ಧಮನಸ್ಸಿನಿಂದ ಹೀಗೆ ಒಂದು ವರ್ಷಕಾಲ ನಡೆಸಬೇಕು.

**ವ್ರತಾಂತೇ ವಿಪ್ರಮಿಥುನಂ ಪೂಜ್ಯಂ ಧೇನುತ್ರಯಾನ್ವಿತಂ ।**
**ವೃಕ್ಷಂ ಹಿರಣ್ಮಯಂ ದದ್ಯಾತ್ಸೋಽಶ್ವಮೇಧಫಲಂ ಲಭೇತ್ ।**
**ಏತತ್ಕೀರ್ತಿವ್ರತಂ ನಾಮ ಭೂತಿಕೀರ್ತಿಫಲಪ್ರದಂ ॥೨೪॥**

**ಘೃತೇನ ಸ್ನಪನಂ ಕುರ್ಯಾಚ್ಛಂಭೋರ್ವಾ ಕೇಶವಸ್ಯ ವಾ ।**
**ಅಕ್ಷತಾಭಿಃ ಸಪುಷ್ಪಾಭಿಃ ಕೃತ್ವಾ ಗೋಮಯಮಂಡಲಂ ॥೨೫॥**

**ತಿಲಧೇನುಸಮೋಪೇತಂ ಸಮಾಂತೇ ಹೇಮಪಂಕಜಂ ।**
**ಶುದ್ಧಮಷ್ಟಾಂಗುಲಂ ದದ್ಯಾಚ್ಛಿವಲೋಕೇ ಮಹೀಯತೇ ।**
**ಸಾಮಗಾಯ ತತಶ್ಚೈತತ್ಸಾಮವ್ರತಮಿಹೋಚ್ಯತೇ ॥೨೬॥**

**ನವಮ್ಯಾಮೇಕಭಕ್ತಂ ತು ಕೃತ್ವಾ ಕನ್ಯಾಶ್ಚ ಶಕ್ತಿತಃ ।**
**ಭೋಜಯಿತ್ವಾಽಽಸನಂ ದದ್ಯಾದ್ಧೈಮಕಂಚುಕವಾಸಸೀ ॥೨೭॥**

---

೨೪. ವ್ರತದ ಕೊನೆಯಲ್ಲಿ ಬ್ರಾಹ್ಮಣ ದಂಪತಿಗಳನ್ನು ಪೂಜಿಸಿ ಮೂರು ಹಸುಗಳನ್ನೂ ಹಿರಣ್ಮಯವಾದ ವೃಕ್ಷವನ್ನೂ ದಾನಮಾಡಬೇಕು. ಇದನ್ನು ಕೀರ್ತಿ ವ್ರತವೆನ್ನುವರು. ಐಶ್ವರ್ಯವನ್ನೂ ಕೀರ್ತಿಯನ್ನೂ ಇದು ಕೊಡುವುದು.

೨೫. ಗೋಮಯದಿಂದ ಮಂಡಲವನ್ನು ರಚಿಸಿ, ಪುಷ್ಪಗಳಿಂದಲೂ ಅಕ್ಷತೆ ಗಳಿಂದಲೂ ಅಲಂಕರಿಸಿ, ಈಶ್ವರನಿಗೆ ಇಲ್ಲವೇ ವಿಷ್ಣುವಿಗೆ ತುಪ್ಪದಿಂದ ಅಭಿಷೇಕ ಮಾಡಬೇಕು.

೨೬. ವರ್ಷಾಂತದಲ್ಲಿ ಅಪರಂಜಿಯಿಂದ ಮಾಡಿದ, ಎಂಟು ಅಂಗುಲ ಎತ್ತರವಾದ ಕಮಲವನ್ನು ತಿಲಧೇನು ಸಹಿತವಾಗಿ—ಎಳ್ಳಿನಲ್ಲಿ ಹಸುವಿನ ಆಕೃತಿ ಯನ್ನು ಮಾಡಿ ಅಲಂಕರಿಸಿ—ಸಾಮವೇದವನ್ನು ಬಲ್ಲ ಬ್ರಾಹ್ಮಣನಿಗೆ ದಾನಮಾಡ ಬೇಕು. ಇದಕ್ಕೆ ಸಾಮವ್ರತವೆಂದು ಹೆಸರು. ಇದನ್ನು ಮಾಡಿದವನು ಶಿವಲೋಕ ದಲ್ಲಿ ಮಾನ್ಯನಾಗುವನು.

೨೭. ನವಮಿಯ ದಿನ ಒಪ್ಪೊತ್ತು ಊಟಮಾಡಿ, ತನ್ನ ಶಕ್ತಿಗೆ ತಕ್ಕಂತೆ ಕನ್ಯೆಯರಿಗೆ ಭೋಜನಮಾಡಿಸಿ, ಆಸನವನ್ನಿತ್ತು ಜರತಾರಿಯ ಕುಪ್ಪಸವನ್ನೂ ಸೀರೆಯನ್ನೂ ಕೊಡಬೇಕು.

**ಹೈಮಂ ಸಿಹ್ಮಂ ಚ ವಿಪ್ರಾಯ ದತ್ವಾ ಶಿವಪದಂ ವ್ರಜೇತ್ ।**
**ಜನ್ಮಾರ್ಬುದಂ ಸುರೂಪಃ ಸ್ಯಾಚ್ಛತ್ರುಭಿಶ್ಚಾಪರಾಜಿತಃ ।**
**ಏತದ್ವೀರವ್ರತಂ ನಾಮ ನಾರೀಣಾಂ ಚ ಸುಖಪ್ರದಂ** ॥೨೮॥

**ಯಾವತ್ಸಮಾ ಭವೇದ್ಯಸ್ತು ಪಂಚದಶ್ಯಾಂ ಪಯೋವ್ರತಃ ।**
**ಸಮಾಂತೇ ಶ್ರಾದ್ಧಕೃದ್ದದ್ಯಾತ್ಪಂಚ ಗಾಸ್ತು ಪಯಸ್ವಿನೀಃ** ॥೨೯॥

**ವಾಸಾಂಸಿ ಚ ಪಿಶಂಗಾನಿ ಜಲಕುಂಭಯುತಾನಿ ಚ ।**
**ಸ ಯಾತಿ ವೈಷ್ಣವಂ ಲೋಕಂ ಪಿತೄಣಾಂ ತಾರಯೇಚ್ಛತಂ ।**
**ಕಲ್ಪಾಂತೇ ರಾಜರಾಜಃ ಸ್ಯಾತ್ಪಿತೃವ್ರತಮಿದಂ ಸ್ಮೃತಂ** ॥೩೦॥

**ಚೈತ್ರಾದಿಚತುರೋ ಮಾಸಾಞ್ಜಲಂ ದದ್ಯಾದಯಾಚಿತಂ ।**
**ವ್ರತಾಂತೇ ಮಣಿಕಂ ದದ್ಯಾದನ್ನವಸ್ತ್ರಸಮನ್ವಿತಂ** ॥೩೧॥

---

೨೮. ಬ್ರಾಹ್ಮಣನಿಗೂ ಸಹ ಚಿನ್ನದಿಂದ ಮಾಡಿದ ಸಿಹ್ಮವನ್ನು ದಾನಮಾಡಬೇಕು. ಇದರಿಂದ ಶಿವಸಾನ್ನಿಧ್ಯವು ಲಭಿಸುವುದು. ಕೋಟಿಗಟ್ಟಲೆ ಜನ್ಮಗಳಲ್ಲಿ ಆತನು ಸುಂದರನೂ, ಶತ್ರುಗಳಿಗೆ ಅಜೇಯನೂ ಆಗಿ ಜನಿಸುವನು. ಇದು ವೀರ ವ್ರತವೆಂದು ಪ್ರಸಿದ್ಧವಾಗಿರುವುದು. ಸ್ತ್ರೀಯರಿಗೂ ಸಹ ಸುಖವನ್ನು ಕೊಡುವಂತಹ ಶ್ರೇಷ್ಠವಾದ ವ್ರತವಿದು.

೨೯. ಪಕ್ಷದ ಹದಿನೈದನೆಯ ತಿಥಿಯಲ್ಲಿ ಶ್ರಾದ್ಧವನ್ನು ಮಾಡಿ, ಚೆನ್ನಾಗಿ ಹಾಲುಕರೆವ ಐದು ಹಸುಗಳನ್ನೂ, ಪೀತಾಂಬರಗಳನ್ನೂ, ಜಲಕುಂಭಗಳನ್ನೂ ದಾನಮಾಡಬೇಕು.

೩೦. ಅವನು ವಿಷ್ಣುಲೋಕಕ್ಕೆ ಹೋಗುವನು; ನೂರು ತಲೆಯ ವರೆಗೆ ಪಿತೃಗಳನ್ನು ಉದ್ಧಾರಮಾಡುವನು. ಕಲ್ಪಾಂತದಲ್ಲಿ ಕುಬೇರನಾಗುವನು. ಇದು ಪಿತೃವ್ರತವೆನಿಸಿಕೊಳ್ಳುವುದು.

೩೧. ಚೈತ್ರ ಮೊದಲಾದ ನಾಲ್ಕು ತಿಂಗಳ ಕಾಲ ಅರವಟ್ಟಿಗೆಯನ್ನಿಟ್ಟು ಅಪ್ರಾರ್ಥಿತನಾಗಿ ಜಲದಾನವನ್ನು ಮಾಡಬೇಕು. ವ್ರತದ ಕೊನೆಯಲ್ಲಿ ಅನ್ನವಸ್ತ್ರಗಳ ಸಹಿತವಾಗಿ ನೀರಿನ ಹಂಡೆಯನ್ನು ದಾನವಾಗಿ ಕೊಡಬೇಕು.

**ತಿಲಪಾತ್ರಂ ಹಿರಣ್ಯಂ ಚ ಬ್ರಹ್ಮಲೋಕೇ ಮಹೀಯತೇ ।**
**ಕಲ್ಪಾಂತೇ ಭೂಪತಿರ್ನೂನಮಾನಂದವ್ರತಮುಚ್ಯತೇ ॥೩೨॥**

**ಪಂಚಾಮೃತೇನ ಸ್ನಪನಂ ಕೃತ್ವಾ ಸಂವತ್ಸರಂ ವಿಭೋಃ ।**
**ವತ್ಸರಾಂತೇ ಪುನರ್ದದ್ಯಾದ್ಧೇನುಂ ಪಂಚಾಮೃತೇನ ಹಿ ॥೩೩॥**

**ವಿಪ್ರಾಯ ದದ್ಯಾಚ್ಛಂಖಂ ಚ ಸ ಪದಂ ಯಾತಿ ಶಾಂಕರಂ ।**
**ರಾಜಾ ಭವತಿ ಕಲ್ಪಾಂತೇ ಧೃತಿವ್ರತಮಿದಂ ಸ್ಮೃತಂ ॥೩೪॥**

**ವರ್ಜಯಿತ್ವಾ ಪುಮರ್ಾ ಮಾಂಸಮಬ್ದಾಂತೇ ಗೋಪ್ರದೋ ಭವೇತ್ ।**
**ತದ್ವದ್ಧೇಮಮೃಗಂ ದದ್ಯಾತ್ಸೋಽಶ್ವಮೇಧಫಲಂ ಲಭೇತ್ ।**
**ಅಹಿಂಸಾವ್ರತಮಿತ್ಯುಕ್ತಂ ಕಲ್ಪಾಂತೇ ಭೂಪತಿರ್ಭವೇತ್ ॥೩೫॥**

**ಮಾಘಮಾಸ್ಯುಷಸಿ ಸ್ನಾನಂ ಕೃತ್ವಾ ದಾಂಪತ್ಯಮರ್ಚಯೇತ್ ।**
**ಭೋಜಯಿತ್ವಾ ಯಥಾಶಕ್ತ್ಯಾ ಮಾಲ್ಯವಸ್ತ್ರವಿಭೂಷಣೈಃ ।**
**ಸೂರ್ಯಲೋಕೇ ವಸೇತ್ಕಲ್ಪಂ ಸೂರ್ಯವ್ರತಮಿದಂ ಸ್ಮೃತಂ ॥೩೬॥**

---

೩೨. ಅಲ್ಲದೆ ಎಳ್ಳುತುಂಬಿದ ಪಾತ್ರೆಯನ್ನೂ, ಬಂಗಾರವನ್ನೂ ದಾನಮಾಡಬೇಕು. ಹೀಗೆ ಮಾಡಿದವನು ಬ್ರಹ್ಮಲೋಕದಲ್ಲಿ ಪೂಜ್ಯನೆನಿಸುವನು. ಕಲ್ಪಾವಸಾನದಲ್ಲಿ ತಪ್ಪದೆ ರಾಜನಾಗುವನು. ಆನಂದವ್ರತವೆಂದು ಇದಕ್ಕೆ ಹೆಸರು.

೩೩-೩೪. ಮಹಾದೇವನಿಗೆ ಒಂದು ವರ್ಷಕಾಲ ಪಂಚಾಮೃತದಿಂದ ಅಭಿಷೇಕಮಾಡಿಸಿ, ವತ್ಸರಾಂತದಲ್ಲಿ ಪಂಚಾಮೃತಸಹಿತವಾಗಿ ಹಸುವನ್ನೂ, ಶಂಖವನ್ನೂ ಬ್ರಾಹ್ಮಣನಿಗೆ ದಾನಮಾಡಬೇಕು. ಹೀಗೆ ಮಾಡಿದವನು ಈಶ್ವರನ ಸಾನ್ನಿಧ್ಯವನ್ನೈದುವನು; ಕಲ್ಪಾಂತದಲ್ಲಿ ರಾಜನಾಗುವನು. ಧೃತಿವ್ರತವೆಂದು ಇದಕ್ಕೆ ಹೆಸರು.

೩೫. ಮಾಂಸಾಹಾರಿಯಾದವನು ಒಂದು ವರ್ಷಕಾಲ ಅದನ್ನು ತೊರೆದು ಕೊನೆಯಲ್ಲಿ ಗೋದಾನವನ್ನೂ, ಸುವರ್ಣಮೃಗದಾನವನ್ನೂ ಮಾಡಬೇಕು. ಅವನಿಗೆ ಅಶ್ವಮೇಧಯಾಗದ ಫಲವು ಬರುವುದು. ಇದಕ್ಕೆ ಅಹಿಂಸಾವ್ರತವೆಂದು ಹೆಸರು. ಇದನ್ನು ಆಚರಿಸಿದವನು ಕಲ್ಪಾಂತದಲ್ಲಿ ರಾಜನಾಗುವನು.

೩೬. ಮಾಘಮಾಸದಲ್ಲಿ ಪ್ರತಿದಿನವೂ ಉಷಃಕಾಲದಲ್ಲಿ ಸ್ನಾನಮಾಡಿ, ತನ್ನ ಶಕ್ತಿಗೆ ತಕ್ಕಂತೆ ದಂಪತಿಗಳಿಗೆ ಭೋಜನಮಾಡಿಸಿ ವಸ್ತ್ರಭೂಷಣಗಳಿಂದ ಪೂಜಿಸಬೇಕು. ಹೀಗೆ ಮಾಡುವವನು ಸೂರ್ಯಲೋಕದಲ್ಲಿ ಒಂದು ಕಲ್ಪಕಾಲ ವಾಸಮಾಡುವನು. ಇದನ್ನು ಸೂರ್ಯವ್ರತವೆಂದು ಕರೆಯುತ್ತಾರೆ.

**ಆಷಾಢಾದಿಚತುರ್ಮಾಸಂ ಪ್ರಾತಃಸ್ನಾಯೀ ಭವೇನ್ನರಃ ।**
**ವಿಪ್ರೇಷು ಭೋಜನಂ ದದ್ಯಾತ್ಕಾರ್ತಿಕ್ಯಾಂ ಗೋಪ್ರದೋ ಭವೇತ್ ।**
**ಸ ವೈಷ್ಣವಂ ಪದಂ ಯಾತಿ ವಿಷ್ಣುವ್ರತಮಿದಂ ಶುಭಂ ॥೩೭॥**

**ಅಯನಾದಯನಂ ಯಾವದ್ವರ್ಜಯೇತ್ಪುಷ್ಪಸರ್ಪಿಷೀ ।**
**ತದಂತೇ ಪುಷ್ಪದಾಮಾನಿ ಘೃತಧೇನ್ವಾ ಸಹೈವ ತು ॥೩೮॥**

**ದತ್ವಾ ಶಿವಪದಂ ಗಚ್ಛೇದ್ವಿಪ್ರಾಯ ಘೃತಪಾಯಸಂ ।**
**ಏತಚ್ಛೀಲವ್ರತಂ ನಾಮ ಶೀಲಾರೋಗ್ಯಫಲಪ್ರದಂ ॥೩೯॥**

**ಸಂಧ್ಯಾದೀಪಪ್ರದೋ ಯಸ್ತು ಸಮಾಂ ತೈಲಂ ವಿವರ್ಜಯೇತ್ ।**
**ಸಮಾಂತೇ ದೀಪಿಕಾಂ ದದ್ಯಾಚ್ಚಕ್ರಶೂಲೇ ಚ ಕಾಂಚನೇ ॥೪೦॥**

---

೩೭. ಆಷಾಢ ಮೊದಲಾದ ನಾಲ್ಕು ತಿಂಗಳಲ್ಲಿ ನಿತ್ಯವೂ ಪ್ರಾತಃಕಾಲ ಸ್ನಾನಮಾಡಿ, ಕಾರ್ತಿಕಮಾಸದ ಹುಣ್ಣಿಮೆಯ ದಿನ ಬ್ರಾಹ್ಮಣರಿಗೆ ಭೋಜನ ಮಾಡಿಸಿ, ಗೋದಾನವನ್ನು ಕೊಡಬೇಕು. ಇದನ್ನು ಶುಭಕರವಾದ ವಿಷ್ಣುವ್ರತ ವೆಂದು ಕರೆಯುತ್ತಾರೆ. ಇದನ್ನು ಮಾಡಿದವನಿಗೆ ವಿಷ್ಣುವಿನ ಸಾನ್ನಿಧ್ಯವು ಲಭಿಸುತ್ತದೆ.

೩೮-೩೯. ಒಂದು ಅಯನದಿಂದ ತೊಡಗಿ ಮತ್ತೊಂದು ಅಯನದ ವರೆಗೆ ಹೂವನ್ನೂ ತುಪ್ಪವನ್ನೂ ಬಿಡಬೇಕು. ಕೊನೆಯಲ್ಲಿ ಪುಷ್ಪಮಾಲೆಗಳನ್ನೂ, ಘೃತ ಧೇನುವನ್ನೂ—ಪಾತ್ರೆಯಲ್ಲಿ ಗಟ್ಟಿ ತುಪ್ಪವನ್ನು ತುಂಬಿ ಅದರಲ್ಲಿ ಹಸುವಿನ ಆಕೃತಿ ಯನ್ನು ಬರೆದು ಅಲಂಕರಿಸುವುದು—ದಾನಮಾಡಬೇಕು. ಬ್ರಾಹ್ಮಣನಿಗೆ ತುಪ್ಪ ವನ್ನೂ ಪಾಯಸವನ್ನೂ ನೀಡಬೇಕು. ಇದಕ್ಕೆ ಶೀಲವ್ರತವೆಂದು ಹೆಸರು. ಇದು ಒಳ್ಳೆಯ ನಡತೆಯನ್ನೂ ಆರೋಗ್ಯವನ್ನೂ ಕೊಡುವುದು. ಈ ವ್ರತದಿಂದ ಶಿವ ಸಾನ್ನಿಧ್ಯವು ಲಭಿಸುವುದು.

೪೦. ಒಂದು ವರ್ಷಕಾಲ ಸಂಜೆಯ ಹೊತ್ತಿನಲ್ಲಿ ದೀಪವನ್ನು ದಾನಮಾಡ ಬೇಕು. ಊಟಕ್ಕೆ ಎಣ್ಣೆಯನ್ನು ಉಪಯೋಗಿಸಬಾರದು. ವರ್ಷಾಂತದಲ್ಲಿ ದೀಪ ವನ್ನೂ, ಚಿನ್ನದ ಚಕ್ರ ಮತ್ತು ತ್ರಿಶೂಲಗಳನ್ನೂ ದಾನವಾಗಿ ಕೊಡಬೇಕು.

**ವಸ್ತ್ರಯುಗ್ಮಂ ಚ ವಿಪ್ರಾಯ ತೇಜಸ್ವೀ ಚ ಭವೇದಿಹ ।**
**ರುದ್ರಲೋಕಮವಾಪ್ನೋತಿ ದೀಪ್ತಿವ್ರತಮಿದಂ ಸ್ಮೃತಂ ॥೪೧॥**

**ಕಾರ್ತಿಕ್ಯಾದಿತೃತೀಯಾಯಾಂ ಪ್ರಾಶ್ಯ ಗೋಮೂತ್ರಯಾವಕಂ ।**
**ನಕ್ತಂ ಚರೇದಬ್ದಮೇಕಮಬ್ದಾಂತೇ ಗೋಪ್ರದೋ ಭವೇತ್ ॥೪೨॥**

**ಗೌರೀಲೋಕೇ ವಸೇತ್ಕಲ್ಪಂ ತತೋ ರಾಜಾ ಭವೇದಿಹ ।**
**ಏತದ್ರುದ್ರವ್ರತಂ ನಾಮ ಸದಾ ಕಲ್ಯಾಣಕಾರಕಂ ॥೪೩॥**

**ವರ್ಜಯೇಚ್ಚೈತ್ರಮಾಸೇ ಚ ಯಶ್ಚ ಗಂಧಾನುಲೇಪನಂ ।**
**ಶುಕ್ತಿಂ ಗಂಧಭೃತಾಂ ದತ್ವಾ ವಿಪ್ರಾಯ ಸಿತವಾಸಸೀ ।**
**ವಾರುಣಂ ಪದಮಾಪ್ನೋತಿ ದೃಢವ್ರತಮಿದಂ ಸ್ಮೃತಂ ॥೪೪॥**

---

೪೧. ಅಲ್ಲದೆ, ಬ್ರಾಹ್ಮಣನಿಗೆ ಒಂದು ಜೊತೆ ಪಂಚೆಯನ್ನೂ ಕೊಡಬೇಕು. ಇದಕ್ಕೆ ದೀಪ್ತಿವ್ರತವೆಂದು ಹೆಸರು. ಇದರಿಂದ ಈ ಲೋಕದಲ್ಲಿರುವಾಗ ತೇಜೋವಂತನಾಗುವುದು ಮಾತ್ರವಲ್ಲದೆ ಮುಂದೆ ರುದ್ರಲೋಕವನ್ನೂ ಸೇರುವನು.

೪೨. ಕಾರ್ತಿಕಮಾಸದಿಂದ ಪ್ರಾರಂಭಿಸಿ ಪ್ರತಿಯೊಂದು ತದಿಗೆಯ ದಿನವೂ ಗೋಮೂತ್ರವನ್ನೂ ಯವಾನ್ನವನ್ನೂ ಸೇವಿಸಿ, ಹಗಲು ಉಪವಾಸವನ್ನೂ ರಾತ್ರಿ ಭೋಜನವನ್ನೂ ಮಾಡಬೇಕು. ವರ್ಷವು ಮುಗಿದ ಬಳಿಕ ಗೋದಾನವನ್ನು ಕೊಡಬೇಕು.

೪೩. ಈ ವ್ರತವನ್ನು ಮಾಡಿದವನು ಗೌರೀಲೋಕದಲ್ಲಿ ಒಂದು ಕಲ್ಪಕಾಲ ವಾಸಮಾಡಿ, ಬಳಿಕ ಭೂಲೋಕದಲ್ಲಿ ಅರಸನಾಗಿ ಜನಿಸುವನು. ಇದನ್ನು ರುದ್ರವ್ರತವೆನ್ನುವರು. ಇದು ಯಾವಾಗಲೂ ಶುಭವನ್ನು ಕೊಡತಕ್ಕುದು.

೪೪. ಚೈತ್ರಮಾಸದಲ್ಲಿ ಮೈಗೆ ಗಂಧವನ್ನು ಹಚ್ಚಿಕೊಳ್ಳಬಾರದು. ಬ್ರಾಹ್ಮಣನಿಗೆ ಗಂಧದ ಭರಣಿಯನ್ನೂ ಒಂದುಜೊತೆ ಬಿಳಿಯ ಪಂಚೆಯನ್ನೂ ದಾನಮಾಡಬೇಕು. ಇದನ್ನು ದೃಢವ್ರತವೆಂದು ಕರೆಯುತ್ತಾರೆ. ಇದರಿಂದ ವರುಣಲೋಕವು ಪ್ರಾಪ್ತವಾಗುವುದು.

**ವೈಶಾಖೇ ಪುಷ್ಪಲವಣಂ ವರ್ಜಯಿತ್ವಾಽಥ ಗೋಪ್ರದಃ ।**
**ಭೂತ್ವಾ ವಿಷ್ಣುಪದೇ ಕಲ್ಪಂ ಸ್ಥಿತ್ವಾ ರಾಜಾ ಭವೇದಿಹ ।**
**ಏತತ್ಕಾಂತಿವ್ರತಂ ನಾಮ ಕಾಂತಿಕೀರ್ತಿಫಲಪ್ರದಂ** ॥೪೫॥

**ಬ್ರಹ್ಮಾಂಡಂ ಕಾಂಚನಂ ಕೃತ್ವಾ ತಿಲರಾಶಿಸಮನ್ವಿತಂ ।**
**ತ್ರ್ಯಹಂ ತಿಲಪ್ರದೋ ಭೂತ್ವಾ ವಹ್ನಿಂ ಸಂತರ್ಪ್ಯ ಸದ್ವಿಜಂ** ॥೪೬॥

**ಸಂಪೂಜ್ಯ ವಿಪ್ರದಾಂಪತ್ಯಂ ಮಾಲ್ಯವಸ್ತ್ರವಿಭೂಷಣೈಃ ।**
**ಶಕ್ತಿತಸ್ತ್ರಿಪಲಾದೂರ್ಧ್ವಂ ವಿಶ್ವಾತ್ಮಾ ಪ್ರೀಯತಾಮಿತಿ** ॥೪೭॥

**ಪುಣ್ಯೇಽಹ್ನಿ ದದ್ಯಾತ್ಸ ಪರಂ ಬ್ರಹ್ಮ ಯಾತ್ಯಪುನರ್ಭವಂ ।**
**ಏತದ್ಬ್ರಹ್ಮವ್ರತಂ ನಾಮ ನಿರ್ವಾಣಪದದಾಯಕಂ** ॥೪೮॥

---

೪೫. ವೈಶಾಖಮಾಸದಲ್ಲಿ ಹೂವನ್ನೂ ಉಪ್ಪನ್ನೂ ತೊರೆದು ಗೋದಾನವನ್ನು ಮಾಡಬೇಕು. ಇದರಿಂದ ವಿಷ್ಣುಲೋಕದಲ್ಲಿ ಒಂದು ಕಲ್ಪಕಾಲ ಆನಂದಿಸಿ, ಮರಳಿ ಈ ಭೂಲೋಕದಲ್ಲಿ ರಾಜನಾಗಿ ಜನಿಸುವನು. ಇದಕ್ಕೆ ಕಾಂತಿವ್ರತವೆಂದು ಹೆಸರು. ಇದು ಕಾಂತಿಯನ್ನೂ ಕೀರ್ತಿಯನ್ನೂ ಕೊಡುವುದು.

೪೬-೪೭. ಮೂರು ದಿನ ತಿಲದಾನವನ್ನು ಮಾಡಿ ಹೋಮದಿಂದ ಅಗ್ನಿಯನ್ನೂ, ದಕ್ಷಿಣಾದಿಗಳಿಂದ ಬ್ರಾಹ್ಮಣರನ್ನೂ ತೃಪ್ತಿಪಡಿಸಬೇಕು. ವಿಪ್ರದಂಪತಿಗಳನ್ನು ಪುಷ್ಪವಸ್ತ್ರಾಲಂಕಾರಗಳಿಂದ ಪೂಜಿಸಿ, ತನ್ನ ಶಕ್ತಿಗೆ ತಕ್ಕಂತೆ ಮೂರುಪಲ ತೂಕಕ್ಕೆ (ಸುಮಾರು ಒಂಬತ್ತು ತೊಲಗಳು) ಕಡಿಮೆಯಿಲ್ಲದಂತೆ ಚಿನ್ನದಿಂದ ಬ್ರಹ್ಮಾಂಡವನ್ನು ರಚಿಸಿ, "ಸರ್ವಾತ್ಮನಾದ ಭಗವಂತನು ಪ್ರೀತನಾಗಲಿ" ಎಂದು ಅನುಸಂಧಾನಮಾಡುತ್ತ ದಾನಮಾಡಬೇಕು.

೪೮. ಈ ದಾನವನ್ನು ಪುಣ್ಯದಿನದಲ್ಲಿ ಮಾಡಬೇಕು. ಇದಕ್ಕೆ ಬ್ರಹ್ಮವ್ರತವೆಂದು ಹೆಸರು. ಇದನ್ನು ಆಚರಿಸಿದವನಿಗೆ ಪುನರ್ಜನ್ಮವಿಲ್ಲ; ಪರಬ್ರಹ್ಮಸಾಯುಜ್ಯವು ಲಭಿಸುವುದು ; ಶಾಶ್ವತವಾದ ಆನಂದವು ಪ್ರಾಪ್ತವಾಗುವುದು.

**ಯಶ್ಶೋಭಯಮುಖೀಂ ದದ್ಯಾತ್ಪ್ರಭೂತಕನಕಾನ್ವಿತಾಂ।**
**ದಿನಂ ಪಯೋವ್ರತಸ್ತಿಷ್ಠೇತ್ಸ ಯಾತಿ ಪರಮಂ ಪದಂ।**
**ಏತದ್ಧೇನುವ್ರತಂ ನಾಮ ಪುನರಾವೃತ್ತಿದುರ್ಲಭಂ ॥೪೯॥**
**ತ್ರ್ಯಹಂ ಪಯೋವ್ರತೇ ಸ್ಥಿತ್ವಾ ಕಾಂಚನಂ ಕಲ್ಪಪಾದಪಂ।**
**ಪಲಾದೂರ್ಧ್ವಂ ಯಥಾಶಕ್ತ್ಯಾ ತಂಡುಲೈಸ್ತೂಪಸಂಯುತಂ।**
**ದತ್ವಾ ಬ್ರಹ್ಮಪದಂ ಯಾತಿ ಕಲ್ಪವ್ರತಮಿದಂ ಸ್ಮೃತಂ ॥೫೦॥**
**ಮಾಸೋಪವಾಸೀ ಯೋ ದದ್ಯಾದ್ಧೇನುಂ ವಿಪ್ರಾಯ ಶೋಭನಾಂ।**
**ಸ ವೈಷ್ಣವಂ ಪದಂ ಯಾತಿ ಭೀಮವ್ರತಮಿದಂ ಸ್ಮೃತಂ ॥೫೧॥**
**ದದ್ಯಾದ್ವಿಂಶತ್ಪಲಾದೂರ್ಧ್ವಂ ಮಹೀಂ ಕೃತ್ವಾ ತು ಕಾಂಚನೀಂ।**
**ದಿನಂ ಪಯೋವ್ರತಸ್ತಿಷ್ಠೇದ್ರುದ್ರಲೋಕೇ ಮಹೀಯತೇ।**
**ಧರಾವ್ರತಮಿದಂ ಪ್ರೋಕ್ತಂ ಸಪ್ತಕಲ್ಪಶತಾನುಗಂ ॥೫೨॥**

---

೪೯. ಒಂದು ದಿನ ಕ್ಷೀರವನ್ನು ಮಾತ್ರ ಸೇವಿಸಿ, ಕರುಹಾಕುತ್ತಿರುವ ಹಸುವನ್ನು ಸುವರ್ಣಾಭರಣಗಳಿಂದ ಅಲಂಕರಿಸಿ ದಾನಮಾಡುವಾತನು ಅತ್ಯುತ್ಕೃಷ್ಟವಾದ ಗತಿಯನ್ನು ಪಡೆಯುವನು. ಅವನಿಗೆ ಪುನರ್ಜನ್ಮವಿಲ್ಲ. ಇದು ಧೇನುವ್ರತವೆನಿಸಿಕೊಳ್ಳುವುದು.

೫೦. ಮೂರು ದಿನ ಹಾಲನ್ನು ಮಾತ್ರ ಸೇವಿಸಿ, ತನ್ನ ಶಕ್ತಿಗೆ ತಕ್ಕಂತೆ ಒಂದು ಪಲ ತೂಕಕ್ಕೆ ಕಡಿಮೆಯಿಲ್ಲದೆ ಚಿನ್ನದಿಂದ ಕಲ್ಪವೃಕ್ಷವನ್ನು ಮಾಡಿಸಿ, ಅಕ್ಕಿಯ ಸಹಿತವಾಗಿ ದಾನಮಾಡಬೇಕು. ಇದಕ್ಕೆ ಕಲ್ಪವ್ರತವೆಂದು ಹೆಸರು. ಇದನ್ನು ಮಾಡಿದವನು ಬ್ರಹ್ಮನ ಸಾನ್ನಿಧ್ಯವನ್ನು ಪಡೆಯುವನು.

೫೧. ಒಂದು ತಿಂಗಳ ಕಾಲ ಉಪವಾಸವಿದ್ದು, ಶುಭಲಕ್ಷಣಗಳಿಂದ ಕೂಡಿದ ಹಸುವನ್ನು ಬ್ರಾಹ್ಮಣನಿಗೆ ದಾನಮಾಡುವಾತನು ವಿಷ್ಣುಲೋಕವನ್ನೈದುವನು. ಇದನ್ನು ಭೀಮವ್ರತವೆಂದು ಕರೆಯುವರು.

೫೨. ಇಪ್ಪತ್ತು ಪಲ ತೂಕಕ್ಕೆ ಕಡಿಮೆಯಿಲ್ಲದಂತೆ ಬಂಗಾರದಿಂದ ಭೂಮಂಡಲವನ್ನು ರಚಿಸಿ ದಾನಮಾಡಬೇಕು. ಆ ದಿನ ಕ್ಷೀರವನ್ನು ಮಾತ್ರ ಆಹಾರವಾಗಿ ತೆಗೆದುಕೊಳ್ಳಬೇಕು. ಇದಕ್ಕೆ ಧರಾವ್ರತವೆಂದು ಹೆಸರು. ಇದರ ಫಲವು ಏಳು ಸಾವಿರ ಕಲ್ಪಗಳಕಾಲ ಅನುಸರಿಸಿ ಬರುವುದು. ಇದನ್ನು ಮಾಡಿದಾತನು ರುದ್ರಲೋಕವನ್ನು ಸೇರಿ ಮನ್ನಣೆಯನ್ನು ಪಡೆಯುವನು.

ಮಾಘೇ ಮಾಸೇಽಥವಾ ಚೈತ್ರೇ ಗುಡಧೇನುಪ್ರದೋ ಭವೇತ್ ।
ಗುಡವ್ರತಸ್ತೃತೀಯಾಯಾಂ ಗೌರೀಲೋಕೇ ಮಹೀಯತೇ ।
ಮಹಾವ್ರತಮಿದಂ ನಾಮ ಪರಮಾನಂದಕಾರಕಂ ॥೫೩॥

ಪಕ್ಷೋಪವಾಸೀ ಯೋ ದದ್ಯಾದ್ವಿಪ್ರಾಯ ಕಪಿಲಾದ್ವಯಂ ।
ಬ್ರಹ್ಮಲೋಕಮವಾಪ್ನೋತಿ ದೇವಾಸುರಸುಪೂಜಿತಂ ।
ಕಲ್ಪಾಂತೇ ರಾಜರಾಜಃ ಸ್ಯಾತ್ಪ್ರಭಾವ್ರತಮಿದಂ ಸ್ಮೃತಂ ॥೫೪॥

ವತ್ಸರಂ ತ್ವೇಕಭಕ್ತಾಶೀ ಸಭಕ್ಷ್ಯಜಲಕುಂಭದಃ ।
ಶಿವಲೋಕೇ ವಸೇತ್ಕಲ್ಪಂ ಪ್ರಾಪ್ತಿವ್ರತಮಿದಂ ಸ್ಮೃತಂ ॥೫೫॥

ನಕ್ತಾಶೀ ಚಾಷ್ಟಮೀಷು ಸ್ಯಾದ್ವತ್ಸರಾಂತೇ ಚ ಧೇನುದಃ ।
ಪೌರಂದರಂ ಪುರಂ ಯಾತಿ ಸುಗತಿವ್ರತಮುಚ್ಯತೇ ॥೫೬॥

---

೫೩. ಮಾಘ ಅಥವಾ ಚೈತ್ರಮಾಸದ ತೃತೀಯೆಯ ದಿನ ಗುಡಧೇನುವನ್ನು ಎಂದರೆ ಬೆಲ್ಲದಿಂದ ಮಾಡಿದ ಹಸುವಿನ ಆಕೃತಿಯನ್ನು ದಾನಮಾಡಬೇಕು. ಆ ದಿವಸದಲ್ಲಿ ಬೆಲ್ಲವನ್ನು ಮಾತ್ರ ಭುಂಜಿಸಬೇಕು. ಅವನು ಗೌರೀ ಲೋಕದಲ್ಲಿ ಪೂಜ್ಯತೆಯನ್ನು ಪಡೆಯುವನು. ಇದು ಅತಿಶಯವಾದ ಆನಂದವನ್ನು ಕೊಡುವಂತಹುದು. ಮಹಾವ್ರತವೆಂದು ಇದಕ್ಕೆ ಹೆಸರು.

೫೪. ಹದಿನೈದು ದಿನಗಳ ಕಾಲ ಉಪವಾಸವಿದ್ದು ಬ್ರಾಹ್ಮಣನಿಗೆ ಕಪಿಲ ವರ್ಣದ ಹಸುಗಳೆರಡನ್ನು ದಾನ ಕೊಡುವವನು ಬ್ರಹ್ಮಲೋಕವನ್ನು ಸೇರುವನು; ದೇವತೆಗಳಿಂದಲೂ ಅಸುರರಿಂದಲೂ ಗೌರವವನ್ನು ಪಡೆಯುವನು. ಕಲ್ಪದ ಕೊನೆಯಲ್ಲಿ ಕುಬೇರನಾಗುವನು. ಇದನ್ನು ಪ್ರಭಾವ್ರತವೆಂದು ಹೇಳುವರು.

೫೫. ವರ್ಷವೆಲ್ಲ ಒಂದೇ ಹೊತ್ತು ಊಟಮಾಡುತ್ತ ಕೊನೆಯಲ್ಲಿ ಬಗೆ ಬಗೆಯ ಭಕ್ಷ್ಯಗಳನ್ನೂ, ಜಲಪೂರ್ಣವಾದ ಕುಂಭವನ್ನೂ ದಾನಮಾಡುವವನು ಶಿವಲೋಕದಲ್ಲಿ ಒಂದು ಕಲ್ಪಕಾಲ ವಾಸಿಸುವನು. ಇದಕ್ಕೆ ಪ್ರಾಪ್ತಿವ್ರತವೆಂದು ಹೆಸರು.

೫೬. ಅಷ್ಟಮಿಯಲ್ಲಿ ಹಗಲು ಉಪವಾಸವಿದ್ದು ರಾತ್ರಿ ಭೋಜನವನ್ನು ಮಾಡುತ್ತ ವತ್ಸರಾಂತದಲ್ಲಿ ಗೋದಾನವನ್ನು ಕೊಡುವವನು ಇಂದ್ರಲೋಕಕ್ಕೆ ಹೋಗುವನು. ಇದು ಸುಗತಿವ್ರತವೆಂದು ಪ್ರಸಿದ್ಧವಾಗಿರುವುದು.

**ವಿಪ್ರಾಯೇಂಧನದೋ ಯಸ್ತು ವರ್ಷಾದಿಚತುರೋ ಋತೂನ್ |**
**ಘೃತಧೇನುಪ್ರದೋಽಂತೇ ಚ ಸ ಪರಂ ಬ್ರಹ್ಮ ಗಚ್ಛತಿ |**
**ವೈಶ್ವಾನರವ್ರತಂ ನಾಮ ಸರ್ವಪಾಪವಿನಾಶನಂ ||೫೭||**

**ಏಕಾದಶ್ಯಾಂ ಚ ನಕ್ತಾಶೀ ಯಶ್ಚಕ್ರಂ ವಿನಿವೇದಯೇತ್ |**
**ಸಮಾಂತೇ ವೈಷ್ಣವಂ ಹೈಮಂ ಸ ವಿಷ್ಣೋಃ ಪದಮಾಪ್ನುಯಾತ್ |**
**ಏತತ್ಕೃಷ್ಣವ್ರತಂ ನಾಮ ಕಲ್ಪಾಂತೇ ರಾಜ್ಯಭಾಗ್ಭವೇತ್ ||೫೮||**

**ಪಾಯಸಾಶೀ ಸಮಾಂತೇ ತು ದದ್ಯಾದ್ವಿಪ್ರಾಯ ಗೋಯುಗಂ |**
**ಲಕ್ಷ್ಮೀಲೋಕಮವಾಪ್ನೋತಿ ಹ್ಯೇತದ್ದೇವೀವ್ರತಂ ಸ್ಮೃತಂ ||೫೯||**

**ಸಪ್ತಮ್ಯಾಂ ನಕ್ತಭುಗ್ದದ್ಯಾತ್ಸಮಾಂತೇ ಗಾಂ ಪಯಸ್ವಿನೀಂ |**
**ಸೂರ್ಯಲೋಕಮವಾಪ್ನೋತಿ ಭಾನುವ್ರತಮಿದಂ ಸ್ಮೃತಂ ||೬೦||**

---

೫೭. ವರ್ಷರ್ತು ಮೊದಲಾಗಿ ಶಿಶಿರರ್ತುವಿನ ವರೆಗೆ ಬ್ರಾಹ್ಮಣನಿಗೆ ಸೌದೆಯನ್ನು ದಾನಮಾಡುತ್ತ ಕೊನೆಯಲ್ಲಿ ಘೃತಧೇನುವನ್ನು ದಾನಮಾಡಿದರೆ—ಪಾತ್ರೆಯಲ್ಲಿ ಗಟ್ಟಿಯಾದ ತುಪ್ಪವನ್ನು ತುಂಬಿ ಅದರಲ್ಲಿ ಹಸುವಿನ ಆಕೃತಿಯನ್ನು ಬರೆದು ಅಲಂಕರಿಸಿ ದಾನಮಾಡಿದರೆ—ಪರಬ್ರಹ್ಮಸಾನ್ನಿಧ್ಯವು ಲಭಿಸುವುದು. ಇದನ್ನು ವೈಶ್ವಾನರ ವ್ರತವೆನ್ನುವರು. ಇದು ಸಕಲ ಪಾಪಗಳನ್ನೂ ಪರಿಹರಿಸುವುದು.

೫೮. ಏಕಾದಶಿಯಲ್ಲಿ ರಾತ್ರಿಯ ಹೊತ್ತು ಮಾತ್ರ ಫಲಾಹಾರಮಾಡುತ್ತ, ವರ್ಷಾಂತದಲ್ಲಿ ಸುವರ್ಣನಿರ್ಮಿತವಾದ ವಿಷ್ಣುಚಕ್ರವನ್ನು ದಾನಮಾಡುವವನು ವಿಷ್ಣುಲೋಕವನ್ನೈದುವನು. ಕಲ್ಪವು ಮುಗಿದ ಬಳಿಕ ಅರಸನಾಗಿ ಜನಿಸುವನು. ಕೃಷ್ಣವ್ರತವೆಂದು ಇದಕ್ಕೆ ಹೆಸರು.

೫೯. ನಿತ್ಯವೂ ಪಾಯಸವನ್ನು ಮಾತ್ರ ಸೇವಿಸುತ್ತ, ವರ್ಷದ ಕೊನೆಯಲ್ಲಿ ಬ್ರಾಹ್ಮಣನಿಗೆ ಎರಡು ಹಸುಗಳನ್ನು ಕೊಟ್ಟರೆ ಲಕ್ಷ್ಮೀಲೋಕವು ಪ್ರಾಪ್ತವಾಗುವುದು. ಇದನ್ನು ದೇವೀವ್ರತವೆನ್ನುತ್ತಾರೆ.

೬೦. ಸಪ್ತಮಿಯಲ್ಲಿ ರಾತ್ರಿ ಭೋಜನವನ್ನು ಮಾತ್ರ ಮಾಡುತ್ತ, ವರ್ಷಾಂತದಲ್ಲಿ ಚೆನ್ನಾಗಿ ಹಾಲು ಕರೆವ ಹಸುವನ್ನು ದಾನಕೊಡುವಾತನು ಸೂರ್ಯಲೋಕವನ್ನೈದುವನು. ಭಾನುವ್ರತವೆಂದು ಇದಕ್ಕೆ ಹೆಸರು.

ಚತುರ್ಥ್ಯಾಂ ನಕ್ತಭುಗ್ದದ್ಯಾದಬ್ದಾಂತೇ ಹೇಮವಾರಣಂ ।
ವ್ರತಂ ವೈನಾಯಕಂ ನಾಮ ಶಿವಲೋಕಫಲಪ್ರದಂ ॥೬೧॥

ಮಹಾಫಲಾನಿ ಯಸ್ತ್ಯಕ್ತ್ವಾ ಚತುರ್ಮಾಸಂ ದ್ವಿಜಾತಯೇ ।
ಹೈಮಾನಿ ಕಾರ್ತಿಕೇ ದದ್ಯಾದ್ಗೋಯುಗೇನ ಸಮನ್ವಿತಂ ।
ಏತತ್ಫಲವ್ರತಂ ನಾಮ ವಿಷ್ಣುಲೋಕಫಲಪ್ರದಂ ॥೬೨॥

ಯಶ್ಚೋಪವಾಸೀ ಸಪ್ತಮ್ಯಾಂ ಸಮಾಂತೇ ಹೈಮಪಂಕಜಂ ।
ಗಾಶ್ಚೈವ ಶಕ್ತಿತೋ ದದ್ಯಾದ್ಧೇಮಾನ್ನಘಟಸಂಯುತಾಃ ।
ಏತತ್ಸೌರವ್ರತಂ ನಾಮ ಸೂರ್ಯಲೋಕಫಲಪ್ರದಂ ॥೬೩॥

ದ್ವಾದಶ ದ್ವಾದಶೀರ್ಯಸ್ತು ಸಮಾಪ್ಯೋಪೋಷಣೇನ ಚ ।
ಗೋವಸ್ತ್ರಕಾಂಚನೈರ್ವಿಪ್ರಾನ್ ಪೂಜಯೇಚ್ಛಕ್ತಿತೋ ನರಃ ।
ಪರಮಂ ಪದಮಾಪ್ನೋತಿ ವಿಷ್ಣುವ್ರತಮಿದಂ ಸ್ಮೃತಂ ॥೬೪॥

---

೬೧. ಎರಡು ಪಕ್ಷದ ಚೌತಿಗಳಲ್ಲಿಯೂ ರಾತ್ರಿಯ ಹೊತ್ತು ಮಾತ್ರ ಭೋಜನಮಾಡುತ್ತ, ವರ್ಷದ ಕೊನೆಯಲ್ಲಿ ಬಂಗಾರದ ಆನೆಯನ್ನು ದಾನ ಕೊಡುವಾತನು ಶಿವಲೋಕವನ್ನು ಸೇರುವನು. ಇದನ್ನು ವಿನಾಯಕವ್ರತವೆಂದು ಕರೆಯುತ್ತಾರೆ.

೬೨. ಆಷಾಢ ಮೊದಲಾದ ನಾಲ್ಕು ತಿಂಗಳಲ್ಲಿ ಹಣ್ಣುಗಳನ್ನು ತಿನ್ನಬಾರದು. ಕಾರ್ತಿಕ ಮಾಸದಲ್ಲಿ ಬಂಗಾರದಿಂದ ಮಾಡಿದ ಹಣ್ಣುಗಳನ್ನೂ, ಎರಡು ಹಸುಗಳನ್ನೂ ದಾನಮಾಡಬೇಕು. ಇದಕ್ಕೆ ಫಲವ್ರತವೆಂದು ಹೆಸರು. ಇದರಿಂದ ವಿಷ್ಣುಲೋಕವು ಲಭಿಸುವುದು.

೬೩. ಸಪ್ತಮಿಯ ದಿನ ಉಪವಾಸಮಾಡುತ್ತ ವರ್ಷದ ಕೊನೆಯಲ್ಲಿ ಸುವರ್ಣ ಕಮಲವನ್ನೂ, ತನ್ನ ಶಕ್ತಿಗೆ ಅನುಸಾರವಾಗಿ ಹಸುಗಳನ್ನೂ, ಅನ್ನವನ್ನು ತುಂಬಿದ ಬಂಗಾರದ ಪಾತ್ರೆಗಳನ್ನೂ ದಾನಮಾಡಬೇಕು. ಇದು ಸಾರವ್ರತವೆನಿಸಿಕೊಳ್ಳುವುದು. ಸೂರ್ಯಲೋಕದ ವಾಸವು ಇದರಿಂದ ಲಭಿಸುವುದು.

೬೪. ಹನ್ನೆರಡು ದ್ವಾದಶಿಗಳಲ್ಲಿ ಏಕಾದಶಿಯ ಉಪವಾಸ ವ್ರತವನು ಸಾಂಗವಾಗಿ ಮುಗಿಸಿ, ಶಕ್ತ್ಯನುಸಾರವಾಗಿ ಹಸುಗಳು, ವಸ್ತ್ರಗಳು, ಸುವರ್ಣಾಭರಣಗಳು ಇವುಗಳಿಂದ ಬ್ರಾಹ್ಮಣರನ್ನು ತೃಪ್ತಿಪಡಿಸುವ ಮನುಷ್ಯನಿಗೆ ಪರಮ ಪದವು ಪ್ರಾಪ್ತವಾಗುವುದು. ಇದಕ್ಕೆ ವಿಷ್ಣುವ್ರತವೆಂದು ಹೆಸರು.

ಕಾರ್ತಿಕ್ಯಾಂ ಚ ವೃಷೋತ್ಸರ್ಗಂ ಕೃತ್ವಾ ನಕ್ತಂ ಸಮಾಚರೇತ್ ।
ಶೈವಂ ಪದಮವಾಪ್ನೋತಿ ವಾರ್ಷವ್ರತಮಿದಂ ಸ್ಮೃತಂ ||೬೫||

ಕೃಚ್ಛ್ರಾಂತೇ ಗೋಪ್ರದಃ ಕುರ್ಯಾದ್ಭೋಜನಂ ಶಕ್ತಿತಃ ಪದಂ ।
ವಿಪ್ರಾಣಾಂ ಶಾಂಕರಂ ಯಾತಿ ಪ್ರಾಜಾಪತ್ಯಮಿದಂ ವ್ರತಂ ||೬೬||

ಚತುರ್ದಶ್ಯಾಂ ತು ನಕ್ತಾಶೀ ಸಮಾಂತೇ ಗೋಧನಪ್ರದಃ ।
ಶೈವಂ ಪದಮವಾಪ್ನೋತಿ ತ್ರೈಯಂಬಕಮಿದಂ ವ್ರತಂ ||೬೭||

ಸಪ್ತರಾತ್ರೋಷಿತೋ ದದ್ಯಾದ್ಘೃತಕುಂಭಂ ದ್ವಿಜಾತಯೇ ।
ಘೃತವ್ರತಮಿದಂ ಪ್ರಾಹುರ್ಬ್ರಹ್ಮಲೋಕಫಲಪ್ರದಂ ||೬೮||

---

೬೫. ಕಾರ್ತಿಕಮಾಸದ ಹುಣ್ಣಿಮೆಯು ದಿನ ಗೂಳಿಯನ್ನು ಬಿಟ್ಟು, ಹಗಲು ಉಪವಾಸವಿದ್ದು ರಾತ್ರಿ ಭೋಜನವನ್ನು ಮಾಡಬೇಕು. ಇದರಿಂದ ಶಿವಸಾನ್ನಿಧ್ಯವು ದೊರಕುವುದು. ಇದನ್ನು ವಾರ್ಷವ್ರತವೆಂದು ಹೇಳುತ್ತಾರೆ.

೬೬. ಪ್ರಾಜಾಪತ್ಯ ಕೃಚ್ಛ್ರವನ್ನು* ನೆರವೇರಿಸಿ, ತನ್ನ ಶಕ್ತಿಗೆ ತಕ್ಕಂತೆ ಬ್ರಾಹ್ಮಣರಿಗೆ ಭೋಜನಮಾಡಿಸಿ, ಗೋದಾನವನ್ನು ಕೊಡುವಾತನು ಶಂಕರನ ಸಾನ್ನಿಧ್ಯವನ್ನು ಸೇರುವನು. ಇದಕ್ಕೆ ಪ್ರಾಜಾಪತ್ಯವ್ರತವೆಂದು ಹೆಸರು.

೬೭. ಚತುರ್ದಶಿಯ ದಿನ ರಾತ್ರಿಭೋಜನವನ್ನು ಮಾತ್ರ ಮಾಡುತ್ತ ವರ್ಷಾಂತದಲ್ಲಿ ಹಸುವನ್ನು ದಾನವಾಗಿ ಕೊಡುವವನು ಕೈಲಾಸವನ್ನು ಸೇರುವನು. ಇದಕ್ಕೆ ತ್ರ್ಯೈಯಂಬಕ ವ್ರತವೆಂದು ಹೆಸರು.

೬೮. ಏಳು ದಿನ ಉಪವಾಸವಿದ್ದು ಬ್ರಾಹ್ಮಣನಿಗೆ ಘೃತಕುಂಭವನ್ನು (ತುಪ್ಪ ತುಂಬಿದ ಪಾತ್ರೆ) ದಾನಮಾಡಬೇಕು. ಇದಕ್ಕೆ ಘೃತವ್ರತವೆಂದು ಹೆಸರು. ಇದು ಬ್ರಹ್ಮಲೋಕಪ್ರಾಪ್ತಿಯ ಫಲವನ್ನು ಕೊಡುವುದು.

* "ತ್ರ್ಯಹಂ ಪ್ರಾತಸ್ತಥಾ ಸಾಯಮಯಾಚಿತಂ ಪರಾಕ ಇತಿ ಕೃಚ್ಛ್ರಃ" ಎಂದು ಕೃಚ್ಛ್ರದ ಲಕ್ಷಣವನ್ನು ಹೇಳಿದೆ. ಮೂರು ದಿನ ಹಗಲು ಮಾತ್ರ ಊಟ, ಮೂರು ದಿನ ರಾತ್ರಿ ಮಾತ್ರ ಊಟ, ಬಳಿಕ ಮೂರು ದಿನ ತಾನಾಗಿ ಏನಾದರೂ ದೊರೆತರೆ ಮಾತ್ರ ಊಟ, ಕೊನೆಯ ಮೂರು ದಿನ ಉಪವಾಸ ಈ ರೀತಿಯಾದ ಕೃಚ್ಛ್ರವನ್ನು ಪ್ರಾಜಾಪತ್ಯ ಕೃಚ್ಛ್ರವೆನ್ನುತ್ತಾರೆ.

ಆಕಾಶಶಾಯೀ ವರ್ಷಾಸು ಧೇನುಮಂತೇ ಪಯಸ್ವಿನೀಂ ।
ಶಕ್ರಲೋಕೇ ವಸೇನ್ನಿತ್ಯಮಿಂದ್ರವ್ರತಮಿದಂ ಸ್ಮೃತಂ ॥೬೯॥

ಅನಗ್ನಿಪಕ್ವಮಶ್ನಾತಿ ತೃತೀಯಾಯಾಂ ತು ಯೋ ನರಃ ।
ಗಾಂ ದತ್ವಾ ಶಿವಮಭ್ಯೇತಿ ಪುನರಾವೃತ್ತಿದುರ್ಲಭಂ ।
ಇಹ ಚಾನಂದಕೃತ್ಪುಂಸಾಂ ಶ್ರೇಯೋವ್ರತಮಿದಂ ಸ್ಮೃತಂ ॥೭೦॥

ಹೈಮಂ ಪಲದ್ವಯಾದೂರ್ಧ್ವಂ ರಥಮಶ್ವಯುಗಾನ್ವಿತಂ ।
ದದತ್ಕೃತೋಪವಾಸಃ ಸ್ಯಾದ್ದಿವಿ ಕಲ್ಪಶತಂ ವಸೇತ್ ।
ಕಲ್ಪಾಂತೇ ರಾಜರಾಜಃ ಸ್ಯಾದಶ್ವವ್ರತಮಿದಂ ಸ್ಮೃತಂ ॥೭೧॥

ತದ್ವದ್ಧೇಮರಥಂ ದದ್ಯಾತ್ಕರಿಭ್ಯಾಂ ಸಂಯುತಂ ನರಃ ।
ಸತ್ಯಲೋಕೇ ವಸೇತ್ಕಲ್ಪಂ ಸಹಸ್ರಮಥ ಭೂಪತಿಃ ।
ಭವೇದುಪೋಷಿತೋ ಭೂತ್ವಾ ಕರಿವ್ರತಮಿದಂ ಸ್ಮೃತಂ ॥೭೨॥

---

೬೯. ವರ್ಷರ್ತುವಿನಲ್ಲಿ ಆವರಣವಿಲ್ಲದ ಬಯಲಿನಲ್ಲಿ ಮಲಗುತ್ತ, ಆ ತರುವಾಯ ಚೆನ್ನಾಗಿ ಹಾಲುಕೊಡುವ ಹಸುವನ್ನು ದಾನಮಾಡುವಾತನು ಶಾಶ್ವತವಾಗಿ ಇಂದ್ರಲೋಕದಲ್ಲಿ ವಾಸಿಸುವನು. ಇದು ಇಂದ್ರವ್ರತವೆಂದು ಪ್ರಸಿದ್ಧವಾದುದು.

೭೦. ತದಿಗೆಯ ದಿನ ಅಗ್ನಿಯಲ್ಲಿ ಪಕ್ವಮಾಡದಿರುವ ಪದಾರ್ಥಗಳನ್ನೇ ತಿನ್ನುತ್ತ, ವರ್ಷಾಂತದಲ್ಲಿ ಹಸುವನ್ನು ದಾನಮಾಡುವಾತನು ಶಿವನ ಸನ್ನಿಧಿಯನ್ನು ಸೇರುವನು. ಅವನಿಗೆ ಪುನರ್ಜನ್ಮವಿಲ್ಲ. ಇದಕ್ಕೆ ಶ್ರೇಯೋವ್ರತವೆಂದು ಹೆಸರು. ಇಹದಲ್ಲಿಯೂ ಪರದಲ್ಲಿಯೂ ಇದು ಆನಂದವನ್ನು ಕೊಡುವುದು.

೭೧. ಎರಡು ಪಲತೂಕಕ್ಕೆ (ಸುಮಾರು ಆರು ತೊಲ) ಕಡಿಮೆಯಿಲ್ಲದಂತೆ ಬಂಗಾರದಿಂದ ತೇರನ್ನೂ, ಒಂದು ಜೊತೆ ಕುದುರೆಯನ್ನೂ ಮಾಡಿಸಿ, ದಾನವಾಗಿ ಕೊಟ್ಟು ಉಪವಾಸವಿರುವಾತನು ಸ್ವರ್ಗದಲ್ಲಿ ಒಂದು ನೂರು ಕಲ್ಪಗಳ ಕಾಲ ವಾಸ ಮಾಡುವನು. ಆ ತರುವಾಯ ಕುಬೇರನ ಪದವಿಯನ್ನು ಪಡೆಯುವನು. ಇದನ್ನು ಅಶ್ವವ್ರತವೆಂದು ಕರೆಯುತ್ತಾರೆ.

೭೨. ಹಾಗೆಯೇ ಉಪವಾಸವಿದ್ದು ಎರಡು ಆನೆಗಳನ್ನು ಕಟ್ಟಿದ ಚಿನ್ನದ ತೇರನ್ನು ದಾನಮಾಡಿದರೆ ಸತ್ಯಲೋಕದಲ್ಲಿ ಒಂದು ಕಲ್ಪದಷ್ಟು ಕಾಲ ವಾಸ ಮಾಡುವನು. ಇದಕ್ಕೆ ಕರಿವ್ರತವೆಂದು ಹೆಸರು.

**ಉಪವಾಸಂ ಪರಿತ್ಯಜ್ಯ ಸಮಾಪ್ತೇ ಗೋಪ್ರದೋ ಭವೇತ್ ।**
**ಯಕ್ಷಾಧಿಪತ್ಯಮಾಪ್ನೋತಿ ಸುಖವ್ರತಮಿದಂ ಸ್ಮೃತಂ ॥೭೩॥**

**ನಿಶಿ ಕೃತ್ವಾ ಜಲೇ ವಾಸಂ ಪ್ರಭಾತೇ ಗೋಪ್ರದೋ ಭವೇತ್ ।**
**ವಾರುಣಂ ಲೋಕಮಾಪ್ನೋತಿ ವರುಣವ್ರತಮುಚ್ಯತೇ ॥೭೪॥**

**ಚಾಂದ್ರಾಯಣಂ ಚ ಯಃ ಕುರ್ಯಾದ್ಧೇಮಚಂದ್ರಂ ನಿವೇದಯೇತ್ ।**
**ಚಂದ್ರವ್ರತಮಿದಂ ಪ್ರೋಕ್ತಂ ಚಂದ್ರಲೋಕಫಲಪ್ರದಂ ॥೭೫॥**

**ಜ್ಯೇಷ್ಠೇ ಪಂಚತಪಾಃ ಸಾಯಂ ಹೇಮಧೇನುಪ್ರದೋ ದಿವಂ ।**
**ಯಾತ್ಯಷ್ಟಮೀಚತುರ್ದಶ್ಯೋ ರುದ್ರವ್ರತಮಿದಂ ಸ್ಮೃತಂ ॥೭೬॥**

---

೭೩. ಈ ವ್ರತವು ಸಮಾಪ್ತವಾದ ಬಳಿಕ ಉಪವಾಸವನ್ನು ಮುಗಿಸಿ ಗೋದಾನವನ್ನು ಮಾಡಿದರೆ ಯಕ್ಷರ ಆಧಿಪತ್ಯವು ದೊರಕುವುದು. ಇದು ಸುಖ ವ್ರತವೆನಿಸಿಕೊಳ್ಳುವುದು.

೭೪. ರಾತ್ರಿಯೆಲ್ಲ ನೀರಿನಲ್ಲಿ ನಿಂತಿದ್ದು ಪ್ರಾತಃಕಾಲವಾದ ಬಳಿಕ ಗೋದಾನವನ್ನು ಮಾಡಿದರೆ ವರುಣಲೋಕವು ಲಭಿಸುವುದು. ಇದನ್ನು ವರುಣ ವ್ರತವೆನ್ನುವರು.

೭೫. * ಚಾಂದ್ರಾಯಣವ್ರತವನ್ನು ನೆರವೇರಿಸಿ, ಬಂಗಾರದಿಂದ ಮಾಡಿದ ಚಂದ್ರಮಂಡಲದ ಪ್ರತಿಮೆಯನ್ನು ದಾನವಾಗಿ ಕೊಡಬೇಕು. ಇದಕ್ಕೆ ಚಂದ್ರವ್ರತ ವೆಂದು ಹೆಸರು. ಇದು ಚಂದ್ರಲೋಕವಾಸದ ಫಲವನ್ನು ಕೊಡುವುದು.

೭೬. ಜ್ಯೇಷ್ಠಮಾಸದ ಅಷ್ಟಮಿ ಮತ್ತು ಚತುರ್ದಶಿಗಳಲ್ಲಿ ಪಂಚಾಗ್ನಿಗಳ ನಡುವೆ ಧ್ಯಾನದಿಂದ ಹಗಲನ್ನು ಕಳೆದು, ಸಾಯಂಕಾಲದಲ್ಲಿ ಹೋಮಕಾರ್ಯಕ್ಕೆ ಬೇಕಾದ ತುಪ್ಪವನ್ನು ಒದಗಿಸುವ ಹಸುವನ್ನು ದಾನಮಾಡುವಾತನು ಸ್ವರ್ಗ ವನ್ನೈದುವನು. ಇದಕ್ಕೆ ರುದ್ರವ್ರತವೆಂದು ಹೆಸರು.

---

* ಶುಕ್ಲಪಕ್ಷದಲ್ಲಿ ಚಂದ್ರನ ಅಭಿವೃದ್ಧಿಗೆ ತಕ್ಕಂತೆ ಆಹಾರದ ಕಬಳಗಳನ್ನು ಒಂದೊಂದಾಗಿ ಹೆಚ್ಚಿಸುತ್ತಲೂ, ಕೃಷ್ಣಪಕ್ಷದಲ್ಲಿ ಅವನ ಕ್ಷೀಣತೆಗೆ ಅನುಸಾರವಾಗಿ ಒಂದೊಂದಾಗಿ ತಗ್ಗಿಸುತ್ತಲೂ ನಡೆಸುವ ವ್ರತವನ್ನು ಚಾಂದ್ರಾಯಣವೆನ್ನುತ್ತಾರೆ. "ಚಂದ್ರೋ ಯೇನ ಹ್ರಾಸವೃದ್ಧಿಭ್ಯಾಮನುಗಮ್ಯತೇ ತಚ್ಚಾಂದ್ರಾಯಣಂ" ಎಂದು ಅದರ ಲಕ್ಷಣವು ಉಕ್ತವಾಗಿದೆ.

**ಸಕೃದ್ವಿತಾನಕಂ ಕುರ್ಯಾತ್ತೃತೀಯಾಯಾಂ ಶಿವಾಲಯೇ ।**
**ಸಮಾಂತೇ ಧೇನುದೋ ಯಾತಿ ಭವಾನೀವ್ರತಮುಚ್ಯತೇ ॥೭೭॥**

**ಮಾಘೇ ನಿಶ್ಯಾರ್ದ್ರವಾಸಾಃ ಸ್ಯಾತ್ಸಪ್ತಮ್ಯಾಂ ಗೋಪ್ರದೋ ಭವೇತ್ ।**
**ದಿವಿ ಕಲ್ಪಮುಷಿತ್ವೇಹ ರಾಜಾ ಸ್ಯಾತ್ಪವನಂ ವ್ರತಂ ॥೭೮॥**

**ತ್ರಿರಾತ್ರೋಪೋಷಿತೋ ದದ್ಯಾತ್ಫಾಲ್ಗುನ್ಯಾಂ ಭವನಂ ಶುಭಂ ।**
**ಆದಿತ್ಯಲೋಕಮಾಪ್ನೋತಿ ಧಾಮವ್ರತಮಿದಂ ಸ್ಮೃತಂ ॥೭೯॥**

**ತ್ರಿಸಂಧ್ಯಂ ಪೂಜ್ಯ ದಾಂಪತ್ಯಮುಪವಾಸೀ ವಿಭೂಷಣೈಃ ।**
**ಅನ್ನಂ ಗಾಶ್ಚ ಸಮಾಪ್ನೋತಿ ಮೋಕ್ಷಮಿಂದ್ರವ್ರತಾದಿಹ ॥೮೦॥**

---

೭೭. ಹದಿನೈದು ದಿನಕ್ಕೊಂದು ಸಾರಿ ತೃತೀಯೆಯ ದಿನ ಈಶ್ವರನ ದೇವಸ್ಥಾನದಲ್ಲಿ ಮೇಲುಗಟ್ಟನ್ನು ಕಟ್ಟುತ್ತ, ವರ್ಷಾಂತದಲ್ಲಿ ಗೋದಾನವನ್ನು ಮಾಡುವವನಿಗೆ ಶಿವಸಾಯುಜ್ಯವು ಲಭಿಸುವುದು. ಇದು ಭವಾನೀವ್ರತವೆನಿಸಿಕೊಳ್ಳುತ್ತದೆ.

೭೮. ಮಾಘಮಾಸದ ಸಪ್ತಮಿಯ ರಾತ್ರಿಯೆಲ್ಲ ಒದ್ದೆಬಟ್ಟೆಯಿಂದಿದ್ದು, ಬೆಳಿಗ್ಗೆ ಗೋದಾನವನ್ನು ಕೊಡುವಾತನು ಒಂದು ಕಲ್ಪಕಾಲ ಸ್ವರ್ಗದಲ್ಲಿ ವಾಸಿಸುವನು. ಬಳಿಕ ರಾಜನಾಗಿ ಜನಿಸುವನು. ಇದಕ್ಕೆ ಪವನವ್ರತವೆಂದು ಹೆಸರು.

೭೯. ಫಾಲ್ಗುನಮಾಸದಲ್ಲಿ ಶುಕ್ಲಪಕ್ಷದ ದ್ವಾದಶಿಯಿಂದ ಮೂರು ದಿನ ಉಪವಾಸ ಮಾಡಿ, ಹುಣ್ಣಿಮೆಯಲ್ಲಿ ಒಳ್ಳೆಯ ಮನೆಯನ್ನು ದಾನವಾಗಿ ಕೊಟ್ಟರೆ ಆದಿತ್ಯಲೋಕವು ಪ್ರಾಪ್ತವಾಗುವುದು. ಇದನ್ನು ಧಾಮವ್ರತವೆಂದು ಹೇಳುತ್ತಾರೆ.

೮೦. ಉಪವಾಸದಿಂದಿದ್ದು, ದಂಪತಿಗಳನ್ನು ದಿನದ ಮೂರು ಕಾಲಗಳಲ್ಲಿಯೂ ಪೂಜಿಸಿ, ಭೋಜನದಿಂದಲೂ ಭೂಷಣಗಳಿಂದಲೂ ತೃಪ್ತಿಪಡಿಸಿ ಗೋದಾನಮಾಡಬೇಕು. ಇದರಿಂದ ಮೋಕ್ಷವು ಸಿಕ್ಕುವುದು. ಇಂದ್ರವ್ರತವೆಂದು ಇದಕ್ಕೆ ಹೆಸರು.

ದತ್ವಾ ಸಿತದ್ವಿತೀಯಾಯಾಮಿಂದೋರ್ಲವಣಭಾಜನಂ ।
ಸಮಾಂತೇ ಗೋಪ್ರದೋ ಯಾತಿ ವಿಪ್ರಾಯ ಶಿವಮಂದಿರಂ ।
ಕಲ್ಪಾಂತೇ ರಾಜರಾಜಃ ಸ್ಯಾತ್ಸೋಮವ್ರತಮಿದಂ ಸ್ಮೃತಂ ॥೮೧॥

ಪ್ರತಿಪದ್ಯೇಕಭಕ್ತಾಶೀ ಸಮಾಂತೇ ಕಪಿಲಾಪ್ರದಃ ।
ವೈಶ್ವಾನರಪದಂ ಯಾತಿ ಶಿವವ್ರತಮಿದಂ ಸ್ಮೃತಂ ॥೮೨॥

ದಶಮ್ಯಾಮೇಕಭಕ್ತಾಶೀ ಸಮಾಂತೇ ದಶಧೇನುದಃ ।
ದಿಶಶ್ಚ ಕಾಂಚನೈರ್ದದ್ಯಾದ್ಬ್ರಹ್ಮಾಂಡಾಧಿಪತಿರ್ಭವೇತ್ ।
ಏತದ್ವಿಶ್ವವ್ರತಂ ನಾಮ ಮಹಾಪಾತಕನಾಶನಂ ॥೮೩॥

ಯಃ ಪಠೇಚ್ಛೃಣುಯಾದ್ವಾಪಿ ವ್ರತಷಷ್ಟಿಮನುತ್ತಮಾಂ ।
ಮನ್ವಂತರಶತಂ ಸೋಽಪಿ ಗಂಧರ್ವಾಧಿಪತಿರ್ಭವೇತ್ ॥೮೪॥

---

೮೧. ಶುಕ್ಲಪಕ್ಷದ ಬಿದಿಗೆಯಲ್ಲಿ ಲವಣಪಾತ್ರೆಯನ್ನು—ಉಪ್ಪು ತುಂಬಿದ ಪಾತ್ರೆ—ದಾನಮಾಡುತ್ತ ವರ್ಷಾಂತದಲ್ಲಿ ಬ್ರಾಹ್ಮಣನಿಗೆ ಹಸುವನ್ನು ಕೊಡುವಾತನು ಕೈಲಾಸವನ್ನು ಸೇರುವನು; ಕಲ್ಪಾಂತದಲ್ಲಿ ಕುಬೇರನಾಗುವನು. ಇದನ್ನು ಸೋಮವ್ರತವೆನ್ನುತ್ತಾರೆ.

೮೨. ಪ್ರತಿಯೊಂದು ಪಾಡ್ಯದಲ್ಲಿಯೂ ಒಪ್ಪೊತ್ತು ಊಟಮಾಡುತ್ತ ಸಂವತ್ಸರದ ಕೊನೆಯಲ್ಲಿ ಗೋರೋಚನ ವರ್ಣದ ಹಸುವನ್ನು ದಾನಕೊಡುವಾತನು ಅಗ್ನಿಲೋಕವನ್ನು ಸೇರುವನು. ಇದು ಶಿವವ್ರತವೆಂದು ಪ್ರಸಿದ್ಧವಾಗಿದೆ.

೮೩. ದಶಮಿಯ ದಿನ ಏಕಭೋಜನದಿಂದಿರುತ್ತ ವರ್ಷಾಂತದಲ್ಲಿ ಹತ್ತು ಹಸುಗಳನ್ನು ದಾನಮಾಡಬೇಕು. ಅಲ್ಲದೆ ದಿಕ್ಪತಿಗಳಿಂದ ಕೂಡಿದ ಭೂಮಂಡಲವನ್ನು ಸುವರ್ಣದಿಂದ ನಿರ್ಮಿಸಿ ದಾನವಾಗಿ ಕೊಡಬೇಕು. ಇದಕ್ಕೆ ವಿಶ್ವವ್ರತವೆಂದು ಹೆಸರು. ಇದು ಮಹಾಪಾತಕಗಳನ್ನು ನಾಶಮಾಡುವುದು. ಈ ವ್ರತವನ್ನು ಆಚರಿಸಿದವನು ಬ್ರಹ್ಮಾಂಡದ ಅಧಿಪತಿಯಾಗುವನು.

೮೪. ಅತಿಶ್ರೇಷ್ಠವಾದ ಈ ಅರವತ್ತು ವ್ರತಗಳ ವಿಧಾನವನ್ನು ಯಾವನು ಓದುವನೋ, ಇಲ್ಲವೇ ಕೇಳುವನೋ ಅವನೂ ಸಹ ನೂರು ಮನ್ವಂತರಗಳ ಕಾಲ ಗಂಧರ್ವರ ಅಧಿಪತಿಯಾಗುವನು.

**ಷಷ್ಟಿವ್ರತಂ ನಾರದ ಪುಣ್ಯಮೇತ**
**ತ್ತವೋದಿತಂ ವಿಶ್ವಜನೀನಮುಚ್ಚಕೈಃ ।**
**ಶ್ರೋತುಂ ತವೇಚ್ಛಾ ತದುದೀರಯಾಮಿ**
**ಪ್ರಿಯೇಷು ಕಿಂ ವಾಽಕಥನೀಯಮಸ್ತಿ ॥೮೫॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಷಷ್ಟಿವ್ರತಮಾಹಾತ್ಮ್ಯಂ**
**ನಾಮೈಕಾಧಿಕಶತತಮೋಽಧ್ಯಾಯಃ**

---

೮೫ ಓ ನಾರದಾ, ಪುಣ್ಯಕರವಾದ ಅರವತ್ತು ವ್ರತಗಳ ವಿಧಾನವನ್ನೂ ಮಾಹಾತ್ಮ್ಯವನ್ನೂ ನಿನಗೆ ಹೇಳಿದೆನು. ಇದು ಜಗತ್ತಿಗೆ ಕ್ಷೇಮವನ್ನು ಉಂಟುಮಾಡತಕ್ಕುದು. ನಿನಗೆ ಕೇಳಬೇಕೆಂಬ ಆಸೆಯಿದೆ; ಆದುದರಿಂದ ನಾನು ಹೇಳುತ್ತಿದ್ದೇನೆ. ಪ್ರೀತಿಪಾತ್ರರಾದವರಿಗೆ ಹೇಳದೇ ಇರುವ ವಿಚಾರವಾವುದುಂಟು ?

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ದೇವವ್ರತ, ರುದ್ರವ್ರತ, ಲೀಲಾವ್ರತ ಮುಂತಾದ ಅರವತ್ತು ವ್ರತಗಳ ಮಾಹಾತ್ಮ್ಯವನ್ನು ಹೇಳಿದೆ. ಅವುಗಳನ್ನು ಮಾಡಬೇಕಾದ ಕಾಲ, ರೀತಿ ಇವೆಲ್ಲವನ್ನೂ ಸಂಗ್ರಹವಾಗಿ ತಿಳಿಸಿದೆ.

ಶ್ರೀಮತ್ಸ್ಯಮಹಾಪುರಾಣದಲ್ಲಿ ಷಷ್ಟಿವ್ರತಮಾಹಾತ್ಮ್ಯವೆಂಬ
ನೂರೊಂದನೆಯ ಅಧ್ಯಾಯವು ಮುಗಿದುದು.



## ಅಥ ದ್ವ್ಯಧಿಕಶತತಮೋಽಧ್ಯಾಯಃ

॥ ನಂದಿಕೇಶ್ವರ ಉವಾಚ ॥

ನೈರ್ಮಲ್ಯಂ ಭಾವಶುದ್ಧಿಶ್ಚ ವಿನಾ ಸ್ನಾನಂ ನ ವಿದ್ಯತೇ ।
ತಸ್ಮಾನ್ಮನೋವಿಶುದ್ಧ್ಯರ್ಥಂ ಸ್ನಾನಮಾದೌ ವಿಧೀಯತೇ ॥ ೧ ॥

ಅನುದ್ಧೃತೈರುದ್ಧೃತೈರ್ವಾ ಜಲೈಃ ಸ್ನಾನಂ ಸಮಾಚರೇತ್ ।
ತೀರ್ಥಂ ಚ ಕಲ್ಪಯೇದ್ವಿದ್ವಾನ್ಮೂಲಮಂತ್ರೇಣ ಮಂತ್ರವಿತ್ ।
ನಮೋ ನಾರಾಯಣಾಯೇತಿ ಮೂಲಮಂತ್ರ ಉದಾಹೃತಃ ॥ ೨ ॥

ದರ್ಭಪಾಣಿಸ್ತು ವಿಧಿನಾ ಆಚಾಂತಃ ಪ್ರಯತಃ ಶುಚಿಃ ।
ಚತುರ್ಹಸ್ತಸಮಾಯುಕ್ತಂ-ಚತುರಸ್ರಂ ಸಮಂತತಃ ।
ಪ್ರಕಲ್ಪ್ಯಾವಾಹಯೇದ್ಗಂಗಾಮೇಭಿರ್ಮಂತ್ರೈರ್ವಿಚಕ್ಷಣಃ ॥ ೩ ॥

---

೧. ನಂದಿಕೇಶ್ವರನು ಹೇಳಿದನು.—ಸ್ನಾನವಿಲ್ಲದೆ ನೈರ್ಮಲ್ಯವೂ ಭಾವ ಶುದ್ಧಿಯೂ ಉಂಟಾಗವು. ಆದುದರಿಂದ ಮನಸ್ಸಿನ ಶುದ್ಧಿಗಾಗಿ ಮೊತ್ತಮೊದಲು ಸ್ನಾನದ ವಿಧಿಯನ್ನು ಹೇಳುತ್ತೇನೆ.

೨. ಕೆರೆ, ಹೊಳೆ ಮುಂತಾದ ಜಲಾಶಯಗಳಲ್ಲಿ ಸಹಜವಾಗಿಯೇ ಇರುವ ನೀರಿನಲ್ಲೋ ಅಥವಾ ಅಲ್ಲಿಂದ ತಂದ ನೀರಿನಲ್ಲೋ ಸ್ನಾನವನ್ನು ಮಾಡಬಹುದು. ಮಂತ್ರಶಾಸ್ತ್ರವನ್ನರಿತವನು ತಾನು ಸ್ನಾನಮಾಡುವ ಜಲದಲ್ಲಿ ಮೂಲಮಂತ್ರದಿಂದ ಪುಣ್ಯತೀರ್ಥವನ್ನು ಕಲ್ಪಿಸಬೇಕು. "ನಮೋ ನಾರಾಯಣಾಯ" ಎಂಬುದೇ ಮೂಲಮಂತ್ರವು.

೩. ಪವಿತ್ರವನ್ನು ಕೈಯಲ್ಲಿ ಧರಿಸಿ, ಶಾಸ್ತ್ರೋಕ್ತವಾಗಿ ಆಚಮನಮಾಡಿ, ನಿರ್ಮಲಮನಸ್ಸಿನಿಂದ ತನ್ನ ಸುತ್ತಲೂ ನಾಲ್ಕು ಮೊಳದ ಅಳತೆಯ ಚೌಕವನ್ನು ನಿರ್ಮಿಸಿ, ಈ ಮುಂದಿನ ಮಂತ್ರಗಳಿಂದ ಗಂಗೆಯನ್ನು ಆವಾಹನಮಾಡಬೇಕು.

ವಿಷ್ಣೋಃ ಪಾದಪ್ರಸೂತಾಸಿ ವೈಷ್ಣವೀ ವಿಷ್ಣುದೇವತಾ ।
ಪಾಹಿ ನಸ್ತ್ವೇನಸಸ್ತಸ್ಮಾದಾಜನ್ಮಮರಣಾಂತಿಕಾತ್ ॥ ೪ ॥

ತಿಸ್ರಃ ಕೋಟ್ಯೋಽರ್ಧಕೋಟೀ ಚ ತೀರ್ಥಾನಾಂ ವಾಯುರಬ್ರವೀತ್ ।
ದಿವಿ ಭುವ್ಯಂತರಿಕ್ಷೇ ಚ ತಾನಿ ತೇ ಸಂತಿ ಜಾಹ್ನವಿ ॥ ೫ ॥

ನಂದಿನೀತ್ಯೇವ ತೇ ನಾಮ ದೇವೇಷು ನಲಿನೀತಿ ಚ ।
ದಕ್ಷಾ ಪೃಥ್ವೀ ಚ ವಿಹಗಾ ವಿಶ್ವಕಾಯಾಽಮೃತಾ ಶಿವಾ ॥ ೬ ॥

ವಿದ್ಯಾಧರೀ ಸುಪ್ರಶಾಂತಾ ತಥಾ ವಿಶ್ವಪ್ರಸಾದಿನೀ ।
ಕ್ಷೇಮಾ ಚ ಜಾಹ್ನವೀ ಚೈವ ಶಾಂತಾ ಶಾಂತಿಪ್ರದಾಯಿನೀ ॥ ೭ ॥

ಏತಾನಿ ಪುಣ್ಯನಾಮಾನಿ ಸ್ನಾನಕಾಲೇ ಪ್ರಕೀರ್ತಯೇತ್ ।
ಭವೇತ್ಸಂನಿಹಿತಾ ತತ್ರ ಗಂಗಾ ತ್ರಿಪಥಗಾಮಿನೀ ॥ ೮ ॥

---

೪. "ಎಲೌ ಗಂಗೇ, ನೀನು ವಿಷ್ಣುವಿನ ಪಾದದಿಂದ ಹುಟ್ಟಿರುವೆ. ವಿಷ್ಣುವಿನ ಭಕ್ತಳಾಗಿರುವೆ. ವಿಷ್ಣುವೇ ನಿನ್ನ ಅಧಿದೇವತೆ. ಆದುದರಿಂದ ಜನ್ಮಮರಣ ರೂಪವಾದ ಈ ಸಂಸಾರಕ್ಕೆ ಕಾರಣಭೂತವಾದ ಪಾಪವು ಬಾರದಂತೆ ನಮ್ಮನ್ನು ರಕ್ಷಿಸು.

೫. ಸ್ವರ್ಗ, ಭೂಮಿ ಮತ್ತು ಅಂತರಿಕ್ಷಗಳಲ್ಲಿ ಒಟ್ಟು ಸೇರಿ ಮೂರುವರೆ ಕೋಟಿ ಪುಣ್ಯ ತೀರ್ಥಗಳಿವೆಯೆಂದು ವಾಯುವು ಹೇಳಿರುವನು. ಎಲೌ ಜಾಹ್ನವೀ, ಅವೆಲ್ಲವೂ ನಿನ್ನಲ್ಲಿ ವಾಸಮಾಡುತ್ತಿವೆ.

೬-೭. ನಂದಿನಿ ಎಂದರೆ ಆನಂದವನ್ನು ಕೊಡತಕ್ಕವಳು ಎಂದೇ ನಿನಗೆ ಹೆಸರಿದೆ. ದೇವತೆಗಳು ನಲಿನಿಯೆಂದು ನಿನ್ನನ್ನು ಕರೆಯುತ್ತಾರೆ. ದಕ್ಷೆ, ಪೃಥ್ವಿ, ವಿಹಗೆ, ವಿಶ್ವಕಾಯೆ, ಅಮೃತೆ, ಶಿವೆ, ವಿದ್ಯಾಧರಿ, ಸುಪ್ರಶಾಂತೆ, ವಿಶ್ವಪ್ರಸಾದಿನಿ, ಕ್ಷೇಮೆ, ಜಾಹ್ನವಿ, ಶಾಂತೆ ಮತ್ತು ಶಾಂತಿಪ್ರದಾಯಿನಿಯೆಂದು ನಿನ್ನನ್ನು ಕರೆಯುತ್ತಾರೆ."

೮. ಸ್ನಾನಕಾಲದಲ್ಲಿ ಈ ಪುಣ್ಯನಾಮಗಳನ್ನು ಕೀರ್ತನಮಾಡಬೇಕು. ಮೂರು ಲೋಕಗಳಲ್ಲಿಯೂ ಪ್ರವಹಿಸುವ ಗಂಗಾನದಿಯು ಅಲ್ಲಿ ತನ್ನ ಸಾನ್ನಿಧ್ಯವನ್ನು ಇರಿಸುವಳು.

**ಸಪ್ತವಾರಾಭಿಜಪ್ತೇನ ಕರಸಂಪುಟಯೋಜಿತಂ ।**
**ಮೂರ್ಧ್ನಿ ಕುರ್ಯಾಜ್ಜಲಂ ಭೂಯಸ್ತ್ರಿಚತುಷ್ಪಂಚಸಪ್ತಕಂ ।**
**ಸ್ನಾನಂ ಕುರ್ಯಾನ್ಮೃದಾ ತದ್ವದಾಮಂತ್ರ್ಯ ತು ವಿಧಾನತಃ** ॥ ೯ ॥

**ಅಶ್ವಕ್ರಾಂತೇ ರಥಕ್ರಾಂತೇ ವಿಷ್ಣುಕ್ರಾಂತೇ ವಸುಂಧರೇ ।**
**ಮೃತ್ತಿಕೇ ಹರ ಮೇ ಪಾಪಂ ಯನ್ಮಯಾ ದುಷ್ಕೃತಂ ಕೃತಂ** ॥೧೦॥

**ಉದ್ಧೃತಾಸಿ ವರಾಹೇಣ ಕೃಷ್ಣೇನ ಶತಬಾಹುನಾ ।**
**ಮೃತ್ತಿಕೇ ಬ್ರಹ್ಮದತ್ತಾಽಸಿ ಕಾಶ್ಯಪೇನಾಭಿಮಂತ್ರಿತಾ ।**
**ಆರುಹ್ಯ ಮಮ ಗಾತ್ರಾಣಿ ಸರ್ವಂ ಪಾಪಂ ಪ್ರಚೋದಯ** ॥೧೧॥

**ಮೃತ್ತಿಕೇ ದೇಹಿ ನಃ ಪುಷ್ಟಿಂ ತ್ವಯಿ ಸರ್ವಂ ಪ್ರತಿಷ್ಠಿತಂ ।**
**ನಮಸ್ತೇ ಸರ್ವಲೋಕಾನಾಂ ಪ್ರಭವಾರಣಿ ಸುವ್ರತೇ** ॥೧೨॥

---

೯. ಹೀಗೆ ಏಳು ಸಾರಿ ಜಪಿಸಿ, ಬೊಗಸೆಯಿಂದ ನೀರನ್ನೆತ್ತಿ ಮೂರು, ನಾಲ್ಕು, ಐದು ಅಥವಾ ಏಳು ಸಾರಿ ತಲೆಗೆ ಹಾಕಿಕೊಳ್ಳಬೇಕು. ಸ್ನಾನಮಾಡಿ, ಮತ್ತೆ ಹೀಗೆಯೇ ಪ್ರಾರ್ಥಿಸಿ ಮೃತ್ತಿಕಾಸ್ನಾನವನ್ನು ಮಾಡಬೇಕು.

೧೦. "ಎಲೌ ಭೂದೇವೀ, ನಿನ್ನ ಮೇಲೆ ಕುದುರೆಗಳು ಓಡಾಡುವುವು; ತೇರುಗಳು ಹರಿದಾಡುವುವು. ವಿಷ್ಣುವು ತನ್ನ ಪಾದಗಳಿಂದ ನಿನ್ನನ್ನು ಅಳೆದನು. ಓ ಮೃತ್ತಿಕೇ, ನನ್ನ ಪಾಪವನ್ನು ಪರಿಹರಿಸು. ನಾನು ಮಾಡಿದ ದುಷ್ಕೃತ್ಯಗಳನ್ನು ಹೋಗಲಾಡಿಸು.

೧೧. ನೂರಾರು ತೋಳುಗಳುಳ್ಳ, ವರಾಹರೂಪವನ್ನು ಧರಿಸಿದ ವಿಷ್ಣುವು ನಿನ್ನನ್ನು ಪಾತಾಲದಿಂದ ಮೇಲಕ್ಕೆ ಎತ್ತಿದನು. ಎಲೈ ಮಣ್ಣೇ, ಬ್ರಹ್ಮನು ನಿನ್ನನ್ನು ಲೋಕಾನುಗ್ರಹಕ್ಕಾಗಿ ಸೃಷ್ಟಿಸಿರುವನು. ಕಾಶ್ಯಪಮಹರ್ಷಿಯು ನಿನ್ನನ್ನು ಅಭಿಮಂತ್ರಿಸಿರುವನು. ನನ್ನ ಅವಯವಗಳನ್ನೇರಿ ಪಾಪವೆಲ್ಲವನ್ನೂ ಹೊರಡಿಸು.

೧೨. ಓ ಮೃತ್ತಿಕೇ, ನಮಗೆ ಪುಷ್ಟಿಯನ್ನು ಕೊಡು. ಚರಾಚರಾತ್ಮಕವಾದ ಜಗತ್ತೆಲ್ಲ ನಿನ್ನನ್ನು ಆಶ್ರಯಿಸಿಕೊಂಡಿದೆ. ಅಗ್ನಿಗೆ ಅರಣಿಯು ಹೇಗೆಯೋ ಹಾಗೆ ಸರ್ವಲೋಕಗಳಿಗೂ ನೀನು ಉತ್ಪತ್ತಿಸ್ಥಾನವಾಗಿರುವೆ. ಎಲೌ, ಶೋಭನವ್ರತಶೀಲಳೇ, ನಿನಗೆ ನಮಸ್ಕಾರ."

ಏವಂ ಸ್ನಾತ್ವಾ ತತಃ ಪಶ್ಚಾದಾಚಮ್ಯ ಚ ವಿಧಾನತಃ ।
ಉತ್ಥಾಯ ವಾಸಸೀ ಶುಕ್ಲೇ ಶುದ್ಧೇ ತು ಪರಿಧಾಯ ವೈ ।
ತತಸ್ತು ತರ್ಪಣಂ ಕುರ್ಯಾತ್ತ್ರೈಲೋಕ್ಯಾಪ್ಯಾಯನಾಯ ವೈ ॥೧೩॥

ದೇವಯಕ್ಷಾಸ್ತಥಾ ನಾಗಾ ಗಂಧರ್ವಾಪ್ಸರಸೋಽಸುರಾಃ ।
ಕ್ರೂರಾಃ ಸರ್ಪಾಃ ಸುಪರ್ಣಾಶ್ಚ ತರವೋ ಜಂಬುಕಾಃ ಖಗಾಃ ॥೧೪॥

ವಾಯ್ವಾಧಾರಾ ಜಲಾಧಾರಾಸ್ತಥೈವಾಕಾಶಗಾಮಿನಃ ।
ನಿರಾಧಾರಾಶ್ಚ ಯೇ ಜೀವಾ ಯೇ ತು ಧರ್ಮರತಾಸ್ತಥಾ ॥೧೫॥

ತೇಷಾಮಾಪ್ಯಾಯನಾಯೈತದ್ದೀಯತೇ ಸಲಿಲಂ ಮಯಾ ।
ಕೃತೋಪವೀತೀ ದೇವೇಭ್ಯೋ ನಿವೀತೀ ಚ ಭವೇತ್ತತಃ ॥೧೬॥

---

೧೩. ಹೀಗೆ ಸ್ನಾನವಾದ ಬಳಿಕ ಶಾಸ್ತ್ರೋಕ್ತ ರೀತಿಯಿಂದ ಆಚಮನ ಮಾಡಿ ಏಳಬೇಕು. ಶುದ್ಧವಾದ ಬಿಳಿಯ ಪಂಚೆಯನ್ನುಟ್ಟು, ಧೋತ್ರವನ್ನು ಹೊದೆದು ಮೂರು ಲೋಕಗಳ ತೃಪ್ತಿಗಾಗಿ ತರ್ಪಣವನ್ನು ಬಿಡಬೇಕು.

೧೪-೧೬. "ದೇವತೆಗಳು, ಯಕ್ಷರು, ನಾಗರು, ಗಂಧರ್ವರು, ಅಪ್ಸರಸ್ಸುಗಳು, ಅಸುರರು, ಗರುಡರು, ಕ್ರೂರವಾದ ಸರ್ಪಗಳು, ಮರಗಳು, ನರಿಗಳು, ಪಕ್ಷಿಗಳು, ವಾಯುಮಂಡಲದಲ್ಲೂ ಜಲಾಶಯಗಳಲ್ಲಿಯೂ ಜೀವಿಸುವ ಪ್ರಾಣಿಗಳು, ಆಕಾಶದಲ್ಲಿ ಸಂಚರಿಸುವ ಜಂತುಗಳು, ಧರ್ಮದಲ್ಲಿ ಆಸಕ್ತಿಯುಳ್ಳ ಜೀವಿಗಳು, ಇವುಗಳ ತೃಪ್ತಿಗಾಗಿ ಈ ನೀರನ್ನು ಕೊಡುತ್ತೇನೆ," ಎಂದು ಹೇಳಬೇಕು. ದೇವತೆಗಳಿಗೆ ಉಪವೀತದಿಂದ* ತರ್ಪಣವನ್ನು ಕೊಟ್ಟು, ಬಳಿಕ ನಿವೀತವನ್ನು ಧರಿಸಬೇಕು.

---

* ಯಜ್ಞೋಪವೀತವನ್ನು ಉಪವೀತ, ಪ್ರಾಚೀನಾವೀತ, ನಿವೀತ ಎಂಬ ಮೂರು ವಿಧದಿಂದ ಧರಿಸಬಹುದು. ಬಲದೋಳಿನ ಕೆಳಗೆ ಬರುವಂತೆ ಎಡಭುಜದ ಮೇಲೆ ನಿಂತಾಗ ಉಪವೀತವೆನಿಸುವುದು. ಸಾಮಾನ್ಯವಾದ ಕಾಲಗಳಲ್ಲೆಲ್ಲ ಯಜ್ಞೋಪವೀತವನ್ನು ಧಾರಣ ಮಾಡಬೇಕಾದ ಕ್ರಮವೇ ಇದು. ದೇವಕರ್ಮಗಳನ್ನು ಇದರಿಂದಲೇ ಮಾಡಬೇಕು. ಎಡದೋಳಿನ ಕೆಳಗೆ ಬರುವಂತೆ ಬಲಭುಜದ ಮೇಲೆ ನಿಂತಾಗ ಪ್ರಾಚೀನಾವೀತವೆನಿಸುವುದು. ಪಿತೃಕರ್ಮಗಳನ್ನು ಮಾಡುವಾಗ ಈ ರೀತಿಯಿಂದಿರಬೇಕು. ಯಜ್ಞೋಪವೀತವು ಕತ್ತಿನಲ್ಲಿ ಜೋಲಾಡುತ್ತಿದ್ದರೆ ನಿವೀತವೆನಿಸಿಕೊಳ್ಳುತ್ತದೆ. ಋಷಿಕರ್ಮಗಳನ್ನು ಇದರಿಂದ ಮಾಡಬೇಕು.

ಮನುಷ್ಯಾಂಸ್ತರ್ಪಯೇದ್ಭಕ್ತ್ಯಾ ಬ್ರಹ್ಮಪುತ್ರಾನ್ಋಷೀಂಸ್ತಥಾ ।
ಸನಕಶ್ಚ ಸನಂದಶ್ಚ ತೃತೀಯಶ್ಚ ಸನಾತನಃ ॥೧೭॥

ಕಪಿಲಶ್ಚಾಸುರಿಶ್ಚೈವ ವೋಢುಃ ಪಂಚಶಿಖಸ್ತಥಾ ।
ಸರ್ವೇ ತೇ ತೃಪ್ತಿಮಾಯಾಂತು ಮದ್ದತ್ತೇನಾಂಬುನಾ ಸದಾ ॥೧೮॥

ಮರೀಚಿಮತ್ರ್ಯಂಗಿರಸಂ ಪುಲಸ್ತ್ಯಂ ಪುಲಹಂ ಕ್ರತುಂ ।
ಪ್ರಚೇತಸಂ ವಸಿಷ್ಠಂ ಚ ಭೃಗುಂ ನಾರದಮೇವ ಚ ।
ದೇವಬ್ರಹ್ಮಋಷೀನ್ ಸರ್ವಾಂಸ್ತರ್ಪಯೇದಕ್ಷತೋದಕೈಃ ॥೧೯॥

ಅಪಸವ್ಯಂ ತತಃ ಕೃತ್ವಾ ಸವ್ಯಂ ಜಾನ್ವಾಚ್ಯ ಭೂತಲೇ ।
ಅಗ್ನಿಷ್ವಾತ್ತಾಸ್ತಥಾ ಸೌಮ್ಯಾ ಹವಿಷ್ಮಂತಸ್ತಥೋಷ್ಮಪಾಃ ॥೨೦॥

ಸುಕಾಲಿನೋ ಬರ್ಹಿಷದಸ್ತಥಾನ್ಯೇ ವಾಽಽಜ್ಯಪಾಃ ಪುನಃ ।
ಸಂತರ್ಪ್ಯಾಃ ಪಿತರೋ ಭಕ್ತ್ಯಾ ಸತಿಲೋದಕಚಂದನೈಃ ॥೨೧॥

---

೧೭-೧೮. ಮನುಷ್ಯರನ್ನೂ, ಬ್ರಹ್ಮಪುತ್ರರನ್ನೂ, ಋಷಿಗಳನ್ನೂ ಉದ್ದೇಶಿಸಿ ಭಕ್ತಿಯಿಂದ ತರ್ಪಣವನ್ನು ಕೊಡಬೇಕು. "ಸನಕ, ಸನಂದ, ಸನಾತನ, ಕಪಿಲ, ಆಸುರಿ, ವೋಢು, ಪಂಚಶಿಖ," ಇವರೆಲ್ಲರಿಗೂ ನಾನೀಗ ಕೊಡುವ ಜಲದಾನದಿಂದ ಯಾವಾಗಲೂ ತೃಪ್ತಿಯುಂಟಾಗಲಿ'' ಎಂದು ಹಾರೈಸಬೇಕು.

೧೯. ಮರೀಚಿ, ಅತ್ರಿ, ಅಂಗಿರಸ, ಪುಲಸ್ತ್ಯ. ಪುಲಹ, ಕ್ರತು, ಪ್ರಚೇತಸ, ವಸಿಷ್ಠ, ಭೃಗು, ನಾರದ ಮುಂತಾದ ಎಲ್ಲ ದೇವರ್ಷಿಗಳನ್ನೂ, ಬ್ರಹ್ಮರ್ಷಿಗಳನ್ನೂ ಉದ್ದೇಶಿಸಿ ಅಕ್ಷತೆಯ ಜಲದಿಂದ ತರ್ಪಣವನ್ನು ಬಿಡಬೇಕು.

೨೦-೨೧. ಬಳಿಕ ಪ್ರಾಚೀನಾವೀತವನ್ನು ಮಾಡಿಕೊಂಡು, ಎಡದ ಮಂಡಿಯನ್ನು ನೆಲದಲ್ಲೂರಿ ಅಗ್ನಿಷ್ವಾತ್ತರು, ಸೌಮ್ಯರು, ಹವಿಷ್ಮಂತರು, ಊಷ್ಮಪರು, ಸುಕಾಲಿಗಳು, ಬರ್ಹಿಷದರು ಮುಂತಾದ ಪಿತೃಗಳಿಗೆ ಶ್ರೀಗಂಧಸಹಿತವಾದ ತಿಲೋದಕಗಳಿಂದ ಭಕ್ತಿಯೊಡನೆ ತರ್ಪಣವನ್ನು ಕೊಡಬೇಕು.

**ಯಮಾಯ ಧರ್ಮರಾಜಾಯ ಮೃತ್ಯವೇ ಚಾಂತಕಾಯ ಚ ।**
**ವೈವಸ್ವತಾಯ ಕಾಲಾಯ ಸರ್ವಭೂತಕ್ಷಯಾಯ ಚ ॥೨೨॥**

**ಔದುಂಬರಾಯ ದಧ್ನಾಯ ನೀಲಾಯ ಪರಮೇಷ್ಠಿನೇ ।**
**ವೃಕೋದರಾಯ ಚಿತ್ರಾಯ ಚಿತ್ರಗುಪ್ತಾಯ ವೈ ನಮಃ ।**
**ದರ್ಭಪಾಣಿಸ್ತು ವಿಧಿನಾ ಪಿತೄನ್ ಸಂತರ್ಪಯೇದ್ಬುಧಃ ॥೨೩॥**

**ಪಿತ್ರಾದೀನ್ನಾಮಗೋತ್ರೇಣ ತಥಾ ಮಾತಾಮಹಾನಪಿ ।**
**ಸಂತರ್ಪ್ಯ ವಿಧಿನಾ ಭಕ್ತ್ಯಾ ಇಮಂ ಮಂತ್ರಮುದೀರಯೇತ್ ॥೨೪॥**

**ಯೇಽಬಾಂಧವಾ ಭಾಂಧವಾ ವಾ ಯೇಽನ್ಯಜನ್ಮನಿ ಭಾಂಧವಾಃ ।**
**ತೇ ತೃಪ್ತಿಮಖಿಲಾಂ ಯಾಂತು ಯಶ್ಚಾಸ್ಮತ್ತೋಽಭಿವಾಂಛತಿ ॥೨೫॥**

**ತತಶ್ಚಾಚಮ್ಯ ವಿಧಿವದಾಲಿಖೇತ್ಪದ್ಮಮಗ್ರತಃ ।**
**ಅಕ್ಷತಾಭಿಃ ಸಪುಷ್ಪಾಭಿಃ ಸಜಲಾರುಣಚಂದನಂ ।**
**ಅರ್ಘ್ಯಂ ದದ್ಯಾತ್ಪ್ರಯತ್ನೇನ ಸೂರ್ಯನಾಮಾನಿ ಕೀರ್ತಯೇತ್ ॥೨೬॥**

---

೨೨-೨೩. ಯಮ, ಧರ್ಮರಾಜ, ಮೃತ್ಯು, ಅಂತಕ, ವೈವಸ್ವತ, ಕಾಲ, ಸರ್ವಭೂತಕ್ಷಯ, ಔದುಂಬರ, ದಧ್ನ, ನೀಲ, ಪರಮೇಷ್ಠಿ, ವೃಕೋದರ, ಚಿತ್ರ, ಚಿತ್ರಗುಪ್ತ ಎಂಬ ವಿವಿಧ ನಾಮಗಳಿಂದ ಶೋಭಿಸುವ ಯಮಧರ್ಮರಾಜನಿಗೆ ನಮಸ್ಕಾರ ಮಾಡಿ, ಶಾಸ್ತ್ರಜ್ಞನಾದವನು ಪವಿತ್ರಹಸ್ತನಾಗಿ, ಪಿತೃಗಳಿಗೆ ವಿಧಿಗನುಸಾರವಾಗಿ ತರ್ಪಣವನ್ನು ಕೊಡಬೇಕು.

೨೪. ತಂದೆಯ ಕಡೆಯಮತ್ತು ತಾಯಿಯ ಕಡೆಯ ಪಿತೃಗಳನ್ನು, ಅವರವರ ಹೆಸರನ್ನೂ ಗೋತ್ರವನ್ನೂ ಹೇಳಿ ತರ್ಪಣದಿಂದ ಭಕ್ತಿಯೊಡನೆ ತೃಪ್ತಿಪಡಿಸಬೇಕು. ಮತ್ತು ಈ ಮುಂದಿನ ಮಂತ್ರವನ್ನು ಹೇಳಬೇಕು.

೨೫. "ಬಂಧುಗಳಾಗಿರಲಿ ಇಲ್ಲದಿರಲಿ; ಅಥವಾ ಬೇರೆ ಜನ್ಮದಲ್ಲಿ ಬಂಧುಗಳಾಗಿರಲಿ ಅವರೆಲ್ಲ ಸಂಪೂರ್ಣವಾಗಿ ತೃಪ್ತರಾಗಲಿ. ನಮ್ಮಿಂದ ತರ್ಪಣವನ್ನು ಅಪೇಕ್ಷಿಸುವವನು ಯಾರೇ ಆಗಲಿ ಆತನೂ ಸಹ ತೃಪ್ತನಾಗಲಿ."

೨೬. ಬಳಿಕ ಕ್ರಮವಾಗಿ ಆಚಮನಮಾಡಿ ಮುಂಭಾಗದಲ್ಲಿ ತಾವರೆಯನ್ನು ಬರೆಯಬೇಕು. ಅಕ್ಷತೆಗಳಿಂದಲೂ, ಪುಷ್ಪಗಳಿಂದಲೂ, ರಕ್ತಚಂದನದಿಂದಲೂ ಕೂಡಿದ ನಿರ್ಮಲೋದಕದಿಂದ ಸೂರ್ಯನಿಗೆ ಅರ್ಘ್ಯವನ್ನು ಕೊಟ್ಟು ಅವನ ದಿವ್ಯ ನಾಮಗಳನ್ನು ಕೀರ್ತಿಸಬೇಕು.

ನಮಸ್ತೇ ವಿಷ್ಣುರೂಪಾಯ ನಮೋ ವಿಷ್ಣುಮುಖಾಯ ವೈ ।
ಸಹಸ್ರರಶ್ಮಯೇ ನಿತ್ಯಂ ನಮಸ್ತೇ ಸರ್ವತೇಜಸೇ ॥ ॥೨೭॥

ನಮಸ್ತೇ ಶಿವ ಸರ್ವೇಶ ನಮಸ್ತೇ ಸರ್ವವತ್ಸಲ ।
ಜಗತ್ಸ್ವಾಮಿರ್ನ ನಮಸ್ತೇಽಸ್ತು ದಿವ್ಯಚಂದನಭೂಷಿತ ॥೨೮॥
ಪದ್ಮಾಸನ ನಮಸ್ತೇಽಸ್ತು ಕುಂಡಲಾಂಗದಭೂಷಿತ ।
ನಮಸ್ತೇ ಸರ್ವಲೋಕೇಶ ಜಗತ್ಸರ್ವಂ ವಿಬೋಧಸೇ ॥೨೯॥

ಸುಕೃತಂ ದುಷ್ಕೃತಂ ಚೈವ ಸರ್ವಂ ಪಶ್ಯಸಿ ಸರ್ವಗ ।
ಸತ್ಯದೇವ ನಮಸ್ತೇಽಸ್ತು ಪ್ರಸೀದ ಮಮ ಭಾಸ್ಕರ ॥೩೦॥

ದಿವಾಕರ ನಮಸ್ತೇಽಸ್ತು ಪ್ರಭಾಕರ ನಮೋಽಸ್ತು ತೇ ।
ಏವಂ ಸೂರ್ಯಂ ನಮಸ್ಕೃತ್ಯ ತ್ರಿಃ ಕೃತ್ವಾಽಥ ಪ್ರದಕ್ಷಿಣಂ ।
ದ್ವಿಜಂ ಗಾಂ ಕಾಂಚನಂ ಸ್ಪೃಷ್ಟ್ವಾ ತತೋ ವಿಷ್ಣುಗೃಹಂ ವ್ರಜೇತ್ ॥೩೧॥

ಇತಿ ಶ್ರೀಮತ್ಸ್ಯೇ ಮಹಾಪುರಾಣೇ ಸ್ನಾನವಿಧಿರ್ನಾಮ
ದ್ವ್ಯಧಿಕಶತತಮೋಽಧ್ಯಾಯಃ

---

೨೭. "ವಿಷ್ಣುರೂಪನೂ, ವಿಷ್ಣುಮುಖನೂ ಆದ ನಿನಗೆ ನಮಸ್ಕಾರ. ಸಹಸ್ರಕಿರಣನೂ, ಸಕಲ ತೇಜೋಮಯನೂ ಆದ ನಿನಗೆ ನಮಸ್ಕಾರ. ,

೨೮. ಶಿವಾ, ಸರ್ವೇಶ್ವರಾ, ಸರ್ವವತ್ಸಲಾ, ನಿನಗೆ ನಮಸ್ಕಾರ. ಎಲೈ ಜಗತ್ಸ್ವಾಮೀ, ನಿನಗೆ ನಮಸ್ಕಾರ.

೨೯. ಕುಂಡಲಗಳಿಂದಲೂ, ತೋಳುಬಳೆಗಳಿಂದಲೂ ಅಲಂಕೃತನಾಗಿ ಪದ್ಮದಲ್ಲಿ ಕುಳಿತಿರುವ ಎಲೈ ದೇವಾ, ನಿನಗೆ ನಮಸ್ಕಾರ. ಸರ್ವಲೋಕಗಳ ಅಧಿಪತಿಯೇ, ನಿನಗೆ ನಮಸ್ಕಾರ. ನೀನು ಜಗತ್ತೆಲ್ಲವನ್ನೂ ಎಚ್ಚರಗೊಳಿಸುತ್ತೀಯೆ.

೩೦. ನಾಥಾ, ನೀನು ಸರ್ವತ್ರ ಸಂಚರಿಸಬಲ್ಲೆ. ಆದುದರಿಂದ ಪಾಪಪುಣ್ಯಗಳೆಲ್ಲವನ್ನೂ ನೋಡುತ್ತಿರುವೆ. ಸತ್ಯದ ಅಧಿದೇವತೆಯೆನಿಸಿದ ಓ ಭಾಸ್ಕರಾ, ನಿನಗೆ ನಮಸ್ಕಾರ. ನನ್ನಲ್ಲಿ ಪ್ರಸನ್ನನಾಗು. ಹಗಲನ್ನು ಉಂಟುಮಾಡುವವನೇ, ನಿನಗೆ ನಮಸ್ಕಾರ. ಬೆಳಕನ್ನು ಕೊಡುವಾತನೇ, ನಿನಗೆ ನಮಸ್ಕಾರ."

೩೧. ಹೀಗೆ ಸ್ತುತಿಸಿ, ಸೂರ್ಯನನ್ನು ನಮಸ್ಕರಿಸಿ, ಮೂರು ಸಾರಿ ಬಲವಂದು ಬ್ರಾಹ್ಮಣ, ಹಸು, ಸುವರ್ಣ ಇವುಗಳನ್ನು ಸ್ಪರ್ಶಮಾಡಿ ತರುವಾಯ ಪೂಜೆಗಾಗಿ ವಿಷ್ಣುಮಂದಿರಕ್ಕೆ ಹೋಗಬೇಕು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಸ್ನಾನದ ವಿಧಿಯನ್ನು ತಿಳಿಸಿದೆ.

ತಾನು ಸ್ನಾನಮಾಡುವ ನೀರಿನಲ್ಲಿ ಗಂಗಾನದಿಯನ್ನು ಆವಾಹನಮಾಡಿ ಮೃತ್ತಿಕಾಸ್ನಾನಪೂರ್ವಕವಾಗಿ ಸ್ನಾನವನ್ನು ಆಚರಿಸಬೇಕು. ಶುಭ್ರವಸ್ತ್ರವನ್ನು ಧರಿಸಿ ದೇವತೆಗಳು, ಋಷಿಗಳು, ಪಿತೃಗಳು, ಸಕಲಭೂತಗಳು ಎಲ್ಲರಿಗೂ ತರ್ಪಣವನ್ನು ಕೊಡಬೇಕು. ನೆಲದಲ್ಲಿ ಪದ್ಮವನ್ನು ಬರೆದು, ಸೂರ್ಯದೇವನಿಗೆ ಅರ್ಘ್ಯವನ್ನಿತ್ತು ಸ್ತೋತ್ರಮಾಡಬೇಕು. ಬಳಿಕ ಪೂಜೆಗಾಗಿ ವಿಷ್ಣು ಮಂದಿರಕ್ಕೆ ತೆರಳಬೇಕು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಸ್ನಾನವಿಧಿಯೆಂಬ
ನೂರೆರಡನೆಯ ಅಧ್ಯಾಯವು ಮುಗಿದುದು.



## ಅಥ ತ್ರ್ಯಧಿಕಶತತಮೋಽಧ್ಯಾಯಃ

|| ನಂದಿಕೇಶ್ವರ ಉವಾಚ ||

ಅತಃ ಪರಂ ಪ್ರವಕ್ಷ್ಯಾಮಿ ಪ್ರಯಾಗಸ್ಯೋಪವರ್ಣನಂ |
ಮಾರ್ಕಂಡೇಯೇನ ಕಥಿತಂ ಯತ್ಪುರಾ ಪಾಂಡುಸೂನವೇ || ೧ ||

ಭಾರತೇ ತು ಯದಾ ವೃತ್ತೇ ಪ್ರಾಪ್ತರಾಜ್ಯೇ ಪೃಥಾಸುತೇ |
ಏತಸ್ಮಿನ್ನಂತರೇ ರಾಜಾ ಕುಂತೀಪುತ್ರೋ ಯುಧಿಷ್ಠಿರಃ || ೨ ||

ಭ್ರಾತೃಶೋಕೇನ ಸಂತಪ್ತಶ್ಚಿಂತಯರ್ನ್ಸ ಪುನಃ ಪುನಃ |
ಆಸೀತ್ಸುಯೋಧನೋ ರಾಜಾ ಏಕಾದಶಚಮೂಪತಿಃ || ೩ ||

ಅಸ್ಮಾನ್ ಸಂತಾಪ್ಯ ಬಹುಶಃ ಸರ್ವೇ ತೇ ನಿಧನಂ ಗತಾಃ |
ವಾಸುದೇವಂ ಸಮಾಶ್ರಿತ್ಯ ಪಂಚ ಶೇಷಾಸ್ತು ಪಾಂಡವಾಃ || ೪ ||

---

೧. ನಂದಿಕೇಶ್ವರನು ಹೇಳಿದನು.—ಇನ್ನು ಮುಂದೆ ಪ್ರಯಾಗಕ್ಷೇತ್ರದ ಮಾಹಾತ್ಮ್ಯವನ್ನು ವರ್ಣಿಸುವೆನು. ಇದನ್ನು ಪೂರ್ವದಲ್ಲಿ ಮಾರ್ಕಂಡೇಯ ಮುನಿಯು ಧರ್ಮರಾಜನಿಗೆ ಹೇಳಿದ್ದನು.

೨. ಭಾರತಯುದ್ಧವು ಮುಗಿಯಿತು. ಧರ್ಮರಾಜನಿಗೆ ರಾಜ್ಯವು ದೊರೆಯಿತು. ಕುಂತೀಪುತ್ರನಾದ ಆ ಯುಧಿಷ್ಠಿರನು ತನ್ನ ಸಹೋದರರಾದ ಕೌರವರ ಮರಣಕ್ಕಾಗಿ ದುಃಖಿಸುತ್ತ ಮೇಲೆ ಮೇಲೆ ಕೊರಗುತ್ತಿದ್ದನು.

೩-೪. "ದುರ್ಯೋಧನನು ರಾಜನಾಗಿ ಮೆರೆದನು. ಅವನಲ್ಲಿ ಹನ್ನೊಂದು ಅಕ್ಷೌಹಿಣೀ ಸೈನ್ಯವಿತ್ತು. ಅವನು ನಮ್ಮೆಲ್ಲರನ್ನೂ ಪರಿಪರಿಯಾಗಿ ಸಂಕಟಪಡಿಸಿದನು. ಆದರೇನು? ಅವನೂ ಅವನ ಸಹೋದರರೂ ಎಲ್ಲರೂ ಮೃತರಾದರು. ಪಾಂಡುಪುತ್ರರಾದ ನಾವು ಐವರಾದರೋ ನಿನ್ನನ್ನು ಮರೆಹೊಕ್ಕಿದ್ದೆವು. ಆದುದರಿಂದಲೇ ಉಳಿದುಕೊಂಡೆವು. ಭೀಷ್ಮ, ದ್ರೋಣ, ಮಹಾಬಲನಾದ ಕರ್ಣ, ಒಡಹುಟ್ಟಿದವರು ಮತ್ತು ಮಕ್ಕಳು ಇವರೊಡಗೂಡಿದ ದುರ್ಯೋಧನ ಭೂಪತಿ ಇವರೆಲ್ಲರೂ ಹತರಾದರು. ತಾವೇ ಶೂರರೆಂದು ತಿಳಿದುಕೊಂಡಿದ್ದ ಎಷ್ಟೋ ಜನ ರಾಜರು ಕೊಲೆಗೆ ತುತ್ತಾದರು. ಹೀಗಿರುವಾಗ, ಓ ಕೃಷ್ಣಾ, ನಮಗೆ ರಾಜ್ಯದಿಂದ

ಹತ್ವಾ ಭೀಷ್ಮಂ ಚ ದ್ರೋಣಂ ಚ ಕರ್ಣಂ ಚೈವ ಮಹಾಬಲಂ ।
ದುರ್ಯೋಧನಂ ಚ ರಾಜಾನಂ ಪುತ್ರಭ್ರಾತೃಸಮನ್ವಿತಂ ॥ ೫ ॥

ರಾಜಾನೋ ನಿಹತಾಃ ಸರ್ವೇ ಯೇ ಚಾನ್ಯೇ ಶೂರಮಾನಿನಃ ।
ಕಿಂ ನೋ ರಾಜ್ಯೇನ ಗೋವಿಂದ ಕಿಂ ಭೋಗೈರ್ಜೀವಿತೇನ ವಾ ॥ ೬ ॥

ಧಿಕ್ಕಷ್ಟಮಿತಿ ಸಂಚಿಂತ್ಯ ರಾಜಾ ವೈಕ್ಲವ್ಯಮಾಗತಃ ।
ನಿರ್ವಿಚೇಷ್ಟೋ ನಿರುತ್ಸಾಹಃ ಕಿಂಚಿತ್ತಿಷ್ಠತ್ಯಧೋಮುಖಃ ॥ ೭ ॥

ಲಬ್ಧಸಂಜ್ಞೋ ಯದಾ ರಾಜಾ ಚಿಂತಯನ್ ಸ ಪುನಃ ಪುನಃ ।
ಕತರೋ ವಿನಿಯೋಗೋ ವಾ ನಿಯಮಂ ತೀರ್ಥಮೇವ ಚ ॥ ೮ ॥

ಯೇನಾಹಂ ಶೀಘ್ರಮಾಮುಂಚೇ ಮಹಾಪಾತಕಕಿಲ್ಬಿಷಾತ್ ।
ಯತ್ರ ಸ್ಥಿತ್ವಾ ನರೋ ಯಾತಿ ವಿಷ್ಣುಲೋಕಮನುತ್ತಮಂ ॥ ೯ ॥

ಕಥಂ ಪೃಚ್ಛಾಮಿ ವೈ ಕೃಷ್ಣಂ ಯೇನೇದಂ ಕಾರಿತೋಽಸ್ಮ್ಯಹಂ ।
ಧೃತರಾಷ್ಟ್ರಂ ಕಥಂ ಪೃಚ್ಛೇ ಯಸ್ಯ ಪುತ್ರಶತಂ ಹತಂ ॥೧೦॥

---

ಏನು ಪ್ರಯೋಜನ? ಭೋಗಗಳು ತಾನೆ ಏಕೆ? ಬದುಕಿ ಆಗಬೇಕಾಗಿರುವುದೇನು? ಅಯ್ಯೋ! ಹಾಳು ಬಾಳೇ! ಕಷ್ಟ!'' ಎಂದು ಚಿಂತಿಸುತ್ತ ಧರ್ಮರಾಜನು ವಿಷಣ್ಣನಾದನು. ಅವನಿಗೆ ಏನು ಮಾಡಲೂ ತೋರದೆ ಹೋಯಿತು. ಉತ್ಸಾಹವೇ ಅಡಗಿ ಹೋಯಿತು. ಅವನು ತಲೆತಗ್ಗಿಸಿಕೊಂಡು ಸುಮ್ಮನೆ ನಿಂತನು.

೮. ಆ ಅರಸನಿಗೆ ಮೂರ್ಛೆ ತಿಳಿಯಿತು. ಅವನು ಮತ್ತೆ ಮತ್ತೆ ಚಿಂತಿಸಿದನು. "ಯಾವ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲಿ? ಯಾವ ನಿಯಮವನ್ನು ಕೈಗೊಳ್ಳಲಿ? ಯಾವ ತೀರ್ಥಯಾತ್ರೆಯನ್ನು ಮಾಡಲಿ?

೯. ಭ್ರಾತೃವಧರೂಪವಾದ ಈ ಮಹಾಪಾತಕದಿಂದ ನಾನು ಬಿಡುಗಡೆ ಹೊಂದುವ ದಾರಿ ಯಾವುದು? ಎಲ್ಲಿ ನೆಲೆಸಿದರೆ ಅತಿಶ್ರೇಷ್ಠವಾದ ವಿಷ್ಣುಲೋಕವು ಲಭಿಸೀತು?

೧೦. ಕೃಷ್ಣನನ್ನು ಹೇಗೆ ಕೇಳಲಿ? ಏಕೆಂದರೆ ನನ್ನನ್ನು ಈ ಗತಿಗೆ ತಂದು ಬಿಟ್ಟವನು ಅವನೇ ಅಲ್ಲವೇ? ಧೃತರಾಷ್ಟ್ರನನ್ನು ಕೇಳೋಣವೇ? ಅವನ ನೂರ್ವರು ಮಕ್ಕಳನ್ನೂ ನಾವೇ ಕೊಂದಿದ್ದೇವೆ.

ಏವಂ ವೈಕ್ಲವ್ಯಮಾಪನ್ನೋ ಧರ್ಮರಾಜೋ ಯುಧಿಷ್ಠಿರಃ ।
ರುದಂತಿ ಪಾಂಡವಾಃ ಸರ್ವೇ ಭ್ರಾತೃಶೋಕಪರಿಪ್ಲುತಾಃ ॥೧೧॥

ಯೇ ಚ ತತ್ರ ಮಹಾತ್ಮಾನಃ ಸಮೇತಾಃ ಪಾಂಡವಾಃ ಸ್ಮೃತಾಃ ।
ಕುಂತೀ ಚ ದ್ರೌಪದೀ ಚೈವ ಯೇ ಚ ತತ್ರ ಸಮಾಗತಾಃ ।
ಭೂಮೌ ನಿಪತಿತಾಃ ಸರ್ವೇ ರುದಂತಸ್ತು ಸಮಂತತಃ ॥೧೨॥

ವಾರಾಣಸ್ಯಾಂ ಮಾರ್ಕಂಡೇಯಸ್ತೇನ ಜ್ಞಾತೋ ಯುಧಿಷ್ಠಿರಃ ।
ಯಥಾ ವೈಕ್ಲವ್ಯಮಾಪನ್ನೋ ರೋದಮಾನಸ್ತು ದುಃಖಿತಃ ॥೧೩॥

ಅಚಿರೇಣೈವ ಕಾಲೇನ ಮಾರ್ಕಂಡೇಯೋ ಮಹಾತಪಾಃ ।
ಸಂಪ್ರಾಪ್ತೋ ಹಸ್ತಿನಪುರಂ ರಾಜದ್ವಾರೇ ಹ್ಯತಿಷ್ಠತ ॥೧೪॥

ದ್ವಾರಪಾಲೋಽಪಿ ತಂ ದೃಷ್ಟ್ವಾ ರಾಜ್ಞಃ ಕಥಿತವಾನ್ ದ್ರುತಂ ।
ತ್ವಾಂ ದ್ರಷ್ಟುಕಾಮೋ ಮಾರ್ಕಂಡೋ ದ್ವಾರಿ ತಿಷ್ಠತ್ಯಸೌ ಮುನಿಃ ।
ತ್ವರಿತೋ ಧರ್ಮಪುತ್ರಸ್ತು ದ್ವಾರಮಾಗಾದತಃ ಪರಂ ॥೧೫॥

---

೧೧. ಯುದ್ಧದಲ್ಲಿ ಎದೆಗೊಟ್ಟು ನಿಲ್ಲುತ್ತಿದ್ದ ಧರ್ಮರಾಜನು ಇಂತು ವಿಷಣ್ಣನಾದನು. ಭ್ರಾತೃಶೋಕದಿಂದ ಸಂತಪ್ತರಾಗಿ ಪಾಂಡವರೆಲ್ಲರೂ ಅಳತೊಡಗಿದರು.

೧೨-೧೩. ಮಹಾತ್ಮರಾದ ಪಾಂಡವರು ಅಲ್ಲಿ ನೆರೆದಿದ್ದುದು, ಕುಂತಿ, ದ್ರೌಪದಿ ಮತ್ತು ಉಳಿದವರು ಅಲ್ಲಿಗೆ ಬಂದಿದ್ದುದು, ಎಲ್ಲರೂ ಅಳುತ್ತ ಸುತ್ತಲೂ ನೆಲದ ಮೇಲೆ ಬಿದ್ದಿದ್ದುದು ಇದೆಲ್ಲವೂ ಕಾಶಿಯಲ್ಲಿದ್ದ ಮಾರ್ಕಂಡೇಯನಿಗೆ ಗೊತ್ತಾಯಿತು. ಧರ್ಮರಾಜನು ವಿಷಣ್ಣನಾಗಿ ಅಳುತ್ತ ದುಃಖದಿಂದ ತುಂಬಿದ್ದನೆಂಬುದನ್ನೂ ಆ ಮುನಿಯು ಅರಿತನು.

೧೪. ಸ್ವಲ್ಪ ಹೊತ್ತಿನೊಳಗಾಗಿಯೇ ಮಹಾತಪಸ್ವಿಯಾದ ಮಾರ್ಕಂಡೇಯ ಮಹರ್ಷಿಯು ಹಸ್ತಿನಾವತಿಗೆ ಬಂದು ಅರಮನೆಯ ಮುಂಭಾಗದಲ್ಲಿ ನಿಂತನು.

೧೫. ದ್ವಾರಪಾಲಕನೂ ಸಹ ಅವನನ್ನು ಕಂಡು, ರಾಜನ ಬಳಿಗೆ ಹೋಗಿ „ನಿನ್ನನ್ನು ನೋಡಬೇಕೆಂದು ಮಾರ್ಕಂಡೇಯ ಮುನಿಯು ಬಾಗಿಲಲ್ಲಿ ಬಂದು ನಿಂತಿದ್ದಾನೆ'' ಎಂದು ತಿಳಿಸಿದನು. ಬಳಿಕ ಧರ್ಮರಾಜನು ತಡಮಾಡದೆ ಬಾಗಿಲ ಬಳಿಗೆ ಬಂದನು.

॥ ಯುಧಿಷ್ಠಿರ ಉವಾಚ ॥

**ಸ್ವಾಗತಂ ತೇ ಮಹಾಭಾಗ ಸ್ವಾಗತಂ ತೇ ಮಹಾಮುನೇ ।**
**ಅದ್ಯ ಮೇ ಸಫಲಂ ಜನ್ಮ ಅದ್ಯ ಮೇ ತಾರಿತಂ ಕುಲಂ ॥೧೬॥**

**ಅದ್ಯ ಮೇ ಪಿತರಸ್ತುಷ್ಟಾಸ್ತ್ವಯಿ ದೃಷ್ಟೇ ಮಹಾಮುನೇ ।**
**ಅದ್ಯಾಹಂ ಪೂತದೇಹೋಽಸ್ಮಿ ಯತ್ತ್ವಯಾ ಸಹ ದರ್ಶನಂ ॥೧೭॥**

॥ ನಂದಿಕೇಶ್ವರ ಉವಾಚ ॥

**ಸಿಹ್ಮಾಸನೇ ಸಮಾಸ್ಥಾಪ್ಯ ಪಾದಶೌಚಾರ್ಚನಾದಿಭಿಃ ।**
**ಯುಧಿಷ್ಠಿರೋ ಮಹಾತ್ಮಾ ವೈ ಪೂಜಯಾಮಾಸ ತಂ ಮುನಿಂ ॥೧೮॥**

**ತತಃ ಸ ತುಷ್ಟೋ ಮಾರ್ಕಂಡಃ ಪೂಜಿತಶ್ಚಾಹ ತಂ ನೃಪಂ ।**
**ಆಖ್ಯಾಹಿ ತ್ವರಿತಂ ರಾಜನ್ ಕಿಮರ್ಥಂ ರುದಿತಂ ತ್ವಯಾ ।**
**ಕೇನ ವಾ ವಿಕ್ಲಬೀಭೂತಃ ಕಾ ಬಾಧಾ ತೇ ಕಿಮಪ್ರಿಯಂ ॥೧೯॥**

---

೧೬. ಯುಧಿಷ್ಠಿರನು ಹೇಳಿದನು.—ಎಲೈ ಮಹಾಮಹಿಮನೇ, ನಿನಗೆ ಸುಖಾಗಮನ. ಓ ಮಹರ್ಷೀ, ನಿನಗೆ ಸ್ವಾಗತ. ಇಂದಿಗೆ ನನ್ನ ಜನ್ಮವು ಸಾರ್ಥಕವಾಯಿತು. ನನ್ನ ವಂಶವು ಈ ದಿನ ಉದ್ಧಾರವಾಯಿತು.

೧೭. ಎಲೈ ಮಹಾಮುನಿಯೇ, ನಿನ್ನನ್ನು ನಾನೀಗ ನೋಡಿದುದರಿಂದ ನನ್ನ ಪಿತೃಗಳು ತೃಪ್ತರಾದರು. ಈ ದಿನ ನನ್ನ ದೇಹವು ಪರಿಶುದ್ಧವಾಯಿತು. ಏಕೆಂದರೆ ನಿಮ್ಮ ಕೃಪಾವಲೋಕನಕ್ಕೆ ನಾನು ಪಾತ್ರನಾದೆನು.

೧೮. ನಂದೀಕೇಶ್ವರನು ಹೇಳಿದನು.—ಮಹಾತ್ಮನಾದ ಧರ್ಮರಾಜನು ಆ ಮಹರ್ಷಿಯನ್ನು ಸಿಹ್ಮಾಸನದಲ್ಲಿ ಕುಳ್ಳಿರಿಸಿ, ಪಾದಗಳನ್ನು ತೊಳೆದು ಅರ್ಚನಾದ್ಗಿಗಳಿಂದ ಸತ್ಕರಿಸಿದನು.

೧೯. ಪೂಜೆಯನ್ನು ಕೈಗೊಂಡ ಬಳಿಕ ಮಾರ್ಕಂಡೇಯ ಮುನಿಯು ಸಂತೋಷಪಟ್ಟು ರಾಜನಿಗೆ ಇಂತು ಹೇಳಿದನು. "ನರೇಂದ್ರಾ, ಬೇಗನೆ ಹೇಳು. ನೀನೇಕೆ ಅತ್ತೆ? ನಿನ್ನ ವಿಷಾದಕ್ಕೆ ಕಾರಣವೇನು? ನಿನಗೇನು ಕಷ್ಟ? ನಿನ ಮನಸ್ಸಿಗೆ ಅಪ್ರಿಯವಾಗಿರುವ ವಿಚಾರವಾವುದು?".

॥ ಯುಧಿಷ್ಠಿರ ಉವಾಚ ॥

ಅಸ್ಮಾಕಂ ಚೈವ ಯದ್ವೃತ್ತಂ ರಾಜ್ಯಸ್ಯಾರ್ಥೇ ಮಹಾಮುನೇ ।
ಏತತ್ಸರ್ವಂ ವಿದಿತ್ವಾ ತು ಚಿಂತಾವಶಮುಪಾಗತಃ ॥೨೦॥

॥ ಮಾರ್ಕಂಡೇಯ ಉವಾಚ ॥

ಶೃಣು ರಾಜನ್ ಮಹಾಬಾಹೋ ಕ್ಷತ್ರಧರ್ಮವ್ಯವಸ್ಥಿತಂ ।
ನೈವ ದೃಷ್ಟಂ ರಣೇ ಪಾಪಂ ಯುಧ್ಯಮಾನಸ್ಯ ಧೀಮತಃ ॥೨೧॥

ಕಿಂ ಪುನಾ ರಾಜಧರ್ಮೇಣ ಕ್ಷತ್ರಿಯಸ್ಯ ವಿಶೇಷತಃ ।
ತದೇವಂ ಹೃದಯಂ ಕೃತ್ವಾ ತಸ್ಮಾತ್ಪಾಪಂ ನ ಚಿಂತಯೇತ್ ॥೨೨॥

ತತೋ ಯುಧಿಷ್ಠಿರೋ ರಾಜಾ ಪ್ರಣಮ್ಯ ಶಿರಸಾ ಮುನಿಂ ।
ಪಪ್ರಚ್ಛ ವಿನಯೋಪೇತಃ ಸರ್ವಪಾತಕನಾಶನಂ ॥೨೩॥

॥ ಯುಧಿಷ್ಠಿರ ಉವಾಚ ॥

ಪೃಚ್ಛಾಮಿ ತ್ವಾಂ ಮಹಾಪ್ರಾಜ್ಞ ನಿತ್ಯಂ ತ್ರೈಲೋಕ್ಯದರ್ಶಿನಂ ।
ಕಥಯ ತ್ವಂ ಸಮಾಸೇನ ಯೇನ ಮುಚ್ಯೇತ ಕಿಲ್ಬಿಷಾತ್ ॥೨೪॥

---

೨೦. ಧರ್ಮರಾಜನು ಹೇಳಿದನು.—ಎಲೈ ಮಹಾಮುನಿಯೇ, ರಾಜ್ಯಕ್ಕೋಸ್ಕರವಾಗಿ ನಾವು ಪಟ್ಟ ಪಾಡೆಲ್ಲವನ್ನೂ ನೆನೆಸಿಕೊಂಡು ಚಿಂತೆಗೊಳಗಾದೆನು.

೨೧. ಮಾರ್ಕಂಡೇಯನು ಹೇಳಿದನು.—ಶೂರನಾದ ಎಲೈ ಧರ್ಮರಾಜನೇ, ಕ್ಷತ್ರಿಯಧರ್ಮದ ವ್ಯವಸ್ಥೆಯನ್ನು ಕೇಳು. ರಣರಂಗದಲ್ಲಿ ಹೋರಾಡುವ ಜ್ಞಾನಿಯಾದ ವೀರನಿಗೆ ಪಾಪವೆಂಬುದೇ ಇಲ್ಲ.

೨೨. ಹೀಗಿರುವಲ್ಲಿ ರಾಜಧರ್ಮವನ್ನು ಅನುಸರಿಸುತ್ತಲಿರುವ ಕ್ಷತ್ರಿಯನ ವಿಚಾರದಲ್ಲಿ ಹೇಳಬೇಕಾದುದೇನಿದೆ? ಈ ವಿಷಯವನ್ನು ಮನಸ್ಸಿನಲ್ಲಿ ಇಡಬೇಕು. ಆದುದರಿಂದ ಪಾಪದ ಚಿಂತೆಯನ್ನೇ ಮಾಡಬಾರದು.

೨೩. ಬಳಿಕ ಧರ್ಮರಾಜನು ಮಾರ್ಕಂಡೇಯ ಮುನಿಗೆ ಸಾಷ್ಟಾಂಗ ಪ್ರಣಾಮಮಾಡಿ, ಸಕಲಪಾಪಗಳೂ ಪರಿಹಾರವಾಗುವ ವಿಧಾನವಾವುದೆಂದು ವಿನಯದಿಂದ ಕೇಳಿದನು.

೨೪. ಧರ್ಮರಾಜನು ಹೇಳಿದನು.—ಎಲೈ ಮಹಾಪ್ರಾಜ್ಞನೇ, ನೀನು ಮೂರು ಲೋಕದ ವಿಷಯಗಳನ್ನೂ ಅರಿತಿರುವೆ. ಪಾಪಪರಿಹಾರಕವಾದ ಮಾರ್ಗವನ್ನು ನಿನ್ನಿಂದ ತಿಳಿಯಬೇಕೆಂದಿರುವೆನು. ಸಂಗ್ರಹವಾಗಿ ತಿಳಿಸು.

|| ಮಾರ್ಕಂಡೇಯ ಉವಾಚ ||

ಶೃಣು ರಾಜನ್ ಮಹಾಬಾಹೋ ಸರ್ವಪಾತಕನಾಶನಂ ।
ಪ್ರಯಾಗಗಮನಂ ಶ್ರೇಷ್ಠಂ ನರಾಣಾಂ ಪುಣ್ಯಕರ್ಮಣಾಂ ॥೨೫॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಪ್ರಯಾಗಮಾಹಾತ್ಮ್ಯೇ
ತ್ರ್ಯಧಿಕಶತತಮೋಽಧ್ಯಾಯಃ

---

೨೫. ಮಾರ್ಕಂಡೇಯನು ಹೇಳಿದನು.—ಪ್ರತಾಪಶಾಲಿಯಾದ ಓ ಭೂಪಾಲಕಾ, ಪಾಪಗಳೆಲ್ಲವೂ ಪರಿಹಾರವಾಗುವ ಉಪಾಯವನ್ನು ಹೇಳುತ್ತೇನೆ; ಕೇಳು. ಪುಣ್ಯಶಾಲಿಗಳಾದ ಮಾನವರು ಪ್ರಯಾಗ ಯಾತ್ರೆಯನ್ನು ಮಾಡಬೇಕು. ಅದು ಬಹು ಶ್ರೇಷ್ಠವಾದುದು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯವು ಪ್ರಯಾಗಮಾಹಾತ್ಮ್ಯದ ವರ್ಣನೆಗೆ ಪೀಠಿಕೆಯಾಗಿದೆ.

ಧರ್ಮರಾಜನು ತನ್ನ ಸಹೋದರರಾದ ಕೌರವರನ್ನು ಯುದ್ಧದಲ್ಲಿ ಸಂಹರಿಸಿದುದಕ್ಕಾಗಿ ಬಹು ದುಃಖಪಟ್ಟನು. ಮುಂದೇನೂ ತೋರದೆ ನಿರುತ್ಸಾಹನಾದನು. ಕುಂತಿಯೂ, ದ್ರೌಪದಿಯೂ, ಅವನ ತಮ್ಮಂದಿರೂ ಇದನ್ನು ಕಂಡು ಬಹಳ ಖಿನ್ನರಾದರು. ಕಾಶಿಯಲ್ಲಿದ್ದ ಮಾರ್ಕಂಡೇಯಮುನಿಗೆ ಈ ವೃತ್ತಾಂತವು ಜ್ಞಾನದೃಷ್ಟಿಯಿಂದ ತಿಳಿಯಿತು. ಕೂಡಲೇ ಆತನು ಹಸ್ತಿನಾವತಿಗೆ ಬಂದನು. ಧರ್ಮರಾಜನು ಆ ಮಹರ್ಷಿಯನ್ನು ಭಕ್ತಿಯಿಂದ ಸತ್ಕರಿಸಿ, ತನ್ನ ಚಿಂತೆಗೆ ಕಾರಣವನ್ನು ಹೇಳಿ, ಪಾಪಪರಿಹಾರದ ಮಾರ್ಗವನ್ನು ತಿಳಿಸಬೇಕೆಂದು ಬೇಡಿದನು. ಮಾರ್ಕಂಡೇಯ ಮುನಿಯು ಪ್ರಯಾಗಯಾತ್ರೆಯಿಂದ ಪಾತಕಗಳೆಲ್ಲವೂ ತೊಲಗುವುವು ಎಂದು ಹೇಳಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಪ್ರಯಾಗಮಾಹಾತ್ಮ್ಯದೊಳಗೆ
ನೂರ ಮೂರನೆಯ ಅಧ್ಯಾಯವು ಮುಗಿದುದು.

## ಅಥ ಚತುರಧಿಕಶತತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಭಗವಞ್ಛ್ರೋತುಮಿಚ್ಛಾಮಿ ಪುರಾ ಕಲ್ಪೇ ಯಥಾಸ್ಥಿತಂ ।
ಬ್ರಹ್ಮಣಾ ದೇವಮುಖ್ಯೇನ ಯಥಾವತ್ಕಥಿತಂ ಮುನೇ ॥ ೧ ॥

ಕಥಂ ಪ್ರಯಾಗೇ ಗಮನಂ ನರಾಣಾಂ ತತ್ರ ಕೀದೃಶಂ ।
ಮೃತಾನಾಂ ಕಾ ಗತಿಸ್ತತ್ರ ಸ್ನಾತಾನಾಂ ತತ್ರ ಕಿಂ ಫಲಂ ॥ ೨ ॥

ಯೇ ವಸಂತಿ ಪ್ರಯಾಗೇ ತು ಬ್ರೂಹಿ ತೇಷಾಂ ಚ ಕಿಂ ಫಲಂ ।
ಏತನ್ಮೇ ಸರ್ವಮಾಖ್ಯಾಹಿ ಪರಂ ಕೌತೂಹಲಂ ಹಿ ಮೇ ॥ ೩ ॥

॥ ಮಾರ್ಕಂಡೇಯ ಉವಾಚ ॥

ಕಥಯಿಷ್ಯಾಮಿ ತೇ ವತ್ಸ ಯಚ್ಛ್ರೇಷ್ಠಂ ತತ್ರ ಯತ್ಫಲಂ ।
ಪುರಾ ಹಿ ಸರ್ವವಿಪ್ರಾಣಾಂ ಕಥ್ಯಮಾನಂ ಮಯಾ ಶ್ರುತಂ ॥ ೪ ॥

---

೧. ಧರ್ಮರಾಜನು ಹೇಳಿದನು.—ಎಲೈ ಪೂಜ್ಯನೇ, ದೇವತೆಗಳಲ್ಲಿ ಪ್ರಮುಖನಾದ ಬ್ರಹ್ಮನು ಹಿಂದಿನ ಕಲ್ಪದಲ್ಲಿ ಹೇಳಿದ ವೃತ್ತಾಂತವನ್ನು ಯಥಾವಸ್ಥಿತವಾಗಿ ಕೇಳಲು ಬಯಸುತ್ತೇನೆ.

೨. ಪ್ರಯಾಗಕ್ಷೇತ್ರಕ್ಕೆ ಹೋಗಬೇಕಾದ ರೀತಿ ಹೇಗೆ? ಅದರಿಂದ ಬರುವ ಫಲವೆಂತಹುದು? ಅಲ್ಲಿ ಮೃತರಾದವರಿಗೆ ದೊರಕುವ ಗತಿ ಯಾವುದು? ಸ್ನಾನ ಮಾಡಿದರೆ ಆಗುವ ಲಾಭವೇನು?

೩. ಪ್ರಯಾಗದಲ್ಲಿ ವಾಸಮಾಡುವ ಮನುಷ್ಯರಿಗೆ ಉಂಟಾಗುವ ಫಲವೇನು? ಇದೆಲ್ಲವನ್ನೂ ತಿಳಿಸು. ನನಗೆ ಕುತೂಹಲವು ಬಹಳವಾಗಿದೆ.

೪. ಮಾರ್ಕಂಡೇಯನು ಹೇಳಿದನು.—ವತ್ಸಾ, ಹಿಂದೆ ಬ್ರಾಹ್ಮಣರಿಗೆಲ್ಲ ಬ್ರಹ್ಮದೇವನು ಈ ವಿಷಯವನ್ನು ಹೇಳುತ್ತಿರುವಾಗ ನಾನೂ ಕೇಳಿದೆನು. ಪ್ರಯಾಗ ಯಾತ್ರೆಯಿಂದಾಗುವ ಶ್ರೇಷ್ಠವಾದ ಫಲವಾವುದೆಂಬುದನ್ನು ನಿನಗೆ ತಿಳಿಸುವೆನು.

**ಆ ಪ್ರಯಾಗಪ್ರತಿಷ್ಠಾನಾದಾ ಪುರಾದ್ವಾಸುಕೇರ್ಹ್ರದಾತ್ ।**
**ಕಂಬಲಾಶ್ವತರೌ ನಾಗೌ ನಾಗಶ್ಚ ಬಹುಮೂಲಕಃ ।**
**ಏತತ್ಪ್ರಜಾಪತೇಃ ಕ್ಷೇತ್ರಂ ತ್ರಿಷು ಲೋಕೇಷು ವಿಶ್ರುತಂ ॥ ೫ ॥**

**ತತ್ರ ಸ್ನಾತ್ವಾ ದಿವಂ ಯಾಂತಿ ಯೇ ಮೃತಾಸ್ತೇಽಪುನರ್ಭವಾಃ ।**
**ತತ್ರ ಬ್ರಹ್ಮಾದಯೋ ದೇವಾ ರಕ್ಷಾಂ ಕುರ್ವಂತಿ ಸಂಗತಾಃ ॥ ೬ ॥**

**ಅನ್ಯೇ ಚ ಬಹವಸ್ತೀರ್ಥಾಃ ಸರ್ವಪಾಪಹರಾಃ ಶುಭಾಃ ।**
**ನ ಶಕ್ಯಾಃ ಕಥಿತುಂ ರಾಜನ್ ಬಹುವರ್ಷಶತೈರಪಿ ।**
**ಸಂಕ್ಷೇಪಣ ಪ್ರವಕ್ಷ್ಯಾಮಿ ಪ್ರಯಾಗಸ್ಯ ತು ಕೀರ್ತನಂ ॥ ೭ ॥**

**ಷಷ್ಟಿರ್ಧನುಸ್ಸಹಸ್ರಾಣಿ ಯಾನಿ ರಕ್ಷಂತಿ ಜಾಹ್ನವೀಂ ।**
**ಯಮುನಾಂ ರಕ್ಷತಿ ಸದಾ ಸವಿತಾ ಸಪ್ತವಾಹನಃ ॥ ೮ ॥**

---

೫. ಪ್ರಯಾಗತೀರ್ಥದಿಂದ ಪ್ರತಿಷ್ಠಾನತೀರ್ಥದ ವರೆಗೂ, ಪ್ರಯಾಗ ನಗರದಿಂದ ವಾಸುಕಿಹ್ರದದ ವರೆಗೂ ಇರುವ ಪ್ರದೇಶವನ್ನು ಪ್ರಜಾಪತಿಕ್ಷೇತ್ರವೆನ್ನುವರು. ಅಲ್ಲಿ ಕಂಬಲ ಮತ್ತು ಅಶ್ವತರರೆಂಬ ಸರ್ಪಗಳೂ, ಎಷ್ಟೋ ಬೇರುಗಳಿಂದ ತುಂಬಿದ ಪುನ್ನಾಗವೃಕ್ಷವೂ ಇವೆ.

೬. ಅಲ್ಲಿ ಸ್ನಾನಮಾಡಿದವರು ಸ್ವರ್ಗವನ್ನು ಪಡೆಯುವರು. ಮೃತರಾದವರಿಗೆ ಪುನರ್ಜನ್ಮವಿಲ್ಲ. ಬ್ರಹ್ಮಾದಿ ದೇವತೆಗಳು ಅಲ್ಲಿ ಒಟ್ಟುಗೂಡಿ ಆ ಕ್ಷೇತ್ರವನ್ನು ರಕ್ಷಿಸುತ್ತಿರುವರು.

೭. ಸಕಲ ಪಾಪಗಳನ್ನೂ ಪರಿಹರಿಸುವ ಇನ್ನೂ ಎಷ್ಟೋ ಶುಭಕರವಾದ ತೀರ್ಥಗಳು ಅಲ್ಲಿ ಇವೆ. ರಾಜಾ, ನೂರುಗಟ್ಟಲೆ ವರ್ಷಗಳಾದರೂ ಅವುಗಳ ಮಹಿಮೆಯನ್ನು ವರ್ಣಿಸಲು ಸಾಧ್ಯವಿಲ್ಲ. ಆದರೂ ಪ್ರಯಾಗಕ್ಷೇತ್ರದ ಮಹಿಮೆಯನ್ನು ಸಂಕ್ಷೇಪವಾಗಿ ಹೇಳುವೆನು.

೮. ಅರವತ್ತು ಸಾವಿರ ಮಂದಿ ಧನುರ್ಧಾರಿಗಳು ಗಂಗಾನದಿಯನ್ನು ರಕ್ಷಿಸುತ್ತಿರುವರು. ಏಳು ಕುದುರೆಗಳನ್ನು ಹೂಡಿದ ತೇರಿನಲ್ಲಿ ಕುಳಿತು ಸೂರ್ಯದೇವನು ಯಮುನಾನದಿಯನ್ನು ಕಾಯುವನು.

ಪ್ರಯಾಗಂ ತು ವಿಶೇಷೇಣ ಸದಾ ರಕ್ಷತಿ ವಾಸವಃ ।
ಮಂಡಲಂ ರಕ್ಷತಿ ಹರಿರ್ದೈವತೈಃ ಸಹ ಸಂಗತಃ ॥ ೯ ॥

ತಂ ವಟಂ ರಕ್ಷತಿ ಸದಾ ಶೂಲಪಾಣಿರ್ಮಹೇಶ್ವರಃ ।
ಸ್ಥಾನಂ ರಕ್ಷಂತಿ ವೈ ದೇವಾಃ ಸರ್ವಪಾಪಹರಂ ಶುಭಂ ॥೧೦॥

ಅಧರ್ಮೇಣಾವೃತೋ ಲೋಕೋ ನೈವ ಗಚ್ಛತಿ ತತ್ಪದಂ ।
ಸ್ವಲ್ಪಮಲ್ಪತರಂ ಪಾಪಂ ಯದಾ ತೇ ಸ್ಯಾನ್ನರಾಧಿಪ ।
ಪ್ರಯಾಗಂ ಸ್ಮರಮಾಣಸ್ಯ ಸರ್ವಮಾಯಾತಿ ಸಂಕ್ಷಯಂ ॥೧೧॥

ದರ್ಶನಾತ್ತಸ್ಯ ತೀರ್ಥಸ್ಯ ನಾಮಸಂಕೀರ್ತನಾದಪಿ ।
ಮೃತ್ತಿಕಾಲಂಭನಾದ್ವಾಪಿ ನರಃ ಪಾಪಾತ್ಪ್ರಮುಚ್ಯತೇ ॥೧೨॥

ಪಂಚಕುಂಡಾನಿ ರಾಜೇಂದ್ರ ತೇಷಾಂ ಮಧ್ಯೇ ತು ಜಾಹ್ನವೀ ।
ಪ್ರಯಾಗಸ್ಯ ಪ್ರವೇಶೇ ತು ಪಾಪಂ ನಶ್ಯತಿ ತತ್ಕ್ಷಣಾತ್ ॥೧೩॥

---

೯. ದೇವೇಂದ್ರನು ಬಲು ಎಚ್ಚರಿಕೆಯಿಂದ ಪ್ರಯಾಗಕ್ಷೇತ್ರವನ್ನು ಎಡೆ ಬಿಡದೆ ರಕ್ಷಿಸುವನು. ವಿಷ್ಣುವು ದೇವತೆಗಳೊಡಗೂಡಿ ಆ ಕ್ಷೇತ್ರಮಂಡಲವನ್ನು ಕಾಯುತ್ತಾನೆ.

೧೦. ಮಹೇಶ್ವರನು ಕೈಯಲ್ಲಿ ಶೂಲವನ್ನು ಹಿಡಿದು ಅಲ್ಲಿನ ಅಕ್ಷಯವಟ ವೆಂಬ ಆಲದ ಮರವನ್ನು ಸದಾ ರಕ್ಷಿಸುತ್ತಿದ್ದಾನೆ. ಸರ್ವಪಾಪಹರವೂ ಶುಭವೂ ಆದ ಆ ಸ್ಥಲವನ್ನು ದೇವತೆಗಳು ಕಾಯುತ್ತಾರೆ.

೧೧. ಪುಣ್ಯವಿಲ್ಲದ ಜನರಿಗೆ ಆ ಕ್ಷೇತ್ರಕ್ಕೆ ಪ್ರವೇಶವೇ ದೊರೆಯಲಾರದು. ರಾಜಾ, ಅಲ್ಪಸ್ವಲ್ಪ ಪಾಪವೇನಾದರೂ ಘಟಿಸಿತೆಂದು ನಿನಗೆ ತೋರಿದಾಗ ಪ್ರಯಾಗ ವನ್ನು ಸ್ಮರಿಸಿಕೋ; ಅದೆಲ್ಲವೂ ಪರಿಹಾರವಾಗುತ್ತದೆ.

೧೨. ಆ ಪುಣ್ಯತೀರ್ಥವನ್ನು ಕಣ್ಣಿನಿಂದ ನೋಡಲಿ; ಅದರ ಹೆಸರನ್ನು ಹೇಳಲಿ; ಅಥವಾ ಅಲ್ಲಿನ ಮಣ್ಣನ್ನು ಮೈಗೆ ಹಚ್ಚಿಕೊಳ್ಳಲಿ; ಮನುಷ್ಯನ ಪಾಪವೆಲ್ಲ ದೂರವಾಗುತ್ತದೆ.

೧೩. ಓ ರಾಜೇಂದ್ರಾ, ಅಲ್ಲಿ ಐದು ಕುಂಡಗಳಿವೆ. ಅವುಗಳ ನಡುವೆ ಗಂಗಾ ನದಿ ಶೋಭಿಸುತ್ತಿದೆ. ಪ್ರಯಾಗಕ್ಷೇತ್ರಕ್ಕೆ ಕಾಲಿಟ್ಟ ಕೂಡಲೆ ಪಾತಕವು ನಾಶ ವಾಗುವುದು.

**ಯೋಜನಾನಾಂ ಸಹಸ್ರೇಷು ಗಂಗಾಯಾಃ ಸ್ಮರಣಾನ್ನರಃ ।**
**ಅಪಿ ದುಷ್ಕೃತಕರ್ಮಾ ತು ಲಭತೇ ಪರಮಾಂ ಗತಿಂ ॥೧೪॥**

**ಕೀರ್ತನಾನ್ಮುಚ್ಯತೇ ಪಾಪಾದ್ದೃಷ್ಟ್ವಾ ಭದ್ರಾಣಿ ಪಶ್ಯತಿ ।**
**ಅವಗಾಹ್ಯ ಚ ಪೀತ್ವಾ ತು ಪುನಾತ್ಯಾಸಪ್ತಮಂ ಕುಲಂ ॥೧೫॥**

**ಸತ್ಯವಾದೀ ಜಿತಕ್ರೋಧೋ ಹ್ಯಹಿಂಸಾಯಾಂ ವ್ಯವಸ್ಥಿತಃ ।**
**ಧರ್ಮಾನುಸಾರೀ ತತ್ವಜ್ಞೋ ಗೋಬ್ರಾಹ್ಮಣಹಿತೇ ರತಃ ॥೧೬॥**

**ಗಂಗಾಯಮುನಯೋರ್ಮಧ್ಯೇ ಸ್ನಾತೋ ಮುಚ್ಯೇತ ಕಿಲ್ಬಿಷಾತ್ ।**
**ಮನಸಾ ಚಿಂತಯನ್ ಕಾಮಾನವಾಪ್ನೋತಿ ಸುಪುಷ್ಕಲಾನ್ ॥೧೭॥**

---

೧೪. ಸಾವಿರಾರು ಯೋಜನಗಳ ದೂರದಲ್ಲಿರಲಿ, ಗಂಗಾನದಿಯನ್ನು ಸ್ಮರಿಸಿದರೆ ಸಾಕು; ಆ ಮನುಷ್ಯನು ಎಷ್ಟೇ ಪಾಪಿಷ್ಠನಾಗಿದ್ದರೂ ಸದ್ಗತಿಯನ್ನು ಪಡೆಯುತ್ತಾನೆ.

೧೫. ಗಂಗಾನದಿಯ ನಾಮೋಚ್ಚಾರಣದಿಂದ ಪಾಪವು ಪರಿಹಾರವಾಗುತ್ತದೆ. ನೋಟದಿಂದ ಶ್ರೇಯಸ್ಸುಂಟಾಗುತ್ತದೆ. ಸ್ನಾನಪಾನಗಳಿಂದಲಾದರೋ, ಏಳು ತಲೆಗಳ ವರೆಗೆ ವಂಶವು ಪವಿತ್ರವಾಗುತ್ತದೆ.

೧೬. ಗಂಗಾನದಿಯಲ್ಲಿ ಸ್ನಾನಮಾಡಿದಾತನು ಸತ್ಯವಂತನಾಗುತ್ತಾನೆ; ಕೋಪವನ್ನು ಗೆಲ್ಲುತ್ತಾನೆ; ಅಹಿಂಸಾವ್ರತನಿಷ್ಠನೂ ಧರ್ಮನಿರತನೂ ಆಗುತ್ತಾನೆ. ತತ್ವಜ್ಞಾನಿಯೆಂದೂ, ಗೋಬ್ರಾಹ್ಮಣ ಹಿತೈಷಿಯೆಂದೂ ಪ್ರಖ್ಯಾತಿಯನ್ನು ಪಡೆಯುತ್ತಾನೆ.

೧೭. ಗಂಗಾಯಮುನೆಗಳ ಸಂಗಮದಲ್ಲಿ ಸ್ನಾನಮಾಡಿದರೆ ಪಾಪಮುಕ್ತನಾಗುವನು. ಆ ಪವಿತ್ರಕ್ಷೇತ್ರವನ್ನು ಮನಸ್ಸಿನಲ್ಲಿ ಚಿಂತಿಸಿದರೆ ಬೇಡಿದ ಬಯಕೆಗಳೆಲ್ಲವನ್ನೂ ಪೂರ್ಣವಾಗಿ ಪಡೆಯುವನು.

**ತತೋ ಗತ್ವಾ ಪ್ರಯಾಗಂ ತು ಸರ್ವದೇವಾಭಿರಕ್ಷಿತಂ ।**
**ಬ್ರಹ್ಮಚಾರೀ ವಸೇನ್ಮಾಸಂ ಪಿತೄನ್ ದೇವಾಂಶ್ಚ ತರ್ಪಯೇತ್ ।**
**ಈಪ್ಸಿತಾನ್ ಲಭತೇ ಕಾಮಾನ್ ಯತ್ರ ಯತ್ರಾಭಿಜಾಯತೇ ॥೧೮॥**

**ತಪನಸ್ಯ ಸುತಾ ದೇವೀ ತ್ರಿಷು ಲೋಕೇಷು ವಿಶ್ರುತಾ ।**
**ಸಮಾಗತಾ ಮಹಾಭಾಗಾ ಯಮುನಾ ತತ್ರ ನಿಮ್ನಗಾ ।**
**ತತ್ರ ಸನ್ನಿಹಿತೋ ನಿತ್ಯಂ ಸಾಕ್ಷಾದ್ದೇವೋ ಮಹೇಶ್ವರಃ ॥೧೯॥**

**ದುಷ್ಪ್ರಾಪ್ಯಂ ಮಾನುಷೈಃ ಪುಣ್ಯಂ ಪ್ರಯಾಗಂ ತು ಯುಧಿಷ್ಠಿರ ।**
**ದೇವದಾನವಗಂಧರ್ವಾ ಋಷಯಃ ಸಿದ್ಧಚಾರಣಾಃ ।**
**ತತ್ರೋಪಸ್ಪೃಶ್ಯ ರಾಜೇಂದ್ರ ಸ್ವರ್ಗಲೋಕಮುಪಾಸತೇ ॥೨೦॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಪ್ರಯಾಗಮಹಾತ್ಮ್ಯೇ**
**ಚತುರಧಿಕಶತತಮೋಽಧ್ಯಾಯಃ**

---

೧೮. ಆದುದರಿಂದ ಸಕಲ ದೇವತೆಗಳಿಂದಲೂ ರಕ್ಷಿತವಾದ ಪ್ರಯಾಗ ಕ್ಷೇತ್ರಕ್ಕೆ ಹೋಗಿ, ಬ್ರಹ್ಮಚರ್ಯವ್ರತವನ್ನು ಆಚರಿಸುತ್ತ ಒಂದು ತಿಂಗಳು ವಾಸ ಮಾಡಬೇಕು. ಪಿತೃಗಳಿಗೂ ದೇವತೆಗಳಿಗೂ ತರ್ಪಣವನ್ನು ಕೊಡಬೇಕು. ಯಾವ ಯಾವ ಜನ್ಮಗಳನ್ನೆತ್ತಲಿ, ಅವನ ಮನೋರಥಗಳೆಲ್ಲ ಸಫಲವಾಗುವುವು.

೧೯. ಮೂರು ಲೋಕಗಳಲ್ಲಿ ಪ್ರಸಿದ್ಧಳೂ, ಮಹಾಮಹಿಮಳೂ, ಸೂರ್ಯನ ಮಗಳೂ ಆದ ಯಮುನೆಯು ಅಲ್ಲಿ ನದೀರೂಪದಿಂದಿದ್ದಾಳೆ. ಪೂಜ್ಯನಾದ ಮಹೇಶ್ವರನು ಸಾಕ್ಷಾತ್ತಾಗಿ ಅಲ್ಲಿ ನಿತ್ಯವೂ ನೆಲೆಸಿದ್ದಾನೆ.

೨೦. ಎಲೈ ಯುಧಿಷ್ಠಿರನೇ, ಪವಿತ್ರವಾದ ಪ್ರಯಾಗಕ್ಷೇತ್ರವಾಸವು ಮನುಜರಿಗೆ ಲಭಿಸುವುದು ಕಷ್ಟ. ದೇವತೆಗಳು, ದಾನವರು, ಗಂಧರ್ವರು, ಋಷಿಗಳು ಸಿದ್ಧರು, ಚಾರಣರು ಇವರೆಲ್ಲರೂ ಅಲ್ಲಿ ಸ್ನಾನಪಾನಾದಿಗಳನ್ನು ಮಾಡಿದ ಕಾರಣದಿಂದಲೇ ಸ್ವರ್ಗಸುಖವನ್ನು ಅನುಭವಿಸುತ್ತಿರುವರು.

## ಶ್ರೀಮತ್ಸ್ಯಮಹಾಪುರಾಣಂ

### ಅಧ್ಯಾಯದ ಸಾರಾಂಶ

ಪ್ರಯಾಗದ ಮಹಿಮೆಯನ್ನು ಬ್ರಹ್ಮನು ಋಷಿಗಳಿಗೆ ಹೇಳಿದನು.

ಅಲ್ಲಿ ಪ್ರಜಾಪತಿಕ್ಷೇತ್ರವೇ ಮೊದಲಾದ ಎಷ್ಟೋ ಪವಿತ್ರ ಸ್ಥಲಗಳಿವೆ. ಅವುಗಳನ್ನು ಸಕಲ ದೇವತೆಗಳೂ ರಕ್ಷಿಸುತ್ತಿರುವರು. ಗಂಗಾನದಿಯಲ್ಲೂ, ಯಮುನಾನದಿಯಲ್ಲೂ ಸ್ನಾನಮಾಡಿದರೆ ಸಕಲ ವಿಧವಾದ ಇಷ್ಟಾರ್ಥಗಳೂ ನೆರವೇರುವುವು. ಪ್ರಯಾಗ ಕ್ಷೇತ್ರವಾಸವು ಲಭಿಸಬೇಕಾದರೆ ಮನುಷ್ಯನಿಗೆ ಪುಣ್ಯವಿರಬೇಕು. ಅದರಿಂದ ಬರುವ ಫಲವನ್ನು ಅಷ್ಟಿಷ್ಟೆಂದು ಹೇಳಲು ಸಾಧ್ಯವಿಲ್ಲ.

ಶ್ರೀಮತ್ಸ್ಯಮಹಾಪುರಾಣದಲ್ಲಿ ಪ್ರಯಾಗ ಮಾಹಾತ್ಮ್ಯದೊಳಗೆ
ನೂರ ನಾಲ್ಕನೆಯ ಅಧ್ಯಾಯವು ಮುಗಿದುದು.



## ಅಥ ಪಂಚಾಧಿಕಶತತಮೋಽಧ್ಯಾಯಃ

॥ ಮಾರ್ಕಂಡೇಯ ಉವಾಚ ॥

ಶೃಣು ರಾಜನ್ ಪ್ರಯಾಗಸ್ಯ ಮಾಹಾತ್ಮ್ಯಂ ಪುನರೇವ ತು ।
ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥ ೧ ॥

ಆರ್ತಾನಾಂ ಹಿ ದರಿದ್ರಾಣಾಂ ನಿಶ್ಚಿತವ್ಯವಸಾಯಿನಾಂ ।
ಸ್ಥಾನಮುಕ್ತಂ ಪ್ರಯಾಗಂ ತು ನಾಖ್ಯೇಯಂ ತು ಕದಾಚನ ॥ ೨ ॥

ವ್ಯಾಧಿತೋ ಯದಿ ವಾ ದೀನೋ ವೃದ್ಧೋ ವಾಪಿ ಭವೇನ್ನರಃ ।
ಗಂಗಾಯಮುನಯೋರ್ಮಧ್ಯೇ ಯಸ್ತು ಪ್ರಾಣಾನ್ ಪರಿತ್ಯಜೇತ್ ॥ ೩ ॥

ದೀಪ್ತಕಾಂಚನವರ್ಣಾಭೈರ್ವಿಮಾನೈಃ ಸೂರ್ಯಸನ್ನಿಭೈಃ ।
ಗಂಧರ್ವಾಪ್ಸರಸಾಂ ಮಧ್ಯೇ ಸ್ವರ್ಗೇ ಕ್ರೀಡತಿ ಮಾನವಃ ॥ ೪ ॥

---

೧. ಮಾರ್ಕಂಡೇಯನು ಹೇಳಿದನು.—ಓ ರಾಜಾ, ಪ್ರಯಾಗದ ಮಹಿಮೆಯನ್ನು ಇನ್ನೂ ಹೇಳುವೆನು. ಇದನ್ನು ಕೇಳಿದರೆ ಸಕಲ ಪಾಪಗಳೂ ಪರಿಹಾರವಾಗುವುವು ; ಸಂಶಯವಿಲ್ಲ.

೨. ದುಃಖಿತರು, ದರಿದ್ರರು ಮತ್ತು ದೃಢಸಂಕಲ್ಪವುಳ್ಳವರು ಇವರಿಗೆ ದೇಹವನ್ನು ತೊರೆಯಲು ಪ್ರಯಾಗವೇ ತಕ್ಕ ಸ್ಥಳವೆಂದು ಹೇಳಿದೆ. ಆದರೆ ಈ ರಹಸ್ಯವನ್ನು ನಾಸ್ತಿಕನಿಗೆ ಮಾತ್ರ ಎಂದಿಗೂ ಹೇಳಬಾರದು.

೩-೪. ರೋಗಿಷ್ಠನೋ ಅನಾಥನೋ, ಮುದುಕನೋ ಆದ ಮನುಷ್ಯನು ಗಂಗಾಯಮುನಾ ನದಿಗಳ ಮಧ್ಯದಲ್ಲಿ ಪ್ರಾಣವನ್ನು ಬಿಟ್ಟರೆ ಅವನು ಸೂರ್ಯನಂತೆ ಪ್ರಕಾಶಿಸುವ ಸುವರ್ಣ ವಿಮಾನಗಳಲ್ಲಿ ಕುಳಿತು, ಗಂಧರ್ವರ ಮತ್ತು ಅಪ್ಸರಸ್ತ್ರೀಯರ ಸಂಗಡ ಸ್ವರ್ಗದಲ್ಲಿ ಸುಖವನ್ನು ಅನುಭವಿಸುವನು. ತನ್ನ ಮನಸ್ಸಿನಲ್ಲಿ ಬಯಸಿದ ಕೋರಿಕೆಗಳೆಲ್ಲವನ್ನೂ ಪಡೆಯುವನು. ಮಹರ್ಷಿಗಳು ಹೀಗೆಂದು ಹೇಳಿದ್ದಾರೆ.

ಈಪ್ಸಿತಾನ್ ಲಭತೇ ಕಾಮಾನ್ ವದಂತಿ ಋಷಿಪುಂಗವಾಃ ।
ಸರ್ವರತ್ನಮಯೈರ್ದಿವ್ಯೈರ್ನಾನಾಧ್ವಜಸಮಾಕುಲೈಃ ।
ವರಾಂಗನಾಸಮಾಕೀರ್ಣೈರ್ಮೋದತೇ ಶುಭಲಕ್ಷಣೈಃ ॥ ೫ ॥

ಗೀತವಾದ್ಯವಿನಿರ್ಘೋಷೈಃ ಪ್ರಸುಪ್ತಃ ಪ್ರತಿಬುಧ್ಯತೇ ।
ಯಾವನ್ನ ಸ್ಮರತೇ ಜನ್ಮ ತಾವತ್ಸ್ವರ್ಗೇ ಮಹೀಯತೇ ॥ ೬ ॥

ತತಃ ಸ್ವರ್ಗಾತ್ಪರಿಭ್ರಷ್ಟಃ ಕ್ಷೀಣಕರ್ಮಾ ದಿವಶ್ಚ್ಯುತಃ ।
ಹಿರಣ್ಯರತ್ನಸಂಪೂರ್ಣೇ ಸಮೃದ್ಧೇ ಜಾಯತೇ ಕುಲೇ ।
ತದೇವ ಸ್ಮರತೇ ತೀರ್ಥಂ ಸ್ಮರಣಾತ್ತತ್ರ ಗಚ್ಛತಿ ॥ ೭ ॥

ದೇಶಸ್ಥೋ ಯದಿ ವಾಽರಣ್ಯೇ ವಿದೇಶಸ್ಥೋಽಥವಾ ಗೃಹೇ ।
ಪ್ರಯಾಗಂ ಸ್ಮರಮಾಣೋಽಪಿ ಯಸ್ತು ಪ್ರಾಣಾನ್ ಪರಿತ್ಯಜೇತ್ ।
ಬ್ರಹ್ಮಲೋಕಮವಾಪ್ನೋತಿ ವದಂತಿ ಋಷಿಪುಂಗವಾಃ ॥ ೮ ॥

---

೫. ಸಕಲರತ್ನಗಳಿಂದಲೂ ತುಂಬಿದ, ಬಗೆಬಗೆಯ ಧ್ವಜಗಳಿಂದ ಅಲಂಕೃತವಾದ, ದಿವ್ಯಾಂಗನೆಯರಿಂದ ಶೋಭಿಸುವ ಮಂಗಳಮಯವಾದ ದಿವ್ಯಮಂದಿರಗಳಲ್ಲಿ ಸುಖಪಡುತ್ತಾನೆ.

೬. ಸುಖವಾಗಿ ಮಲಗಿ, ಗೀತವಾದ್ಯಗಳ ಮೃದುನಾದದಿಂದ ಎಚ್ಚರಗೊಳ್ಳುವನು. ತನ್ನ ಪೂರ್ವಜನ್ಮದ ವೃತ್ತಾಂತವೆಲ್ಲ ಮರೆತುಹೋಗುವಷ್ಟು ಕಾಲ ಸ್ವರ್ಗಲೋಕದಲ್ಲಿ ಮನ್ನಣೆಯನ್ನು ಪಡೆಯುವನು.

೭. ಪುಣ್ಯವೆಲ್ಲ ತೀರಿದ ಬಳಿಕ ಸ್ವರ್ಗದಿಂದ ನೆಲಕ್ಕೆ ಜಾರಿ ಬೀಳುವನು. ಧನಕನಕರತ್ನಗಳಿಂದಲೂ, ಸುಖಭೋಗಗಳಿಂದಲೂ ತುಂಬಿದ ವಂಶದಲ್ಲಿ ಹುಟ್ಟುವನು. ಅದೇ ಪುಣ್ಯತೀರ್ಥವನ್ನು ಮತ್ತೆ ಸ್ಮರಿಸಿಕೊಂಡು ಅಲ್ಲಿಗೆ ಹೋಗುವನು.

೮. ದೇಶದಲ್ಲಿರಲಿ ; ಕಾಡಿನಲ್ಲಿರಲಿ ; ಪರದೇಶದಲ್ಲಿರಲಿ ; ಇಲ್ಲವೇ ಮನೆಯಲ್ಲಿರಲಿ ; ಪ್ರಯಾಗಕ್ಷೇತ್ರವನ್ನು ಸ್ಮರಿಸುತ್ತ ಯಾವನು ಪ್ರಾಣಬಿಡುವನೋ ಅವನು ಬ್ರಹ್ಮಲೋಕವನ್ನು ಸೇರುವನೆಂದು ಋಷಿವರ್ಯರು ಹೇಳುತ್ತಾರೆ.

**ಸರ್ವಕಾಮಫಲಾ ವೃಕ್ಷಾ ಮಹೀ ಯತ್ರ ಹಿರಣ್ಮಯೀ ।**
**ಋಷಯೋ ಮುನಯಃ ಸಿದ್ಧಾಸ್ತತ್ರ ಲೋಕೇ ಸ ಗಚ್ಛತಿ ॥ ೯ ॥**

**ಸ್ತ್ರೀಸಹಸ್ರಾವೃತೇ ರಮ್ಯೇ ಮಂದಾಕಿನ್ಯಾಸ್ತಟೇ ಶುಭೇ ।**
**ಮೋದತೇ ಋಷಿಭಿಃ ಸಾರ್ಧಂ ಸುಕೃತೇನೇಹ ಕರ್ಮಣಾ ॥೧೦॥**

**ಸಿದ್ಧಚಾರಣಗಂಧರ್ವೈಃ ಪೂಜ್ಯತೇ ದಿವಿ ದೈವತೈಃ ।**
**ತತಃ ಸ್ವರ್ಗಾತ್ಪರಿಭ್ರಷ್ಟೋ ಜಂಬೂದ್ವೀಪಪತಿರ್ಭವೇತ್ ॥೧೧॥**

**ತತಃ ಶುಭಾನಿ ಕರ್ಮಾಣಿ ಚಿಂತಯಾನಃ ಪುನಃ ಪುನಃ ।**
**ಗುಣವಾನ್ ವಿತ್ತಸಂಪನ್ನೋ ಭವತೀಹ ನ ಸಂಶಯಃ ॥೧೨॥**

**ಕರ್ಮಣಾ ಮನಸಾ ವಾಚಾ ಧರ್ಮಸತ್ಯಪ್ರತಿಷ್ಠಿತಃ ।**
**ಗಂಗಾಯಮುನಯೋರ್ಮಧ್ಯೇ ಯಸ್ತು ಗಾಂ ಸಂಪ್ರಯಚ್ಛತಿ ॥೧೩॥**

---

೯. ಅವನು ದಿವ್ಯಲೋಕಕ್ಕೆ ಹೋಗುವನು. ಅಲ್ಲಿ ಮರಗಳು ಬೇಡಿದ ಕೋರಿಕೆಗಳನ್ನೆಲ್ಲ ಸಲ್ಲಿಸುವುವು. ನೆಲವು ಸುವರ್ಣಮಯವಾಗಿರುವುದು. ಋಷಿಗಳು, ಮುನಿಗಳು, ಸಿದ್ಧರು ಮುಂತಾದ ಮಹಾಮಹಿಮರು ನೆಲೆಸಿರುವರು.

೧೦. ತನ್ನ ಪುಣ್ಯಕರ್ಮವಶದಿಂದ ಅವನು ಸಾವಿರಾರು ಜನ ಸ್ತ್ರೀಯರೊಡಗೂಡಿ ರಮಿಸುವನು. ದೇವಗಂಗಾ ನದಿಯ ತೀರದಲ್ಲಿ ಋಷಿಗಳೊಡನೆ ಆನಂದವಾಗಿ ಕಾಲಕಳೆಯುವನು.

೧೧. ಸಿದ್ಧರು, ಚಾರಣರು, ಗಂಧರ್ವರು, ದೇವತೆಗಳು ಇವರಿಂದ ಪೂಜೆಯನ್ನು ಕೈಗೊಳ್ಳುತ್ತ ಸ್ವರ್ಗದಲ್ಲಿ ವಾಸಿಸುವನು. ಬಳಿಕ ಸ್ವರ್ಗದಿಂದಿಳಿದು ಜಂಬೂದ್ವೀಪದ ಅಧಿಪತಿಯಾಗಿ ಜನಿಸುವನು.

೧೨. ಅನಂತರ ಈ ಲೋಕದಲ್ಲಿ ಅಡಿಗಡಿಗೆ ಶುಭಕರ್ಮಗಳ ಚಿಂತೆಯಲ್ಲೇ ಇರುತ್ತ ಗುಣವಂತನೂ ಧನವಂತನೂ ಆಗುವನು. ಸಂದೇಹವಿಲ್ಲ.

೧೩-೧೪. ಕೆಲಸದಲ್ಲಿ, ಮನಸ್ಸಿನಲ್ಲಿ ಮತ್ತು ಮಾತಿನಲ್ಲಿ ಸತ್ಯವನ್ನೂ ಧರ್ಮವನ್ನೂ ಬಿಡದೆ ಅನುಸರಿಸುತ್ತ, ಗಂಗಾ ಯಮುನಾ ನದಿಗಳ ಸಂಗಮದಲ್ಲಿ ಹಸು, ಚಿನ್ನ, ರತ್ನ, ಮುತ್ತು ಅಥವಾ ತಾನು ಇತರರಿಂದ ದಾನವಾಗಿ ತೆಗೆದುಕೊಂಡಿರುವ

ಸುವರ್ಣಮಣಿಮುಕ್ತಾಶ್ಚ ಯದಿ ವಾಽನ್ಯಪರಿಗ್ರಹಂ ।
ಸ್ವಕಾರ್ಯೇ ಪಿತೃಕಾರ್ಯೇ ವಾ ದೇವತಾಭ್ಯರ್ಚನೇಽಪಿ ವಾ ।
ಸಫಲಂ ತಸ್ಯ ತತ್ತೀರ್ಥಂ ಯಥಾವತ್ಪುಣ್ಯಮಾಪ್ನುಯಾತ್ ॥೧೪॥

ಏವಂ ತೀರ್ಥೇ ನ ಗೃಹ್ಣೀಯಾತ್ಪುಣ್ಯೇಷ್ವಾಯತನೇಷು ಚ ।
ನಿಮಿತ್ತೇಷು ಚ ಸರ್ವೇಷು ಹ್ಯಪ್ರಮತ್ತೋ ಭವೇದ್ದ್ವಿಜಃ ॥೧೫॥

ಕಪಿಲಾಂ ಪಾಟಲಾವರ್ಣಾಂ ಯಸ್ತು ಧೇನುಂ ಪ್ರಯಚ್ಛತಿ ।
ಸ್ವರ್ಣಶೃಂಗೀಂ ರೌಪ್ಯಖುರಾಂ ಕಾಂಸ್ಯದೋಹಾಂ ಪಯಸ್ವಿನೀಂ ॥೧೬॥

ಪ್ರಯಾಗೇ ಶ್ರೋತ್ರಿಯಂ ಸಂತಂ ಗ್ರಾಹಯಿತ್ವಾ ಯಥಾವಿಧಿ ।
ಶುಕ್ಲಾಂಬರಧರಂ ಶಾಂತಂ ಧರ್ಮಜ್ಞಂ ವೇದಪಾರಗಂ ॥೧೭॥

ಸಾ ಗೌಸ್ತಸ್ಮೈ ಪ್ರದಾತವ್ಯಾ ಗಂಗಾಯಮುನಸಂಗಮೇ ।
ವಾಸಾಂಸಿ ಚ ಮಹಾರ್ಹಾಣಿ ರತ್ನಾನಿ ವಿವಿಧಾನಿ ಚ ॥೧೮॥

---

ಯಾವುದಾದರೂ ವಸ್ತು ಇವುಗಳನ್ನು ವಿವಾಹಾದಿ ಸಮಯದಲ್ಲಾಗಲಿ, ಪಿತೃಕಾರ್ಯ ಅಥವಾ ದೇವತಾಕಾರ್ಯಗಳಲ್ಲಾಗಲಿ ದಾನಮಾಡಿದರೆ ತೀರ್ಥಯಾತ್ರೆಯು ಸಫಲವಾಗುವುದು. ಮತ್ತು ಪರಿಪೂರ್ಣವಾದ ಪುಣ್ಯಫಲವು ಲಭಿಸುವುದು.

೧೫. ಪುಣ್ಯತೀರ್ಥದಲ್ಲಿಯೂ, ಪುಣ್ಯಸ್ಥಲಗಳಲ್ಲಿಯೂ ದಾನವನ್ನು ತೆಗೆದುಕೊಳ್ಳಬಾರದು. ಯಾವ ನಿಮಿತ್ತವಾಗಿಯೇ ಆಗಲಿ ಬ್ರಾಹ್ಮಣನು ದಾನಕ್ಕೆ ಕೈನೀಡುವಾಗ ಎಚ್ಚರಿಕೆಯಿಂದಿರಬೇಕು.

೧೬-೧೮. ಕೊಂಬುಗಳನ್ನು ಚಿನ್ನದಿಂದಲೂ, ಗೊರಸುಗಳನ್ನು ಬೆಳ್ಳಿಯಿಂದಲೂ ಅಲಂಕರಿಸಿ, ವಿಶೇಷವಾಗಿ ಹಾಲನ್ನು ಕೊಡುವ, ಕಪಿಲವರ್ಣದ ಹಸುವನ್ನು ಪ್ರಯಾಗಕ್ಷೇತ್ರದ ಗಂಗಾಯಮುನಾ ಸಂಗಮದಲ್ಲಿ ದಾನಮಾಡಬೇಕು. ಅದನ್ನು ತೆಗೆದುಕೊಳ್ಳುವವನು ಶುಭ್ರವಸ್ತ್ರಧಾರಿಯೂ, ಶಾಂತನೂ, ಧರ್ಮಜ್ಞನೂ, ವೇದಪಾರಂಗತನೂ, ಸತ್ಪುರುಷನೂ ಆದ ಶ್ರೋತ್ರಿಯನಾಗಿರಬೇಕು. ಆ ಹಸುವಿನ ಜೊತೆಯಲ್ಲಿ ಉತ್ತಮವಾದ ಪಂಚೆಗಳನ್ನೂ, ಬಗೆಬಗೆಯ ರತ್ನಗಳನ್ನೂ ಕೊಡಬೇಕು.

ಯಾವದ್ರೋಮಾಣಿ ತಸ್ಯಾ ಗೋಃ ಸಂತಿ ಗಾತ್ರೇಷು ಸತ್ತಮ ।
ತಾವದ್ವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ೧೯

ಯತ್ರಾಽಸೌ ಲಭತೇ ಜನ್ಮ ಸಾ ಗೌಸ್ತಸ್ಯಾಭಿಜಾಯತೇ ।
ನ ಚ ಪಶ್ಯತಿ ತಂ ಘೋರಂ ನರಕಂ ತೇನ ಕರ್ಮಣಾ ।
ಉತ್ತರಾನ್ ಸ ಕುರೂನ್ ಪ್ರಾಪ್ಯ ಮೋದತೇ ಕಾಲಮಕ್ಷಯಂ ೨೦

ಗವಾಂ ಶತಸಹಸ್ರೇಭ್ಯೋ ದದ್ಯಾದೇಕಾಂ ಪಯಸ್ವಿನೀಂ ।
ಪುತ್ರಾನ್ ದಾರಾಂಸ್ತಥಾ ಭೃತ್ಯಾನ್ ಗೌರೇಕಾ ಪ್ರತಿ ತಾರಯೇತ್ ೨೧

ತಸ್ಮಾತ್ಸರ್ವೇಷು ದಾನೇಷು ಗೋದಾನಂ ತು ವಿಶಿಷ್ಯತೇ ।
ದುರ್ಗಮೇ ವಿಷಮೇ ಘೋರೇ ಮಹಾಪಾತಕಸಂಭವೇ ।
ಗೌರೇವ ರಕ್ಷಾಂ ಕುರುತೇ ತಸ್ಮಾದ್ದೇಯಾ ದ್ವಿಜೋತ್ತಮೇ ॥೨೨॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಪ್ರಯಾಗಮಾಹಾತ್ಮ್ಯೇ
ಪಂಚಾಧಿಕಶತತಮೋಽಧ್ಯಾಯಃ

---

೧೯. ಓ ರಾಜೋತ್ತಮಾ, ಆ ಹಸುವಿನ ಅವಯವಗಳಲ್ಲಿ ಎಷ್ಟು ಕೂದಲುಗಳು ಇರುವುವೋ ಅಷ್ಟು ಸಾವಿರ ವರ್ಷಗಳ ಕಾಲ ಅವನು ಸ್ವರ್ಗಲೋಕದಲ್ಲಿ ಗೌರವದಿಂದ ವಾಸಿಸುತ್ತಾನೆ.

೨೦. ಇವನು ಜನ್ಮವನ್ನೆತ್ತುವ ಸ್ಥಳದಲ್ಲಿಯೇ ಆ ಹಸುವೂ ಕೂಡ ಇವನದಾಗಿ ಹುಟ್ಟುವುದು. ತನ್ನ ಸುಕೃತದ ಬಲದಿಂದ ಇವನು ಅತಿಭಯಂಕರವಾದ ನರಕವನ್ನು ಕಣ್ಣೆತ್ತಿ ಕೂಡ ನೋಡುವುದಿಲ್ಲ. ಉತ್ತರಕುರುದೇಶದ ಆಧಿಪತ್ಯವನ್ನು ಪಡೆದು ಅನಂತಕಾಲ ಸುಖದಿಂದಿರುವನು.

೨೧. ಸಾಮಾನ್ಯವಾದ ಹಸುಗಳನ್ನು ಒಂದು ಲಕ್ಷ ಕೊಡುವುದಕ್ಕಿಂತಲೂ ಚೆನ್ನಾಗಿ ಹಾಲುಕೊಡುವ ಒಂದು ಹಸುವನ್ನು ಕೊಡುವುದು ಮೇಲು. ಮಕ್ಕಳು, ಹೆಂಡತಿ, ಆಳುಗಳು ಇವರೆಲ್ಲರನ್ನೂ ಆ ಒಂದೇ ಹಸುವು ಸದ್ಗತಿಗೊಯ್ಯುವುದು.

೨೨. ಆದುದರಿಂದ ದಾನಗಳಲ್ಲೆಲ್ಲ ಗೋದಾನವು ಪ್ರಶಸ್ತವಾದುದು. ಅಡ್ಡಿ, ಭಯಂಕರವಾದ ಪಾಪ ಇವು ಒದಗಿದಾಗ ಕಾಪಾಡತಕ್ಕುದೆಂದರೆ ಹಸುವೊಂದೆ. ಆದಕಾರಣ ಯೋಗ್ಯನಾದ ಬ್ರಾಹ್ಮಣನಿಗೆ ಅದನ್ನು ಕೊಡಬೇಕು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿಯೂ ಸಹ ಪ್ರಯಾಗದ ಮಹಿಮೆಯನ್ನೇ ವರ್ಣಿಸಿದೆ.

ಗಂಗಾಯಮುನಾನದಿಗಳ ಸಂಗಮದಲ್ಲಿ ಪ್ರಾಣವನ್ನು ಬಿಟ್ಟವನಿಗೆ ಸ್ವರ್ಗ ಭೋಗವು ಲಭಿಸುವುದು. ಪುಣ್ಯಫಲವು ತೀರಿದ ಮೇಲೆ ಆತನು ಭೂಪತಿಯಾಗಿ ಜನಿಸುವನು. ಈ ಕ್ಷೇತ್ರದಲ್ಲಿ ಗೋದಾನವನ್ನು ಮಾಡಿದರೆ ಅಕ್ಷಯವಾದ ಫಲವು ಪ್ರಾಪ್ತವಾಗುತ್ತದೆ. ಎಲ್ಲ ಬಗೆಯ ಕಷ್ಟಗಳಿಂದಲೂ ಪಾರುಮಾಡುವ ಮಹಿಮೆಯು ಹಸುವಿಗುಂಟು. ಆದರೆ ಯೋಗ್ಯನಾದವನನ್ನು ನೋಡಿ ಅದನ್ನು ಕೊಡಬೇಕು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಪ್ರಯಾಗಮಾಹಾತ್ಮ್ಯದೊಳಗೆ
ನೂರೈದನೆಯ ಅಧ್ಯಾಯವು ಮುಗಿದುದು.



## ಅಥ ಷಡಧಿಕಶತತಮೋಽಧ್ಯಾಯಃ

॥ಯುಧಿಷ್ಠಿರ ಉವಾಚ ॥

ಯಥಾ ಯಥಾ ಪ್ರಯಾಗಸ್ಯ ಮಾಹಾತ್ಮ್ಯಂ ಕಥ್ಯತೇ ತ್ವಯಾ ।
ತಥಾ ತಥಾ ಪ್ರಮುಚ್ಯೇಽಹಂ ಸರ್ವಪಾಪೈರ್ನ ಸಂಶಯಃ ॥ ೧ ॥

ಭಗವನ್ ಕೇನ ವಿಧಿನಾ ಗಂತವ್ಯಂ ಧರ್ಮನಿಶ್ಚಯೈಃ ।
ಪ್ರಯಾಗೇ ಯೋ ವಿಧಿಃ ಪ್ರೋಕ್ತಸ್ತನ್ಮೇ ಬ್ರೂಹಿ ಮಹಾಮುನೇ ॥ ೨ ॥

॥ ಮಾರ್ಕಂಡೇಯ ಉವಾಚ ॥

ಕಥಯಿಷ್ಯಾಮಿ ತೇ ರಾಜಂಸ್ತೀರ್ಥಯಾತ್ರಾವಿಧಿಕ್ರಮಂ ।
ಆರ್ಷೇಣ ವಿಧಿನಾಽನೇನ ಯಥಾದೃಷ್ಟಂ ಯಥಾಶ್ರುತಂ ॥ ೩ ॥

ಪ್ರಯಾಗತೀರ್ಥಯಾತ್ರಾರ್ಥೀ ಯಃ ಪ್ರಯಾತಿ ನರಃ ಕ್ವಚಿತ್ ।
ಬಲೀವರ್ದಸಮಾರೂಢಃ ಶೃಣು ತಸ್ಯಾಽಪಿ ಯತ್ಫಲಂ ॥ ೪ ॥

---

೧. ಧರ್ಮರಾಜನು ಹೇಳಿದನು.—ಓ ಮುನಿವರ್ಯ್ಯಾ, ನೀನು ಪ್ರಯಾಗ ಕ್ಷೇತ್ರದ ಮಾಹಾತ್ಮ್ಯವನ್ನು ವರ್ಣಿಸಿದ ಹಾಗೆಲ್ಲ ನನ್ನ ಪಾಪಗಳು ಪರಿಹಾರವಾಗುತ್ತಿವೆ. ಇದರಲ್ಲಿ ಸಂಶಯವಿಲ್ಲ.

೨. ಎಲೈ ಪೂಜ್ಯನೇ, ಧರ್ಮದಲ್ಲಿ ದೃಢಬುದ್ಧಿಯಿರತಕ್ಕವರು ಪ್ರಯಾಗಕ್ಕೆ ಹೋಗಬೇಕಾದ ವಿಧಾನವು ಹೇಗೆ? ಅಲ್ಲಿ ಆಚರಿಸಬೇಕಾದ ವಿಧಿಗಳಾವುವು? ಓ ಮಹಾಮುನೀ, ಅದೆಲ್ಲವನ್ನು ನನಗೆ ಹೇಳು.

೩. ಮಾರ್ಕಂಡೇಯನು ಹೇಳಿದನು.—ಓ ಧರ್ಮರಾಜಾ, ನಾನು ಕಂಡಂತೆ, ಕೇಳಿರುವಂತೆ ಋಷಿಗಳು ಹೇಳಿರುವ ವಿಧಾನವನ್ನು ಅನುಸರಿಸಿ ತೀರ್ಥಯಾತ್ರೆಯ ವಿಧಿಯನ್ನು ನಿನಗೆ ತಿಳಿಸುವೆನು.

೪. ವಾಹನಾರೂಢನಾಗಿ ತೀರ್ಥಯಾತ್ರೆಯನ್ನು ಮಾಡಬಾರದು. ಪ್ರಯಾಗ ಕ್ಷೇತ್ರಕ್ಕೆ ಹೋಗಿ ಬರಬೇಕೆಂಬ ಉದ್ದೇಶದಿಂದ ಯಾವನಾದರೂ ಮನುಜನು ಎತ್ತಿನ ಮೇಲೆ, ಅಥವಾ ಅದನ್ನು ಕಟ್ಟಿದ ಗಾಡಿಯ ಮೇಲೆ ಕುಳಿತನೆಂದರೆ ಅದರಿಂದ ಬರುವ ದೋಷವನ್ನು ಹೇಳುತ್ತೇನೆ ಕೇಳು.

**ನರಕೇ ವಸತೇ ಘೋರೇ ಗವಾಂ ಕ್ರೋಷ್ಟಾ ಹಿ ದಾರುಣೇ ।**
**ಸಲಿಲಂ ನ ಚ ಗೃಹ್ಣಂತಿ ಪಿತರಸ್ತಸ್ಯ ದೇಹಿನಃ ॥ ೫ ॥**

**ಯಸ್ತು ಪುತ್ರಾಂಸ್ತಥಾ ಬಾಲಾನ್ ಸ್ನಾಪಯೇತ್ಪಾಯಯೇತ್ತಥಾ ।**
**ಯಥಾತ್ಮನಾ ತಥಾ ಸರ್ವಂ ದಾನಂ ವಿಪ್ರೇಷು ದಾಪಯೇತ್ ॥ ೬ ॥**

**ಐಶ್ವರ್ಯಲೋಭಮೋಹಾದ್ವಾ ಗಚ್ಛೇದ್ಯಾನೇನ ಯೋ ನರಃ ।**
**ನಿಷ್ಫಲಂ ತಸ್ಯ ತತ್ಸರ್ವಂ ತಸ್ಮಾದ್ಯಾನಂ ವಿವರ್ಜಯೇತ್ ॥ ೭ ॥**

**ಗಂಗಾಯಮುನಯೋರ್ಮಧ್ಯೇ ಯಸ್ತು ಕನ್ಯಾಂ ಪ್ರಯಚ್ಛತಿ ।**
**ಆರ್ಷೇಣೈವ ವಿವಾಹೇನ ಯಥಾವಿಭವಸಂಭವಂ ॥ ೮ ॥**

**ಉತ್ತರಾನ್ ಸ ಕುರೂನ್ ಗತ್ವಾ ಮೋದತೇ ಕಾಲಮಕ್ಷಯಂ ।**
**ಪುತ್ರಾನ್ ದಾರಾಂಶ್ಚ ಲಭತೇ ಧಾರ್ಮಿಕಾನ್ ರೂಪಸಂಯುತಾನ್ ॥ ೯ ॥**

---

೫. ಎತ್ತುಗಳನ್ನೂ ಹಸುಗಳನ್ನೂ ಹಿಂಸಿಸುವಾತನು ಬಹು ಭಯಂಕರವಾದ ನರಕಕ್ಕೆ ಹೋಗುತ್ತಾನೆ. ಅವನ ಪಿತೃಗಳು ಅವನಿಂದ ತಿಲೋದಕವನ್ನೂ ಸಹ ಸ್ವೀಕರಿಸುವುದಿಲ್ಲ.

೬. ತನ್ನಂತೆಯೇ ತನ್ನ ಮಕ್ಕಳೂ, ಹುಡುಗರೂ ಗಂಗಾಯಮುನಾನದಿಗಳಲ್ಲಿ ಸ್ನಾನಮಾಡಿ ಅವುಗಳ ಪವಿತ್ರೋದಕವನ್ನು ಪಾನಮಾಡುವಂತೆ ಏರ್ಪಡಿಸಬೇಕು. ಅಷ್ಟೇ ಅಲ್ಲ; ಅವರ ಕೈಯಿಂದಲೂ ಬ್ರಾಹ್ಮಣರಿಗೆ ದಾನವನ್ನು ಕೊಡಿಸಬೇಕು.

೭. ಸಂಪತ್ತಿನ ಮದದಿಂದಲೋ, ಅಜ್ಞಾನದಿಂದಲೋ ತೀರ್ಥಯಾತ್ರೆಗೆ ವಾಹನದಲ್ಲಿ ಕುಳಿತು ಪ್ರಯಾಣಮಾಡುವವನ ಕರ್ಮಗಳೆಲ್ಲವೂ ನಿಷ್ಫಲವಾಗುವುವು. ಆದುದರಿಂದ ತೀರ್ಥಯಾತ್ರೆಗೆ ಯಾನವನ್ನೇರಿ ಹೋಗಬಾರದು.

೮. ಗಂಗಾ ಯಮುನೆಗಳ ಮಧ್ಯದೇಶವಾದ ಪ್ರಯಾಗ ಕ್ಷೇತ್ರದಲ್ಲಿ ಋಷಿಪ್ರೋಕ್ತವಾದ ವಿವಾಹ ವಿಧಿಯಿಂದ ತನ್ನ ಅನುಕೂಲತೆಗೆ ತಕ್ಕಂತೆ ಕನ್ಯಾದಾನ ಮಾಡುವಾತನು ಆ ಸತ್ಕರ್ಮದ ಮಹಿಮೆಯಿಂದ ನರಕದ ದರ್ಶನವನ್ನು ಸಹ ಎಂದಿಗೂ ಮಾಡನು.

೯. ಅವನು ಉತ್ತರ ಕುರುದೇಶಗಳಲ್ಲಿ ಅನಂತಕಾಲ ಸುಖದಿಂದಿರುವನು. ಧಾರ್ಮಿಕರೂ, ರೂಪವಂತರೂ ಆದ ಪತ್ನೀಪುತ್ರರನ್ನು ಪಡೆಯುವನು.

ತತ್ರ ದಾನಂ ಪ್ರಕರ್ತವ್ಯಂ ಯಥಾವಿಭವಸಂಭವಂ ।
ತೇನ ತೀರ್ಥಫಲಂ ಚೈವ ವರ್ಧತೇ ನಾತ್ರ ಸಂಶಯಃ ।
ಸ್ವರ್ಗೇ ತಿಷ್ಠತಿ ರಾಜೇಂದ್ರ ಯಾವದಾಭೂತಸಂಪ್ಲವಂ ॥೧೦॥

ವಟಮೂಲಂ ಸಮಾಸಾದ್ಯ ಯಸ್ತು ಪ್ರಾಣಾ ವಿಮುಂಚತಿ ।
ಸರ್ವಲೋಕಾನತಿಕ್ರಮ್ಯ ರುದ್ರಲೋಕಂ ಸ ಗಚ್ಛತಿ ॥೧೧॥

ತತ್ರ ತೇ ದ್ವಾದಶಾದಿತ್ಯಾಸ್ತಪಂತಿ ರುದ್ರಸಂಶ್ರಿತಾಃ ।
ನಿರ್ದಹಂತಿ ಜಗತ್ಸರ್ವಂ ವಟಮೂಲಂ ನ ದಹ್ಯತೇ ॥೧೨॥

ನಷ್ಟಚಂದ್ರಾರ್ಕಭುವನಂ ಯದಾ ಚೈಕಾರ್ಣವಂ ಜಗತ್ ।
ಸ್ಥೀಯತೇ ತತ್ರ ವೈ ವಿಷ್ಣುರ್ಯಜಮಾನಃ ಪುನಃ ಪುನಃ ॥೧೩॥

ದೇವದಾನವಗಂಧರ್ವಾ ಋಷಯಃ ಸಿದ್ಧಚಾರಣಾಃ ।
ಸದಾ ಸೇವಂತಿ ತತ್ತೀರ್ಥಂ ಗಂಗಾಯಮುನಸಂಗಮಂ ॥೧೪॥

---

೧೦. ಪ್ರಯಾಗದಲ್ಲಿ ತನ್ನ ದ್ರವ್ಯಾನುಕೂಲ್ಯಕ್ಕೆ ತಕ್ಕಂತೆ ಅವಶ್ಯವಾಗಿ ದಾನ ಮಾಡಬೇಕು. ಎಲೈ ರಾಜೇಂದ್ರಾ, ಆತನು ಮಹಾಪ್ರಳಯದ ವರೆಗೂ ಸ್ವರ್ಗದಲ್ಲಿ ವಾಸಿಸುವನು.

೧೧. ಅಲ್ಲಿರುವ ಅಕ್ಷಯವಟವೆಂಬ ಆಲದ ಮರದ ಕೆಳಗೆ ಮರಣಹೊಂದು ವಾತನು ಶುಭಲೋಕಗಳೆಲ್ಲವನ್ನೂ ಮೀರಿಸಿದ ರುದ್ರಲೋಕವನ್ನು ಸೇರುವನು.

೧೨. ಏಕಾದಶ ರುದ್ರ ಸಹಿತರಾಗಿ ದ್ವಾದಶಾದಿತ್ಯರು ಅಲ್ಲಿ ಜ್ವಲಿಸುತ್ತಿರುವರು. ಆದರೆ ಆ ವಟವೃಕ್ಷದ ಮೂಲವು ಮಾತ್ರ ಸುಡುವುದಿಲ್ಲ.

೧೩. ಸೂರ್ಯಚಂದ್ರರೂ, ಹದಿನಾಲ್ಕು ಲೋಕಗಳೂ ಅಳಿದು ಜಗತ್ತೆಲ್ಲವೂ ಪ್ರಳಯ ಸಾಗರದಲ್ಲಿ ಮುಳುಗಿದ್ದಾಗ, ಮಹಾವಿಷ್ಣುವು ಆ ಕ್ಷೇತ್ರದಲ್ಲಿ ಅಡಿಗಡಿಗೆ ಯಜ್ಞಗಳನ್ನು ಮಾಡುತ್ತ ನೆಲೆಸಿರುವನು.

೧೪. ದೇವತೆಗಳು, ದಾನವರು, ಗಂಧರ್ವರು, ಋಷಿಗಳು, ಸಿದ್ಧರು ಮತ್ತು ಚಾರಣರು ಗಂಗಾಯಮುನಾಸಂಗಮದ ಆ ಪುಣ್ಯತೀರ್ಥವನ್ನು ಯಾವಾಗಲೂ ಸೇವಿಸುತ್ತಿರುವರು.

**ತತೋ ಗಚ್ಛೇತ ರಾಜೇಂದ್ರ ಪ್ರಯಾಗಂ ಸಂಸ್ತುವಂಶ್ಚ ಯತ್ ।**
**ಯತ್ರ ಬ್ರಹ್ಮಾದಯೋ ದೇವಾ ಋಷಯಃ ಸಿದ್ಧಚಾರಣಾಃ ॥೧೫॥**

**ಲೋಕಪಾಲಾಶ್ಚ ಸಾಧ್ಯಾಶ್ಚ ಪಿತರೋ ಲೋಕಸಂಮತಾಃ ।**
**ಸನತ್ಕುಮಾರಪ್ರಮುಖಾಸ್ತಥೈವ ಪರಮರ್ಷಯಃ ॥೧೬॥**

**ಅಂಗಿರಃಪ್ರಮುಖಾಶ್ಚೈವ ತಥಾ ಬ್ರಹ್ಮರ್ಷಯಃ ಪರೇ ।**
**ತಥಾ ನಾಗಾಃ ಸುಪರ್ಣಾಶ್ಚ ಸಿದ್ಧಾಶ್ಚ ಖೇಚರಾಶ್ಚ ಯೇ ॥೧೭॥**

**ಸಾಗರಾಃ ಸರಿತಃ ಶೈಲಾ ನಾಗಾ ವಿದ್ಯಾಧರಾಶ್ಚ ಯೇ ।**
**ಹರಿಶ್ಚ ಭಗವಾನಾಸ್ತೇ ಪ್ರಜಾಪತಿಪುರಸ್ಸರಃ ॥೧೮॥**

**ಗಂಗಾಯಮುನಯೋರ್ಮಧ್ಯೇ ಪೃಥಿವ್ಯಾ ಜಘನಂ ಸ್ಮೃತಂ ।**
**ಪ್ರಯಾಗಂ ರಾಜಶಾರ್ದೂಲ ತ್ರಿಷು ಲೋಕೇಷು ವಿಶ್ರುತಂ ।**
**ತತಃ ಪುಣ್ಯತಮಂ ನಾಸ್ತಿ ತ್ರಿಷು ಲೋಕೇಷು ಭಾರತ ॥೧೯॥**

**ಶ್ರವಣಾತ್ತಸ್ಯ ತೀರ್ಥಸ್ಯ ನಾಮಸಂಕೀರ್ತನಾದಪಿ ।**
**ಮೃತ್ತಿಕಾಲಂಭನಾದ್ವಾಽಪಿ ನರಃ ಪಾಪಾತ್ಪ್ರಮುಚ್ಯತೇ ॥೨೦॥**

---

೧೫-೧೮. ಆದುದರಿಂದ, ಓ ಮಹಾರಾಜಾ, ಪ್ರಯಾಗಕ್ಷೇತ್ರವನ್ನು ಹೊಗಳುತ್ತ ಹೋಗಬೇಕು. ಏಕೆಂದರೆ ಬ್ರಹ್ಮಾದಿ ದೇವತೆಗಳು, ಋಷಿಗಳು, ಸಿದ್ಧರು, ಚಾರಣರು, ಲೋಕಪಾಲಕರು, ಸಾಧ್ಯರು, ಲೋಕಪೂಜ್ಯರಾದ ಪಿತೃದೇವತೆಗಳು, ಸನತ್ಕುಮಾರನೇ ಮೊದಲಾದ ಪರಮರ್ಷಿಗಳು, ಅಂಗಿರಸ ಮುಂತಾದ ಬ್ರಹ್ಮರ್ಷಿಗಳು, ನಾಗರು, ಗರುಡರು, ಸಿದ್ಧರು, ಖೇಚರರು, ಸಾಗರಗಳು, ನದಿಗಳು, ಬೆಟ್ಟಗಳು, ವಿದ್ಯಾಧರರು ಇವರೆಲ್ಲರೂ ಇಲ್ಲಿ ನೆಲೆಸಿರುವರು. ಪ್ರಜಾಪತಿಸಹಿತನಾಗಿ ಭಗವಾನ್ ವಿಷ್ಣುವು ಇಲ್ಲಿ ವಾಸಿಸುತ್ತಿರುವನು.

೧೯. ಗಂಗಾಯಮುನೆಗಳ ನಡುವೆ ಇರುವ ಪ್ರಯಾಗಕ್ಷೇತ್ರವು ಭೂದೇವಿಯ ಜಘನವೆನಿಸಿಕೊಂಡಿದೆ. ಎಲೈ ಭೂಪೋತ್ತಮನೇ, ಮೂರು ಲೋಕಗಳಲ್ಲಿಯೂ ಸುಪ್ರಸಿದ್ಧವಾದ ಕ್ಷೇತ್ರವಿದು. ಇದಕ್ಕಿಂತ ಪ್ರವಿತ್ರವಾದ ತೀರ್ಥವು ಬೇರೆ ಯಾವುದೂ ಇಲ್ಲ.

೨೦. ಆ ಪುಣ್ಯತೀರ್ಥದ ವೃತ್ತಾಂತವನ್ನು ಕೇಳಲಿ, ಅದರ ಹೆಸರನ್ನು ಹೇಳಲಿ, ಅಲ್ಲಿನ ಮೃತ್ತಿಕೆಯನ್ನು (ಮಣ್ಣನ್ನು) ಶರೀರದಲ್ಲಿ ಧಾರಣಮಾಡಲಿ ಮನುಜನು ಪಾಪದಿಂದ ಮುಕ್ತನಾಗುವನು.

ತತ್ರಾಭಿಷೇಕಂ ಯಃ ಕುರ್ಯಾತ್ಸಂಗಮೇ ಶಂಸಿತವ್ರತಃ ।
ತುಲ್ಯಂ ಫಲಮವಾಪ್ನೋತಿ ರಾಜಸೂಯಾಶ್ವಮೇಧಯೋಃ ॥೨೧॥

ನ ದೇವವಚನಾತ್ತಾತ ನ ಲೋಕವಚನಾತ್ತಥಾ ।
ಮತಿರುತ್ಕ್ರಮಣೀಯಾ ತೇ ಪ್ರಯಾಗಗಮನಂ ಪ್ರತಿ ॥೨೨॥

ದಶ ತೀರ್ಥಸಹಸ್ರಾಣಿ ಷಷ್ಟಿಕೋಟ್ಯಸ್ತಥಾ ಪರಾಃ ।
ತೇಷಾಂ ಸಾನ್ನಿಧ್ಯಮತ್ರೈವ ತತಸ್ತು ಕುರುನಂದನ ॥೨೩॥

ಯಾ ಗತಿರ್ಯೋಗಯುಕ್ತಸ್ಯ ಸತ್ಯಸ್ಥಸ್ಯ ಮನೀಷಿಣಃ ।
ಸಾ ಗತಿಸ್ತ್ಯಜತಃ ಪ್ರಾಣಾನ್ ಗಂಗಾಯಮುನಸಂಗಮೇ ॥೨೪॥

ನ ತೇ ಜೀವಂತಿ ಲೋಕೇಽಸ್ಮಿಂಸ್ತತ್ರ ತತ್ರ ಯುಧಿಷ್ಠಿರ ।
ಯೇ ಪ್ರಯಾಗಂ ನ ಸಂಪ್ರಾಪ್ತಾಸ್ತ್ರಿಷು ಲೋಕೇಷು ವಂಚಿತಾಃ ॥೨೫॥

---

೨೧. ಆ ಸಂಗಮದಲ್ಲಿ ಸ್ನಾನಮಾಡುವಾತನ ವ್ರತಗಳು ಶ್ಲಾಘ್ಯವಾಗುವುವು. ರಾಜಸೂಯ ಮತ್ತು ಅಶ್ವಮೇಧಯಾಗಗಳಿಗೆ ಸಮಾನವಾದ ಫಲವನ್ನು ಅವನು ಪಡೆಯುವನು.

೨೨. ಅಪ್ಪಾ, ದೇವತೆಗಳು ಬಂದು ಹೇಳಲಿ, ಅಥವಾ ಮನುಷ್ಯರು ಯಾರೇ ಹೇಳಲಿ ಪ್ರಯಾಗಯಾತ್ರೆಯನ್ನು ಮಾಡಬೇಕೆಂಬ ನಿನ್ನ ಮನಸ್ಸನ್ನು ವ್ಯತ್ಯಾಸ ಪಡಿಸಬೇಡ.

೨೩. ಕುರುವಂಶತಿಲಕನಾದ ಓ ಧರ್ಮರಾಜಾ, ಪ್ರಸಿದ್ಧವಾದ ಹತ್ತು ಸಾವಿರ ಪುಣ್ಯ ತೀರ್ಥಗಳೂ, ಇನ್ನೂ ಉಳಿದ ಅರವತ್ತು ಕೋಟಿ ಪವಿತ್ರಕ್ಷೇತ್ರಗಳೂ ಈ ಪ್ರಯಾಗದಲ್ಲಿ ತಮ್ಮ ಸಾನ್ನಿಧ್ಯವನ್ನು ಇರಿಸಿರುವುವು.

೨೪. ಯೋಗನಿರತನಾಗಿ ಸತ್ಯವ್ರತದಲ್ಲಿ ಅಚಲಬುದ್ಧಿಯಿಂದಿರುವ ಜ್ಞಾನಿಗೆ ಯಾವ ಸದ್ಗತಿಯು ದೊರಕುತ್ತದೆಯೋ, ಅದೇ ಗತಿಯು ಗಂಗಾಯಮುನಾಸಂಗಮದಲ್ಲಿ ದೇಹವನ್ನು ತೊರೆಯುವಾತನಿಗೆ ಲಭಿಸುವುದು.

೨೫. ಓ ಯುಧಿಷ್ಠಿರಾ, ಈ ಜಗತ್ತಿನಲ್ಲಿ ಪ್ರಯಾಗಯಾತ್ರೆಯನ್ನು ಯಾರು ಮಾಡುವುದಿಲ್ಲವೋ ಅವರು ಅಲ್ಲಿ ಇಲ್ಲಿ ಹೇಗೋ ಜೀವಿಸುತ್ತಿದ್ದರೂ, ನಿಜವಾಗಿ ಜೀವವಂತರೆಂದು ಪರಿಗಣಿತರಾಗುವುದಿಲ್ಲ. ಮೂರುಲೋಕದಲ್ಲಿಯೂ ಅವರಂತೆ ಮೋಸಹೋದವರು ಬೇರೆ ಯಾರೂ ಇಲ್ಲ.

ಏವಂ ದೃಷ್ಟ್ವಾ ತು ತತ್ತೀರ್ಥಂ ಪ್ರಯಾಗಂ ಪರಮಂ ಪದಂ ।
ಮುಚ್ಯತೇ ಸರ್ವಪಾಪೇಭ್ಯಃ ಶಶಾಂಕ ಇವ ರಾಹುಣಾ ॥೨೬॥

ಕಂಬಲಾಶ್ವತರೌ ನಾಗೌ ವಿಪುಲೇ ಯಮುನಾತಟೇ ।
ತತ್ರ ಸ್ನಾತ್ವಾ ಚ ಪೀತ್ವಾ ಚ ಸರ್ವಪಾಪೈಃ ಪ್ರಮುಚ್ಯತೇ ॥೨೭॥

ತತ್ರ ಗತ್ವಾ ಚ ಸಂಸ್ಥಾನಂ ಮಹಾದೇವಸ್ಯ ವಿಶ್ರುತಂ ।
ನರಸ್ತಾರಯತೇ ಸರ್ವಾನ್ ದಶ ಪೂರ್ವಾನ್ ದಶಾಪರಾನ್ ॥೨೮॥

ಕೃತ್ವಾಭಿಷೇಕಂ ತು ನರಃ ಸೋಽಶ್ವಮೇಧಫಲಂ ಲಭೇತ್ ।
ಸ್ವರ್ಗಲೋಕಮವಾಪ್ನೋತಿ ಯಾವದಾಭೂತಸಂಪ್ಲವಂ ॥೨೯॥

ಪೂರ್ವಪಾರ್ಶ್ವೇ ತು ಗಂಗಾಯಾಸ್ತ್ರಿಷು ಲೋಕೇಷು ಭಾರತ ।
ಕೂಪಂ ಚೈವ ತು ಸಾಮುದ್ರಂ ಪ್ರತಿಷ್ಠಾನಂ ಚ ವಿಶ್ರುತಂ ॥೩೦॥

---

೨೬. ಸದ್ಗತಿಯನ್ನು ಕೊಡುವ ಪ್ರಯಾಗತೀರ್ಥವನ್ನು ನೋಡಿದ ಮಾತ್ರದಿಂದಲೇ ಮನುಷ್ಯನು, ರಾಹುವಿನ ಬಾಯಿಯಿಂದ ಬಿಡುಗಡೆಹೊಂದಿದ ಚಂದ್ರನಂತೆ ಎಲ್ಲ ಪಾಪಗಳಿಂದಲೂ ಮುಕ್ತನಾಗುವನು.

೨೭. ವಿಸ್ತಾರವಾದ ಯಮುನಾತೀರದಲ್ಲಿ ಕಂಬಲ ಮತ್ತು ಅಶ್ವತರರೆಂಬ ನಾಗರು ವಾಸಮಾಡುತ್ತಾರೆ. ಅಲ್ಲಿ ಸ್ನಾನಮಾಡಿ ಆ ಪವಿತ್ರಜಲವನ್ನು ಪಾನ ಮಾಡಿದರೆ ಪಾಪವೊಂದೂ ಉಳಿಯುವದಿಲ್ಲ.

೨೮. ಅಲ್ಲಿ ಹೋಗಿ ಮಹಾದೇವನ ದಿವ್ಯಮೂರ್ತಿಯನ್ನು ದರ್ಶನಮಾಡಿದ ಮನುಜನು ತನ್ನ ಹಿಂದಿನ ಮತ್ತು ಮುಂದಿನ ಹತ್ತು ತಲೆಯ ವಂಶಜರನ್ನು ಉದ್ಧಾರಮಾಡುವನು.

೨೯. ಆ ತೀರ್ಥದಲ್ಲಿ ಸ್ನಾನಮಾಡಿದರೆ ಮಾನವನು ಅಶ್ವಮೇಧಯಾಗದ ಫಲವನ್ನು ಪಡೆಯುವನು; ಮಹಾಪ್ರಳಯದ ವರೆಗೆ ಸ್ವರ್ಗಲೋಕದಲ್ಲಿ ಸುಖವಾಗಿ ವಾಸಮಾಡುವನು.

೩೦. ಗಂಗಾನದಿಯ ಪೂರ್ವಭಾಗದಲ್ಲಾದರೋ, ಸಮುದ್ರಕೂಪ ಮತ್ತು ಪ್ರತಿಷ್ಠಾನಗಳೆಂಬ ಎರಡು ತೀರ್ಥಗಳಿವೆ. ಇವುಗಳ ಪ್ರಖ್ಯಾತಿಯು ಮೂರು ಲೋಕಗಳಲ್ಲಿಯೂ ವ್ಯಾಪಿಸಿದೆ.

ಬ್ರಹ್ಮಚಾರೀ ಜಿತಕ್ರೋಧಸ್ತ್ರಿರಾತ್ರಂ ಯದಿ ತಿಷ್ಠತಿ ।
ಸರ್ವಪಾಪವಿಶುದ್ಧಾತ್ಮಾ ಸೋಽಶ್ವಮೇಧಫಲಂ ಲಭೇತ್ ॥೩೧॥

ಉತ್ತರೇಣ ಪ್ರತಿಷ್ಠಾನಾದ್ಭಾಗೀರಥ್ಯಾಸ್ತು ಪೂರ್ವತಃ ।
ಹಂಸಪ್ರಪತನಂ ನಾಮ ತೀರ್ಥಂ ತ್ರೈಲೋಕ್ಯವಿಶ್ರುತಂ ॥೩೨॥

ಅಶ್ವಮೇಧಫಲಂ ತಸ್ಮಿನ್ ಸ್ನಾನಮಾತ್ರೇಣ ಭಾರತ ।
ಯಾವಚ್ಚಂದ್ರಶ್ಚ ಸೂರ್ಯಶ್ಚ ತಾವತ್ಸ್ವರ್ಗೇ ಮಹೀಯತೇ ॥೩೩॥

ಉರ್ವಶೀರಮಣೇ ಪುಣ್ಯೇ ವಿಪುಲೇ ಹಂಸಪಾಂಡುರೇ ।
ಪರಿತ್ಯಜತಿ ಯಃ ಪ್ರಾಣಾಞ್ಛೃಣು ತಸ್ಯಾಪಿ ಯತ್ಫಲಂ ॥೩೪॥

ಷಷ್ಟಿವರ್ಷಸಹಸ್ರಾಣಿ ಷಷ್ಟಿವರ್ಷಶತಾನಿ ಚ ।
ಸೇವ್ಯತೇ ಪಿತೃಭಿಃ ಸಾರ್ಧಂ ಸ್ವರ್ಗಲೋಕೇ ನರಾಧಿಪ ॥೩೫॥

---

೩೧. ಬ್ರಹ್ಮಚರ್ಯವ್ರತವನ್ನು ಅನುಸರಿಸುತ್ತ, ಕ್ರೋಧವನ್ನು ಗೆದ್ದು ಮೂರು ದಿನಗಳ ಕಾಲ ವಾಸಮಾಡಿದರೆ ಸಾಕು. ಮನುಷ್ಯನ ಪಾಪಗಳೆಲ್ಲವೂ ಪರಿಹಾರ ವಾಗುವುವು. ಅವನು ಪವಿತ್ರಾತ್ಮನಾಗುವನು; ಅಶ್ವಮೇಧದ ಫಲವನ್ನು ಪಡೆಯುವನು.

೩೨. ಪ್ರತಿಷ್ಠಾನ ತೀರ್ಥದ ಉತ್ತರಕ್ಕೆ ಗಂಗಾನದಿಯ ಪೂರ್ವದಿಕ್ಕಿನಲ್ಲಿ ಹಂಸಪ್ರಪತನವೆಂಬ ಪುಣ್ಯತೀರ್ಥವುಂಟು. ಅದು ಲೋಕತ್ರಯದಲ್ಲೂ ಪ್ರಸಿದ್ಧಿ ಯನ್ನು ಪಡೆದಿದೆ.

೩೩. ಅಲ್ಲಿ ಸ್ನಾನಮಾಡಿದ ಮಾತ್ರದಿಂದಲೇ ಅಶ್ವಮೇಧದ ಫಲವು ಬರುತ್ತದೆ. ಭರತವಂಶೋತ್ಪನ್ನನಾದ ಎಲೈ ಧರ್ಮರಾಜನೇ, ಚಂದ್ರಸೂರ್ಯರಿರುವ ವರೆಗೂ ಆತನು ಸ್ವರ್ಗಲೋಕದಲ್ಲಿ ಪೂಜಿತನಾಗುವನು.

೩೪. ಉರ್ವಶೀರಮಣವೆಂಬ ತೀರ್ಥವು ಹಂಸಗಳಿಂದ ಶುಭ್ರವಾಗಿ ಪ್ರಕಾಶಿಸುತ್ತ ವಿಸ್ತಾರವಾಗಿ ಕಂಗೊಳಿಸುತ್ತಿರುವುದು. ಅದರಲ್ಲಿ ಪ್ರಾಣವನ್ನು ಬಿಡುವವನಿಗೆ ಬರುವ ಫಲವನ್ನು ಹೇಳುತ್ತೇನೆ ಕೇಳು.

೩೫. ಓ ನರೇಂದ್ರಾ, ಅರವತ್ತು ಸಾವಿರದ ಆರು ನೂರು ವರ್ಷಗಳ ಕಾಲ ಆತನು ಸ್ವರ್ಗಲೋಕದಲ್ಲಿ ಸೇವೆಯನ್ನು ಕೈಗೊಳ್ಳುತ್ತ ಪಿತೃಗಳೊಡನೆ ಸುಖವಾಗಿ ಬಾಳುವನು.

**ಊರ್ವಶೀಂ ತು ಸದಾ ಪಶ್ಯೇತ್ಸ್ವರ್ಗಲೋಕೇ ನರೋತ್ತಮ ।**
**ಪೂಜ್ಯತೇ ಸತತಂ ಪುತ್ರ ಋಷಿಗಂಧರ್ವಕಿನ್ನರೈಃ ॥೩೬॥**

**ತತಃ ಸ್ವರ್ಗಾತ್ಪರಿಭ್ರಷ್ಟಃ ಕ್ಷೀಣಕರ್ಮಾ ದಿವಶ್ಚ್ಯುತಃ ।**
**ಊರ್ವಶೀಸದೃಶೀನಾಂ ತು ಕನ್ಯಾನಾಂ ಲಭತೇ ಶತಂ ॥೩೭॥**

**ಮಧ್ಯೇ ನಾರೀಸಹಸ್ರಾಣಾಂ ಬಹೂನಾಂ ಚ ಪತಿರ್ಭವೇತ್ ।**
**ದಶಗ್ರಾಮಸಹಸ್ರಾಣಾಂ ಭೋಕ್ತಾ ಭವತಿ ಭೂಮಿಪಃ ॥೩೮॥**

**ಕಾಂಚೀನೂಪುರಶಬ್ದೇನ ಸುಪ್ತೋಽಸೌ ಪ್ರತಿಬುಧ್ಯತೇ ।**
**ಭುಕ್ತ್ವಾ ತು ವಿಪುಲಾನ್ ಭೋಗಾಂಸ್ತತ್ತೀರ್ಥಂ ಭಜತೇ ಪುನಃ ॥೩೯॥**

**ಶುಕ್ಲಾಂಬರಧರೋ ನಿತ್ಯಂ ನಿಯತಃ ಸಂಯತೇಂದ್ರಿಯಃ ।**
**ಏಕಂ ಕಾಲಂ ತು ಭುಂಜಾನೋ ಮಾಸಂ ಭೂಮಿಪತಿರ್ಭವೇತ್ ॥೪೦॥**

---

೩೬. ರಾಜಾ, ಅವನು ಸ್ವರ್ಗದಲ್ಲಿ ಯಾವಾಗಲೂ ಊರ್ವಶಿಯನ್ನು ನೋಡುತ್ತಿರಬಹುದು. ವತ್ಸಾ, ಋಷಿಗಳು, ಗಂಧರ್ವರು, ಕಿನ್ನರರು ಇವರೆಲ್ಲ ಆತನನ್ನು ಎಡೆಬಿಡದೆ ಸೇವಿಸುತ್ತಿರುವರು.

೩೭. ಸುಕೃತದ ಫಲವೆಲ್ಲ ತೀರಿದ ಮೇಲೆ ಅವನು ಸ್ವರ್ಗದಿಂದ ಭೂಲೋಕಕ್ಕೆ ಇಳಿಯುವನು. ಊರ್ವಶಿಯಂತೆ ರೂಪವತಿಯರಾದ ನೂರಾರು ಕನ್ನೆಯರನ್ನು ಪಡೆಯುವನು.

೩೮. ಆತನು ಸಾವಿರಾರು ಜನ ಸುಂದರಿಯರನ್ನು ಮದುವೆಯಾಗಿ ಅವರ ನಡುವೆ ಕಂಗೊಳಿಸುವನು; ಹತ್ತು ಸಾವಿರ ಗ್ರಾಮಗಳಿಂದ ಕೂಡಿದ ದೇಶಕ್ಕೆ ಅರಸನಾಗುವನು.

೩೯. ಸುಖವಾಗಿ ನಿದ್ರಿಸುತ್ತ ರಮಣಿಯರ ಡಾಬುಗಳ ಮತ್ತು ಕಾಲಂದಿಗೆಗಳ ಮಧುರನಾದದಿಂದ ಅವನು ಎಚ್ಚರಗೊಳ್ಳುವನು. ಬಗೆಬಗೆಯ ಸುಖಗಳನ್ನು ಅನುಭವಿಸಿ ಮರಳಿ ಆ ಪ್ರಯಾಗತೀರ್ಥಕ್ಕೆ ಹೋಗುವನು.

೪೦. ನಿತ್ಯವೂ ಶುಭ್ರವಸ್ತ್ರವನ್ನು ಧರಿಸಿ, ನಿಯಮವಂತನಾಗಿ, ಇಂದ್ರಿಯಗಳನ್ನು ವಶದಲ್ಲಿರಿಸಿಕೊಂಡು, ಒಂದೇ ಹೊತ್ತು ಊಟಮಾಡುತ್ತ ಒಂದು ತಿಂಗಳು ತೀರ್ಥವಾಸವನ್ನು ಮಾಡಿದರೆ ರಾಜನಾಗುವನು.

ಸುವರ್ಣಾಲಂಕೃತಾನಾಂ ತು ನಾರೀಣಾಂ ಲಭತೇ ಶತಂ ।
ಪೃಥಿವ್ಯಾಮಾಸಮುದ್ರಾಯಾಂ ಮಹಾಭೂಮಿಪತಿರ್ಭವೇತ್ ॥೪೧॥

ಧನಧಾನ್ಯಸಮಾಯುಕ್ತೋ ದಾತಾ ಭವತಿ ನಿತ್ಯಶಃ ।
ಭುಕ್ತ್ವಾ ತು ವಿಪುಲಾನ್ ಭೋಗಾಂಸ್ತತ್ತೀರ್ಥಂ ಲಭತೇ ಪುನಃ ॥೪೨॥

ಅಥ ಸಂಧ್ಯಾವಟೇ ರಮ್ಯೇ ಬ್ರಹ್ಮಚಾರೀ ಜಿತೇಂದ್ರಿಯಃ ।
ಉಪವಾಸೀ ಶುಚಿಃ ಸಂಧ್ಯಾಂ ಬ್ರಹ್ಮಲೋಕಮವಾಪ್ನುಯಾತ್ ॥೪೩॥

ಕೋಟಿತೀರ್ಥಂ ಸಮಾಸಾದ್ಯ ಯಸ್ತು ಪ್ರಾಣಾನ್ ಪರಿತ್ಯಜೇತ್ ।
ಕೋಟಿವರ್ಷಸಹಸ್ರಾಣಾಂ ಸ್ವರ್ಗಲೋಕೇ ಮಹೀಯತೇ ॥೪೪॥

ತತಃ ಸ್ವರ್ಗಾತ್ಪರಿಭ್ರಷ್ಟಃ ಕ್ಷೀಣಕರ್ಮಾ ದಿವಶ್ಚ್ಯುತಃ ।
ಸುವರ್ಣಮಣಿಮುಕ್ತಾಢ್ಯಕುಲೇ ಜಾಯೇತ ರೂಪವಾನ್ ॥೪೫॥

---

೪೧. ಬಂಗಾರದ ಒಡವೆಗಳನ್ನು ತೊಟ್ಟುಕೊಂಡಿರುವ ನೂರಾರು ಜನ ತರುಣಿಯರು ಆತನನ್ನು ವರಿಸುವರು. ಸಮುದ್ರದ ವರೆಗೆ ವ್ಯಾಪಿಸಿರುವ ಭೂಮಿಗೆಲ್ಲ ಅವನು ಚಕ್ರವರ್ತಿಯಾಗುವನು.

೪೨. ಧನಧಾನ್ಯಗಳಿಂದ ಪೂರ್ಣನಾಗಿ ನಿತ್ಯವೂ ದಾನಿಯೆಂದು ಪ್ರಖ್ಯಾತನಾಗುವನು. ಬೇಕುಬೇಕಾದ ಸುಖಗಳನ್ನನುಭವಿಸಿ ಮತ್ತೆ ಆ ತೀರ್ಥಕ್ಕೆ ಯಾತ್ರೆ ಹೋಗುವನು.

೪೩. ಬ್ರಹ್ಮಚಾರಿಯೂ ಜಿತೇಂದ್ರಿಯನೂ ಆಗಿ, ಉಪವಾಸವ್ರತದಿಂದ ನಿರ್ಮಲನಾಗಿ, ರಮಣೀಯವಾದ ಸಂಧ್ಯಾವಟವೆಂಬ ತೀರ್ಥದಲ್ಲಿ ಸಂಧ್ಯಾಪೂಜೆಯನ್ನು ನಡೆಸುವಾತನು ಬ್ರಹ್ಮಲೋಕವನ್ನೈದುವನು.

೪೪. ಕೋಟಿತೀರ್ಥದಲ್ಲಿ ಪ್ರಾಣವನ್ನು ಬಿಡುವಾತನು ಸಹಸ್ರಕೋಟಿ ವರ್ಷಗಳ ಕಾಲ ಸ್ವರ್ಗಲೋಕದಲ್ಲಿ ಮನ್ನಣೆಯನ್ನು ಪಡೆಯುವನು.

೪೫. ಪುಣ್ಯಫಲವೆಲ್ಲ ಮುಗಿದ ಬಳಿಕ ಸ್ವರ್ಗದಿಂದ ನೆಲಕ್ಕಿಳಿದು ಬಂಗಾರ, ಮುತ್ತು ಮತ್ತು ರತ್ನಗಳಿಂದ ಸಮೃದ್ಧವಾದ ಕುಲದಲ್ಲಿ ರೂಪವಂತನಾಗಿ ಜನಿಸುವನು.

**ತತೋ ಭೋಗವತೀಂ ಗತ್ವಾ ವಾಸುಕೇರುತ್ತರೇಣ ತು ।**
**ದಶಾಶ್ವಮೇಧಕಂ ನಾಮ ತೀರ್ಥಂ ತತ್ರಾಪರಂ ಭವೇತ್ ॥೪೬॥**

**ಕೃತಾಭಿಷೇಕಸ್ತು ನರಃ ಸೋಽಶ್ವಮೇಧಫಲಂ ಲಭೇತ್ ।**
**ಧನಾಢ್ಯೋ ರೂಪವಾನ್ ದಕ್ಷೋ ದಾತಾ ಭವತಿ ಧಾರ್ಮಿಕಃ ॥೪೭॥**

**ಚತುರ್ವೇದೇಷು ಯತ್ಪುಣ್ಯಂ ಯತ್ಪುಣ್ಯಂ ಸತ್ಯವಾದಿಷು ।**
**ಅಹಿಂಸಾಯಾಂ ತು ಯೋ ಧರ್ಮೋ ಗಮನಾದೇವ ತತ್ಫಲಂ ॥೪೮॥**

**ಕುರುಕ್ಷೇತ್ರಸಮಾ ಗಂಗಾ ಯತ್ರ ಯತ್ರಾವಗಾಹ್ಯತೇ ।**
**ಕುರುಕ್ಷೇತ್ರಾದ್ದಶಗುಣಾ ಯತ್ರ ವಿಂಧ್ಯೇನ ಸಂಗತಾ ॥೪೯॥**

**ಯತ್ರ ಗಂಗಾ ಮಹಾಭಾಗಾ ಬಹುತೀರ್ಥಾ ತಪೋಧನಾ ।**
**ಸಿದ್ಧಕ್ಷೇತ್ರಂ ಹಿ ತಜ್ಜ್ಞೇಯಂ ನಾತ್ರ ಕಾರ್ಯಾ ವಿಚಾರಣಾ ॥೫೦॥**

---

೪೬. ಬಳಿಕ ವಾಸುಕಿಹ್ರದದ ಉತ್ತರದಲ್ಲಿ ಭೋಗವತಿಯೆಂಬ ತೀರ್ಥಕ್ಕೆ ಹೋಗಬೇಕು. ಅಲ್ಲಿ ದಶಾಶ್ವಮೇಧವೆಂಬ ಮತ್ತೊಂದು ಪುಣ್ಯತೀರ್ಥವುಂಟು.

೪೭. ಅಲ್ಲಿ ಸ್ನಾನಮಾಡಿದವನಿಗೆ ಅಶ್ವಮೇಧ ಯಾಗಮಾಡಿದಷ್ಟು ಪುಣ್ಯವು ಬರುವುದು. ಅವನು ಧನಾಢ್ಯನೂ, ರೂಪವಂತನೂ, ಸಮರ್ಥನೂ, ದಾನಿಯೂ, ಧಾರ್ಮಿಕನೂ ಆಗುವನು.

೪೮. ನಾಲ್ಕು ವೇದಗಳನ್ನು ಅಧ್ಯಯನಮಾಡಿದರೆ, ಸತ್ಯವನ್ನೇ ನುಡಿಯುತ್ತಿದ್ದರೆ, ಅಹಿಂಸಾವ್ರತವನ್ನು ಬಿಡದೆ ಅನುಸರಿಸಿದರೆ ಯಾವ ಪುಣ್ಯವು ಬರುತ್ತದೆಯೋ ಅದೇ ಪುಣ್ಯವು ಆ ತೀರ್ಥಕ್ಕೆ ಹೋದ ಮಾತ್ರದಿಂದಲೇ ಬರುವುದು.

೪೯. ಗಂಗಾನದಿಯು ಹರಿಯುವ ಪ್ರದೇಶವೆಲ್ಲ ಕುರುಕ್ಷೇತ್ರಕ್ಕೆ ಸಮವಾದುದು. ಆ ನದಿಯು ವಿಂಧ್ಯತೀರ್ಥದೊಡನೆ ಸೇರುವ ಸ್ಥಲವಂತೂ ಕುರುಕ್ಷೇತ್ರಕ್ಕೆ ಹತ್ತರಷ್ಟು ಪವಿತ್ರವಾಗಿರುವುದು.

೫೦. ಮಹಾಮಹಿಮೆಯಿಂದ ಕೂಡಿ, ಹಲವು ಪುಣ್ಯತೀರ್ಥಗಳನ್ನು ಒಳಗೊಂಡು, ತಪಸ್ವಿಜನರಿಗೆ ಪ್ರಿಯವಾಗಿರುವ ಗಂಗಾನದಿಯು ಎಲ್ಲಿ ಹರಿಯುವುದೋ ಅದೇ ಸಿದ್ಧಕ್ಷೇತ್ರವೆಂದರಿಯಬೇಕು.

ಕ್ಷಿತೌ ತಾರಯತೇ ಮರ್ತ್ಯಾನ್ನಾಗಾಂಸ್ತಾರಯತೇಽಪ್ಯಧಃ ।
ದಿವಿ ತಾರಯತೇ ದೇವಾಂಸ್ತೇನ ತ್ರಿಪಥಗಾ ಸ್ಮೃತಾ ॥೫೧॥

ಯಾವದಸ್ಥೀನಿ ಗಂಗಾಯಾಂ ತಿಷ್ಠಂತಿ ಹಿ ಶರೀರಿಣಃ ।
ತಾವದ್ವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ॥೫೨॥

ತತಃ ಸ್ವರ್ಗಾತ್ಪರಿಭ್ರಷ್ಟೋ ಜಂಬೂದ್ವೀಪಪತಿರ್ಭವೇತ್ ।
ತೀರ್ಥಾನಾಂ ತು ಪರಂ ತೀರ್ಥಂ ನದೀನಾಂ ತು ಮಹಾನದೀ ।
ಮೋಕ್ಷದಾ ಸರ್ವಭೂತಾನಾಂ ಮಹಾಪಾತಕಿನಾಮಪಿ ॥೫೩॥

ಸರ್ವತ್ರ ಸುಲಭಾ ಗಂಗಾ ತ್ರಿಷು ಸ್ಥಾನೇಷು ದುರ್ಲಭಾ ।
ಗಂಗಾದ್ವಾರೇ ಪ್ರಯಾಗೇ ಚ ಗಂಗಾಸಾಗರಸಂಗಮೇ ।
ತತ್ರ ಸ್ನಾತ್ವಾ ದಿವಂ ಯಾಂತಿ ಯೇ ಮೃತಾಸ್ತೇಽಪುನರ್ಭವಾಃ ॥೫೪॥

---

೫೧. ಗಂಗಾನದಿಯು ಭೂಮಿಯಲ್ಲಿ ಮನುಷ್ಯರನ್ನೂ, ಪಾತಾಲದಲ್ಲಿ ಸರ್ಪಗಳನ್ನೂ, ಸ್ವರ್ಗದಲ್ಲಿ ದೇವತೆಗಳನ್ನೂ ಉದ್ಧರಿಸುತ್ತದೆ. ಆದುದರಿಂದ ಅದಕ್ಕೆ ತ್ರಿಪಥಗೆ ಎಂದರೆ ಮೂರು ಮಾರ್ಗದಲ್ಲಿ ಸಂಚರಿಸತಕ್ಕುದು ಎಂಬ ಹೆಸರು ಬಂದಿದೆ.

೫೨. ಮೃತಪಟ್ಟ ಮನುಷ್ಯನ ಮೂಳೆಗಳಲ್ಲಿ ಎಷ್ಟನ್ನು ಗಂಗಾನದಿಯಲ್ಲಿ ಹಾಕುತ್ತಾರೋ ಅಷ್ಟು ಸಾವಿರ ವರ್ಷಗಳ ಕಾಲ ಆತನು ಸ್ವರ್ಗಲೋಕದಲ್ಲಿ ವಾಸಿಸುತ್ತ ದೇವತೆಗಳಿಂದ ಮಾನ್ಯತೆಯನ್ನು ಪಡೆಯುವನು.

೫೩. ಬಳಿಕ ಸ್ವರ್ಗದಿಂದ ನೆಲಕ್ಕಿಳಿದು ಜಂಬೂದ್ವೀಪದ ರಾಜನಾಗಿ ಜನಿಸುವನು. ಹೀಗೆ ಗಂಗಾನದಿಯು ಪುಣ್ಯತೀರ್ಥಗಳಲ್ಲಿ ಉತ್ತಮವಾದುದು. ನದಿಗಳಲ್ಲಿ ಬಹು ಶ್ರೇಷ್ಠವಾದುದು. ತನ್ನನ್ನು ಆಶ್ರಯಿಸಿದ ಪ್ರಾಣಿಗಳು ಎಷ್ಟೇ ಘೋರವಾದ ಪಾಪಗಳನ್ನು ಮಾಡಿರಲಿ ಅವುಗಳಿಗೆ ಮೋಕ್ಷವನ್ನು ಕರುಣಿಸುವುದು.

೫೪. ಗಂಗಾನದಿಯ ಸ್ನಾನಪಾನಾದಿಗಳು ಎಲ್ಲೆಡೆಗಳಲ್ಲಿಯೂ ಅನಾಯಾಸವಾಗಿ ಲಭಿಸುವುವು; ಆದರೆ ಗಂಗಾದ್ವಾರ, ಪ್ರಯಾಗ ಮತ್ತು ಗಂಗಾಸಾಗರಸಂಗಮ ಎಂಬ ಮೂರು ಕಡೆಗಳಲ್ಲಿ ಮಾತ್ರ ಅವು ಬಹು ದುರ್ಲಭ. ಎಂದರೆ ವಿಶೇಷ ಪುಣ್ಯಶಾಲಿಗಳಿಗೆ ಮಾತ್ರ ಈ ಭಾಗ್ಯವುಂಟಾಗುತ್ತದೆ. ಇಲ್ಲಿ ಸ್ನಾನಮಾಡಿದರೆ ಸ್ವರ್ಗವೂ, ಮೃತಪಟ್ಟರೆ ಮೋಕ್ಷವೂ ಪ್ರಾಪ್ತವಾಗುವುವು.

**ಸರ್ವೇಷಾಮೇವ ಭೂತಾನಾಂ ಪಾಪೋಪಹತಚೇತಸಾಂ ।**
**ಗತಿಮನ್ವಿಷ್ಯಮಾಣಾನಾಂ ನಾಸ್ತಿ ಗಂಗಾಸಮಾ ಗತಿಃ ॥೫೫॥**

**ಪವಿತ್ರಾಣಾಂ ಪವಿತ್ರಂ ಚ ಮಂಗಲಾನಾಂ ಚ ಮಂಗಲಂ ।**
**ಮಹೇಶ್ವರಶಿರೋಭ್ರಷ್ಟಾ ಸರ್ವಪಾಪಹರಾ ಶುಭಾ ॥೫೬॥**

**ಕೃತೇ ತು ನೈಮಿಷಂ ಕ್ಷೇತ್ರಂ ತ್ರೇತಾಯಾಂ ಪುಷ್ಕರಂ ಪರಂ ।**
**ದ್ವಾಪರೇ ತು ಕುರುಕ್ಷೇತ್ರಂ ಕಲೌ ಗಂಗಾ ವಿಶಿಷ್ಯತೇ ॥೫೭॥**

**ಗಂಗಾಮೇವ ನಿಷೇವೇತ ಪ್ರಯಾಗಂ ತು ವಿಶೇಷತಃ ।**
**ನಾನ್ಯತ್ಕಲಿಯುಗೇ ಘೋರೇ ಭೇಷಜಂ ನೃಪ ವಿದ್ಯತೇ ॥೫೮॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಪ್ರಯಾಗಮಾಹಾತ್ಮ್ಯೇ**
**ಷಡಧಿಕಶತತಮೋಽಧ್ಯಾಯಃ**

---

೫೫. ದುಷ್ಕೃತ್ಯಗಳಿಂದ ಮನಸ್ಸು ಕೆಟ್ಟು ಹೋಗಿ, ದಿಕ್ಕು ತೋರದೆ ಕಾತರಿಸುತ್ತಿರುವ ಎಲ್ಲ ಪ್ರಾಣಿಗಳಿಗೂ ಸದ್ಗತಿಯನ್ನು ಕೊಡತಕ್ಕುದೆಂದರೆ ಗಂಗಾನದಿಯೊಂದೇ. ಇನ್ನಾವುದೂ ಇಲ್ಲ.

೫೬. ಪರಮೇಶ್ವರನ ಜಟಾಭಾರದಿಂದ ಇಳಿದು, ಭೂಮಿಯಲ್ಲಿ ಹರಿಯುತ್ತ, ಸಕಲ ಜಂತುಗಳ ಪಾಪಗಳನ್ನೂ ಕಳೆಯುವ ಗಂಗಾನದಿಯು ಪವಿತ್ರವೆನಿಸಿದ ವಸ್ತುಗಳೆಲ್ಲಕ್ಕಿಂತಲೂ ಪವಿತ್ರವಾಗಿದೆ. ಮಂಗಲವಾದುದೆಲ್ಲಕ್ಕಿಂತಲೂ ಮಂಗಲ ಕರವಾಗಿದೆ.

೫೭. ಕೃತಯುಗದಲ್ಲಿ ನೈಮಿಶಕ್ಷೇತ್ರವೂ, ತ್ರೇತಾಯುಗದಲ್ಲಿ ಪುಷ್ಕರ ಕ್ಷೇತ್ರವೂ, ದ್ವಾಪರಯುಗದಲ್ಲಿ ಕುರುಕ್ಷೇತ್ರವೂ ಪ್ರಸಿದ್ಧವಾದುವು. ಕಲಿಯುಗ ದಲ್ಲೋ ಎಂದರೆ ಗಂಗಾನದಿಯು ಅತ್ಯಂತ ಶ್ರೇಷ್ಠವೆನಿಸಿಕೊಂಡಿದೆ.

೫೮. ಗಂಗಾನದಿಯನ್ನೇ ಸೇವಿಸಬೇಕು. ಅದರಲ್ಲೂ ಪ್ರಯಾಗಕ್ಷೇತ್ರವನ್ನು ಅತಿಶಯವಾದ ಭಕ್ತಿಯಿಂದ ಕಾಣಬೇಕು. ಓ ರಾಜಾ, ಭಯಂಕರವಾದ ಈ ಕಲಿಯುಗದಲ್ಲಿ ಪಾಪಪರಿಹಾರಕ್ಕೆ ಬೇರೆ ಔಷಧವೇ ಇಲ್ಲ.

## ಅಧ್ಯಾಯ ೧೦೬

## **ಅಧ್ಯಾಯದ ಸಾರಾಂಶ**

ಈ ಅಧ್ಯಾಯವೂ ಸಹ ಪ್ರಯಾಗಕ್ಷೇತ್ರದ ಮಹಿಮೆಯನ್ನೇ ವರ್ಣಿಸುತ್ತದೆ.

ತೀರ್ಥಯಾತ್ರೆಗೆ ವಾಹನವನ್ನೇರಿ ಹೋಗಬಾರದು. ಪ್ರಯಾಗಕ್ಕೆ ಹೋದವನು ತನ್ನ ಕೈಯಲ್ಲಾದಷ್ಟು ದಾನಮಾಡಬೇಕು. ವಟಮೂಲ, ಸಮುದ್ರಕೂಪ, ಪ್ರತಿಷ್ಠಾನ, ಹಂಸಪ್ರಪತನ ಮುಂತಾದುವು ಪ್ರಸಿದ್ಧವಾದ ಬೇರೆ ಬೇರೆ ತೀರ್ಥಗಳು. ಅಲ್ಲಿ ಸ್ನಾನಪಾನಗಳನ್ನು ನಡೆಸುವುದರಿಂದ ಅನಂತಫಲವು ಪ್ರಾಪ್ತವಾಗುವುದು.

ಗಂಗಾ ಮತ್ತು ಯಮುನಾನದಿಗಳ ತೀರದಲ್ಲಿ ಇನ್ನೂ ಎಷ್ಟೋ ಪವಿತ್ರ ಸ್ಥಲಗಳಿವೆ. ಗಂಗಾನದಿಯು ತೀರ್ಥಗಳಲ್ಲೆಲ್ಲ ಶ್ರೇಷ್ಠವಾದುದು. ಈ ಕಲಿಯುಗದಲ್ಲಿ ಪಾಪಗಳನ್ನು ಪರಿಹರಿಸಿ ಸದ್ಗತಿಯನ್ನು ದೊರಕಿಸಬಲ್ಲ ಸಿದ್ಧೌಷಧವೆಂದರೆ ಗಂಗಾನದಿಯೊಂದೇ. ಬೇರೆ ಯಾವುದೂ ಇಲ್ಲ.

ಶ್ರೀಮತ್ಸ್ಯಮಹಾಪುರಾಣದಲ್ಲಿ ಪ್ರಯಾಗಮಾಹಾತ್ಮ್ಯದೊಳಗೆ
ನೂರಾರನೆಯ ಅಧ್ಯಾಯವು ಮುಗಿದುದು.



## ಅಥ ಸಪ್ತಾಧಿಕಶತತಮೋಽಧ್ಯಾಯಃ

॥ ಮಾರ್ಕಂಡೇಯ ಉವಾಚ ॥

ಶೃಣು ರಾಜನ್ ಪ್ರಯಾಗಸ್ಯ ಮಾಹಾತ್ಮ್ಯಂ ಪುನರೇವ ತು ।
ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥ ೧ ॥

ಮಾನಸಂ ನಾಮ ತತ್ತೀರ್ಥಂ ಗಂಗಾಯಾ ಉತ್ತರೇ ತಟೇ ।
ತ್ರಿರಾತ್ರೋಪೋಷಿತೋ ಭೂತ್ವಾ ಸರ್ವಕಾಮಾನವಾಪ್ನುಯಾತ್ ॥ ೨ ॥

ಗೋಭೂಹಿರಣ್ಯದಾನೇನ ಯತ್ಫಲಂ ಪ್ರಾಪ್ನುಯಾನ್ನರಃ ।
ಸ ತತ್ಫಲಮವಾಪ್ನೋತಿ ತತ್ತೀರ್ಥಂ ಸ್ಮರತೇ ಪುನಃ ॥ ೩ ॥

ಅಕಾಮೋ ವಾ ಸಕಾಮೋ ವಾ ಗಂಗಾಯಾಂ ಯೋ ವಿಪದ್ಯತೇ ।
ಮೃತಸ್ತು ಲಭತೇ ಸ್ವರ್ಗಂ ನರಕಂ ಚ ನ ಪಶ್ಯತಿ ॥ ೪ ॥

---

೧. ಮಾರ್ಕಂಡೇಯನು ಹೇಳಿದನು.—ಓ ರಾಜಾ, ಪ್ರಯಾಗದ ಮಹಿಮೆಯನ್ನು ಇನ್ನೂ ಹೇಳುವೆನು ಕೇಳು. ಇದರಿಂದ ಸಕಲ ಪಾಪಗಳೂ ತೊಲಗುವುವು ; ಸಂದೇಹವಿಲ್ಲ.

೨. ಗಂಗಾನದಿಯ ಉತ್ತರತೀರದಲ್ಲಿ ಮಾನಸವೆಂಬ ತೀರ್ಥವುಂಟು. ಅಲ್ಲಿ ಮೂರು ರಾತ್ರಿಗಳ ಕಾಲ ಉಪವಾಸವ್ರತವನ್ನು ಮಾಡಿದರೆ ಸಕಲ ಮನೋರಥಗಳೂ ಈಡೇರುವುವು.

೩. ಗೋದಾನ, ಭೂದಾನ ಮತ್ತು ಹಿರಣ್ಯದಾನಗಳಿಂದ ಯಾವ ಫಲವು ಬರುತ್ತದೆಯೋ ಅದೇ ಫಲವು ಮಾನಸತೀರ್ಥದಲ್ಲಿ ಸ್ನಾನಮಾಡುವುದರಿಂದ ಬರುತ್ತದೆ. ಅಷ್ಟೇ ಅಲ್ಲ ; ಆತನಿಗೆ ಆ ತೀರ್ಥದ ಸ್ಮರಣೆ ಬರುತ್ತಲೇ ಇರುವುದು.

೪. ಫಲಾಪೇಕ್ಷೆಯಿದ್ದೋ, ಇಲ್ಲದೆಯೋ ಗಂಗಾನದಿಯಲ್ಲಿ ಬಿದ್ದು ಯಾವನು ಮೃತನಾಗುವನೋ ಆವನಿಗೆ ಸ್ವರ್ಗವು ಲಭಿಸುವುದು ; ಮತ್ತೆ ನರಕದ ದರ್ಶನವು ಎಂದಿಗೂ ಆಗದು.

ಅಪ್ಸರೋಗಣಸಂಗೀತೈಃ ಸುಪ್ತೋಽಸೌ ಪ್ರತಿಬುಧ್ಯತೇ।
ಹಂಸಸಾರಸಯುಕ್ತೇನ ವಿಮಾನೇನ ಸ ಗಚ್ಛತಿ।
ಬಹುವರ್ಷಸಹಸ್ರಾಣಿ ಸ್ವರ್ಗಂ ರಾಜೇಂದ್ರ ಭುಂಜತಿ ॥ ೫ ॥

ತತಃ ಸ್ವರ್ಗಾತ್ಪರಿಭ್ರಷ್ಟಃ ಕ್ಷೀಣಕರ್ಮಾ ದಿವಶ್ಚ್ಯುತಃ।
ಸುವರ್ಣಮಣಿಮುಕ್ತಾಢ್ಯೇ ಜಾಯತೇ ಮಿಮುಲೇ ಕುಲೇ ॥ ೬ ॥

ಷಷ್ಟಿತೀರ್ಥಸಹಸ್ರಾಣಿ ಷಷ್ಟಿಕೋಟ್ಯಸ್ತಥಾಽಽಪಗಾಃ।
ಮಾಘಮಾಸೇ ಗಮಿಷ್ಯಂತಿ ಗಂಗಾಯಮುನಸಂಗಮಂ ॥ ೭ ॥

ಗವಾಂ ಶತಸಹಸ್ರಸ್ಯ ಸಮ್ಯಗ್ದತ್ತಸ್ಯ ಯತ್ಫಲಂ।
ಪ್ರಯಾಗೇ ಮಾಘಮಾಸೇ ತು ತ್ರ್ಯಹಸ್ನಾನಾತ್ತು ತತ್ಫಲಂ ॥ ೮ ॥

---

೫. ಅವನು ಆನಂದದಿಂದ ನಿದ್ರೆಮಾಡಿ ಅಪ್ಸರಸ್ತ್ರೀಯರ ಮಧುರಗಾನದಿಂದ ಎಚ್ಚರಗೊಳ್ಳುತ್ತಾನೆ. ಹಂಸಗಳನ್ನೂ, ಸಾರಸಪಕ್ಷಿಗಳನ್ನೂ ಹೂಡಿದ ದಿವ್ಯ ವಿಮಾನದಲ್ಲಿ ಸಂಚರಿಸುತ್ತಾನೆ. ಓ ರಾಜೇಂದ್ರಾ, ಅನೇಕ ಸಹಸ್ರ ವರ್ಷಗಳ ಕಾಲ ಆತನು ಸ್ವರ್ಗದಲ್ಲಿ ಸುಖವನ್ನು ಅನುಭವಿಸುತ್ತಾನೆ.

೬. ಕರ್ಮಫಲವು ತೀರಿದ ಬಳಿಕ ಸ್ವರ್ಗದಿಂದ ಭೂಮಿಗೆ ಇಳಿದು ಬಂದು ಚಿನ್ನ, ರತ್ನ ಮತ್ತು ಮುತ್ತುಗಳಿಂದ ಸುಸಮೃದ್ಧವಾದ ಮಹಾವಂಶದಲ್ಲಿ ಜನ್ಮವನ್ನು ತಾಳುವನು.

೭. ಅರವತ್ತು ಸಾವಿರ ಪುಣ್ಯತೀರ್ಥಗಳೂ, ಅರವತ್ತು ಕೋಟಿ ಪುಣ್ಯ ನದಿಗಳೂ ಮಾಘಮಾಸದಲ್ಲಿ ಗಂಗಾ ಯಮುನಾ ನದಿಗಳ ಸಂಗಮಕ್ಕೆ ಬಂದು ಸೇರುವುವು.

೮. ವಸ್ತ್ರಭೂಷಣಾದಿಗಳಿಂದ ಅಲಂಕರಿಸಿ ಒಂದು ಲಕ್ಷ ಹಸುಗಳನ್ನು ಶಾಸ್ತ್ರೋಕ್ತವಾಗಿ ದಾನಮಾಡಿದರೆ ಯಾವ ಫಲವು ಬರುತ್ತದೆಯೋ, ಅದೇ ಫಲವು ಮಾಘಮಾಸದಲ್ಲಿ ಪ್ರಯಾಗ ಕ್ಷೇತ್ರದಲ್ಲಿ ಮೂರು ದಿನಗಳ ಸ್ನಾನದಿಂದ ಪ್ರಾಪ್ತವಾಗುತ್ತದೆ.

ಗಂಗಾಯಮುನಯೋರ್ಮಧ್ಯೇ ಪಂಚಾಗ್ನಿಂ ಯಸ್ತು ಸಾಧಯೇತ್ ।
ಅಹೀನಾಂಗೋ ಹ್ಯರೋಗಶ್ಚ ಪಂಚೇಂದ್ರಿಯಸಮನ್ವಿತಃ ॥ ೯ ॥

ಯಾವಂತಿ ರೋಮಕೂಪಾಣಿ ತಸ್ಯ ಗಾತ್ರೇಷು ದೇಹಿನಃ ।
ತಾವದ್ವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ॥೧೦॥

ತತಃ ಸ್ವರ್ಗಾತ್ಪರಿಭ್ರಷ್ಟೋ ಜಂಬೂದ್ವೀಪಪತಿರ್ಭವೇತ್ ।
ಸ ಭುಕ್ತ್ವಾ ವಿಪುಲಾನ್ ಭೋಗಾಂಸ್ತತ್ತೀರ್ಥಂ ಸ್ಮರತೇ ಪುನಃ ॥೧೧॥

ಜಲಪ್ರವೇಶಂ ಯಃ ಕುರ್ಯಾತ್ಸಂಗಮೇ ಲೋಕವಿಶ್ರುತೇ ।
ರಾಹುಗ್ರಸ್ತೇ ತಥಾ ಸೋಮೇ ವಿಮುಕ್ತಃ ಸರ್ವಕಿಲ್ಬಿಷೈಃ ॥೧೨॥

ಸೋಮಲೋಕಮವಾಪ್ನೋತಿ ಸೋಮೇನ ಸಹ ಮೋದತೇ ।
ಷಷ್ಟಿವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ॥೧೩॥

---

೯. ಗಂಗಾ ಯಮುನೆಗಳ ಮಧ್ಯದೇಶದಲ್ಲಿ ದಕ್ಷಿಣ, ಗಾರ್ಹಪತ್ಯ, ಆಹವನೀಯ, ಸಭ್ಯ ಮತ್ತು ಆವಸಥ್ಯಗಳೆಂಬ ಪಂಚಾಗ್ನಿಗಳನ್ನು ಸಾಧನಮಾಡುವ ಮನುಷ್ಯನು ಸುಂದರಾಂಗನೂ, ರೋಗರಹಿತನೂ, ಪಂಚೇಂದ್ರಿಯಪಟುವೂ ಆಗುವನು.

೧೦. ಅಷ್ಟೇ ಅಲ್ಲ; ತನ್ನ ಶರೀರದಲ್ಲಿ ರೋಮಕೂಪಗಳು ಎಷ್ಟಿರುವುವೋ ಅಷ್ಟು ಸಾವಿರ ವರ್ಷಗಳ ಕಾಲ ಅವನು ಸ್ವರ್ಗಲೋಕದಲ್ಲಿ ಗೌರವದಿಂದ ವಾಸಮಾಡುವನು.

೧೧. ಬಳಿಕ ಸ್ವರ್ಗದಿಂದ ಜಾರಿಬಿದ್ದು ಜಂಬೂದ್ವೀಪದ ಅಧಿಪತಿಯಾಗಿ ಜನಿಸುವನು. ಬಗೆಬಗೆಯ ಸುಖಗಳನ್ನು ಯಥೇಚ್ಛವಾಗಿ ಅನುಭವಿಸಿ ಮರಳಿ ಆ ಪುಣ್ಯತೀರ್ಥವನ್ನು ಸ್ಮರಿಸಿಕೊಳ್ಳುವನು.

೧೨. ಚಂದ್ರಗ್ರಹಣಕಾಲದಲ್ಲಿ ಲೋಕಪ್ರಸಿದ್ಧವಾದ ಗಂಗಾಯಮುನಾ ಸಂಗಮವನ್ನು ಪ್ರವೇಶಿಸಿ ದೇಹತ್ಯಾಗವನ್ನು ಮಾಡುವಾತನು ಎಲ್ಲ ವಿಧವಾದ ಪಾಪಗಳಿಂದಲೂ ಮುಕ್ತನಾಗುವನು.

೧೩. ಅವನು ಚಂದ್ರಲೋಕವನ್ನು ಸೇರಿ ಚಂದ್ರನೊಡನೆ ಸುಖವಾಗಿರುವನು. ಅರವತ್ತು ಸಾವಿರ ವರ್ಷಗಳ ಕಾಲ ಸ್ವರ್ಗಲೋಕದಲ್ಲಿ ದೇವತೆಗಳಿಂದ ಪೂಜಿತನಾಗಿ ವಾಸಮಾಡುವನು.

ಸ್ವರ್ಗೇ ಚ ಶಕ್ರಲೋಕೇಽಸ್ಮಿನ್ನೃಷಿಗಂಧರ್ವಸೇವಿತೇ ।
ಪರಿಭ್ರಷ್ಟಸ್ತು ರಾಜೇಂದ್ರ ಸಮೃದ್ಧೇ ಜಾಯತೇ ಕುಲೇ ॥೧೪॥

ಅಧಶ್ಶಿರಾಸ್ತು ಯೋ ಜ್ವಾಲಾಮೂರ್ಧ್ವಪಾದಃ ಪಿಬೇನ್ನರಃ ।
ಶತವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ॥೧೫॥

ಪರಿಭ್ರಷ್ಟಸ್ತು ರಾಜೇಂದ್ರ ಸೋಽಗ್ನಿಹೋತ್ರೀ ಭವೇನ್ನರಃ ।
ಭುಕ್ತ್ವಾ ತು ವಿಪುಲಾನ್ ಭೋಗಾಂಸ್ತತ್ತೀರ್ಥಂ ಭಜತೇ ಪುನಃ ॥೧೬॥

ಯಃ ಸ್ವದೇಹಂ ತು ಕರ್ತಿತ್ವಾ ಶಕುನಿಭ್ಯಃ ಪ್ರಯಚ್ಛತಿ ।
ವಿಹಗೈರುಪಭುಕ್ತಸ್ಯ ಶೃಣು ತಸ್ಯಾಽಪಿ ಯತ್ಫಲಂ ॥೧೭॥

---

೧೪. ಋಷಿಗಳು, ಗಂಧರ್ವರು ಮುಂತಾದವರಿಂದ ಸೇವಿತವಾದ ಸ್ವರ್ಗಲೋಕದಲ್ಲಿಯೂ ಇಂದ್ರಲೋಕದಲ್ಲಿಯೂ ಸುಖವನ್ನು ಅನುಭವಿಸುವನು. ರಾಜೇಂದ್ರಾ, ಅಲ್ಲಿಂದ ಭೂಮಿಗೆ ಇಳಿದು ಬಂದು ಸಕಲಭೋಗ ಸಮೃದ್ಧವಾದ ಮನೆತನದಲ್ಲಿ ಜನಿಸುವನು.

೧೫. ಪ್ರಯಾಗಕ್ಷೇತ್ರದಲ್ಲಿ ತಪಸ್ಸುಮಾಡುತ್ತ ತಲೆಯು ಕೆಳಗೂ, ಕಾಲು ಮೇಲೂ ಆಗಿ ಬೆಂಕಿಯ ಉರಿಯನ್ನು ಕುಡಿಯುವಾತನು ಒಂದು ಲಕ್ಷ ವರ್ಷಕಾಲ ಸ್ವರ್ಗಲೋಕದಲ್ಲಿ ಪೂಜ್ಯನೆನಿಸುವನು.

೧೬. ಓ ಮಹಾರಾಜಾ, ಸ್ವರ್ಗವಾಸದ ಭಾಗ್ಯವು ತೀರಿದ ಮೇಲೆ ಆ ಮನುಷ್ಯನು ಅಗ್ನಿಹೋತ್ರಿಯಾಗಿ ಜನಿಸುವನು. ಬಗೆಬಗೆಯ ಭೋಗಗಳನ್ನು ಅನುಭವಿಸುವನು. ಮತ್ತೆ ಆ ಪುಣ್ಯತೀರ್ಥವನ್ನು ನೆನಪಿಗೆ ತಂದುಕೊಳ್ಳುವನು.

೧೭. ತನ್ನ ದೇಹವನ್ನು ಚೂರುಚೂರಾಗಿ ಕತ್ತರಿಸಿ ಪಕ್ಷಿಗಳಿಗೆ ಆಹಾರವಾಗಿ ಕೊಡತಕ್ಕ ಸಾಹಸಿಗೂ ಕೂಡ ಫಲವುಂಟು. ಅದನ್ನು ಹೇಳುವೆನು ಕೇಳು.

ಶತಂ ವರ್ಷಸಹಸ್ರಾಣಾಂ ಸೋಮಲೋಕೇ ಮಹೀಯತೇ ।
ತಸ್ಮಾದಪಿ ಪರಿಭ್ರಷ್ಟೋ ರಾಜಾ ಭವತಿ ಧಾರ್ಮಿಕಃ ॥೧೮॥

ಗುಣವಾನ್ ರೂಪಸಂಪನ್ನೋ ವಿದ್ವಾಂಶ್ಚ ಪ್ರಿಯವಾಚಕಃ ।
ಭುಕ್ತ್ವಾ ತು ವಿಪುಲಾನ್ ಭೋಗಾಂಸ್ತತ್ತೀರ್ಥಂ ಭಜತೇ ಪುನಃ ॥೧೯॥

ಯಾಮುನೇ ಚೋತ್ತರೇ ಕೂಲೇ ಪ್ರಯಾಗಸ್ಯ ತು ದಕ್ಷಿಣೇ ।
ಋಣಪ್ರಮೋಚನಂ ನಾಮ ತತ್ತೀರ್ಥಂ ಪರಮಂ ಸ್ಮೃತಂ ॥೨೦॥

ಏಕರಾತ್ರೋಷಿತಃ ಸ್ನಾತ್ವಾ ಋಣೈಃ ಸರ್ವೈಃ ಪ್ರಮುಚ್ಯತೇ
ಸ್ವರ್ಗಲೋಕಮವಾಪ್ನೋತಿ ಅನೃಣಶ್ಚ ಸದಾ ಭವೇತ್ ॥೨೧॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಪ್ರಯಾಗಮಾಹಾತ್ಮ್ಯೇ
ಸಪ್ತಾಧಿಕಶತತಮೋಽಧ್ಯಾಯಃ

---

೧೮. ಒಂದು ಲಕ್ಷ ವರ್ಷಗಳ ಕಾಲ ಆತನು ಚಂದ್ರಲೋಕದಲ್ಲಿ ಗೌರವವನ್ನು ಪಡೆಯುವನು. ಬಳಿಕ ಅಲ್ಲಿಂದ ಇಳಿದು ಧರ್ಮಮಾರ್ಗನಿರತನಾದ ರಾಜನಾಗಿ ಜನಿಸುವನು.

೧೯. ಗುಣವಂತನೂ, ರೂಪಸಂಪನ್ನನೂ, ವಿದ್ವಾಂಸನೂ, ಪ್ರಿಯವಾದಿಯೂ ಆಗುವನು. ಯಥೇಚ್ಛವಾದ ಭೋಗಗಳನ್ನು ಅನುಭವಿಸಿ ಮರಳಿ ಆ ತೀರ್ಥಕ್ಕೆ ಹೋಗುವನು.

೨೦. ಪ್ರಯಾಗಕ್ಕೆ ದಕ್ಷಿಣದಲ್ಲಿ ಯಮುನಾನದಿಯ ಉತ್ತರತೀರದಲ್ಲಿ ಋಣಪ್ರಮೋಚನವೆಂಬ ತೀರ್ಥವಿದೆ. ಅದು ಅತ್ಯಂತ ಶ್ರೇಷ್ಠವಾದುದೆನ್ನುವರು.

೨೧. ಅಲ್ಲಿ ಸ್ನಾನಮಾಡಿ ಒಂದು ರಾತ್ರಿ ಉಪವಾಸವಿದ್ದರೆ ದೇವಋಣ, ಋಷಿಋಣ ಮತ್ತು ಪಿತೃಋಣಗಳೆಲ್ಲವೂ ತೀರುವುವು. ಒಂದೊಂದು ಜನ್ಮದಲ್ಲಿಯೂ ಅವನು ಋಣರಹಿತನಾಗಿಯೇ ಇರುವನು.

ಅಧ್ಯಾಯ ೧೦೭

## ಅಧ್ಯಾಯದ ಸಾರಾಂಶ

ಪ್ರಯಾಗಕ್ಷೇತ್ರದ ಮಹಿಮೆಯು ಈ ಅಧ್ಯಾಯದಲ್ಲಿಯೂ ಮುಂದುವರಿದಿದೆ.

ಮಾಘಮಾಸದಲ್ಲಿ ಸಕಲ ಪುಣ್ಯನದಿಗಳೂ, ಪುಣ್ಯತೀರ್ಥಗಳೂ ಗಂಗಾ ಯಮುನಾ ಸಂಗಮಕ್ಕೆ ಬಂದು ಸೇರುವುವು. ಮಾನಸ, ಋಣಪ್ರಮೋಚನ ಮುಂತಾದುವು ಸುಪ್ರಸಿದ್ಧವಾದ ಪುಣ್ಯತೀರ್ಥಗಳು. ಪ್ರಯಾಗದಲ್ಲಿ ದೇಹತ್ಯಾಗ ಮಾಡುವುದು, ಶರೀರವನ್ನು ತುಂಡುತುಂಡಾಗಿ ಕತ್ತರಿಸಿ ಪಕ್ಷಿಗಳಿಗೆ ಆಹಾರವಾಗಿ ಕೊಡುವುದು, ಬೆಂಕಿಯ ಉರಿಯ ಮೇಲ್ಗಡೆ ತಲೆಕೆಳಗಾಗಿ ಜೋಲಾಡುತ್ತ ತಪಸ್ಸು ಮಾಡುವುದು ಮುಂತಾದ ಸಾಹಸ ಕಾರ್ಯಗಳೂ ಸಹ ಪುಣ್ಯಪ್ರದವಾದುವು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಪ್ರಯಾಗಮಾಹಾತ್ಮ್ಯದೊಳಗೆ
ನೂರೇಳನೆಯ ಅಧ್ಯಾಯವು ಮುಗಿದುದು.



## ಅಥಾಷ್ಟಾಧಿಕಶತತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಏತಚ್ಛ್ರುತ್ವಾ ಪ್ರಯಾಗಸ್ಯ ಯತ್ತ್ವಯಾ ಪರಿಕೀರ್ತಿತಂ ।
ವಿಶುದ್ಧಂ ಮೇಽದ್ಯ ಹೃದಯಂ ಪ್ರಯಾಗಸ್ಯ ತು ಕೀರ್ತನಾತ್ ॥ ೧ ॥

ಅನಾಶಕಫಲಂ ಬ್ರೂಹಿ ಭಗವಂಸ್ತತ್ರ ಕೀದೃಶಂ ।
ಯಂ ಚ ಲೋಕಮವಾಪ್ನೋತಿ ವಿಶುದ್ಧಃ ಸರ್ವಕಿಲ್ಬಿಷೈಃ ॥ ೨ ॥

॥ ಮಾರ್ಕಂಡೇಯ ಉವಾಚ ॥

ಶೃಣು ರಾಜನ್ ಪ್ರಯಾಗೇ ತು ಅನಾಶಕಫಲಂ ವಿಭೋ ।
ಪ್ರಾಪ್ನೋತಿ ಪುರುಷೋ ಧೀಮಾಞ್ಛ್ರದ್ಧಧಾನೋ ಜಿತೇಂದ್ರಿಯಃ ॥ ೩ ॥

ಅಹೀನಾಂಗೋಽಪ್ಯರೋಗಶ್ಚ ಪಂಚೇಂದ್ರಿಯಸಮನ್ವಿತಃ ।
ಅಶ್ವಮೇಧಫಲಂ ತಸ್ಯ ಗಚ್ಛತಸ್ತು ಪದೇ ಪದೇ ॥ ೪ ॥

---

೧. ಧರ್ಮರಾಜನು ಹೇಳಿದನು.—ಓ ಮುನಿವರ್ಯಾ, ನೀನು ಹೇಳಿದ ಪ್ರಯಾಗ ವೃತ್ತಾಂತವನ್ನು ಕೇಳಿದೆನು. ಆ ದಿವ್ಯಕ್ಷೇತ್ರದ ನಾಮಕೀರ್ತನದಿಂದ ನನ್ನ ಮನಸ್ಸು ಈಗ ನಿರ್ಮಲವಾಯಿತು.

೨. ಎಲೈ ಪೂಜ್ಯನೇ, ಅಲ್ಲಿ ಪ್ರಾಯೋಪವೇಶವನ್ನು (ಆಮರಣಾಂತವಾದ ಉಪವಾಸವ್ರತವನ್ನು) ಕೈಗೊಳ್ಳುವುದರಿಂದ ಬರುವ ಫಲವೇನೆಂಬುದನ್ನು ಹೇಳು. ಸಕಲ ಪಾಪಗಳಿಂದಲೂ ಪರಿಶುದ್ಧನಾದ ಬಳಿಕ ಅವನು ಯಾವ ಲೋಕವನ್ನು ಸೇರುವನು ?

೩. ಮಾರ್ಕಂಡೇಯನು ಹೇಳಿದನು.—ಓ ಧರ್ಮರಾಜಾ, ಪ್ರಯಾಗ ಕ್ಷೇತ್ರದಲ್ಲಿ ಪ್ರಾಯೋಪವೇಶವನ್ನು ಮಾಡಿದವನಿಗೆ ಬರುವ ಫಲವನ್ನು ಕೇಳು. ಎಲೈ ಚಕ್ರವರ್ತೀ, ಆತನು ಜ್ಞಾನಿಯೂ, ಶ್ರದ್ಧಾವಂತನೂ, ಜಿತೇಂದ್ರಿಯನೂ ಆಗುವನು.

೪. ಅವನಿಗೆ ಯಾವ ಅಂಗದಲ್ಲೂ ನ್ಯೂನತೆ ಇರದು. ರೋಗವು ಅವನ ಹತ್ತಿರ ಸುಳಿಯದು. ಅವನ ಇಂದ್ರಿಯಗಳೆಲ್ಲ ಪಟುವಾಗಿರುವುವು. ಒಂದೊಂದು ಹೆಜ್ಜೆಗೂ ಆತನಿಗೆ ಅಶ್ವಮೇಧದ ಫಲವು ಬರುವುದು.

**ಕುಲಾನಿ ತಾರಯೇದ್ರಾಜನ್ ದಶ ಪೂರ್ವಾನ್ ದಶಾಽಪರಾನ್ ।**
**ಮುಚ್ಯತೇ ಸರ್ವಪಾಪೇಭ್ಯೋ ಗಚ್ಛೇತ್ತು ಪರಮಂ ಪದಂ ॥ ೫ ॥**

**॥ ಯುಧಿಷ್ಠಿರ ಉವಾಚ ॥**

**ಮಹಾಭಾಗ್ಯೋಽಸ್ಮಿ ಧರ್ಮಜ್ಞ ಯತ್ತ್ವಂ ವದಸಿ ಮೇ ಪ್ರಭೋ ।**
**ಅಲ್ಪೇನೈವ ಪ್ರಯತ್ನೇನ ಬಹೂನ್ ಧರ್ಮಾನವಾಪ್ನುತೇ ॥ ೬ ॥**

**ಅಶ್ವಮೇಧೈಸ್ತು ಬಹುಭಿಃ ಪ್ರಾಪ್ಯತೇ ಸುವ್ರತೈರಿಹ ।**
**ಇಮಂ ಮೇ ಸಂಶಯಂ ಛಿಂದಿ ಪರಂ ಕೌತೂಹಲಂ ಹಿ ಮೇ ॥ ೭ ॥**

**॥ ಮಾರ್ಕಂಡೇಯ ಉವಾಚ ॥**

**ಶೃಣು ರಾಜನ್ ಮಹಾವೀರ ಯದುಕ್ತಂ ಬ್ರಹ್ಮಯೋನಿನಾ ।**
**ಋಷೀಣಾಂ ಸನ್ನಿಧೌ ಪೂರ್ವಂ ಕಥ್ಯಮಾನಂ ಮಯಾ ಶ್ರುತಂ ॥ ೮ ॥**

---

೫. ಓ ರಾಜಾ, ಅವನು ತನ್ನ ವಂಶಜರಲ್ಲಿ ಹಿಂದಿನ ಮತ್ತು ಮುಂದಿನ ಹತ್ತು ತಲೆಯವರನ್ನು ಸದ್ಗತಿಗೆ ಒಯ್ಯುವನು. ಸಕಲ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುವನು. ಉತ್ತಮಗತಿಯನ್ನು ಪಡೆಯುವನು.

೬-೭. ಧರ್ಮರಾಜನು ಹೇಳಿದನು.—ಓ ಧರ್ಮಜ್ಞಾ, ನಾನು ಬಹಳ ಅದೃಷ್ಟಶಾಲಿ. ಏಕೆಂದರೆ ಇಂತಹ ಧರ್ಮಮಯವಾದ ವೃತ್ತಾಂತವನ್ನು ನೀನು ನನಗೆ ಹೇಳುತ್ತಿರುವೆ. ಪ್ರಭೂ, ಆದರೆ ನನಗೊಂದು ಸಂಶಯ ಬಂದಿದೆ. "ಸ್ವಲ್ಪ ಪ್ರಯತ್ನದಿಂದಲೇ ಅತ್ಯಧಿಕವಾದ ಪುಣ್ಯವು ಬರುತ್ತದೆ; ಒಳ್ಳೆಯ ವ್ರತಗಳಿಂದಲೂ, ಅನೇಕ ಅಶ್ವಮೇಧಗಳಿಂದಲೂ ಬರುವ ಫಲವು ಪ್ರಾಪ್ತವಾಗುತ್ತದೆ" ಎಂಬುದು ಹೇಗೆ? ಇದನ್ನು ತಿಳಿದುಕೊಳ್ಳಬೇಕೆಂದು ನನಗೆ ಬಹಳ ಕುತೂಹಲವಿದೆ. ನನ್ನ ಸಂದೇಹವನ್ನು ಪರಿಹರಿಸು.

೮. ಮಾರ್ಕಂಡೇಯನು ಹೇಳಿದನು.—ಮಹಾವೀರನಾದ ಎಲೈ ಧರ್ಮರಾಜನೇ, ಹಿಂದೆ ಋಷಿಗಳ ಎದುರಿಗೆ ಬ್ರಹ್ಮನು ಹೇಳುತ್ತಿದ್ದುದನ್ನು ನಾನು ಕೇಳಿದೆನು. ಅದನ್ನೇ ಈಗ ನಿನಗೆ ಹೇಳುವೆನು.

**ಪಂಚಯೋಜನವಿಸ್ತೀರ್ಣಂ ಪ್ರಯಾಗಸ್ಯ ತು ಮಂಡಲಂ ।**
**ಪ್ರವಿಷ್ಟಮಾತ್ರೇ ತದ್ಭೂಮಾವಶ್ವಮೇಧಃ ಪದೇ ಪದೇ ॥ ೯ ॥**

**ವ್ಯತೀತಾನ್ ಪುರುಷಾನ್ ಸಪ್ತ ಭವಿಷ್ಯಾಂಶ್ಚ ಚತುರ್ದಶ ।**
**ನರಸ್ತಾರಯತೇ ಸರ್ವಾನ್ ಯಸ್ತು ಪ್ರಾಣಾನ್ ಪರಿತ್ಯಜೇತ್ ॥೧೦॥**

**ಏವಂ ಜ್ಞಾತ್ವಾ ತು ರಾಜೇಂದ್ರ ಸದಾ ಸೇವಾಪರೋ ಭವೇತ್ ।**
**ಅಶ್ರದ್ದಧಾನಾಃ ಪುರುಷಾಃ ಪಾಪೋಪಹತಚೇತಸಃ ।**
**ನ ಪ್ರಾಪ್ನುವಂತಿ ತತ್ಸ್ಥಾನಂ ಪ್ರಯಾಗಂ ದೇವರಕ್ಷಿತಂ ॥೧೧॥**

**॥ ಯುಧಿಷ್ಠಿರ ಉವಾಚ ॥**

**ಸ್ನೇಹಾದ್ವಾ ದ್ರವ್ಯಲೋಭಾದ್ವಾ ಯೇ ತು ಕಾಮವಶಂ ಗತಾಃ ।**
**ಕಥಂ ತೀರ್ಥಫಲಂ ತೇಷಾಂ ಕಥಂ ಪುಣ್ಯಫಲಂ ಭವೇತ್ ॥೧೨॥**

---

೯. ಪ್ರಯಾಗಕ್ಷೇತ್ರವು ಸುತ್ತಲೂ ಐದು ಯೋಜನದ ಅಳತೆಯ ಮಂಡಲಾಕಾರವಾಗಿದೆ. ಆ ಭೂಭಾಗವನ್ನು ಪ್ರವೇಶಿಸಿದರೆ ಸಾಕು. ಒಂದೊಂದು ಹೆಜ್ಜೆಗೂ ಅಶ್ವಮೇಧದ ಫಲವು ಬರುವುದು.

೧೦. ಅಲ್ಲಿ ಪ್ರಾಣಗಳನ್ನು ತೊರೆದ ಮನುಷ್ಯನು ತನ್ನ ವಂಶಜರಲ್ಲಿ ಹಿಂದಿನ ಏಳು ತಲೆಯವರನ್ನೂ ಮುಂದಿನ ಹದಿನಾಲ್ಕು ತಲೆಯವರನ್ನೂ ಉದ್ಧರಿಸುವನು.

೧೧. ಓ ರಾಜೇಂದ್ರಾ, ಹೀಗೆ ತಿಳಿದು ಯಾವಾಗಲೂ ಆ ಕ್ಷೇತ್ರದ ಸೇವೆಯಲ್ಲಿ ತೊಡಗಿರಬೇಕು. ಶ್ರದ್ಧೆಯಿಲ್ಲದವರಿಗೆ ಅವರ ಪಾಪವಶದಿಂದ ಮನಸ್ಸು ಕೆಟ್ಟುಹೋಗುವುದು. ದೇವತೆಗಳಿಂದ ರಕ್ಷಿತವಾದ ಆ ಪುಣ್ಯಭೂಮಿಗೆ ಅವರು ಹೋಗಲಾರರು.

೧೨. ಧರ್ಮರಾಜನು ಹೇಳಿದನು.—ಸ್ನೇಹವಶದಿಂದಲೋ, ದ್ರವ್ಯಲೋಭದಿಂದಲೋ ಕಾಮಾದಿವಿಕಾರಗಳಿಗೆ ಅಧೀನರಾದ ಮನುಜರಿಗೆ ತೀರ್ಥಯಾತ್ರಾ ಫಲವು ದೊರಕುವುದೆಂತು ? ಅವರಿಗೆ ಪುಣ್ಯಫಲವು ತಾನೆ ಹೇಗೆ ಬಂದೀತು ?

ವಿಕ್ರಯಃ ಸರ್ವಭಾಂಡಾನಾಂ ಕಾರ್ಯಾಕಾರ್ಯಮಜಾನತಃ ।
ಪ್ರಯಾಗೇ ಕಾ ಗತಿಸ್ತಸ್ಯ ತನ್ಮೇ ಬ್ರೂಹಿ ಪಿತಾಮಹ ॥೧೩॥

॥ ಮಾರ್ಕಂಡೇಯ ಉವಾಚ ॥

ಶೃಣು ರಾಜನ್ ಮಹಾಗುಹ್ಯಂ ಸರ್ವಪಾಪಪ್ರಣಾಶನಂ ।
ಮಾಸಮೇಕಂ ತು ಯಃ ಸ್ನಾಯಾತ್ಪ್ರಯಾಗೇ ನಿಯತೇಂದ್ರಿಯಃ ।
ಮುಚ್ಯತೇ ಸರ್ವಪಾಪೇಭ್ಯಃ ಸ ಗಚ್ಛೇತ್ಪರಮಂ ಪದಂ ॥೧೪॥

ವಿಶ್ರಂಭಘಾತಕಾನಾಂ ತು ಪ್ರಯಾಗೇ ಶೃಣು ಯತ್ಫಲಂ ।
ತ್ರಿಕಾಲಮೇವ ಸ್ನಾಯೀತ ಆಹಾರಂ ಭೈಕ್ಷ್ಯಮಾಚರೇತ್ ।
ತ್ರಿಭಿರ್ಮಾಸೈಃ ಸ ಮುಚ್ಯೇತ ಪ್ರಯಾಗೇ ತು ನ ಸಂಶಯಃ ॥೧೫॥

---

೧೩. ಧರ್ಮವೋ ಅಧರ್ಮವೋ, ಯಾವುದನ್ನೂ ನೋಡದೆ ಎಲ್ಲ ಬಗೆಯ ಪದಾರ್ಥಗಳನ್ನೂ ಬೆಲೆಗೆ ಮಾರುತ್ತ ಇದು ಸರಿ, ಇದು ತಪ್ಪು ಎಂಬ ತಿಳುವಳಿಕೆಯೇ ಇಲ್ಲದ ಮನುಷ್ಯನಿಗೆ ಪ್ರಯಾಗಕ್ಷೇತ್ರವಾಸದಿಂದ ಏನಾದರೂ ಗತಿಯುಂಟೋ? ಚಿರಂಜೀವಿಯಾದ ಎಲೈ ಮಹರ್ಷಿಯೇ, ಅದನ್ನು ನನಗೆ ತಿಳಿಸು.

೧೪. ಮಾರ್ಕಂಡೇಯಮುನಿ ಹೇಳಿದನು.—ಎಲೈ ರಾಜನೇ, ಸಕಲ ಪಾಪ ಪರಿಹಾರಕವೂ, ಮಹಾರಹಸ್ಯವೂ ಆದ ವಿಷಯವನ್ನು ಹೇಳುವೆನು ಕೇಳು. ಜಿತೇಂದ್ರಿಯನಾಗಿ ಒಂದು ತಿಂಗಳ ಕಾಲ ಪ್ರಯಾಗದ ಗಂಗಾಯಮುನಾ ಸಂಗಮದಲ್ಲಿ ಸ್ನಾನಮಾಡುವಾತನು ಎಲ್ಲ ಪಾಪಗಳಿಂದಲೂ ಬಿಡುಗಡೆಹೊಂದುವನು; ಮತ್ತು ಸದ್ಗತಿಯನ್ನು ಪಡೆಯುವನು.

೧೫. ವಿಶ್ವಾಸಘಾತುಕನಾದವನಿಗೂ ಕೂಡ ಪ್ರಯಾಗ ಕ್ಷೇತ್ರದಲ್ಲಿ ಫಲವಿಲ್ಲದಿಲ್ಲ. ಅದನ್ನೂ ಹೇಳುತ್ತೇನೆ ಕೇಳು. ಭಿಕ್ಷಾಹಾರವನ್ನು ಸೇವಿಸುತ್ತ, ದಿವಸಕ್ಕೆ ಮೂರುಸಾರಿ ಸ್ನಾನಮಾಡುತ್ತಿದ್ದರೆ ಮೂರುತಿಂಗಳಲ್ಲಿ ಆತನು ಪಾಪಮುಕ್ತನಾಗುವನು. ಸಂಶಯವಿಲ್ಲ.

ಅಜ್ಞಾನೇನ ತು ಯಸ್ಯೇಹ ತೀರ್ಥಯಾತ್ರಾದಿಕಂ ಭವೇತ್ ।
ಸರ್ವಕಾಮಸಮೃದ್ಧಸ್ತು ಸ್ವರ್ಗಲೋಕೇ ಮಹೀಯತೇ ।
ಸ್ಥಾನಂ ಚ ಲಭತೇ ನಿತ್ಯಂ ಧನಧಾನ್ಯಸಮಾಕುಲಂ ॥೧೬॥

ಏವಂ ಜ್ಞಾನೇನ ಸಂಪೂರ್ಣಃ ಸದಾ ಭವತಿ ಭೋಗವಾನ್ ।
ತಾರಿತಾಃ ಪಿತರಸ್ತೇನ ನರಕಾತ್ಪ್ರಪಿತಾಮಹಾಃ ॥೧೭॥

ಧರ್ಮಾನುಸಾರಿ ತತ್ತ್ವಜ್ಞ ಪೃಚ್ಛತಸ್ತೇ ಪುನಃ ಪುನಃ ।
ತ್ವತ್ಪ್ರಿಯಾರ್ಥಂ ಸಮಾಖ್ಯಾತಂ ಗುಹ್ಯಮೇತತ್ಸನಾತನಂ ॥೧೮॥

॥ಯುಧಿಷ್ಠಿರ ಉವಾಚ ॥

ಅದ್ಯ ಮೇ ಸಫಲಂ ಜನ್ಮ ಅದ್ಯ ಮೇ ತಾರಿತಂ ಕುಲಂ ।
ಪ್ರೀತೋಽಸ್ಮ್ಯನುಗ್ರಹೀತೋಽಸ್ಮಿ ದರ್ಶನಾದೇವ ತೇ ಮುನೇ ॥೧೯॥

---

೧೬. ಉದ್ದೇಶವೇ ಇಲ್ಲದೆ ಆಕಸ್ಮಿಕವಾಗಿ ಯಾವನೋ ಒಬ್ಬನಿಗೆ ಪ್ರಯಾಗಯಾತ್ರೆಯೂ, ಅಲ್ಲಿ ಸ್ನಾನಪಾನಾದಿಗಳೂ ಲಭಿಸಿದುವೆಂದು ತಿಳಿಯೋಣ; ಆತನೂ ಸಹ ಸಕಲವಿಧವಾದ ಇಷ್ಟಾರ್ಥಗಳನ್ನೂ ಪೂರ್ತಿಮಾಡಿಕೊಂಡು ಸ್ವರ್ಗ ಲೋಕದಲ್ಲಿ ಮಾನ್ಯತೆಯನ್ನು ಪಡೆಯುವನು. ಧನಧಾನ್ಯಗಳಿಂದ ಸದಾ ಸಮೃದ್ಧ ವಾದ ಕಡೆಯಲ್ಲಿ ಮತ್ತೆ ಜನಿಸುವನು.

೧೭. ಪ್ರಯಾಗದ ಮಹಿಮೆಯು ಎಂಥದೆಂಬುದನ್ನು ಚೆನ್ನಾಗಿ ತಿಳಿದವ ನಂತೂ ಅನವರತವೂ ಸುಖದಿಂದಿರುವನು. ಅವನ ತಂದೆ, ತಾತ, ಮುತ್ತಾತ ಮುಂತಾದವರೆಲ್ಲರೂ ನರಕದಿಂದ ಪಾರಾಗುವರು.

೧೮. ತತ್ತ್ವಜ್ಞನಾದ ಎಲೈ ಧರ್ಮರಾಜನೇ, ನೀನು ಧರ್ಮಾನುಸಾರವಾಗಿ ಮೇಲೆ ಮೇಲೆ ಪ್ರಶ್ನಿಸಿದೆ. ನಿನ್ನ ಹಿತದ ಸಲುವಾಗಿ ಸನಾತನವೆನಿಸಿದ ಈ ಧರ್ಮ ರಹಸ್ಯವನ್ನು ನಿನಗೆ ಹೇಳಿದೆನು.

೧೯. ಧರ್ಮರಾಜನು ಹೇಳಿದನು.—ಎಲೈ ಮಹರ್ಷಿಯೇ, ಇಂದಿಗೆ ನನ್ನ ಜನ್ಮವು ಸಫಲವಾಯಿತು; ವಂಶವು ಉದ್ಧಾರವಾಯಿತು. ನಾನು ಸಂತುಷ್ಟ ನಾದೆನು. ನಿನ್ನ ದರ್ಶನದಿಂದಲೇ ಅನುಗೃಹೀತನಾದೆನು.

ತ್ವದ್ದರ್ಶನಾತ್ತು ಧರ್ಮಾತ್ಮನ್ ಮುಕ್ತೋಽಹಂ ಚಾದ್ಯ ಕಿಲ್ಬಿಷಾತ್ ।
ಇದಾನೀಂ ವೇದ್ಮಿ ಚಾತ್ಮಾನಂ ಭಗವನ್ ಗತಕಲ್ಮಷಂ ॥೨೦॥

॥ ಮಾರ್ಕಂಡೇಯ ಉವಾಚ ॥

ದಿಷ್ಟ್ಯಾ ತೇ ಸಫಲಂ ಜನ್ಮ ದಿಷ್ಟ್ಯಾ ತೇ ತಾರಿತಂ ಕುಲಂ ।
ಕೀರ್ತನಾದ್ವರ್ಧತೇ ಪುಣ್ಯಂ ಶ್ರುತಾತ್ಪಾಪಪ್ರಣಾಶನಂ ॥೨೧॥

॥ ಯುಧಿಷ್ಠಿರ ಉವಾಚ ॥

ಯಮುನಾಯಾಂ ತು ಕಿಂ ಪುಣ್ಯಂ ಕಿಂ ಫಲಂ ತು ಮಹಾಮುನೇ ।
ಏತನ್ಮೇ ಸರ್ವಮಾಖ್ಯಾಹಿ ಯಥಾದೃಷ್ಟಂ ಯಥಾಶ್ರುತಂ ॥೨೨॥

॥ ಮಾರ್ಕಂಡೇಯ ಉವಾಚ ॥

ತಪನಸ್ಯ ಸುತಾ ದೇವೀ ತ್ರಿಷು ಲೋಕೇಷು ವಿಶ್ರುತಾ ।
ಸಮಾಖ್ಯಾತಾ ಮಹಾಭಾಗಾ ಯಮುನಾ ತತ್ರ ನಿಮ್ನಗಾ ॥೨೩॥

---

೨೦. ಓ ಧರ್ಮಾತ್ಮಾ, ನಿನ್ನನ್ನು ನೋಡಿದ ಮಾತ್ರದಿಂದ ನನ್ನ ಪಾಪವು ದೂರವಾಯಿತು. ಎಲೈ ಪೂಜ್ಯನೇ, ನಾನೀಗ ಪರಿಶುದ್ಧನಾದೆನೆಂದು ತಿಳಿಯುತ್ತೇನೆ.

೨೧. ಮಾರ್ಕಂಡೇಯ ಮಹರ್ಷಿ ಹೇಳಿದನು.—ನಿನ್ನ ಜನ್ಮವು ಸಾರ್ಥಕವಾದುದು ಒಂದು ಭಾಗ್ಯ. ನಿನ್ನ ಕುಲವು ಉದ್ಧಾರವಾದುದು ಅದೃಷ್ಟವಿಶೇಷ. ಪ್ರಯಾಗದ ಮಹಿಮೆಯನ್ನು ಕೀರ್ತನಮಾಡಿದರೆ ಪುಣ್ಯವು ಹೆಚ್ಚುತ್ತದೆ; ಕೇಳಿದರೆ ಪಾಪವು ಪರಿಹಾರವಾಗುತ್ತದೆ.

೨೨. ಧರ್ಮರಾಜನು ಹೇಳಿದನು.—ಎಲೈ ಮಹಾಮುನಿಯೆ, ಯಮುನಾ ನದಿಯಲ್ಲಿ ಸ್ನಾನಪಾನಗಳನ್ನು ಮಾಡುವುದರಿಂದ ಬರುವ ಪುಣ್ಯವೆಂತಹುದು? ಫಲವಾವುದು? ಇದೆಲ್ಲವನ್ನೂ ನೀನು ಕಂಡು ಕೇಳಿದಂತೆ ನನಗೆ ತಿಳಿಸು.

೨೩. ಮಾರ್ಕಂಡೇಯಮುನಿ ಹೇಳಿದನು.—ಸೂರ್ಯನ ಪುತ್ರಿಯೂ, ತ್ರಿಲೋಕವಿಖ್ಯಾತೆಯೂ ಆದ ಯಮುನಾದೇವಿಯು ಆ ಪ್ರಯಾಗಕ್ಷೇತ್ರದಲ್ಲಿ ನದೀರೂಪವಾಗಿ ಹರಿಯುತ್ತಾಳೆಂಬುದು ಸುಪ್ರಸಿದ್ಧವಾದ ವಿಷಯ.

ಯೇನೈವ ನಿಃಸೃತಾ ಗಂಗಾ ತೇನೈವ ಯಮುನಾ ಗತಾ ।
ಯೋಜನಾನಾಂ ಸಹಸ್ರೇಷು ಕೀರ್ತನಾತ್ಪಾಪನಾಶಿನೀ ॥೨೪॥

ತತ್ರ ಸ್ನಾತ್ವಾ ಚ ಪೀತ್ವಾ ಚ ಯಮುನಾಯಾಂ ಯುಧಿಷ್ಠಿರ ।
ಕೀರ್ತನಾಲ್ಲಭ್ಯತೇ ಪುಣ್ಯಂ ದೃಷ್ಟ್ವಾ ಭದ್ರಾಣಿ ಪಶ್ಯತಿ ॥೨೫॥

ಅವಗಾಹ್ಯ ಚ ಪೀತ್ವಾ ಚ ಪುನಾತ್ಯಾಸಪ್ತಮಂ ಕುಲಂ ।
ಪ್ರಾಣಾಂಸ್ತ್ಯಜತಿ ಯಸ್ತತ್ರ ಸ ಯಾತಿ ಪರಮಾಂ ಗತಿಂ ॥೨೬॥

ಅಗ್ನಿತೀರ್ಥಮಿತಿ ಖ್ಯಾತಂ ಯಮುನಾದಕ್ಷಿಣೇ ತಟೇ ।
ಪಶ್ಚಿಮೇ ಧರ್ಮರಾಜಸ್ಯ ತೀರ್ಥಂ ತು ನರಕಂ ಸ್ಮೃತಂ ॥೨೭॥

ತತ್ರ ಸ್ನಾತ್ವಾ ದಿವಂ ಯಾಂತಿ ಯೇ ಮೃತಾಸ್ತೇಽಪುನರ್ಭವಾಃ ।
ಏವಂ ತೀರ್ಥಸಹಸ್ರಾಣಿ ಯಮುನಾದಕ್ಷಿಣೇ ತಟೇ ॥೨೮॥

---

೨೪. ಯಾವ ಪುಣ್ಯಮಾರ್ಗದಿಂದ ಗಂಗಾನದಿಯು ಹರಿದು ಬರುತ್ತದೆಯೋ ಅದೇ ಮಾರ್ಗದಿಂದ ಯಮುನಾನದಿಯೂ ಹರಿಯುತ್ತದೆ. ಸಾವಿರ ಯೋಜನಗಳ ದೂರದಲ್ಲಿರಲಿ, ಕೀರ್ತನಮಾಡಿದ ಮಾತ್ರದಿಂದಲೇ ಯಮುನಾನದಿಯು ಪಾಪಗಳನ್ನು ಕಳೆಯುವುದು.

೨೫. ಓ ಯುಧಿಷ್ಠಿರಾ, ಪ್ರಯಾಗಕ್ಷೇತ್ರಕ್ಕೆ ಹೋಗಿ ಯಮುನಾನದಿಯಲ್ಲಿ ಸ್ನಾನಪಾನಗಳನ್ನು ಮಾಡುವುದರಿಂದ ಶ್ರೇಯಸ್ಸುಂಟು. ಅದನ್ನು ಸ್ತುತಿಸಿದರೆ ಪುಣ್ಯ ಬರುವುದು ; ದರ್ಶನಮಾಡಿದರೆ ಮಂಗಳವಾಗುವುದು.

೨೬. ಯಮುನೆಯಲ್ಲಿ ಸ್ನಾನಮಾಡಿ ಅದರ ಪವಿತ್ರೋದಕವನ್ನು ಪ್ರಾಶನ ಮಾಡಿದರೆ ಏಳು ತಲೆಯ ವರೆಗೆ ವಂಶವು ಪರಿಶುದ್ಧವಾಗುತ್ತದೆ. ಅಲ್ಲಿ ಪ್ರಾಣತ್ಯಾಗ ಮಾಡುವಾತನು ಅತ್ಯುತ್ತಮವಾದ ಗತಿಯನ್ನು ಪಡೆಯುವನು.

೨೭. ಯಮುನಾನದಿಯ ಬಲದಡದಲ್ಲಿ ಸುಪ್ರಸಿದ್ಧವಾದ ಅಗ್ನಿತೀರ್ಥವಿದೆ. ಅದರ ಪಶ್ಚಿಮದಲ್ಲಿ ಧರ್ಮರಾಜತೀರ್ಥವೆಂಬುದೊಂದುಂಟು. ಅದನ್ನು ನರಕ ತೀರ್ಥವೆಂದೂ ಹೇಳುತ್ತಾರೆ.

೨೮. ಅಲ್ಲಿನ ಸ್ನಾನದಿಂದ ಸ್ವರ್ಗವೂ, ಮರಣದಿಂದ ಮೋಕ್ಷವೂ ಲಭಿಸುವುವು. ಹೀಗೆ ಯಮುನಾನದಿಯ ಬಲದಡದಲ್ಲಿ ಸಾವಿರಾರು ಪುಣ್ಯತೀರ್ಥಗಳಿವೆ.

ಉತ್ತರೇಣ ಪ್ರವಕ್ಷ್ಯಾಮಿ ಆದಿತ್ಯಸ್ಯ ಮಹಾತ್ಮನಃ ।
ತೀರ್ಥಂ ನಿರಂಜನಂ ನಾಮ ಯತ್ರ ದೇವಾಃ ಸನಾತನಾಃ ॥೨೯॥

ಉಪಾಸತೇ ಸದಾ ಸಂಧ್ಯಾಂ ತ್ರಿಕಾಲಂ ಹಿ ಯುಧಿಷ್ಠಿರ ।
ದೇವಾಃ ಸೇವಂತಿ ತತ್ತೀರ್ಥಂ ಯೇ ಚಾನ್ಯೇ ವಿಬುಧಾ ಜನಾಃ ॥೩೦॥

ಶ್ರದ್ಧಧಾನಪರೋ ಭೂತ್ವಾ ಕುರು ತೀರ್ಥಾಭಿಷೇಚನಂ ।
ಅನ್ಯೇ ಚ ಬಹವಸ್ತೀರ್ಥಾಃ ಸರ್ವಪಾಪಹರಾಃ ಸ್ಮೃತಾಃ ।
ತೇಷು ಸ್ನಾತ್ವಾ ದಿವಂ ಯಾಂತಿ ಯೇ ಮೃತಾಸ್ತೇಽಪುನರ್ಭವಾಃ ॥೩೧॥

ಗಂಗಾ ಚ ಯಮುನಾ ಚೈವ ಉಭೇ ತುಲ್ಯಫಲೇ ಸ್ಮೃತೇ ।
ಕೇವಲಂ ಜ್ಯೇಷ್ಠಭಾವೇನ ಗಂಗಾ ಸರ್ವತ್ರ ಪೂಜ್ಯತೇ ॥೩೨॥

ಏವಂ ಕುರುಷ್ವ ಕೌಂತೇಯ ಸರ್ವತೀರ್ಥಾಭಿಷೇಚನಂ ।
ಯಾವಜ್ಜೀವಕೃತಂ ಪಾಪಂ ತತ್ಕ್ಷಣಾದೇವ ನಶ್ಯತಿ ॥೩೩॥

---

೨೯-೩೦. ಇನ್ನು ಉತ್ತರದಿಕ್ಕಿನಲ್ಲಿ ಇರತಕ್ಕುವನ್ನು ಹೇಳುವೆನು; ಕೇಳು. ಮಹಾತ್ಮನಾದ ಆದಿತ್ಯನ ತೀರ್ಥವು ಮೊದಲನೆಯದು. ಅದಕ್ಕೆ ನಿರಂಜನತೀರ್ಥವೆಂದೂ ಪ್ರಸಿದ್ಧಿಯುಂಟು. ಇಂದ್ರಾದಿ ದೇವತೆಗಳು ಅಲ್ಲಿ ಪ್ರತಿದಿನ ಮೂರು ವೇಳೆಯಲ್ಲೂ ಸಂಧ್ಯಾಪೂಜೆಯನ್ನು ನಡೆಸುವರು. ಓ ಯುಧಿಷ್ಠಿರಾ, ದೇವತೆಗಳೂ, ಎಷ್ಟೋಜನ ಜ್ಞಾನಿಗಳೂ ಆ ತೀರ್ಥವನ್ನು ಸೇವಿಸುತ್ತಾರೆ.

೩೧. ಓ ಧರ್ಮರಾಜಾ, ಶ್ರದ್ಧಾವಂತನಾಗಿ ಅಲ್ಲಿ ಸ್ನಾನಮಾಡು. ಇನ್ನೂ ಬೇಕಾದಷ್ಟು ತೀರ್ಥಗಳಿವೆ. ಎಲ್ಲವೂ ಪಾಪಗಳನ್ನು ಕಳೆಯುವಂತಹವೇ. ಅವುಗಳಲ್ಲಿ ಸ್ನಾನಮಾಡಿದವರು ಸ್ವರ್ಗಕ್ಕೆ ಹೋಗುತ್ತಾರೆ; ಮೃತರಾದವರು ಪುನರ್ಜನ್ಮವಿಲ್ಲದ ಸದ್ಗತಿಯನ್ನು ಪಡೆಯುತ್ತಾರೆ.

೩೨. ಗಂಗೆ ಯಮುನೆ ಇವರಿಬ್ಬರೂ ಸಮಾನವಾದ ಫಲವನ್ನೇ ಕೊಡುತ್ತಾರೆ. ಆದರೆ ಯಮುನೆಗಿಂತ ಗಂಗೆ ಹಿರಿಯವಳೆಂಬ ಭಾವನೆಯಿಂದ ಆಕೆಗೆ ಎಲ್ಲೆಡೆಯಲ್ಲೂ ಮನ್ನಣೆಯು ಹೆಚ್ಚಾಗಿದೆ.

೩೩. ಎಲೈ ಕುಂತೀಪುತ್ರನೇ, ಈಗ ನಾನು ಹೇಳಿದಂತೆ ಎಲ್ಲ ತೀರ್ಥಗಳಿಗೂ ಹೋಗಿ ಸ್ನಾನಮಾಡು. ಜೀವಮಾನದಲ್ಲಿ ನೀನು ಮಾಡಿದ ಪಾಪವೆಲ್ಲವೂ ಒಡನೆ ಮಾಯವಾಗುವುದು.

**ಯಸ್ತ್ವಿಮಂ ಕಲ್ಯ ಉತ್ಥಾಯ ಪಠತೇ ಚ ಶೃಣೋತಿ ಚ ।**
**ಮುಚ್ಯತೇ ಸರ್ವಪಾಪೇಭ್ಯಃ ಸ್ವರ್ಗಲೋಕಂ ಸ ಗಚ್ಛತಿ ॥೩೪॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ**
**ಪ್ರಯಾಗಮಾಹಾತ್ಮ್ಯೇಽಷ್ಟಾಧಿಕಶತತಮೋಽಧ್ಯಾಯಃ**

---

೩೪. ಪ್ರತಿದಿನವೂ ಬೆಳಗ್ಗೆ ಎದ್ದು ಪ್ರಯಾಗಮಾಹಾತ್ಮ್ಯವನ್ನು ಯಾವನು ಓದುತ್ತಾನೋ ಅಥವಾ ಕೇಳುತ್ತಾನೋ ಅವನು ಪಾತಕಗಳಿಂದ ಮುಕ್ತನಾಗಿ ಸ್ವರ್ಗಲೋಕವನ್ನು ಸೇರುತ್ತಾನೆ.

## ಅಧ್ಯಾಯದ ಸಾರಾಂಶ

ಪ್ರಯಾಗಕ್ಷೇತ್ರದ ಮಹಿಮೆಯನ್ನು ಮಾರ್ಕಂಡೇಯ ಮುನಿಯು ಧರ್ಮರಾಜನಿಗೆ ಮತ್ತಷ್ಟು ವಿವರಿಸುತ್ತಾನೆ.

ಪ್ರಯಾಗಕ್ಷೇತ್ರವು ಐದು ಯೋಜನ ವಿಸ್ತಾರವಾಗಿ ಮಂಡಲಾಕಾರವಾಗಿದೆ. ಮನಸ್ಸಿರಲಿ, ಇಲ್ಲದಿರಲಿ ಅಲ್ಲಿ ಸ್ನಾನಮಾಡಿದರೆ ಸಾಕು; ಆ ಪವಿತ್ರಜಲವನ್ನು ಪಾನಮಾಡಿದರೆ ಸಾಕು; ಹೆಜ್ಜೆಯಿಟ್ಟರೆ ಸಾಕು ಎಂತಹ ಪಾಪಿಷ್ಠನೇ ಆಗಿರಲಿ ಸದ್ಗತಿಗೇರುವನು. ಯಮುನಾನದಿಯ ಎರಡು ದಡಗಳಲ್ಲಿಯೂ ಎಷ್ಟೋ ಪುಣ್ಯತೀರ್ಥಗಳಿವೆ. ಒಂದೊಂದಕ್ಕೂ ಅತಿಶಯವಾದ ಮಾಹಾತ್ಮ್ಯವುಂಟು. ಗಂಗೆಗೂ ಯಮುನೆಗೂ ಮಹಿಮೆಯಲ್ಲಿ ಹೆಚ್ಚು ಕಡಿಮೆಯೇನೂ ಇಲ್ಲ; ಎರಡೂ ಸಮಾನವಾದ ಫಲವನ್ನೇ ಕೊಡುತ್ತವೆ.

ಶ್ರೀಮತ್ಸ್ಯಮಹಾಪುರಾಣದಲ್ಲಿ ಪ್ರಯಾಗಮಾಹಾತ್ಮ್ಯದೊಳಗೆ
ನೂರೆಂಟನೆಯ ಅಧ್ಯಾಯವು ಮುಗಿದುದು.

## ಅಥ ನವಾಧಿಕಶತತಮೋಽಧ್ಯಾಯಃ

॥ ಮಾರ್ಕಂಡೇಯ ಉವಾಚ ॥

ಶ್ರುತಂ ಮೇ ಬ್ರಹ್ಮಣಾ ಪ್ರೋಕ್ತಂ ಪುರಾಣೇ ಬ್ರಹ್ಮಸಂಭವೇ ।
ತೀರ್ಥಾನಾಂ ತು ಸಹಸ್ರಾಣಿ ಶತಾನಿ ನಿಯುತಾನಿ ಚ ।
ಸರ್ವೇ ಪುಣ್ಯಾಃ ಪವಿತ್ರಾಶ್ಚ ಗತಿಶ್ಚ ಪರಮಾ ಸ್ಮೃತಾ ॥ ೧ ॥

ಸೋಮತೀರ್ಥಂ ಮಹಾಪುಣ್ಯಂ ಮಹಾಪಾತಕನಾಶನಂ ।
ಸ್ನಾನಮಾತ್ರೇಣ ರಾಜೇಂದ್ರ ಪುರುಷಾಂಸ್ತಾರಯೇಚ್ಛತಂ ।
ತಸ್ಮಾತ್ಸರ್ವಪ್ರಯತ್ನೇನ ತತ್ರ ಸ್ನಾನಂ ಸಮಾಚರೇತ್ ॥ ೨ ॥

॥ ಯುಧಿಷ್ಠಿರ ಉವಾಚ ॥

ಪೃಥಿವ್ಯಾಂ ನೈಮಿಷಂ ಪುಣ್ಯಮಂತರಿಕ್ಷೇ ಚ ಪುಷ್ಕರಂ ।
ತ್ರಯಾಣಾಮಪಿ ಲೋಕಾನಾಂ ಕುರುಕ್ಷೇತ್ರಂ ವಿಶಿಷ್ಯತೇ ॥ ೩ ॥

---

೧. ಮಾರ್ಕಂಡೇಯಋಷಿ ಹೇಳಿದನು.—ಎಣಿಸಲಾಗದಷ್ಟು ಕೋಟಿಗಟ್ಟಲೆಯ ಪುಣ್ಯತೀರ್ಥಗಳಿವೆಯೆಂದು ಬ್ರಹ್ಮಪುರಾಣದಲ್ಲಿ ಬ್ರಹ್ಮನು ಹೇಳಿರುವನೆಂದು ಕೇಳಿದ್ದೇನೆ. ಅವೆಲ್ಲವೂ ಪುಣ್ಯಕರವಾದುವು; ಪವಿತ್ರವಾದುವು; ಸದ್ಗತಿಯನ್ನು ಕೊಡತಕ್ಕುವು.

೨. ಸೋಮತೀರ್ಥವು ಬಹಳ ಪುಣ್ಯಪ್ರದವಾದುದು. ಘೋರವಾದ ಪಾಪಗಳನ್ನು ಸಹ ನಾಶಪಡಿಸತಕ್ಕುದು. ಸ್ನಾನಮಾತ್ರದಿಂದಲೇ ನೂರಾರು ತಲೆಯವರೆಗೆ ವಂಶಸ್ಥರನ್ನು ಉದ್ಧರಿಸಬಲ್ಲುದು. ಆದುದರಿಂದ, ಎಲೈ ಧರ್ಮರಾಜನೇ, ಸರ್ವಪ್ರಯತ್ನದಿಂದಲೂ ಅಲ್ಲಿ ಸ್ನಾನವನ್ನು ಮಾಡು.

೩. ಧರ್ಮರಾಜನು ಹೇಳಿದನು.—ಭೂಮಿಯಲ್ಲಿ ನೈಮಿಶಕ್ಷೇತ್ರವೂ, ಅಂತರಿಕ್ಷದಲ್ಲಿ ಪುಷ್ಕರಕ್ಷೇತ್ರವೂ ಪ್ರಸಿದ್ಧವಾದುವು. ಕುರುಕ್ಷೇತ್ರವಾದರೋ ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾದುದು.

**ಸರ್ವಾಣಿ ತಾನಿ ಸಂತ್ಯಜ್ಯ ಕಥಮೇಕಂ ಪ್ರಶಂಸಸಿ ।**
**ಅಪ್ರಮಾಣಂ ತು ತತ್ಪ್ರೋಕ್ತಮಶ್ರದ್ಧೇಯಮನುತ್ತಮಂ ॥ ೪ ॥**

**ಗತಿಂ ಚ ಪರಮಾಂ ದಿವ್ಯಾಂ ಭೋಗಾಂಶ್ಚೈವ ಯಥೇಪ್ಸಿತಾನ್ ।**
**ಕಿಮರ್ಥಮಲ್ಪಯೋಗೇನ ಬಹುಧರ್ಮಂ ಪ್ರಶಂಸಸಿ ।**
**ಏತನ್ಮೇ ಸಂಶಯಂ ಬ್ರೂಹಿ ಯಥಾದೃಷ್ಟಂ ಯಥಾಶ್ರುತಂ ॥ ೫ ॥**

**॥ ಮಾರ್ಕಂಡೇಯ ಉವಾಚ ॥**

**ಅಶ್ರದ್ಧೇಯಂ ನ ವಕ್ತವ್ಯಂ ಪ್ರತ್ಯಕ್ಷಮಪಿ ಯದ್ಭವೇತ್ ।**
**ನರಸ್ಯಾಶ್ರದ್ಧಧಾನಸ್ಯ ಪಾಪೋಪಹತಚೇತಸಃ ॥ ೬ ॥**

**ಅಶ್ರದ್ಧಧಾನೋ ಹ್ಯಶುಚಿರ್ದುರ್ಮತಿಸ್ತ್ಯಕ್ತಮಂಗಲಃ ।**
**ಏತೇ ಪಾತಕಿನಃ ಸರ್ವೇ ತೇನೇದಂ ಭಾಷಿತಂ ತ್ವಯಾ ॥ ೭ ॥**

---

೪. ಅವೆಲ್ಲವನ್ನೂ ಬಿಟ್ಟು ಪ್ರಯಾಗವೊಂದನ್ನೇ ಏಕೆ ಶ್ಲಾಘಿಸುತ್ತೀಯೆ? ಅವುಗಳ ವಿಷಯದಲ್ಲಿ ಹೇಳಿರುವುದು ಅಪ್ರಮಾಣವೂ, ನಂಬಿಕೆಗೆ ಅನರ್ಹವೂ, ತುಚ್ಛವೂ ಆಗಿರಬೇಕಲ್ಲವೆ?

೫. ಅಲ್ಪಸನ್ನಾಹದಿಂದ ಉತ್ತಮಗತಿಯೂ, ಮನಸ್ಸಿಗೆ ಬೇಕಾದ ದಿವ್ಯ ಭೋಗಗಳೂ ಅಪಾರವಾದ ಸುಕೃತವೂ ಉಂಟಾಗುವುವೆಂದು ಹೊಗಳುವೆಯಲ್ಲಾ! ಅದು ಹೇಗೆ? ನನಗೆ ಇದೇ ಸಂದೇಹ. ನೀನು ನೋಡಿರುವಂತೆ ಮತ್ತು ಕೇಳಿರುವಂತೆ ಈ ವಿಷಯವನ್ನು ವಿವರಿಸಿ ಹೇಳು.

೬. ಮಾರ್ಕಂಡೇಯಮುನಿ ಹೇಳಿದನು.—ಶ್ರದ್ಧೆಯಿಲ್ಲದೆ, ಪಾಪದಿಂದ ಮನಸ್ಸನ್ನು ಕೆಡಿಸಿಕೊಂಡಿರುವ ಮನುಷ್ಯನಿಗೆ ಪ್ರತ್ಯಕ್ಷವಾದ ವಿಚಾರವನ್ನು ಕೂಡ ಹೇಳಬಾರದು. ಏಕೆಂದರೆ ಅವನು ಅದನ್ನೂ ಸಹ ನಂಬದೆ ಹೋಗಬಹುದು.

೭. ನಂಬಿಕೆಯಿಲ್ಲದವನು, ಅಶುಚಿಯಾದವನು, ಅಮಂಗಲಸ್ವಭಾವದವನು ಇವರೆಲ್ಲರೂ ಪಾಪಿಗಳು; ಆದುದರಿಂದ ನೀನು ಈ ಮಾತನಾಡುವೆ.

ಶೃಣು ಪ್ರಯಾಗಮಾಹಾತ್ಮ್ಯಂ ಯಥಾದೃಷ್ಟಂ ಯಥಾಶ್ರುತಂ ।
ಪ್ರತ್ಯಕ್ಷಂ ಚ ಪರೋಕ್ಷಂ ಚ ಯಥಾನ್ಯತ್ಸಂಭವಿಷ್ಯತಿ ॥ ೮ ॥

ಯಥೈವಾನ್ಯದದೃಷ್ಟಂ ಚ ಯಥಾದೃಷ್ಟಂ ಯಥಾಶ್ರುತಂ ।
ಶಾಸ್ತ್ರಂ ಪ್ರಮಾಣಂ ಕೃತ್ವಾ ಚ ಯುಜ್ಯತೇ ಯೋಗಮಾತ್ಮನಃ ॥ ೯ ॥

ಕ್ಲಿಶ್ಯತೇ ಚಾಪರಸ್ತತ್ರ ನೈವ ಯೋಗಮವಾಪ್ನುಯಾತ್ ।
ಜನ್ಮಾಂತರಸಹಸ್ರೇಭ್ಯೋ ಯೋಗೋ ಲಭ್ಯೇತ ಮಾನವೈಃ ॥೧೦॥

ಯಥಾ ಯೋಗಸಹಸ್ರೇಣ ಯೋಗೋ ಲಭ್ಯೇತ ಮಾನವೈಃ ।
ಯಸ್ತು ಸರ್ವಾಣಿ ರತ್ನಾನಿ ಬ್ರಾಹ್ಮಣೇಭ್ಯಃ ಪ್ರಯಚ್ಛತಿ ॥೧೧॥

ತೇನ ದಾನೇನ ದತ್ತೇನ ಯೋಗಂ ನಾಭ್ಯೇತಿ ಮಾನವಃ ।
ಪ್ರಯಾಗೇ ತು ಮೃತಸ್ಯೇದಂ ಸರ್ವಂ ಭವತಿ ನಾನ್ಯಥಾ ॥೧೨॥

---

೮. ನಾನು ಕಂಡಂತೆ ಮತ್ತು ಕೇಳಿರುವಂತೆ ಪ್ರಯಾಗದ ಮಹಿಮೆಯನ್ನು ಹೇಳುತ್ತೇನೆ ಕೇಳು. ಅವುಗಳಲ್ಲಿ ಯಥಾಸಂಭವವಾಗಿ ಕೆಲವು ವಿಷಯಗಳು ಪ್ರತ್ಯಕ್ಷವಾಗತಕ್ಕುವು ; ಉಳಿದುವು ಪರೋಕ್ಷವಾದುವು.

೯. ಕಣ್ಣಾರ ಕಂಡುದನ್ನೂ, ಕಿವಿಯಾರ ಕೇಳಿದುದನ್ನೂ ನಂಬುವಂತೆಯೇ, ಶ್ರದ್ಧಾವಂತನು ಇಂದ್ರಿಯಾತೀತವಾದ ವಿಷಯಗಳನ್ನೂ ಕೂಡ ನಂಬುವನು. ಏಕೆಂದರೆ ಅವನಿಗೆ ಶಾಸ್ತ್ರವೇ ಪ್ರಮಾಣ. ಅದರ ಬಲದಿಂದ ಆತನು ತನ್ನ ಸದ್ಗತಿಗೆ ಸಾಧನವಾದ ಯೋಗಸಿದ್ಧಿಯನ್ನು ಪಡೆಯುವನು.

೧೦. ಮತ್ತೊಬ್ಬನು ಎಂದರೆ ಶ್ರದ್ಧೆಯಿಲ್ಲದವನು ಕ್ಲೇಶಕ್ಕೆ ಒಳಗಾಗುವನು. ಅವನಿಗೆ ಯೋಗವು ಸಿದ್ಧಿಸುವುದಿಲ್ಲ. ಮನುಷ್ಯರಿಗೆ ಯೋಗಜ್ಞಾನವು ಫಲಿಸ ಬೇಕಾದರೆ ಸಾವಿರಾರು ಜನ್ಮಗಳು ಬೇಕು.

೧೧-೧೨. ಅದೆಂತೆಂದರೆ—ಮನುಜರಿಗೆ ಯೋಗಜ್ಞಾನವು ಸಿದ್ಧಿಸಬೇಕಾದರೆ ಅದಕ್ಕೆ ಸಾಧನವಾದ ಸಾವಿರಾರು ಧರ್ಮಕಾರ್ಯಗಳು ಬೇಕು. ಬಗೆಬಗೆಯ ರತ್ನ ಗಳನ್ನು ಬ್ರಾಹ್ಮಣರಿಗೆ ಒಬ್ಬನು ದಾನಮಾಡುವನೆಂದು ಭಾವಿಸೋಣ. ಆ ದಾನ ಮಾತ್ರದಿಂದಲೇ ಅವನಿಗೆ ಯೋಗವು ಫಲಿಸುವುದಿಲ್ಲ. ಆದರೆ ಪ್ರಯಾಗಕ್ಷೇತ್ರದಲ್ಲಿ ಮರಣ ಹೊಂದಿದರೆ ಸಾಕು. ಅವನಿಗೆ ಇದೆಲ್ಲವೂ ಈಡೇರುವುದು. ಅದರಲ್ಲಿ ಸಂದೇಹವೇ ಇಲ್ಲ.

ಪ್ರಧಾನಹೇತುಂ ವಕ್ಷ್ಯಾಮಿ ಶ್ರದ್ಧಧತ್ಸ್ವ ಚ ಭಾರತ ।
ಯಥಾ ಸರ್ವೇಷು ಭೂತೇಷು ಬ್ರಹ್ಮ ಸರ್ವತ್ರ ದೃಶ್ಯತೇ ॥೧೩॥
ಬ್ರಾಹ್ಮಣೇ ವಾಽಸ್ತಿ ಯತ್ಕಿಂಚಿದಬ್ರಾಹ್ಮಮಿತಿ ವೋಚ್ಯತೇ ।
ಏವಂ ಸರ್ವೇಷು ಭೂತೇಷು ಬ್ರಹ್ಮ ಸರ್ವತ್ರ ಪೂಜ್ಯತೇ ॥೧೪॥
ತಥಾ ಸರ್ವೇಷು ಲೋಕೇಷು ಪ್ರಯಾಗಂ ಪೂಜಯೇದ್ಬುಧಃ ।
ಪೂಜ್ಯತೇ ತೀರ್ಥರಾಜಸ್ತು ಸತ್ಯಮೇವ ಯುಧಿಷ್ಠಿರ ॥೧೫॥
ಬ್ರಹ್ಮಾಪಿ ಸ್ಮರತೇ ನಿತ್ಯಂ ಪ್ರಯಾಗಂ ತೀರ್ಥಮುತ್ತಮಂ ।
ತೀರ್ಥರಾಜಮನುಪ್ರಾಪ್ಯ ನ ಚಾನ್ಯತ್ಕಿಂಚಿದರ್ಹತಿ ॥೧೬॥
ಕೋ ಹಿ ದೇವತ್ವಮಾಸಾದ್ಯ ಮನುಷ್ಯತ್ವಂ ಚಿಕೀರ್ಷತಿ ।
ಅನೇನೈವೋಪಮಾನೇನ ತ್ವಂ ಜ್ಞಾಸ್ಯಸಿ ಯುಧಿಷ್ಠಿರ ।
ಯತಃ ಪುಣ್ಯತಮಂ ನಾಸ್ತಿ ತಥೈವ ಕಥಿತಂ ಮಯಾ ॥೧೭॥

---

೧೩-೧೪. ಓ ಧರ್ಮರಾಜಾ, ಮುಖ್ಯವಾದ ಕಾರಣವನ್ನು ಹೇಳುತ್ತೇನೆ. ಇದನ್ನು ನಂಬು. ಎಲ್ಲೆಡೆಗಳಲ್ಲಿಯೂ, ಸಕಲ ಜಂತುಗಳಲ್ಲಿಯೂ ಪರಬ್ರಹ್ಮವು ವ್ಯಾಪಿಸಿರುವುದು. ಬ್ರಾಹ್ಮಣನಲ್ಲಿಯೂ, ಉಳಿದ ಒಂದೊಂದು ವಸ್ತುವಿನಲ್ಲಿಯೂ ಅದರ ಅಂಶವು ಇದ್ದೇ ಇದೆ. ಯಾವ ಪ್ರಾಣಿಗೆ ಎಲ್ಲಿ ಪೂಜೆಯನ್ನು ಸಲ್ಲಿಸಿದರೂ ಅದು ನಿಜವಾಗಿ ಪರಬ್ರಹ್ಮವನ್ನೇ ಸೇರುತ್ತದೆ.

೧೫. ಹಾಗೆಯೇ ಜ್ಞಾನಿಯಾದವನು ಸಕಲ ಕ್ಷೇತ್ರಗಳಲ್ಲಿಯೂ ಪ್ರಯಾಗವನ್ನೇ ಅನುಸಂಧಾನಮಾಡುತ್ತ ಅವುಗಳನ್ನು ಪೂಜಿಸಬೇಕು. ಓ ಯುಧಿಷ್ಠಿರಾ, ವಾಸ್ತವವಾಗಿ ಆ ಪೂಜೆಯು ತೀರ್ಥಗಳ ಅಧಿರಾಜನಾದ ಪ್ರಯಾಗಕ್ಕೆ ಸೇರುವುದು.

೧೬. ಬ್ರಹ್ಮನೂ ಸಹ ಶ್ರೇಷ್ಠವಾದ ಪ್ರಯಾಗತೀರ್ಥವನ್ನು ನಿತ್ಯವೂ ಸ್ಮರಿಸುತ್ತಾನೆ. ಆ ತೀರ್ಥರಾಜನಲ್ಲಿಗೆ ಹೋದರೆ ಸಾಕು; ಮತ್ತೇನನ್ನೂ ಮಾಡಬೇಕಾಗಿಲ್ಲ.

೧೭. ದೇವತಾಸ್ವರೂಪವನ್ನು ಪಡೆದ ಯಾವನು ತಾನೆ ಮನುಷ್ಯಸಹಜವಾದ ಕಾರ್ಯವನ್ನು ಮಾಡಲಿಚ್ಛಿಸುವನು? ಹೀಗೆಯೇ ಉತ್ತಮೋತ್ತಮವಾದ ಪ್ರಯಾಗತೀರ್ಥಕ್ಕೆ ಹೋದವನು ಮಿಕ್ಕ ಕ್ಷೇತ್ರಗಳಲ್ಲಿ ಮನಸ್ಸನ್ನು ಇಡುತ್ತಾನೇನು? ಎಲೈ ಧರ್ಮರಾಜನೇ, ನೀನು ಈ ಹೋಲಿಕೆಯಿಂದಲೇ ಈ ವಿಚಾರವನ್ನು ತಿಳಿಯಬಲ್ಲೆ. ಪ್ರಯಾಗಕ್ಕಿಂತ ಪುಣ್ಯಕರವಾದ ಕ್ಷೇತ್ರವು ಬೇರೊಂದಿಲ್ಲ. ದೇವಾಧಿದೇವನಾದ ಬ್ರಹ್ಮನೂ ಕೂಡ ಅದನ್ನು ಗೌರವಿಸುತ್ತಾನೆಂದ ಮೇಲೆ ಅದರ ಶ್ರೇಷ್ಠತೆಯು ಎಷ್ಟುಮಟ್ಟಿಗೆ ಇದ್ದೀತು! ಆದುದರಿಂದಲೇ ನಾನು ಈ ರೀತಿಯಾಗಿ ಹೇಳಿದುದು.

|| ಯುಧಿಷ್ಠಿರ ಉವಾಚ ||

ಶ್ರುತಂ ಚೇದಂ ತ್ವಯಾ ಪ್ರೋಕ್ತಂ ವಿಸ್ಮಿತೋಽಹಂ ಪುನಃ ಪುನಃ ।
ಕಥಂ ಯೋಗೇನ ತತ್ಪ್ರಾಪ್ತಿಃ ಸ್ವರ್ಗವಾಸಸ್ತು ಕರ್ಮಣಾ ||೧೮||

ದಾತಾ ವೈ ಲಭತೇ ಭೋಗಾನ್ ಗಾಂ ಚ ಯತ್ಕರ್ಮಣಃ ಫಲಂ ।
ತಾನಿ ಕರ್ಮಾಣಿ ಪೃಚ್ಛಾಮಿ ಪುನಸ್ತೈಃ ಪ್ರಾಪ್ಯತೇ ಮಹೀ ||೧೯||

|| ಮಾರ್ಕಂಡೇಯ ಉವಾಚ ||

ಶೃಣು ರಾಜನ್ ಮಹಾಬಾಹೋ ಯಥೋಕ್ತಕರಣಂ ಮಹೀಂ ।
ಗಾಮಗ್ನಿಂ ಬ್ರಾಹ್ಮಣಂ ಶಾಸ್ತ್ರಂ ಕಾಂಚನಂ ಸಲಿಲಂ ಸ್ತ್ರಿಯಃ ||೨೦||

ಮಾತರಂ ಪಿತರಂ ಚೈವ ಯೇ ನಿಂದಂತಿ ನರಾಧಮಾಃ ।
ನ ತೇಷಾಮೂರ್ಧ್ವಗಮನಮಿದಮಾಹ ಪ್ರಜಾಪತಿಃ ||೨೧||

---

೧೮. ಧರ್ಮರಾಜನು ಹೇಳಿದನು.—ನೀನು ಹೇಳಿದುದನ್ನು ನಾನು ಕೇಳಿದೆನು. ನನಗೆ ಮೇಲೆ ಮೇಲೆ ಆಶ್ಚರ್ಯವಾಗುತ್ತಲೇ ಇದೆ. ಪ್ರಯಾಗಯಾತ್ರೆಯು ಲಭಿಸಬೇಕಾದರೆ ಯೋಗಸಿದ್ಧಿ ಯಿರಬೇಕು ; ಸ್ವರ್ಗವಾಸಕ್ಕಾದರೋ ಯಜ್ಞ, ದಾನ ಮೊದಲಾದ ಕರ್ಮಗಳೇ ಸಾಕು. ಇದು ಹೇಗೆ ?

೧೯. ದಾನಮಾಡಿದವನು ಬಗೆಬಗೆಯ ಭೋಗಗಳನ್ನೂ ಭೂಮಿಯ ಒಡೆತನವನ್ನೂ ಪಡೆಯುತ್ತಾನೆ. ಇದು ಅವನು ಮಾಡಿದ ಸತ್ಕರ್ಮದ ಫಲ. ಆ ಕರ್ಮಗಳ ವಿಷಯವನ್ನೇ ನಾನು ಕೇಳುತ್ತಿರುವುದು. ಮತ್ತೆ ಅವುಗಳಿಂದ ಭೂಲೋಕಕ್ಕೆ ತಾನೆ ಬರಬೇಕು ?

೨೦-೨೧. ಮಾರ್ಕಂಡೇಯ ಮುನಿ ಹೇಳಿದನು.—ಮಹಾಶೂರನಾದ ಎಲೈ ಧರ್ಮರಾಜನೇ, ಕೇಳು. ಶಾಸ್ತ್ರಗಳಲ್ಲಿ ಹೇಳಿರುವಂತೆ ನಡೆಯಬೇಕು. “ ಭೂಮಿ, ಹಸು, ಅಗ್ನಿ, ಬ್ರಾಹ್ಮಣ, ಶಾಸ್ತ್ರ, ಬಂಗಾರ, ನೀರು, ಹೆಂಗಸು, ತಾಯಿ, ತಂದೆ ಇವರನ್ನು ನಿಂದಿಸುವವರು ನರಾಧಮರು. ಅವರಿಗೆ ಸದ್ಗತಿಯಿಲ್ಲ ” ಹೀಗೆಂದು ಬ್ರಹ್ಮನು ಹೇಳಿರುವನು.

ಏವಂ ಯೋಗಸ್ಯ ಸಂಪ್ರಾಪ್ತಿಃ ಸ್ಥಾನಂ ಪರಮದುರ್ಲಭಂ ।
ಗಚ್ಛಂತಿ ನರಕಂ ಘೋರಂ ಯೇ ನರಾಃ ಪಾಪಕರ್ಮಿಣಃ ॥೨೨॥

ಹಸ್ತ್ಯಶ್ವಂ ಗಾಮನಡ್ವಾಹಂ ಮಣಿಮುಕ್ತಾದಿಕಾಂಚನಂ ।
ಪರೋಕ್ಷಂ ಹರತೇ ಯಸ್ತು ಪಶ್ಚಾದ್ದಾನಂ ಪ್ರಯಚ್ಛತಿ ॥೨೩॥

ನ ಸ ಗಚ್ಛತಿ ವೈ ಸ್ವರ್ಗಂ ದಾತಾರೋ ಯತ್ರ ಭೋಗಿನಃ ।
ಅನೇನ ಕರ್ಮಣಾ ಯುಕ್ತಾಃ ಪಚ್ಯಂತೇ ನರಕೇ ಪುನಃ ॥೨೪॥

ಏವಂ ಯೋಗಂ ಚ ಧರ್ಮಂ ಚ ದಾತಾರಂ ಚ ಯುಧಿಷ್ಠಿರ ।
ಯಥಾ ಸತ್ಯಮಸತ್ಯಂ ವಾ ಅಸ್ತಿ ನಾಸ್ತೀತಿ ಯತ್ಫಲಂ ।
ನಿರುಕ್ತಂ ತು ಪ್ರವಕ್ಷ್ಯಾಮಿ ಯಥಾऽऽಹ ಸ್ವಯಮಂಶುಮಾನ್ ॥೨೫॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಪ್ರಯಾಗಮಾಹಾತ್ಮ್ಯೇ
ನವಾಧಿಕಶತತಮೋऽಧ್ಯಾಯಃ

---

೨೨. ಇಂತಹ ಯೋಗಸಿದ್ಧಿಯ ಸ್ಥಾನವು ಲಭಿಸುವುದು ಬಹಳ ಕಷ್ಟ. ಪಾಪಕರ್ಮಿಗಳಾದ ಮಾನವರು ಘೋರವಾದ ನರಕಕ್ಕೆ ಹೋಗುವರು.

೨೩-೨೪. ಆನೆ, ಕುದುರೆ, ಹಸು, ಎತ್ತು, ರತ್ನ, ಮುತ್ತು, ಬಂಗಾರ ಮುಂತಾದುವನ್ನು ಕಳ್ಳತನದಿಂದ ಅಪಹರಿಸಿ ತರುವಾಯ ದಾನಮಾಡುವಾತನಿಗೆ ಸ್ವರ್ಗವು ಲಭಿಸುವುದಿಲ್ಲ. ಹೀಗೆ ಅನ್ಯಾಯಲಬ್ಧವಾದ ವಸ್ತುಗಳನ್ನು ತಾವೂ ಅನುಭವಿಸಿ ಬಳಿಕ ದಾನಕೊಡತಕ್ಕವರಿಗೆ ನರಕದಲ್ಲಿ ಪರಿಪರಿಯ ಸಂತಾಪವು ಉಂಟಾಗುತ್ತದೆ.

೨೫. ಓ ಯುಧಿಷ್ಠಿರಾ, ಹೀಗೆ ಯೋಗ, ಧರ್ಮ, ದಾತೃ, ಸತ್ಯ, ಅಸತ್ಯ, ಶ್ರದ್ಧೆ, ಅಶ್ರದ್ಧೆ ಮತ್ತು ಇವುಗಳಿಂದ ಬರುವ ಫಲ ಇವುಗಳ ವಿಷಯವೆಲ್ಲವನ್ನೂ ಸಾಕ್ಷಾತ್ತಾಗಿ ಸೂರ್ಯದೇವನೇ ಹೇಳಿರುವ ರೀತಿಯಲ್ಲಿ ತಿಳಿಸುವೆನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿಯೂ ಪ್ರಯಾಗದ ಮಾಹಾತ್ಮ್ಯವೇ ವರ್ಣಿತವಾಗಿದೆ.

ಧರ್ಮರಾಜನಿಗೆ ಸಂದೇಹವು ಹೋಗಲಿಲ್ಲ. ಇದೇನು? ಪ್ರಪಂಚದ ಪುಣ್ಯ ತೀರ್ಥಗಳೆಲ್ಲಕ್ಕಿಂತಲೂ ಪ್ರಯಾಗಕ್ಕೆ ಇಷ್ಟೊಂದು ಅಧಿಕವಾದ ಮಹಿಮೆಯೆ? ಅವುಗಳ ಮಾಹಾತ್ಮ್ಯವು ಸುಳ್ಳೆ? ಇದನ್ನು ನಂಬುವುದು ಹೇಗೆ?" ಎಂದು ಅವನು ಯೋಚಿಸುತ್ತಿದ್ದನು.

ಮಾರ್ಕಂಡೇಯಮುನಿಯು ಉತ್ತರವಿತ್ತನು. "ಶಾಸ್ತ್ರವೇ ಪ್ರಮಾಣ; ಅದರಲ್ಲಿ ನಂಬಿಕೆಯಿಟ್ಟರೆ ಶ್ರೇಯಸ್ಸುಂಟು. ಇಲ್ಲದಿದ್ದರೆ ಬಹಳ ಕಷ್ಟಕ್ಕೆ ಗುರಿಯಾಗ ಬೇಕಾಗುವುದು. ಪರಬ್ರಹ್ಮವು ಸಕಲ ಭೂತಗಳಲ್ಲಿಯೂ ಅಡಗಿರುವಂತೆ ಪ್ರಯಾಗ ಕ್ಷೇತ್ರವು ಸಕಲತೀರ್ಥಗಳಲ್ಲಿಯೂ ತನ್ನ ಸಾನ್ನಿಧ್ಯವನ್ನು ಹರಡಿದೆ. ಯಾವ ತೀರ್ಥವನ್ನು ಪೂಜಿಸಿದರೂ ಆ ಪೂಜೆಯು ಪ್ರಯಾಗಕ್ಕೆ ಸಲ್ಲುವುದು. ಆದುದರಿಂದ ಶಾಸ್ತ್ರವನ್ನು ದೂಷಿಸಬಾರದು. ಪ್ರಯಾಗವು ಯೋಗಸಿದ್ಧಿಯ ಸ್ಥಾನ. ಇದು ಲಭಿಸುವುದು ಪುಣ್ಯವಿಶೇಷ.

ಶ್ರೀಮತ್ಸ್ಯಮಹಾಪುರಾಣದಲ್ಲಿ ಪ್ರಯಾಗಮಾಹಾತ್ಮ್ಯದೊಳಗೆ
ನೂರೊಂಬತ್ತನೆಯ ಅಧ್ಯಾಯವು ಮುಗಿದುದು.



## ಅಥ ದಶಾಧಿಕಶತತಮೋಽಧ್ಯಾಯಃ

|| ಮಾರ್ಕಂಡೇಯ ಉವಾಚ ||

ಶೃಣು ರಾಜನ್ ಪ್ರಯಾಗಸ್ಯ ಮಾಹಾತ್ಮ್ಯಂ ಪುನರೇವ ತು |
ನೈಮಿಷಂ ಪುಷ್ಕರಂ ಚೈವ ಗೋತೀರ್ಥಂ ಸಿಂಧುಸಾಗರಂ || ೧ ||

ಗಯಾ ಚ ಚೈತ್ರಕಂ ಚೈವ ಗಂಗಾಸಾಗರಮೇವ ಚ |
ಏತೇ ಚಾನ್ಯೇ ಚ ಬಹವೋ ಯೇ ಚ ಪುಣ್ಯಾಃ ಶಿಲೋಚ್ಚಯಾಃ || ೨ ||

ದಶ ತೀರ್ಥಸಹಸ್ರಾಣಿ ತ್ರಿಂಶತ್ಕೋಟ್ಯಸ್ತಥಾ ಪರಾಃ |
ಪ್ರಯಾಗೇ ಸಂಸ್ಥಿತಾ ನಿತ್ಯಮೇವಮಾಹುರ್ಮನೀಷಿಣಃ || ೩ ||

ತ್ರೀಣಿ ಚಾಪ್ಯಗ್ನಿಕುಂಡಾನಿ ಯೇಷಾಂ ಮಧ್ಯೇ ತು ಜಾಹ್ನವೀ |
ಪ್ರಯಾಗಾದಭಿನಿಷ್ಕ್ರಾಂತಾ ಸರ್ವತೀರ್ಥನಮಸ್ಕೃತಾ || ೪ ||

ತಪನಸ್ಯ ಸುತಾ ದೇವೀ ತ್ರಿಷು ಲೋಕೇಷು ವಿಶ್ರುತಾ |
ಯಮುನಾ ಗಂಗಯಾ ಸಾರ್ಧಂ ಸಂಗತಾ ಲೋಕಪಾವನೀ || ೫ ||

---

೧-೩. ಮಾರ್ಕಂಡೇಯಮುನಿ ಹೇಳಿದನು.—ಓ ರಾಜಾ, ಪ್ರಯಾಗದ ಮಾಹಾತ್ಮ್ಯವನ್ನು ಇನ್ನೂ ಹೇಳುವೆನು ಕೇಳು. ನೈಮಿಶ, ಪುಷ್ಕರ, ಗೋತೀರ್ಥ, ಸಿಂಧುಸಾಗರ, ಗಯೆ, ಚೈತ್ರಕ, ಗಂಗಾಸಾಗರ ಇಂತಹ ಎಷ್ಟೋ ಪುಣ್ಯಕ್ಷೇತ್ರಗಳೂ, ಪವಿತ್ರವಾದ ಪರ್ವತಗಳೂ, ಪುರಾಣಗಳಲ್ಲಿ ಹೇಳಿರುವ ಹತ್ತುಸಾವಿರ ತೀರ್ಥಗಳೂ, ಇನ್ನೂ ಉಳಿದ ಮೂವತ್ತು ಕೋಟಿ ಕ್ಷೇತ್ರಗಳೂ ಪ್ರಯಾಗದಲ್ಲಿ ಸದಾ ಸನ್ನಿಹಿತವಾಗಿವೆ. ಜ್ಞಾನಿಗಳು ಹೇಳುವ ಮಾತಿದು.

೪. ಪ್ರಯಾಗಕ್ಷೇತ್ರದಲ್ಲಿ ಅಗ್ನಿಕುಂಡಗಳು ಮೂರಿವೆ. ಸರ್ವತೀರ್ಥಗಳಿಂದಲೂ ಮನ್ನಣೆಪಡೆದ ಗಂಗಾನದಿಯು ಅವುಗಳ ನಡುವೆ ಹರಿದು ಆ ಕ್ಷೇತ್ರದಿಂದ ಹೊರಹೊರಡುತ್ತದೆ.

೫. ಮೂರು ಲೋಕಗಳಲ್ಲಿಯೂ ಪ್ರಸಿದ್ಧಿಯನ್ನು ಪಡೆದು ಜಗತ್ತನ್ನು ಪವಿತ್ರಗೊಳಿಸುತ್ತಿರುವ, ಸೂರ್ಯಪುತ್ರಿಯಾದ ಯಮುನಾನದಿಯು ಗಂಗಾನದಿಯೊಡನೆ ಇಲ್ಲಿ ಸೇರುತ್ತದೆ.

ಗಂಗಾಯಮುನಯೋರ್ಮಧ್ಯೇ ಪೃಥಿವ್ಯಾ ಜಘನಂ ಸ್ಮೃತಂ ।
ಪ್ರಯಾಗಂ ರಾಜಶಾರ್ದೂಲ ಕಲಾಂ ನಾರ್ಹಂತಿ ಷೋಡಶೀಂ ॥ ೬ ॥

ತಿಸ್ರಃ ಕೋಟ್ಯೋಽರ್ಧಕೋಟಿಶ್ಚ ತೀರ್ಥಾನಾಂ ವಾಯುರಬ್ರವೀತ್ ।
ದಿವಿ ಭುವ್ಯಂತರಿಕ್ಷೇ ಚ ತತ್ಸರ್ವಂ ಜಾಹ್ನವೀ ಸ್ಮೃತಾ ॥ ೭ ॥

ಪ್ರಯಾಗಂ ಸಮಧಿಷ್ಠಾನಂ ಕಂಬಲಾಶ್ವತರಾವುಭೌ ।
ಭೋಗವತ್ಯಥ ಯಾ ಚೈಷಾ ವೇದಿರೇಷಾ ಪ್ರಜಾಪತೇಃ ॥ ೮ ॥

ತತ್ರ ವೇದಾಶ್ಚ ಯಜ್ಞಾಶ್ಚ ಮೂರ್ತಿಮಂತೋ ಯುಧಿಷ್ಠಿರ ।
ಪ್ರಜಾಪತಿಮುಪಾಸಂತೇ ಋಷಯಶ್ಚ ತಪೋಧನಾಃ ॥ ೯ ॥

ಯಜಂತೇ ಕ್ರತುಭಿರ್ದೇವಾಸ್ತಥಾ ಚಕ್ರಧರಾ ನೃಪಾಃ ।
ತತಃ ಪುಣ್ಯತಮಂ ನಾಸ್ತಿ ತ್ರಿಷು ಲೋಕೇಷು ಭಾರತ ॥೧೦॥

---

೬-೭. ಗಂಗಾಯಮುನಾ ನದಿಗಳ ಮಧ್ಯದಲ್ಲಿರುವ ಪ್ರಯಾಗಕ್ಷೇತ್ರವು ಭೂದೇವಿಯ ಜಘನಭಾಗ (ನಡು) ವೆಂದು ಪರಿಗಣಿತವಾಗಿದೆ. ಎಲೈ ರಾಜ ಶ್ರೇಷ್ಠನೇ, ಸ್ವರ್ಗದಲ್ಲಿಯೂ, ಭೂಮಿಯಲ್ಲಿಯೂ, ಅಂತರಿಕ್ಷದಲ್ಲಿಯೂ ಇರುವ ಮೂರುವರೆ ಕೋಟಿ ತೀರ್ಥಗಳು ಪ್ರಯಾಗದ ಹದಿನಾರರಲ್ಲಿ ಒಂದುಪಾಲಿಗೂ ಸಮವಾಗಲಾರವು. ಇದು ವಾಯುದೇವನು ಹೇಳಿರುವ ಮಾತು. ತೀರ್ಥಗಳೆಲ್ಲ ಗಂಗಾನದಿಯ ಅಂಶಗಳೇ ಆಗಿವೆಯೆಂದು ಹೇಳುತ್ತಾರೆ.

೮. ಪ್ರಯಾಗವು, ಅದರಲ್ಲಿಯೂ ಮುಖ್ಯವಾಗಿ ಕಂಬಲ ಮತ್ತು ಅಶ್ವತರ ರೆಂಬ ಸರ್ಪಗಳು ವಾಸಮಾಡುವ ಪವಿತ್ರವಾದ ಸ್ಥಲವು ಪ್ರಜಾಪತಿಯ ಆವಾಸ ಸ್ಥಾನವೆನಿಸಿದೆ. ಭೋಗವತಿಯೆಂಬ ಕ್ಷೇತ್ರವು ಅವನ ಯಜ್ಞವೇದಿಕೆಯಾಗಿರುವುದು.

೯. ಅಲ್ಲಿ ವೇದಗಳೂ, ಯಜ್ಞಗಳೂ, ಆಕಾರವನ್ನು ಧರಿಸಿ ಬಂದು ಪ್ರಜಾ ಪತಿಯನ್ನು ಓಲೈಸುತ್ತವೆ. ಎಲೈ ಯುಧಿಷ್ಠಿರನೇ, ಮಹಾತಪಸ್ವಿಗಳಾದ ಋಷಿಗಳೂ ಸಹ ಅವನ ಉಪಾಸನೆಯನ್ನು ಮಾಡುವರು.

೧೦. ದೇವತೆಗಳೂ, ಚಕ್ರವರ್ತಿಗಳೂ ನಾನಾವಿಧವಾದ ಯಾಗಗಳನ್ನು ಮಾಡುತ್ತಿರುವರು. ಎಲೈ ಭರತವಂಶೋತ್ತಮನೇ ಮೂರು ಲೋಕಗಳಲ್ಲಿಯೂ ಅದಕ್ಕಿಂತ ಪುಣ್ಯಕರವಾದ ಕ್ಷೇತ್ರವು ಮತ್ತೊಂದಿಲ್ಲ.

**ಪ್ರಭಾವಾತ್ಸರ್ವತೀರ್ಥೇಭ್ಯಃ ಪ್ರಭವತ್ಯಧಿಕಂ ವಿಭೋ।**
**ದಶ ತೀರ್ಥಸಹಸ್ರಾಣಿ ತಿಸ್ರಃ ಕೋಟ್ಯಸ್ತಥಾ ಪರಾಃ ॥೧೧॥**

**ಯತ್ರ ಗಂಗಾ ಮಹಾಭಾಗಾ ಸ ದೇಶಸ್ತತ್ತಪೋಧನಂ।**
**ಸಿದ್ಧಿಕ್ಷೇತ್ರಂ ಚ ವಿಜ್ಞೇಯಂ ಗಂಗಾತೀರಸಮನ್ವಿತಂ ॥೧೨॥**

**ಇದಂ ಸತ್ಯಂ ವಿಜಾನೀಯಾತ್ಸಾಧೂನಾಮಾತ್ಮನಶ್ಚ ವೈ।**
**ಸುಹೃದಶ್ಚ ಜಪೇತ್ಕರ್ಣೇ ಶಿಷ್ಯಸ್ಯಾನುಗತಸ್ಯ ಚ ॥೧೩॥**

**ಇದಂ ಧನ್ಯಮಿದಂ ಸ್ವರ್ಗ್ಯಮಿದಂ ಸತ್ಯಮಿದಂ ಸುಖಂ।**
**ಇದಂ ಪುಣ್ಯಮಿದಂ ಧರ್ಮ್ಯಂ ಪಾವನಂ ಧರ್ಮಮುತ್ತಮಂ ॥೧೪॥**

**ಮಹರ್ಷೀಣಾಮಿದಂ ಗುಹ್ಯಂ ಸರ್ವಪಾಪಪ್ರಣಾಶನಂ।**
**ಅಧೀತ್ಯ ಚ ದ್ವಿಜೋಽಪ್ಯೇತನ್ನಿರ್ಮಲಃ ಸ್ವರ್ಗಮಾಪ್ನುಯಾತ್ ॥೧೫॥**

---

೧೧-೧೨. ಓ ಭೂಪಾಲಕಾ, ಮಹಿಮೆಯಲ್ಲಿ ಗಂಗಾನದಿಯು ಮಿಕ್ಕ ಎಲ್ಲ ತೀರ್ಥಗಳನ್ನೂ ಮೀರಿಸುತ್ತದೆ. ಮಹಿಮಾಶಾಲಿನಿಯಾದ ಈ ನದಿಯು ಇದ್ದ ಕಡೆ ಹತ್ತುಸಾವಿರ ಪುಣ್ಯತೀರ್ಥಗಳೂ, ಮೂವತ್ತು ಕೋಟಿ ಪುಣ್ಯಕ್ಷೇತ್ರಗಳೂ ಇರುವುವು. ಆ ದೇಶವೇ ತಪಸ್ಸಿದ್ಧಿಯನ್ನು ಕೊಡುವ ಸ್ಥಳ. ಗಂಗಾತೀರವೆಲ್ಲವೂ ಸಿದ್ಧಿಕ್ಷೇತ್ರವೆಂದು ಭಾವಿಸಬೇಕು.

೧೩. ಇದು ಸತ್ಯವೆಂದರಿಯಬೇಕು. ಸತ್ಪುರುಷರು, ತನ್ನ ಆಪ್ತಮಿತ್ರರು, ಸೇವಾಪರರಾದ ಶಿಷ್ಯರು ಇವರೆಲ್ಲರ ಕಿವಿಗಳಲ್ಲಿಯೂ ಈ ಮಾಹಾತ್ಮ್ಯವನ್ನು ಹೇಳಬೇಕು.

೧೪. ಜೀವನದ ಸಾಫಲ್ಯವನ್ನು ಕೊಡತಕ್ಕುದಿದು; ಸ್ವರ್ಗಪ್ರದವಿದು; ಸತ್ಯಸ್ವರೂಪವಿದು; ಸುಖಕರವಿದು; ಪುಣ್ಯಪ್ರದವಿದು; ಧರ್ಮಯುಕ್ತವಾದುದಿದು; ಪರಿಶುದ್ಧವೂ ಧರ್ಮಮಯವೂ ಆದುದಿದು.

೧೫. ಮಹರ್ಷಿಗಳು ಕೂಡ ಅನುಷ್ಠಾನಮಾಡಬೇಕಾದ ಪರಮಧರ್ಮ ರಹಸ್ಯವಿದು. ಸಕಲ ಪಾಪಗಳನ್ನೂ ಕಳೆಯತಕ್ಕುದಿದು. ಇದನ್ನು ಪಾರಾಯಣ ಮಾಡಿದ ಮಾತ್ರದಿಂದಲೇ ಬ್ರಾಹ್ಮಣನು ಪರಿಶುದ್ಧನಾಗಿ ಸ್ವರ್ಗವನ್ನು ಸೇರುವನು.

ಯಃ ಇದಂ ಶೃಣುಯಾನ್ನಿತ್ಯಂ ತೀರ್ಥಂ ಪುಣ್ಯಂ ಸದಾ ಶುಚಿಃ ।
ಜಾತಿಸ್ಮರತ್ವಂ ಲಭತೇ ನಾಕಪೃಷ್ಠೇ ಚ ಮೋದತೇ ॥೧೬॥

ಪ್ರಾಪ್ಯಂತೇ ತಾನಿ ತೀರ್ಥಾನಿ ಸದ್ಭಿಃ ಶಿಷ್ಟಾನುದರ್ಶಿಭಿಃ ।
ಸ್ನಾಹಿ ತೀರ್ಥೇಷು ಕೌರವ್ಯ ನ ಚ ವಕ್ರಮತಿರ್ಭವ ॥೧೭॥

ತ್ವಯಾ ಚ ಸಮ್ಯಕ್ಪೃಷ್ಟೇನ ಕಥಿತಂ ವೈ ಮಯಾ ವಿಭೋ ।
ಪಿತರಸ್ತಾರಿತಾಃ ಸರ್ವೇ ತಥೈವ ಚ ಪಿತಾಮಹಾಃ ॥೧೮॥

ವ್ರತಂ ದಾನಂ ತಪಸ್ತೀರ್ಥಂ ಯಾಗಾಃ ಸರ್ವೇ ಸದಕ್ಷಿಣಾಃ ।
ಯೋಗಾಃ ಸಾಂಖ್ಯಂ ಸದಾಚಾರೋ ಯೇ ಚಾನ್ಯೇ ಜ್ಞಾನಹೇತವಃ ।
ಪ್ರಯಾಗಸ್ಯ ತು ಸರ್ವೇ ತೇ ಕಲಾಂ ನಾರ್ಹಂತಿ ಷೋಡಶೀಂ ॥೧೯॥

---

೧೬. ಪುಣ್ಯಕರವಾದ ಈ ಪ್ರಯಾಗಮಾಹಾತ್ಮ್ಯವನ್ನು ನಿತ್ಯವೂ ಶುಚಿರ್ಭೂತನಾಗಿ ಯಾವನು ಕೇಳುತ್ತಾನೆಯೋ ಅವನಿಗೆ ಜನ್ಮಾಂತರದ ಸ್ಮೃತಿಯು ಬರುವುದು. ಸ್ವರ್ಗವಾಸದ ಸೌಖ್ಯವು ಲಭಿಸುವುದು.

೧೭. ಶಿಷ್ಟಾಚಾರವನ್ನು ತಿಳಿದು ಅದರಂತೆ ನಡೆಯುವ ಸತ್ಪುರುಷರಿಗೆ ಆ ಪುಣ್ಯತೀರ್ಥಗಳ ಯಾತ್ರೆಯ ಭಾಗ್ಯವು ಲಭಿಸುವುದು. ಓ ಕುರುವಂಶೋತ್ತಮಾ, ಆದುದರಿಂದ ತೀರ್ಥಗಳಲ್ಲಿ ಸ್ನಾನಮಾಡು. ವಕ್ರಬುದ್ಧಿಯನ್ನು ತೋರಬೇಡ.

೧೮. ಎಲೈ ರಾಜೇಂದ್ರಾ, ನೀನು ಸರಿಯಾಗಿ ಪ್ರಶ್ನೆಮಾಡಿದೆ. ಆದುದರಿಂದ ನಿನಗೆ ನಾನು ಎಲ್ಲವನ್ನೂ ಹೇಳಿದೆನು. ನಿನ್ನ ಪಿತೃಗಳೂ, ಪಿತಾಮಹರೂ ಎಲ್ಲರೂ ಸದ್ಗತಿಯನ್ನು ಪಡೆದರು.

೧೯. ವ್ರತ, ದಾನ, ತಪಸ್ಸು, ತೀರ್ಥಯಾತ್ರೆ, ದಕ್ಷಿಣೆಗಳನ್ನು ವಿಶೇಷವಾಗಿ ಕೊಟ್ಟು ಶಾಸ್ತ್ರೋಕ್ತವಾಗಿ ನೆರವೇರಿಸಿದ ಯಾಗಗಳು, ಸಾಂಖ್ಯದರ್ಶನ, ಸದಾಚಾರ, ಯೋಗಾಭ್ಯಾಸ, ಇನ್ನೂ ಉಳಿದ ಜ್ಞಾನಸಾಧನಗಳು ಇವು ಮಹಿಮೆಯಲ್ಲಿ ಪ್ರಯಾಗ ಕ್ಷೇತ್ರದ ಹದಿನಾರರಲ್ಲಿ ಒಂದು ಪಾಲಿಗೂ ಕೂಡ ಸರಿ ಬರಲಾರವು.

**ಏವಂ ಜ್ಞಾನಂ ಚ ಯೋಗಂ ಚ ತೀರ್ಥಂ ಚೈವ ಯುಧಿಷ್ಠಿರ ।**
**ಬಹುಕ್ಲೇಶೇನ ಯುಜ್ಯಂತೇ ತೇನ ಯಾಂತಿ ಪರಾಂ ಗತಿಂ ।**
**ತ್ರಿಕಾಲಂ ಜಾಯತೇ ಜ್ಞಾನಂ ಸ್ವರ್ಗಲೋಕಂ ಗಮಿಷ್ಯತಿ ॥೨೦॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಪ್ರಯಾಗಮಾಹಾತ್ಮ್ಯೇ**
**ದಶಾಧಿಕಶತತಮೋಽಧ್ಯಾಯಃ**

---

೨೦. ಹೀಗೆ ಜ್ಞಾನಾರ್ಜನವೂ, ಯೋಗಾಭ್ಯಾಸವೂ, ತೀರ್ಥಯಾತ್ರೆಯೂ ಬಹು ಕ್ಲೇಶದಾಯಕಗಳಾಗಿವೆ. ಇವುಗಳನ್ನು ಅನುಷ್ಠಾನಮಾಡಿ ಸದ್ಗತಿಯನ್ನು ಪಡೆಯಬೇಕು. ಪ್ರಯಾಗದಲ್ಲೋ ಎಂದರೆ ಜ್ಞಾನವು ತ್ರಿಕಾಲದಲ್ಲೂ ಉಂಟಾಗುವುದು. ಅದರಿಂದ ಸುಲಭವಾಗಿ ಸ್ವರ್ಗವಾಸವು ಪ್ರಾಪ್ತವಾಗುತ್ತದೆ.

**ಅಧ್ಯಾಯದ ಸಾರಾಂಶ**

ಪ್ರಯಾಗದ ಮಹಿಮೆಯನ್ನು ಈ ಅಧ್ಯಾಯವೂ ಕೂಡ ತಿಳಿಸುತ್ತದೆ.

ಮೂರು ಲೋಕಗಳ ಪುಣ್ಯ ತೀರ್ಥಗಳೂ ಪ್ರಯಾಗದಲ್ಲಿ ನೆಲೆಸಿವೆ. ಇದು ಬ್ರಹ್ಮನು ಯಜ್ಞವನ್ನು ಮಾಡಿದ ಪವಿತ್ರಸ್ಥಳ. ಸಕಲ ವಿಧವಾದ ಸಿದ್ಧಿಯನ್ನೂ ಕೊಡತಕ್ಕುದು. ಸದ್ಗತಿಗೆ ಸಾಧನಗಳಾದ ವ್ರತ, ದಾನ ಮುಂತಾದ ಉಪಾಯಗಳಾವುವೂ ಪ್ರಯಾಗಯಾತ್ರೆಯ ಏಕದೇಶಕ್ಕೆ ಸರಿಬರಲಾರವು. ಅಲ್ಲದೆ ಅವು ಬಹು ಕ್ಲೇಶಸಾಧ್ಯಗಳು. ಪ್ರಯಾಗಯಾತ್ರೆಯೋ ಎಂದರೆ ಸುಲಭವಾಗಿ ಸ್ವರ್ಗವನ್ನು ಕೊಡುವುದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಪ್ರಯಾಗ ಮಾಹಾತ್ಮ್ಯದೊಳಗೆ
ನೂರ ಹತ್ತನೆಯ ಅಧ್ಯಾಯವು ಮುಗಿದುದು.

## ಅಥ ಏಕಾದಶಾಧಿಕಶತತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಕಥಂ ಸರ್ವಮಿದಂ ಪ್ರೋಕ್ತಂ ಪ್ರಯಾಗಸ್ಯ ಮಹಾಮುನೇ ।
ಏತನ್ನಃ ಸರ್ವಮಾಖ್ಯಾಹಿ ಯಥಾ ಹಿ ಮಮ ತಾರಯೇತ್ ॥ ೧ ॥

॥ ಮಾರ್ಕಂಡೇಯ ಉವಾಚ ॥

ಶೃಣು ರಾಜನ್ ಪ್ರಯಾಗೇ ತು ಪ್ರೋಕ್ತಂ ಸರ್ವಮಿದಂ ಜಗತ್ ।
ಬ್ರಹ್ಮಾ ವಿಷ್ಣುಸ್ತಥೇಶಾನೋ ದೇವತಾಃ ಪ್ರಭುರವ್ಯಯಃ ॥ ೨ ॥

ಬ್ರಹ್ಮಾ ಸೃಜತಿ ಭೂತಾನಿ ಸ್ಥಾವರಂ ಜಂಗಮಂ ಚ ಯತ್ ।
ತಾನ್ಯೇತಾನಿ ಪರಂ ಲೋಕೇ ವಿಷ್ಣುಃ ಸಂವರ್ಧತೇ ಪ್ರಜಾಃ ॥ ೩ ॥

ಕಲ್ಪಾಂತೇ ತತ್ಸಮಗ್ರಂ ಹಿ ರುದ್ರಃ ಸಂಹರತೇ ಜಗತ್ ।
ತದಾ ಪ್ರಯಾಗತೀರ್ಥಂ ಚ ನ ಕದಾಚಿದ್ವಿನಶ್ಯತಿ ॥ ೪ ॥

---

೧. ಧರ್ಮರಾಜನು ಹೇಳಿದನು.—ಓ ಮಹರ್ಷೀ, ಪ್ರಯಾಗದ ವಿಷಯವಾಗಿ ಇನ್ನೂ ಏನೇನು ಹೇಳಬಹುದೋ ಅದೆಲ್ಲವನ್ನೂ ನಮಗೆ ತಿಳಿಸು ; ಇದರಿಂದ ನಾನು ಉದ್ಧಾರವಾದೇನು.

೨. ಮಾರ್ಕಂಡೇಯಮುನಿ ಹೇಳಿದನು.—ಓ ರಾಜಾ, ಕೇಳು ಈ ಜಗತ್ತೆಲ್ಲವೂ ಪ್ರಯಾಗದಲ್ಲಿರುವುದೆಂದು ಹೇಳುವರು. ಬ್ರಹ್ಮ, ವಿಷ್ಣು, ಈಶ್ವರ, ದೇವತೆಗಳು ಮತ್ತು ಅವರ ಅಧಿಪತಿಯಾದ ಇಂದ್ರ ಇವರೆಲ್ಲರೂ ಅಲ್ಲಿ ವಾಸಿಸುವರು.

೩. ಬ್ರಹ್ಮನು ಸ್ಥಾವರಜಂಗಮಾತ್ಮಕವಾದ ಜಗತ್ತನ್ನೂ, ಸಕಲಜಂತುಗಳನ್ನೂ ಸೃಷ್ಟಿಸುತ್ತಾನೆ. ವಿಷ್ಣುವು ಅವುಗಳನ್ನೂ, ಪ್ರಜೆಗಳನ್ನೂ ಸಂರಕ್ಷಿಸುತ್ತಾನೆ.

೪. ಪ್ರಲಯಕಾಲವು ಬರಲು ರುದ್ರನು ಆ ಸಮಸ್ತಜಗತ್ತನ್ನೂ ಸಂಹಾರ ಮಾಡುವನು. ಆಗ ಪ್ರಯಾಗತೀರ್ಥವು ಮಾತ್ರ ನಾಶವಾಗದೆ ಸ್ಥಿರವಾಗಿರುವುದು.

**ಈಶ್ವರಃ ಸರ್ವಭೂತಾನಾಂ ಯಃ ಪಶ್ಯತಿ ಸ ಪಶ್ಯತಿ।**
**ಯತ್ನೇನಾನೇನ ತಿಷ್ಠಂತಿ ತೇ ಯಾಂತಿ ಪರಮಾಂ ಗತಿಂ ॥ ೫ ॥**

**॥ಯುಧಿಷ್ಠಿರ ಉವಾಚ ॥**

**ಆಖ್ಯಾಹಿ ಮೇ ಯಥಾತಥ್ಯಂ ಯಥೈಷಾ ತಿಷ್ಠತಿ ಕ್ಷಿತಿಃ।**
**ಕೇನ ವಾ ಕಾರಣೇನ್ಯೈವಂ ತಿಷ್ಠಂತೇ ಲೋಕಸತ್ತಮಾಃ ॥ ೬ ॥**

**॥ ಮಾರ್ಕಂಡೇಯ ಉವಾಚ ॥**

**ಪ್ರಯಾಗೇ ನಿವಸಂತ್ಯೇತೇ ಬ್ರಹ್ಮವಿಷ್ಣುಮಹೇಶ್ವರಾಃ।**
**ಕಾರಣಂ ತತ್ರ ವಕ್ಷ್ಯಾಮಿ ಶೃಣು ತತ್ತ್ವಂ ಯುಧಿಷ್ಠಿರ ॥ ೭ ॥**

**ಪಂಚಯೋಜನವಿಸ್ತೀರ್ಣಂ ಪ್ರಯಾಗಸ್ಯ ತು ಮಂಡಲಂ।**
**ತಿಷ್ಠಂತಿ ರಕ್ಷಣಾಯಾತ್ರ ಪಾಪಕರ್ಮನಿವಾರಣಾತ್ ॥ ೮ ॥**

---

೫. ಎಲ್ಲ ಪ್ರಾಣಿಗಳಿಗೂ ಅಧಿಪತಿಯಾದ ಭಗವಂತನು ತನ್ನ ಕೃಪಾದೃಷ್ಟಿಯಿಂದ ಆ ಕ್ಷೇತ್ರವನ್ನು ನೋಡುತ್ತಾನೆ. ಆತನ ಅನುಗ್ರಹದಿಂದ ಅಲ್ಲಿ ನೆಲೆಸಿದ ಜ್ಞಾನಿಗಳು ಪ್ರಳಯದಲ್ಲಿಯೂ ನಿರಪಾಯರಾಗಿರುವರು; ಮತ್ತು ಸದ್ಗತಿಯನ್ನು ಪಡೆಯುವರು.

೬. ಧರ್ಮರಾಜನು ಹೇಳಿದನು.—ಪ್ರಳಯಕಾಲದಲ್ಲಿ ಈ ಪ್ರಯಾಗ ಕ್ಷೇತ್ರವು ಮಾತ್ರ ಹೇಗೆ ಉಳಿಯುವುದು? ಲೋಕಪೂಜ್ಯರಾದ ಮಹರ್ಷಿಗಳು ಅಲ್ಲಿ ವಿನಾಶವಿಲ್ಲದೆ ಸ್ಥಿರವಾಗಿ ನಿಲ್ಲಲು ಕಾರಣವೇನು?

೭. ಮಾರ್ಕಂಡೇಯಮುನಿ ಹೇಳಿದನು.—ಪ್ರಯಾಗದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿಗಳು ವಾಸಮಾಡುತ್ತಾರಷ್ಟೆ! ಓ ಯುಧಿಷ್ಠಿರಾ, ಅದರ ಕಾರಣವನ್ನು ಹೇಳುತ್ತೇನೆ. ವಾಸ್ತವಾಂಶವನ್ನು ಕೇಳು.

೮. ಪ್ರಯಾಗಕ್ಷೇತ್ರವು ಐದು ಯೋಜನ ವಿಸ್ತಾರವಾಗಿ ಮಂಡಲಾಕಾರದಿಂದಿದೆ. ಪಾಪಕರ್ಮಗಳು ನಡೆಯುವುದಕ್ಕೆ ಅವಕಾಶವನ್ನು ಕೊಡದೆ ಜಾಗರೂಕರಾಗಿ ದೇವತೆಗಳು ಇದನ್ನು ರಕ್ಷಿಸುತ್ತಿದ್ದಾರೆ.

ಉತ್ತರೇಣ ಪ್ರತಿಷ್ಠಾನಾಚ್ಛದ್ಮನಾ ಬ್ರಹ್ಮ ತಿಷ್ಠತಿ ।
ವೇಣೀಮಾಧವರೂಪೀ ತು ಭಗವಾಂಸ್ತತ್ರ ತಿಷ್ಠತಿ ॥ ೯ ॥

ಮಾಹೇಶ್ವರೋ ವಟೋ ಭೂತ್ವಾ ತಿಷ್ಠತೇ ಪರಮೇಶ್ವರಃ ।
ತತೋ ದೇವಾಃ ಸಗಂಧರ್ವಾಃ ಸಿದ್ಧಾಶ್ಚ ಪರಮರ್ಷಯಃ ।
ರಕ್ಷಂತಿ ಮಂಡಲಂ ನಿತ್ಯಂ ಪಾಪಕರ್ಮನಿವಾರಣಾತ್ ॥೧೦॥

ಯಸ್ಮಿಞ್ಜುಹ್ವನ್ ಸ್ವಕಂ ಪಾಪಂ ನರಕಂ ಚ ನ ಪಶ್ಯತಿ ।
ಏವಂ ಬ್ರಹ್ಮಾ ಚ ವಿಷ್ಣುಶ್ಚ ಪ್ರಯಾಗೇ ಸಮಹೇಶ್ವರಃ ॥೧೧॥

ಸಪ್ತ ದ್ವೀಪಾಃ ಸಮುದ್ರಾಶ್ಚ ಪರ್ವತಾಶ್ಚ ಮಹೀತಲೇ ।
ರಕ್ಷಮಾಣಾಶ್ಚ ತಿಷ್ಠಂತಿ ಯಾವದಾಭೂತಸಂಪ್ಲವಂ ॥೧೨॥

ಯೇ ಚಾನ್ಯೇ ಬಹವಃ ಸರ್ವೇ ತಿಷ್ಠಂತಿ ಚ ಯುಧಿಷ್ಠಿರ ।
ಪೃಥಿವೀ ತತ್ಸಮಾಶ್ರಿತ್ಯ ನಿರ್ಮಿತಾ ದೈವತೈಸ್ತ್ರಿಭಿಃ ॥೧೩॥

---

೯. ಪ್ರತಿಷ್ಠಾನತೀರ್ಥದ ಉತ್ತರಭಾಗದಲ್ಲಿ ಬ್ರಹ್ಮನು ಯಜ್ಞವನ್ನು ಮಾಡುವ ನೆವದಿಂದ ನೆಲೆಸಿದ್ದಾನೆ. ಭಗವಂತನಾದ ವಿಷ್ಣುವು ವೇಣೀಮಾಧವನ ರೂಪದಿಂದ ವಾಸಿಸುತ್ತಾನೆ.

೧೦. ಪರಮೇಶ್ವರನು ಮಾಹೇಶ್ವರವೆಂಬ ವಟವೃಕ್ಷದ ರೂಪವನ್ನು ಧರಿಸಿದ್ದಾನೆ. ದೇವತೆಗಳು, ಗಂಧರ್ವರು, ಸಿದ್ಧರು ಮತ್ತು ಮಹರ್ಷಿಗಳು ಪಾಪಕರ್ಮವು ನಡೆಯದಂತೆ ನಿತ್ಯವೂ ಆ ಕ್ಷೇತ್ರಮಂಡಲವನ್ನು ಕಾಯುತ್ತಿರುವರು.

೧೧-೧೨. ಆ ಕ್ಷೇತ್ರದಲ್ಲಿ ಹೋಮವನ್ನು ಮಾಡುವವನಿಗೆ ಪಾಪದ ಸಂಬಂಧವಾಗಲಿ, ನರಕದ ದರ್ಶನವಾಗಲಿ ಉಂಟಾಗದು. ಬ್ರಹ್ಮ, ವಿಷ್ಣು, ಮಹೇಶ್ವರ, ಸಪ್ತದ್ವೀಪಗಳು, ಸಪ್ತಸಾಗರಗಳು ಮತ್ತು ಮಹಾಪರ್ವತಗಳು ಆ ದಿವ್ಯಸ್ಥಲವನ್ನು ಮಹಾಪ್ರಳಯದವರೆಗೂ ರಕ್ಷಿಸುತ್ತಿರುವುವು.

೧೩. ಎಲೈ ಧರ್ಮರಾಜನೇ, ಇನ್ನೂ ಎಷ್ಟೋ ಜನ ಮಹಾತ್ಮರೂ, ದೇವತೆಗಳೂ ಅಲ್ಲಿ ನೆಲೆಸಿದ್ದಾರೆ. ಭೂದೇವಿಯೂ ಕೂಡ ಅಲ್ಲಿ ವಾಸಿಸುತ್ತಿರಬೇಕೆಂದು ತ್ರಿಮೂರ್ತಿಗಳು ಅಪ್ಪಣೆಮಾಡಿದ್ದಾರೆ.

**ಪ್ರಜಾಪತೇರಿದಂ ಕ್ಷೇತ್ರಂ ಪ್ರಯಾಗಮಿತಿ ವಿಶ್ರುತಂ ।
ಏತತ್ಪುಣ್ಯಂ ಪವಿತ್ರಂ ವೈ ಪ್ರಯಾಗಂ ಚ ಯುಧಿಷ್ಠಿರ ।
ಸ್ವರಾಜ್ಯಂ ಕುರು ರಾಜೇಂದ್ರ ಭ್ರಾತೃಭಿಃ ಸಹಿತೋಽನಘ ॥೧೪॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಪ್ರಯಾಗಮಾಹಾತ್ಮ್ಯೇ
ಏಕಾದಶಾಧಿಕ ಶತತಮೋಽಧ್ಯಾಯಃ**

---

೧೪. ಈ ಪ್ರಯಾಗವು ಪ್ರಜಾಪತಿಕ್ಷೇತ್ರವೆಂದು ಪ್ರಸಿದ್ಧವಾಗಿದೆ. ಎಲೈ ಧರ್ಮರಾಜಾ, ಇದು ಪುಣ್ಯಕರವೂ ಪವಿತ್ರವೂ ಆದುದು. ಪಾಪರಹಿತನಾದ ಓ ರಾಜೇಂದ್ರಾ, ನಿನ್ನ ತಮ್ಮಂದಿರೊಡನೆ ಈ ಕ್ಷೇತ್ರಯಾತ್ರೆಯನ್ನು ಮಾಡಿ ವಂಶ ಪರಂಪರಾಗತವಾದ ನಿನ್ನ ರಾಷ್ಟ್ರವನ್ನು ಧರ್ಮದಿಂದ ಪಾಲಿಸು.

**ಅಧ್ಯಾಯದ ಸಾರಾಂಶ**

ಮಾರ್ಕಂಡೇಯಮುನಿಯು ಧರ್ಮರಾಜನಿಗೆ ಪ್ರಯಾಗದ ಮಹಿಮೆಯನ್ನು ಮತ್ತೂ ಹೇಳುವನು.

ಪ್ರಳಯಕಾಲದಲ್ಲಿ ಸಕಲ ಲೋಕಗಳೂ ದಗ್ಧವಾಗುವುವು. ಆದರೆ ಪ್ರಯಾಗವು ಮಾತ್ರ ಸ್ಥಿರವಾಗಿರುವುದು. ತ್ರಿಮೂರ್ತಿಗಳೂ, ಇಂದ್ರಾದಿ ಸಕಲ ದೇವತೆಗಳೂ ಅಲ್ಲಿ ನೆಲೆಸಿ, ಅತ್ತ ಕಡೆ ಪಾಪವು ಕಣ್ಣೆತ್ತಿ ಸಹ ನೋಡದಂತೆ ಕಾಯುತ್ತಿರುವರು. ಆ ಕ್ಷೇತ್ರಕ್ಕೆ ಪ್ರಜಾಪತಿಕ್ಷೇತ್ರವೆಂಬ ಪ್ರಖ್ಯಾತಿ ಬಂದಿದೆ. ಅದರಂತಹ ಪುಣ್ಯವೂ ಪವಿತ್ರವೂ ಆದ ತೀರ್ಥವು ಮತ್ತೊಂದಿಲ್ಲ.

ಶ್ರೀಮತ್ಸ್ಯಮಹಾಪುರಾಣದಲ್ಲಿ ಪ್ರಯಾಗಮಾಹಾತ್ಮ್ಯದೊಳಗೆ
ನೂರ ಹನ್ನೊಂದನೆಯ ಅಧ್ಯಾಯವು ಮುಗಿದುದು.

## ಅಥ ದ್ವಾದಶಾಧಿಕಶತತಮೋಽಧ್ಯಾಯಃ

॥ ನಂದಿಕೇಶ್ವರ ಉವಾಚ ॥

ಭ್ರಾತೃಭಿಃ ಸಹಿತಃ ಸರ್ವೈರ್ದ್ರೌಪದ್ಯಾ ಸಹ ಭಾರ್ಯಯಾ ।
ಬ್ರಾಹ್ಮಣೇಭ್ಯೋ ನಮಸ್ಕೃತ್ಯ ಗುರೂನ್ ದೇವಾನತರ್ಪಯತ್ ॥ ೧ ॥

ವಾಸುದೇವೋಽಪಿ ತತ್ರೈವ ಕ್ಷಣೇನಾಭ್ಯಾಗತಸ್ತದಾ ।
ಪಾಂಡವೈಃ ಸಹಿತೈಃ ಸರ್ವೈಃ ಪೂಜ್ಯಮಾನಸ್ತು ಮಾಧವಃ ॥ ೨ ॥

ಕೃಷ್ಣೇನ ಸಹಿತೈಃ ಸರ್ವೈಃ ಪುನರೇವ ಮಹಾತ್ಮಭಿಃ ।
ಅಭಿಷಿಕ್ತಃ ಸ್ವರಾಜ್ಯೇ ಚ ಧರ್ಮಪುತ್ರೋ ಯುಧಿಷ್ಠಿರಃ । ॥ ೩ ॥

ಏತಸ್ಮಿನ್ನಂತರೇ ಚೈವ ಮಾರ್ಕಂಡೇಯೋ ಮಹಾಮುನಿಃ ।
ತತಃ ಸ್ವಸ್ತೀತಿ ಚೋಕ್ತ್ವಾ ತು ಕ್ಷಣಾದಾಶ್ರಮಮಾಗಮತ್ ॥ ೪ ॥

---

೧. ನಂದಿಕೇಶ್ವರನು ಹೇಳಿದನು.—ಧರ್ಮರಾಜನು ತನ್ನ ಎಲ್ಲ ತಮ್ಮಂದಿರೊಡನೆಯೂ, ಪತ್ನಿಯಾದ ದ್ರೌಪದಿಯೊಡನೆಯೂ ಬ್ರಾಹ್ಮಣರಿಗೆ ನಮಸ್ಕರಿಸಿ, ಗುರುಗಳನ್ನೂ ದೇವತೆಗಳನ್ನೂ ತೃಪ್ತಿಪಡಿಸಿದನು.

೨. ಆಗ ಶ್ರೀಕೃಷ್ಣಪರಮಾತ್ಮನೂ ಸಹ ಕ್ಷಣಕಾಲದೊಳಗಾಗಿ ಅಲ್ಲಿಗೆ ಬಂದನು. ಪಾಂಡವರೆಲ್ಲರೂ ಆತನನ್ನು ಸತ್ಕರಿಸಿದರು.

೩. ಧರ್ಮಪುತ್ರನಾದ ಯುಧಿಷ್ಠಿರನಿಗೆ ಶ್ರೀಕೃಷ್ಣನೂ, ಇನ್ನೂ ಉಳಿದ ಮಹಾತ್ಮರೂ ವಂಶಪರಂಪರಾಗತವಾದ ಅವನ ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿದರು.

೪. ಈ ನಡುವೆ ಮಾರ್ಕಂಡೇಯ ಮಹರ್ಷಿಯು ಅವರಿಗೆ ಆಶೀರ್ವಾದ ಮಾಡಿ ಸ್ವಲ್ಪ ಹೊತ್ತಿನೊಳಗಾಗಿ ತನ್ನ ಆಶ್ರಮವನ್ನು ಸೇರಿದನು.

ಯುಧಿಷ್ಠಿರೋಽಪಿ ಧರ್ಮಾತ್ಮಾ ಭ್ರಾತೃಭಿಃ ಸಹಿತೋಽವಸತ್ ।
ಮಹಾದಾನಂ ತತೋ ದತ್ವಾ ಧರ್ಮಪುತ್ರೋ ಮಹಾಮನಾಃ ॥ ೫ ॥

ಯಸ್ತ್ವಿದಂ ಕಲ್ಯ ಉತ್ಥಾಯ ಮಾಹಾತ್ಮ್ಯಂ ಪಠತೇ ನರಃ ।
ಪ್ರಯಾಗಂ ಸ್ಮರತೇ ನಿತ್ಯಂ ಸ ಯಾತಿ ಪರಮಂ ಪದಂ ॥
ಮುಚ್ಯತೇ ಸರ್ವಪಾಪೇಭ್ಯೋ ರುದ್ರಲೋಕಂ ಸ ಗಚ್ಛತಿ ॥ ೬ ॥

॥ ವಾಸುದೇವ ಉವಾಚ ॥

ಮಮ ವಾಕ್ಯಂ ಚ ಕರ್ತವ್ಯಂ ಮಹಾರಾಜ ಬ್ರವೀಮ್ಯಹಂ ।
ನಿತ್ಯಂ ಜಪಸ್ವ ಜುಹ್ವಸ್ವ ಪ್ರಯಾಗೇ ವಿಗತಜ್ವರಃ ॥ ೭ ॥

ಪ್ರಯಾಗಂ ಸ್ಮರ ವೈ ನಿತ್ಯಂ ಸಹಾಸ್ಮಾಭಿರ್ಯುಧಿಷ್ಠಿರ ।
ಸ್ವಯಂ ಪ್ರಾಪ್ಸ್ಯಸಿ ರಾಜೇಂದ್ರ ಸ್ವರ್ಗಲೋಕಂ ನ ಸಂಶಯಃ ॥ ೮ ॥

---

೫. ಧರ್ಮಾತ್ಮನಾದ ಧರ್ಮರಾಜನೂ ಸಹ ತುಲಾಪುರುಷದಾನ ಮೊದಲಾದ ಹದಿನಾರು ವಿಧವಾದ ಮಹಾದಾನಗಳನ್ನು ಮಾಡಿ ತನ್ನ ಸಹೋದರರೊಡನೆ ಸುಖವಾಗಿ ವಾಸಿಸುತ್ತಿದ್ದನು.

೬. ಪ್ರಾತಃಕಾಲದಲ್ಲೆದ್ದು ಈ ಪ್ರಯಾಗಮಾಹಾತ್ಮ್ಯವನ್ನು ಯಾವನು ಸ್ಮರಿಸಿಕೊಳ್ಳುವನೋ ಆ ಮನುಷ್ಯನು ಸದ್ಗತಿಯನ್ನು ಪಡೆಯುತ್ತಾನೆ. ಅವನ ಪಾಪಗಳೆಲ್ಲ ಪರಿಹಾರವಾಗುತ್ತವೆ. ಅವನು ರುದ್ರಲೋಕವನ್ನು ಸೇರುವನು.

೭. ವಾಸುದೇವನು ಹೇಳಿದನು.—ಓ ಮಹಾರಾಜಾ, ನಾನು ಹೇಳುವುದನ್ನು ಕೇಳು; ನನ್ನ ಮಾತನ್ನು ನಡೆಸು. ಶಾಂತಚಿತ್ತನಾಗಿ ಪ್ರಯಾಗಕ್ಷೇತ್ರದಲ್ಲಿ ನಿತ್ಯವೂ ಜಪವನ್ನೂ ಹೋಮವನ್ನೂ ಮಾಡು.

೮. ಎಲೈ ಧರ್ಮರಾಜನೇ, ನಮ್ಮೊಡಗೂಡಿ ಪ್ರತಿದಿನವೂ ಪ್ರಯಾಗಕ್ಷೇತ್ರದ ಸ್ಮರಣವನ್ನು ಮಾಡು. ನಿನಗೆ ಸ್ವರ್ಗವಾಸವು ಪ್ರಾಪ್ತವಾಗುವುದು; ಸಂಶಯವಿಲ್ಲ.

**ಪ್ರಯಾಗಮನುಗಚ್ಛೇದ್ವಾ ವಸತೇ ವಾಽಪಿ ಯೋ ನರಃ ।**
**ಸರ್ವಪಾಪವಿಶುದ್ಧಾತ್ಮಾ ರುದ್ರಲೋಕಂ ಸ ಗಚ್ಛತಿ ॥ ೯ ॥**

**ಪ್ರತಿಗ್ರಹಾದುಪಾವೃತ್ತಃ ಸಂತುಷ್ಟೋ ನಿಯತಃ ಶುಚಿಃ ।**
**ಅಹಂಕಾರನಿವೃತ್ತಶ್ಚ ಸ ತೀರ್ಥಫಲಮಶ್ನುತೇ ॥೧೦॥**

**ಅಕೋಪನಶ್ಚ ಸತ್ಯಶ್ಚ ಸತ್ಯವಾದೀ ದೃಢವ್ರತಃ ।**
**ಆತ್ಮೋಪಮಶ್ಚ ಭೂತೇಷು ಸ ತೀರ್ಥಫಲಮಶ್ನುತೇ ॥೧೧॥**

**ಋಷಿಭಿಃ ಕ್ರತವಃ ಪ್ರೋಕ್ತಾ ದೇವೈಶ್ಚಾಪಿ ಯಥಾಕ್ರಮಂ ।**
**ನ ಹಿ ಶಕ್ಯಾ ದರಿದ್ರೇಣ ಯಜ್ಞಾಃ ಪ್ರಾಪ್ತುಂ ಮಹೀಪತೇ ॥೧೨॥**

**ಬಹುಪ್ರಕರಣಾ ಯಜ್ಞಾ ನಾನಾಸಂಭಾರವಿಸ್ತರಾಃ ।**
**ಪ್ರಾಪ್ಯಂತೇ ಪಾರ್ಥಿವೈರೇತೈಃ ಸಮೃದ್ಧೈರ್ವಾ ನರೈಃ ಕ್ವಚಿತ್ ॥೧೩॥**

---

೯. ಪ್ರಯಾಗ ಯಾತ್ರೆಯನ್ನು ಮಾಡಿ ಬಂದರೂ ಸರಿ; ಅಥವಾ ಅಲ್ಲಿಯೇ ವಾಸಮಾಡಿದರೂ ಸರಿ; ಆ ಮನುಷ್ಯನು ಪಾಪಗಳೆಲ್ಲವನ್ನೂ ಕಳೆದುಕೊಂಡು, ಪರಿಶುದ್ಧಾತ್ಮನಾಗಿ ರುದ್ರಲೋಕವನ್ನು ಐದುವನು.

೧೦. ತೀರ್ಥಯಾತ್ರೆಯಿಂದ ಫಲವು ಬರಬೇಕಾದರೆ ಮನುಷ್ಯನು ದಾನ ವನ್ನು ತೆಗೆದುಕೊಳ್ಳಬಾರದು. ಸಂತುಷ್ಟನೂ, ಜಿತೇಂದ್ರಿಯನೂ, ಪರಿಶುದ್ಧನೂ ಆಗಿರಬೇಕು. ಅಹಂಕಾರಪಡಬಾರದು.

೧೧. ಕೋಪರಹಿತನೂ, ಸತ್ಯಪರಾಯಣನೂ, ಸತ್ಯವಾದಿಯೂ ಆಗಿರ ಬೇಕು. ದೃಢಸಂಕಲ್ಪನಾಗಿರಬೇಕು. ಎಲ್ಲ ಜಂತುಗಳನ್ನೂ ತನ್ನಂತೆಯೇ ಕಾಣಬೇಕು.

೧೨. ಅಡಿಗಡಿಗೆ ಯಜ್ಞಯಾಗಗಳನ್ನು ಮಾಡಬೇಕೆಂದು ಋಷಿಗಳೂ ದೇವತೆ ಗಳೂ ಹೇಳಿರುತ್ತಾರೆ; ನಿಜ. ಆದರೆ, ಓ ರಾಜಾ, ದರಿದ್ರನಿಂದ ಅವುಗಳನ್ನು ನಡೆಸಲು ಸಾಧ್ಯವಿಲ್ಲ.

೧೩. ಯಜ್ಞಗಳಿಗೆ ಕರ್ಮಕಲಾಪಗಳು ಬಹಳ; ಆವಶ್ಯಕವಾದ ಸಾಧನ ಸಾಮಗ್ರಿಗಳೋ ಎಂದರೆ ಅನೇಕವಾಗಿವೆ. ಆದುದರಿಂದ ಅವುಗಳನ್ನು ನಡೆಸುವುದು ರಾಜರಿಂದ ಮಾತ್ರ ಸಾಧ್ಯ. ಒಂದೊಂದು ವೇಳೆ ಶ್ರೀಮಂತರು ಮಾಡಿದರೂ ಮಾಡಬಹುದು.

ಯೋ ದರಿದ್ರೈರಪಿ ವಿಧಿಃ ಶಕ್ಯಃ ಪ್ರಾಪ್ತುಂ ನರೇಶ್ವರ ।
ತುಲ್ಯೋ ಯಜ್ಞಫಲೈಃ ಪುಣ್ಯೈಸ್ತನ್ನಿಬೋಧ ಯುಧಿಷ್ಠಿರ ॥೧೪॥

ಋಷೀಣಾಂ ಪರಮಂ ಗುಹ್ಯಮಿದಂ ಭರತಸತ್ತಮ ।
ತೀರ್ಥಾನುಗಮನಂ ಪುಣ್ಯಂ ಯಜ್ಞೇಭ್ಯೋಽಪಿ ವಿಶಿಷ್ಯತೇ ॥೧೫॥

ದಶ ತೀರ್ಥಸಹಸ್ರಾಣಿ ತಿಸ್ರಃ ಕೋಟ್ಯಸ್ತಥಾಽಽಪಗಾಃ ।
ಮಾಘಮಾಸೇ ಗಮಿಷ್ಯಂತಿ ಗಂಗಾಯಾಂ ಭರತರ್ಷಭ ॥೧೬॥

ಸ್ವಸ್ಥೋ ಭವ ಮಹಾರಾಜ ಭುಙ್ಕ್ಷ್ವ ರಾಜ್ಯಮಕಂಟಕಂ ।
ಪುನರ್ದ್ರಕ್ಷ್ಯಸಿ ರಾಜೇಂದ್ರ ಯಜಮಾನೋ ವಿಶೇಷತಃ ॥೧೭॥

॥ ನಂದಿಕೇಶ್ವರ ಉವಾಚ ॥

ಇತ್ಯುಕ್ತ್ವಾ ಸ ಮಹಾಭಾಗೋ ಮಾರ್ಕಂಡೇಯೋ ಮಹಾತಪಾಃ ।
ಯುಧಿಷ್ಠಿರಸ್ಯ ನೃಪತೇಸ್ತತ್ರೈವಾಂತರಧೀಯತ ॥೧೮॥

---

೧೪. ಮಹಾವೀರನಾದ ಎಲೈ ಧರ್ಮರಾಜನೇ, ದರಿದ್ರರಾದವರು ಸಹ ಆಚರಿಸಬಹುದಾದ ಕರ್ಮಯೋಗದ ಪ್ರಭೇದವೂ ಒಂದುಂಟು. ಅದು ಯಜ್ಞಗಳಷ್ಟೇ ಫಲವನ್ನು ಕೊಡುವುದು. ಅವುಗಳಷ್ಟೇ ಪುಣ್ಯಕರವಾದುದು. ಅದರ ವಿವರವನ್ನು ಹೇಳುವೆನು ಕೇಳು.

೧೫. ಓ ಭರತವಂಶೋತ್ತಮಾ, ಋಷಿಗಳೂ ಕೂಡ ಅದನ್ನು ಬಹು ಶ್ರೇಷ್ಠವಾದ ಧರ್ಮರಹಸ್ಯವೆಂದು ಭಾವಿಸಿರುವರು. ಅದೇ ಪುಣ್ಯತೀರ್ಥಗಳ ಯಾತ್ರೆ. ಅದು ಪುಣ್ಯಪ್ರದವಾದುದು. ಯಜ್ಞಗಳಿಗಿಂತ ಮೇಲಾದುದು.

೧೬. ಎಲೈ ಭರತಶ್ರೇಷ್ಠನೇ, ಹತ್ತು ಸಾವಿರ ಪುಣ್ಯತೀರ್ಥಗಳೂ, ಮೂವತ್ತು ಕೋಟಿ ನದಿಗಳೂ ಮಾಘಮಾಸದಲ್ಲಿ ಗಂಗಾನದಿಗೆ ಬಂದು ಸೇರುತ್ತವೆ.

೧೭. ಓ ಮಹಾರಾಜಾ, ಶಾಂತಚಿತ್ತನಾಗು. ನಿರುಪದ್ರವನಾಗಿ ರಾಜ್ಯವನ್ನು ಅನುಭವಿಸು. ಭೂಪೋತ್ತಮಾ, ಯಜ್ಞಯಾಗಗಳನ್ನು ಅತಿಶಯವಾಗಿ ಮಾಡು. ಮತ್ತೆ ನಾನು ನಿನ್ನನ್ನು ನೋಡುವೆನು.

೧೮. ನಂದಿಕೇಶ್ವರನು ಹೇಳಿದನು.—ಮಹಾಮಹಿಮನೂ ಅಧಿಕ ತಪಸ್ವಿಯೂ ಆದ ಮಾರ್ಕಂಡೇಯಮುನಿಯು ಧರ್ಮರಾಜನಿಗೆ ಹೀಗೆ ಹೇಳಿ ಅಲ್ಲೇ ಅದೃಶ್ಯನಾದನು.

**ತತಸ್ತತ್ರ ಸಮಾಪ್ಲಾವ್ಯ ಗಾತ್ರಾಣಿ ಸಗಣೋ ನೃಪಃ ।**
**ಯಥೋಕ್ತೇನಾಥ ವಿಧಿನಾ ಪರಾಂ ನಿರ್ವೃತಿಮಾಗಮತ್ ॥೧೯॥**

**ತಥಾ ತ್ವಮಪಿ ದೇವರ್ಷೇ ಪ್ರಯಾಗಾಭಿಮುಖೋ ಭವ ।**
**ಅಭಿಷೇಕಂ ತು ಕೃತ್ವಾದ್ಯ ಕೃತಕೃತ್ಯೋ ಭವಿಷ್ಯಸಿ ॥೨೦॥**

**॥ ಸೂತ ಉವಾಚ ॥**

**ಏವಮುಕ್ತ್ವಾಥ ನಂದೀಶಸ್ತತ್ರೈವಾಂತರಧೀಯತ ।**
**ನಾರದೋಽಪಿ ಜಗಾಮಾಶು ಪ್ರಯಾಗಾಭಿಮುಖಸ್ತಥಾ ॥೨೧॥**

**ತತ್ರ ಸ್ನಾತ್ವಾ ಚ ಜಪ್ತ್ವಾ ಚ ವಿಧಿದೃಷ್ಟೇನ ಕರ್ಮಣಾ ।**
**ದಾನಂ ದತ್ವಾ ದ್ವಿಜಾಗ್ರೇಭ್ಯೋ ಗತಃ ಸ್ವಭವನಂ ತದಾ ॥೨೨॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಪ್ರಯಾಗಮಾಹಾತ್ಮ್ಯಂ**
**ನಾಮ ದ್ವಾದಶಾಧಿಕಶತತಮೋಽಧ್ಯಾಯಃ**

---

೧೯. ಬಳಿಕ ಸಪರಿವಾರನಾಗಿ ಧರ್ಮರಾಜನು ಶಾಸ್ತ್ರೋಕ್ತವಿಧಿಯಿಂದ ಪ್ರಯಾಗಕ್ಷೇತ್ರದಲ್ಲಿ ಸ್ನಾನಮಾಡಿ ನಿರತಿಶಯವಾದ ಆನಂದವನ್ನು ಪಡೆದನು.

೨೦. ದೇವರ್ಷಿಯಾದ ಎಲೈ ನಾರದನೇ, ನೀನೂ ಕೂಡ ಪ್ರಯಾಗ ಕ್ಷೇತ್ರಕ್ಕೆ ಹೋಗು. ಅಲ್ಲಿ ಸ್ನಾನಮಾಡಿ ನಿನ್ನ ಜನ್ಮವನ್ನು ಸಫಲಗೊಳಿಸಿಕೊಳ್ಳುವೆಯಂತೆ.

೨೧. ಸೂತಪೌರಾಣಿಕನು ಹೇಳಿದನು.—ನಂದೀಶ್ವರನು ಹೀಗೆ ಹೇಳಿ ಅಲ್ಲೇ ಅದೃಶ್ಯನಾದನು. ನಾರದಮಹರ್ಷಿಯೂ ಸಹ ತಡಮಾಡದೆ ಪ್ರಯಾಗದ ಕಡೆಗೆ ಪ್ರಯಾಣಮಾಡಿದನು.

೨೨. ಅಲ್ಲಿ ಶಾಸ್ತ್ರೋಕ್ತವಾಗಿ ಸ್ನಾನವನ್ನೂ ಜಪವನ್ನೂ ಮಾಡಿ, ಬ್ರಾಹ್ಮಣೋತ್ತಮರಿಗೆ ದಾನವನ್ನು ಕೊಟ್ಟು ಆ ದೇವರ್ಷಿಯು ತನ್ನ ಮನೆಗೆ ತೆರಳಿದನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಪ್ರಯಾಗಕ್ಷೇತ್ರದ ವರ್ಣನೆಯನ್ನು ಉಪಸಂಹಾರಮಾಡಿದೆ.

ಧರ್ಮರಾಜನ ಬಳಿಗೆ ಅನಿರೀಕ್ಷಿತವಾಗಿ ಶ್ರೀಕೃಷ್ಣನು ಬಂದು ತೀರ್ಥ ಯಾತ್ರೆಯ ಮಹಿಮೆಯನ್ನು ಅವನಿಗೆ ತಿಳಿಸಿದನು.—"ಯಜ್ಞಯಾಗಾದಿಗಳು ಸದ್ಗತಿಗೆ ಸಾಧನ, ನಿಜ. ಆದರೆ ಬಹು ಶ್ರಮಸಾಧ್ಯವಾದುವು. ಸಾಮಾನ್ಯ ಜನರಿಗೆ ಅವು ಸಾಧ್ಯವಲ್ಲ. ದರಿದ್ರರಾದವರಿಗೆ ತೀರ್ಥಯಾತ್ರೆಯೇ ಶ್ರೇಯಸ್ಕರವಾದುದು. ಏಕೆಂದರೆ ಯಜ್ಞಗಳಿಂದ ಬರುವ ಪುಣ್ಯವೇ ಇದರಿಂದಲೂ ಬರುವುದು. ಆದುದರಿಂದ, ಎಲೈ ಧರ್ಮರಾಜನೇ, ನೀನೂ ಸಹ ನಿನ್ನ ತಮ್ಮಂದಿರೊಡನೆ ಪ್ರಯಾಗಕ್ಕೆ ಪ್ರಯಾಣ ಮಾಡು"—ಎಂದು ಹೇಳಿದನು. ಯುಧಿಷ್ಠಿರನು ಹಾಗೆಯೇ ಮಾಡಿದನು.

ಈ ವೃತ್ತಾಂತವನ್ನೆಲ್ಲ ನಂದಿಕೇಶ್ವರನಿಂದ ಕೇಳಿದ ನಾರದಮಹರ್ಷಿಯು ತಾನೂ ಪ್ರಯಾಗಕ್ಕೆ ಹೋಗಿ, ನಿಯಮಾನುಸಾರವಾಗಿ ಸ್ನಾನವನ್ನೂ ಜಪವನ್ನೂ ಮಾಡಿ, ಬ್ರಾಹ್ಮಣೋತ್ತಮರಿಗೆ ದಾನವನ್ನು ಕೊಟ್ಟು ಕೃತಾರ್ಥನಾದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಪ್ರಯಾಗಮಾಹಾತ್ಮ್ಯದೊಳಗೆ
ನೂರ ಹನ್ನೆರಡನೆಯ ಅಧ್ಯಾಯವು ಮುಗಿದುದು.

---

ಶ್ರೀನಿವಾಸ್ ಎಲೆಕ್ಟ್ರಿಕ್ ಪ್ರೆಸ್, ಮೈಸೂರು